# ಸಮಗ್ರ ದಾಸ ಸಾಹಿತ್ಯ

## ಸಂಪುಟ : ೨೧ - ಭಾಗ ೨



## ಇಂದಿರೇಶರು ಹಾಗೂ ಧಾರವಾಡ ಪ್ರದೇಶದ ಇತರ ಹರಿದಾಸರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೨೧ – ಭಾಗ ೨

# ಇಂದಿರೇಶರು ಹಾಗೂ ಧಾರವಾಡ ಪ್ರದೇಶದ ಇತರ ಹರಿದಾಸರ ಕೀರ್ತನೆಗಳು


*ಸಂಪಾದಕರು*
ಡಾ. ಶ್ರೀನಿವಾಸ ಹಾವನೂರ
ಶ್ರೀಮತಿ ನಳಿನಿ ವೆಂಕಟೇಶ



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA VOLUME - 21 Part 2:**
*Indiresharu Haagu Darwadapradeshada Ithara Haridasara Keerthanegalu.* Edited by Dr.Srinivasa Havanur, Smt. Nalini Venkatesh. Published by Sri.Y. K.Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 77 + ೬೩೩


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :
ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨

ಮುದ್ರಕರು :
ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ-ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯಮಯ ವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಆವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**
ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೇ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು–ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವಕ್ಕೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ.ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ಡಾ. ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ-ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಧಾರವಾಡ ಪ್ರದೇಶದ ಹರಿದಾಸ ಪರಂಪರೆ

ಧಾರವಾಡ ಪ್ರದೇಶದ ಹರಿದಾಸರಿಗೆಂದಿರುವ, ಈ ೨೦ನೆಯ ಸಂಪುಟದಲ್ಲಿ ೨೫ ಜನ ಹರಿದಾಸರು ಸಮಾವೇಶಗೊಂಡಿದ್ದಾರೆ! ಇತರ ಯಾವುದೇ ಸಂಪುಟದಲ್ಲಿ ಇಷ್ಟೊಂದು ಜನ ಕಾಣಸಿಗರು. ಎಂತೇ ಎರಡು ಭಾಗಗಳಾಗಿ ಈ ಸಂಪುಟ ರೂಪುಗೊಂಡಿದೆ.

ಧಾರವಾಡ ಪ್ರದೇಶವೆಂಬುದರಲ್ಲಿ ಗದಗ, ಹಾವೇರಿ ಮತ್ತು ಮುನ್ನಿನ ಧಾರವಾಡ – ಈ ಮೂರು ಜಿಲ್ಲೆಗಳು ಸೇರಿವೆ. ಇಲ್ಲಿ ತುಸು ತಡವಾಗಿ ದಾಸಸಾಹಿತ್ಯ ಪರಂಪರೆ ಕಾಣಿಸಿಕೊಂಡಿರ ಬಹುದು. ಮೊದಲ ಘಟ್ಟದ ಶ್ರೀ ವ್ಯಾಸರಾಯರು, ಪುರಂದರ, ಕನಕ ದಾಸರುಗಳು ಹಾಗೂ ಪ್ರಸನ್ನ ವೆಂಕಟರು – ಇವರುಗಳ ಹಾಡುಗಳು ಜನರ ಬಾಯಿಯಲ್ಲಿ ಕೇಳಿಬರುತ್ತಿದ್ದುವೇನೊ ನಿಜ. ಈ ಪ್ರದೇಶದ ಭಾಡ, ಕಾಗಿನೆಲೆಗಳಲ್ಲಿದ್ದ ಕನಕದಾಸರನ್ನು ಬಿಟ್ಟರೆ ಬೇರಾವ, ಮೊದಲ ಘಟ್ಟದ ದಾಸರು ಇಲ್ಲಿ ಬಾಳಿದಂತೆ ಕಾಣುವುದಿಲ್ಲ. ಯಾವಾಗ ತಿರುಪತಿ ಮತ್ತು ಮಂತ್ರಾಲಯಗಳಿಗೆ ಇಲ್ಲಿಯ ಭಾವುಕರು ಓಡಾಡತೊಡಗಿದರೊ ಆಗ ಇತರ ದಾಸವರ್ಯರ. ಸಂಪರ್ಕ ಬಂದು ಸ್ವಯಂ ಕೃತಿರಚನೆಗೆ ಚಾಲನೆ ದೊರೆತಂತೆ ಕಾಣುತ್ತದೆ. ಜೊತೆಗೆ ಜಗನ್ನಾಥದಾಸರಂತಹ ಒಬ್ಬಿಬ್ಬರು ಇಲ್ಲಿಯ ಹಲವಾರು ಊರುಗಳನ್ನು ಸಂದರ್ಶಿಸುತ್ತಿದ್ದ ಕಾರಣವೂ ಇದೆ.

ಆದರೆ ಮಾಧ್ವ ಸಂಪ್ರದಾಯದ ಮನೆತನಗಳು ಈಗಿನ ಹಳ್ಳಿಗಳಾಗಿ ಪರಿಗಣಿತವಾಗಿರುವ ಕರ್ಜಗಿ, ರಿತ್ತಿ, ಕಡಕೋಳ, ಮುಂತಾದ ಊರುಗಳಲ್ಲಿ

ಪ್ರಬಲವಾಗಿಯೇ ಇದ್ದುವು. ಇವರುಗಳಿಗೆ ಗಟ್ಟಿಮುಟ್ಟಾದ ಆಶ್ರಯವನ್ನು ಒದಗಿಸಿದವರು ಉತ್ತರಾದಿ ಮಠದ ಶ್ರೀ ಸತ್ಯಬೋಧ ಸ್ವಾಮಿಗಳು. ಅವರು ಈ ಜಿಲ್ಲೆಯ ಸವಣೂರಲ್ಲಿಯೇ ನೆಲೆನಿಂತದ್ದು ಮತ್ತು ಹರಿದಾಸ ವರ್ಗದವರನ್ನು ಸೌಹಾರ್ದದಿಂದ ಕಾಣುತ್ತಿದ್ದದ್ದು ದಾಸ ಸಾಹಿತ್ಯ ಪರಂಪರೆಗೆ ಪೋಷಕವಾಗಿ ಪರಿಣಮಿಸಿತು. ಈ ಸ್ವಾಮಿಗಳವರನ್ನು ಕಾಣಬೇಕನ್ನುವ ಕಾರಣದಿಂದ ಶ್ರೀ ಜಗನ್ನಾಥದಾಸರು ಈ ಭಾಗದಲ್ಲಿ ಸಂಚರಿಸುತ್ತಿದ್ದರೆನ್ನಬಹುದು.

ಮಾಧ್ವ ಪರಂಪರೆಯಲ್ಲಿ ಶ್ರೀ ಸತ್ಯಬೋಧರಿಗಿದ್ದ ಸ್ಥಾನಮಾನ ಜೊತೆಗೆ ಹರಿದಾಸರ ಕುರಿತ ಸದ್ಭಾವ ಇವುಗಳಿಂದಾಗಿ, ಅನೇಕ ಹರಿದಾಸರು, ಅವರು ವೃಂದಾವನಸ್ಥರಾದ ಅನಂತರವೂ, ಸ್ತುತಿಪರ ಹಾಡುಗಳನ್ನು ರಚಿಸಿ ಅವರಿಗೆ ನಮನ ಸಲ್ಲಿಸಿದ್ದಾರೆ. ಮಾಧ್ವಯತಿಗಳಲ್ಲಿ ಶ್ರೀ ಜಯತೀರ್ಥರು ಮತ್ತು ಶ್ರೀ ರಾಘವೇಂದ್ರರು ಇವರನ್ನುಳಿದು, ಹೆಚ್ಚಿನ ಕೀರ್ತನೆಗಳು ಶ್ರೀ ಸತ್ಯಬೋಧರನ್ನು ಕುರಿತೇ ಇವೆ. ತಾತ್ಪರ್ಯವೆಂದರ ಶ್ರೀ ಸತ್ಯಬೋಧರ, ಅವರಂತೆ ಆ ಮುಂದಿನ ಕೆಲವು ಪೀಠಾಧಿಪತಿಗಳ ಪ್ರೇರಣೆಯಿಂದ ದಾಸ ಸಾಹಿತ್ಯ ಇಲ್ಲಿ ಪಲ್ಲವಿಸಿತು.

ಶ್ರೀ ಸತ್ಯಬೋಧರು (೧೭೪೪-೧೭೮೪) ಮತ್ತು ಜಗನ್ನಾಥದಾಸರು (೧೭೨೮-೧೮೦೯) ಇವರುಗಳು ಆದ್ಯ ಪ್ರೇರಕರಾದ ಕಾರಣದಿಂದ ಧಾರವಾಡ ಪ್ರದೇಶದಲ್ಲಿ ದಾಸ ಸಾಹಿತ್ಯ ರಚನೆಗೆ ೧೮ನೆಯ ಶತಮಾನದ ಮಧ್ಯದಿಂದ ಆರಂಭವಾಯಿತೆಂದು ಇಟ್ಟುಕೊಳ್ಳ ಬಹುದು. ಹಾಗೆ ಆರಂಭಿಸಿದವರು ಕರ್ಜಗಿಯ ಶ್ರೀದವಿಠಲರು ಮತ್ತು ಕದರಮಂಡಲಗಿಯ ಭೀಮಾಚಾರ್ಯರು. ಇವರ ಮನೆ ತನದ ಕೆಲವರು ಹಾಗೂ ಬೇರೆಡೆ ದಾಸದೀಕ್ಷೆಯನ್ನು ಪಡೆದು ಬಂದ ಸುಮಾರು ೨೫ ಜನ ಹರಿದಾಸರ ಹಾಡುಗಳು ಈ ಸಂಪುಟದಲ್ಲಿ ಅಡಕವಾಗಿವೆ.

ಹರಿದಾಸ ಪರಂಪರೆಯೆನ್ನುವುದು ಹರಿ ಕೀರ್ತನೆ, ಭಜನೆ, ಪ್ರವಚನಗಳ ಮೂಲಕ ಪ್ರತಿಯೊಂದು ಊರಿನಲ್ಲಿ ಸಾಗಿಬಂದಿತೆನ್ನು ವುದು ಮಹತ್ವದ್ದು. ಜೊತೆಗೆ ಕರ್ನಾಟಕ ಹರಿದಾಸರ ಬಗ್ಗೆ ಮಾಹಿತಿ ಹಾಗೂ, ಹಾಡುಗಳ ಸಂಗ್ರಹಕಾರ್ಯ ಪ್ರಕಟನೆ, ಹಾಗೂ ಪ್ರಸಾರ ಕಾರ್ಯ ಸದ್ದಿಲ್ಲದೆ ನಡೆದುಕೊಂಡು ಬಂದಿತು. ಹೇಳಬೇಕಾದ ಮೊದಲ ಹೆಸರು ಶ್ರೀ ಕಲಮದಾನಿ ನಾರಾಯಣರಾಯರದು.

ಅವರು ಸಂಗ್ರಹಿಸಿದ್ದ ಮಾಹಿತಿಯಿಂದಾಗಿ, 'ಹರಿದಾಸರ ಕಥೆಗಳು' ಹಾಗೂ "Mystic teachings of Haridasas of Karnataka" ಗ್ರಂಥಗಳು ಬೆಳಕಿಗೆ ಬಂದುವು. ಇನ್ನೊಬ್ಬ ವ್ಯಕ್ತಿ ಕೌಜಲಗಿ ಬಂಡೆಪ್ಪ ಅವರು. ಪ್ರಸನ್ನ ವೆಂಕಟದಾಸರ ಹಾಡುಗಳನ್ನು, ಹಾಗೆನೇ ಹರಪನಹಳ್ಳಿ ಭೀಮವ್ವ ಅವರ ರಚನೆಗಳನ್ನು ಮೊದಲಿಗೆ ಎಂದರೆ ೧೯೨೦ರ ದಶಕದಲ್ಲಿ ಪ್ರಕಟಿಸಿದ ಹಿರಿಮೆ ಅವರದು. ಆ ಮುಂದೆ ದಾಸಸಾಹಿತ್ಯದ ಪ್ರಸರಣ, ಪ್ರಕಾಶನ ಮತ್ತು ವಿತರಣಕಾರರಾಗಿ ಸರ್ವಶ್ರೀ ಬೆಟಗೇರಿ ಕೃಷ್ಣಶರ್ಮ, ಹುಚ್ಚರಾವ ಬೆಟಗೇರಿ, ಶಾಂತರವ ಕಮಲಾಪೂರ, ನಾಮಸೇವಿ (ಶ್ರೀಕೃಷ್ಣ ಪುಸ್ತಕಾಲಯದವರು), ಘಾಣೇಕರ (ಸಮಾಜ ಪುಸ್ತಕಾಲಯ) ಮುಂತಾದ ಈ ಭಾಗದವರನ್ನು ವಿಶೇಷ ವಾಗಿ ನೆನೆಯತಕ್ಕದು.

## ಇಂದಿರೇಶ

ದಾಸಸಾಹಿತ್ಯ ವಾಹಿನಿಯಲ್ಲಿ ಭಕ್ತಿ ಭಂಡಾರವನ್ನೇ ಮೂಲಧನ ವನ್ನಾಗಿಟ್ಟುಕೊಂಡು, ಅಂತಃಸ್ಫುರಣೆಯಿಂದ ಆ ಭಾವನೆಯನ್ನು ಸಹಜ ಸುಲಭವಾಗಿ ವ್ಯಕ್ತಪಡಿಸುವ ಹರಿದಾಸರದು ಒಂದು ದಾರಿಯಾದರೆ, ಗುರುಮುಖೇನ ಶಾಸ್ತ್ರಾರ್ಥಗಳನ್ನು ಕಲಿತು ಪಂಡಿತರಿಗಾಗಿ ವಿದ್ವದ್ಗ್ರಂಥಗಳನ್ನೂ ಪಾಮರರಿಗಾಗಿ ಪ್ರಾಸಾದಿಕ ವಾಣಿಯಿಂದ ಪದ - ಪದ್ಯಗಳನ್ನು ರಚಿಸುವ ಸಾಧನ ಜೀವಿಗಳನ್ನೂ ಕಾಣಬಹುದು. 'ಇಂದಿರೇಶ' ಎಂಬ ಅಂಕಿತದಿಂದ ಹಾಡಿದ ತಿರುಪತಿಯ ಶ್ರೀ ಪಾಂಡುರಂಗಿ ಹುಚ್ಚಾಚಾರ್ಯರು ಎರಡನೆಯ ಗುಂಪಿನವರು. ಸರ್ವಮೂಲ ಗ್ರಂಥಗಳಿಗೆ ವಿಮರ್ಶೆ, ಸುಧಾಟಿಪ್ಪಣಿ, ಉಪಾದಿ ಖಂಡನ ವ್ಯಾಖ್ಯಾನ ತತ್ತ್ವನ್ಯಾಸ, ದ್ವಾದಶ ಸ್ತೋತ್ರ ವ್ಯಾಖ್ಯಾನ, ಕನ್ನಡದಲ್ಲಿ ಲಕ್ಷ್ಮೀಲೀಲಾಮೃತ, ದಶಮ ಸ್ಕಂದ ಭಾಗವತ ಸುಂದರಕಾಂಡ (೫೭ ಶ್ಲೋಕಗಳು) ಇತ್ಯಾದಿ ಉದ್ಗ್ರಂಥಗಳು ಪಂಡಿತರನ್ನು ಮೆಚ್ಚಿಸಿದರೆ, ಸುಲಲಿತ ಕನ್ನಡದಲ್ಲಿ ಅವರು ಹಾಡಿದ ನೂರಾರು ಹಾಡುಗಳು ಭಕ್ತಿಯ ಪರಿಪಾಕದಿಂದ ಸಾಧಾರಣರನ್ನೂ ಮೆಚ್ಚಿಸಿವೆ.

ಹುಚ್ಚಾಚಾರ್ಯರ ಪೂರ್ವಜರು ಅಹಮದ್‌ನಗರದ ಪುಣ್ಯ ಸ್ತಂಭವೆಂಬ ಪ್ರದೇಶದವರು. ವಸಿಷ್ಠಗೋತ್ರದ ಪಾಂಡುರಂಗಿ ಮನೆತನದವರು. ಆನಂದ ಭಟ್ಟಾಚಾರ್ಯರೆಂಬ ಮೂಲಪುರುಷರಿಂದ ಸುಮಾರು ೪ ತಲೆಮಾರಿನ ನಂತರ ಜನಿಸಿದ ಶ್ರೀನಿವಾಸಾಚಾರ್ಯರು ಹುಚ್ಚಾಚಾರ್ಯರ ತಂದೆ. ರುಕ್ಮಿಣಿಬಾಯಿ ತಾಯಿ. ಇವರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ ವಾಸಿಸಿದ್ದರು. ರುಕ್ಮಿಣಿಬಾಯಿಯ ಮೂವರು ಗಂಡುಮಕ್ಕಳು ಮತ್ತು ಒಬ್ಬ ಹೆಣ್ಣುಮಗಳಲ್ಲಿ ಕೊನೆಯವರು ಹುಚ್ಚಾಚಾರ್ಯರು. ಶಿಕಾರಿಪುರದ ಪ್ರಾಣದೇವರ ಹೆಸರಿನಲ್ಲಿ ಹುಚ್ಚುರಾಯ ಎಂದು ನಾಮಕರಣವಾಯಿತು. ರಾಕ್ಷಸನಾಮ ಸಂವತ್ಸರದ ಫಾಲ್ಗುಣ ಕೃಷ್ಣ ಷಷ್ಠಿ ಗುರುವಾರ ಕ್ರಿ.ಶ. ೧೮೭೫ರಲ್ಲಿ ಜನಿಸಿದ ಬಾಲಕ ಹುಚ್ಚುರಾಯ ಬಾಲ್ಯದಿಂದಲೇ ಅಧ್ಯಾತ್ಮದೆಡೆಗೆ ಒಲಿದಿದ್ದ. ದೇವತಾಸ್ತೋತ್ರ, ಅಮರಕೋಶಗಳನ್ನು ತಂದೆಯಿಂದಲೇ ಕಲಿತಿದ್ದ ಹುಚ್ಚಪ್ಪನಿಗೆ ಎಂಟನೆಯ ವಯಸ್ಸಿನಲ್ಲಿ ಉಪನಯನ, ಗಾಯತ್ರೀ ಉಪದೇಶಗಳಾದವು. ಮುಂದೆ ದೊಡ್ಡಪ್ಪ ಬಾಬಾಚಾರ್ಯರಿಂದ ಸಂಸ್ಕೃತ ವಿದ್ಯಾಭ್ಯಾಸ ಪಡೆದ ಹುಚ್ಚಪ್ಪ ಒಂದು ದಿನ ಸಹಪಾಠಿಗಳ ತಾತ್ಸಾರ, ಟೀಕೆಗಳಿಗೆ ಬೇಸರಿಸಿ ಕುಲದೇವತೆಯಾದ ಕೊಲ್ಹಾಪುರದ ಲಕ್ಷ್ಮೀದೇವಿಯ ಅನುಗ್ರಹವನ್ನಾಶಿಸಿ ಮನೆಯನ್ನು ತ್ಯಜಿಸಿ ಕೊಲ್ಹಾಪುರಕ್ಕೆ ತೆರಳಿದ. ಅಲ್ಲಿ ಈತನ ಅನನ್ಯಭಕ್ತಿ, ಸುಮಧುರ ಕಂಠದ ಹಾಡುಗಾರಿಕೆಗಳಿಗೆ ಬೆರಗಾದ ಸಂತಾನಹೀನ ಅಂತಾಜಿ ಪಂತರೆಂಬ ದಂಪತಿಗಳ ಆಶ್ರಯ ದೊರಕಿತು. ಆಗರ್ಭ ಶ್ರೀಮಂತರಾದ ಅಂತಾಜಿ ಪಂತರ ಮನೆಯಲ್ಲಿದ್ದ ಮೂರು-ನಾಲ್ಕು ವರ್ಷಗಳಲ್ಲಿ ಬಾಲಕನಿಗೆ ಮಹಾ ಮಹೋಪಾಧ್ಯಾಯರಿಂದ ವ್ಯಾಕರಣ, ಸಾಹಿತ್ಯ, ತರ್ಕ, ನ್ಯಾಯಶಾಸ್ತ್ರ ಮುಂತಾದವುಗಳ ಪಾಠವಾಯಿತು. ಅತ್ತ ಹಡೆದ ತಂದೆ ತಾಯಿಗಳಿಗೂ ಇತ್ತ ಸಾಕಿದ ತಂದೆತಾಯಿಗಳಿಗೂ ಪ್ರೀತಿಪಾತ್ರನಾದ ಹುಚ್ಚಪ್ಪನಿಗೆ ಅಕ್ಕನ ಮಗಳಾದ ಹುಚ್ಚವ್ವನನ್ನೇ ಕೊಟ್ಟು ವಿವಾಹವಾಯಿತು. ಸಾಕಿದ ತಂದೆ - ತಾಯಿಗಳಾದ ಅಂತಾಜಿ ಪಂತ ದಂಪತಿಗಳ ಅಂತ್ಯಕಾಲದಲ್ಲಿ ಅವರ ಬಳಿ ಇದ್ದು ಅವರ ಸೇವೆ ಮಾಡಿ ತನ್ನ ಪುತ್ರಋಣ ತೀರಿಸಿದ ಹುಚ್ಚಾಚಾರ್ಯರು ಅವರ ಸಮಸ್ತ ಆಸ್ತಿಗೆ ವಾರಸುದಾರರಾದರೂ ಆ ಸಂಪತ್ತನ್ನೆಲ್ಲಾ ಸದ್ಬ್ರಾಹ್ಮಣರಿಗೆ ದಾನ ಮಾಡಿ ನಿಸ್ವಾರ್ಥಗುಣವನ್ನು ಮೆರೆದರು. ಯೌವನದಲ್ಲಿ ಮಹಾ ಲಕ್ಷ್ಮಿಯ ದಯದಿಂದ ಮಾರಿಕಾಬೇನೆಯಿಂದ ಪಾರಾದ ಹುಚ್ಚಾಚಾರ್ಯರು ಒಂದು ಗಂಡುಮಗುವಿನ

ತಂದೆಯಾದರು. ದೇವಿಯ ಪ್ರೇರಣೆಯಂತೆ ಬೆಳಗಾವಿಯ ಬಳಿ ಇರುವ ಮುಗುಟಖಾನ ಹುಬ್ಬಳ್ಳಿಗೆ ಬಂದು ಅಲ್ಲಿಯ ನರಸಿಂಹದೇವರನ್ನು ೧೨ ವರ್ಷಗಳ ಕಾಲ ಉಪಾಸಿಸಿದರು. ಒಮ್ಮೆ ಭಕ್ತನೊಬ್ಬ ತಂದುಕೊಟ್ಟ ಬೆಲ್ಲದ ದೊಡ್ಡ ಪೆಂಟೆಯಲ್ಲಿ ಲಕ್ಷ್ಮೀನರಸಿಂಹನ ಪ್ರತಿಮೆ ದೊರೆತು ಸ್ವಪ್ನಸೂಚಿತ ಸಂಗತಿಗಳು ಸತ್ಯವಾಗತೊಡಗಿದವು. ಆ ಪ್ರತಿಮೆಯನ್ನು ಉದ್ದೇಶಿಸಿಯೇ ಆಚಾರ್ಯರು 'ಗುಡಜನಿ ವಿಭೂತಿ ನರಹರಿಂ' ಎಂದು ಸಂಸ್ಕೃತದಲ್ಲಿ ಸ್ತುತಿಸಿದ್ದಾರೆ. ರಾಣೆಬೆನ್ನೂರಿನಲ್ಲಿನ ನರಸಿಂಹನನ್ನು ಉಪಾಸಿಸುತ್ತಿರುವಾಗ ಒಮ್ಮೆ ಸ್ವಪ್ನದಲ್ಲಿ ದೇವ ಋಷಿ ನಾರದರಿಂದ 'ಇಂದಿರೇಶ' ಎಂಬ ಅಂಕಿತ ಪ್ರದಾನವಾಯಿತು. ಅದುವರೆಗೂ ಸಂಸ್ಕೃತದಲ್ಲಿಯೇ ಹೆಚ್ಚಾಗಿ ರಚಿಸುತ್ತಿದ್ದ ಅವರು ನೂರಾರು ಪದ – ಪದ್ಯಗಳನ್ನು ಕನ್ನಡದಲ್ಲಿ ಬರೆಯಲಾರಂಭಿದರು. ಕೊಲ್ಹಾಪುರ, ಮುಗುಟಖಾನ ಹುಬ್ಬಳ್ಳಿ, ರಾಣೆಬೆನ್ನೂರುಗಳಲ್ಲದೇ ಸುತ್ತಮುತ್ತಲಿನ ಊರುಗಳಲ್ಲಿ ಭಕ್ತಾದಿಗಳ ಆಹ್ವಾನದ ಮೇರೆಗೆ ತೆರಳಿ ಎಲ್ಲರಿಂದಲೂ ವಂದ್ಯರಾದರು.

ಹುಚ್ಚಾಚಾರ್ಯರು ತಮ್ಮ ಕೊನೆಯ ದಿನಗಳನ್ನು ಭಗವಂತನ ಪ್ರೇರಣೆಯ ಮೇರೆಗೆ ತಿರುಪತಿಯಲ್ಲಿ ಕಳೆದರು. ತಮ್ಮ ಅಪಾರ ಶಿಷ್ಯ ಸಂತತಿಯೊಂದಿಗೆ ತಿರುಪತಿಗೆ ಬಂದ ದಾಸರು

'ಕಂಡೆನೋ ನಿನ್ನ ವೆಂಕಟನೇ ಸ್ವಪ್ನೆ
ಪುಂಡರೀಕಾಕ್ಷ ಸಂಪೂರ್ಣ ಸದ್ಗುಣನೇ'

ಎಂದು ಭಾವಪರವಶರಾಗಿ ಹಾಡಿದಾಗ ಅವರನ್ನೂ, ಅವರ ಶಿಷ್ಯ ಪರಿವಾರವನ್ನು ನೋಡಿಕೊಳ್ಳುವ ಹೊಣೆ ತಿರುಪತಿಯ ದೇವಸ್ಥಾನದ ಅಧಿಕಾರ ರಾಮಲಕ್ಷ್ಮಣ ಬಾವಾಜಿ ಎಂಬುವರು ಹೊತ್ತರು. ಹುಚ್ಚಾಚಾರ್ಯರ ತಿರುಪತಿಯ ಮನೆ ಭಗವದ್ ಭಕ್ತರಿಂದ ತುಂಬಿ ಒಂದು ಛತ್ರದಂತೆ ಆಯಿತು. ನಿತ್ಯವೂ ಪೂಜೆ, ನೈವೇದ್ಯ, ಅನ್ನದಾನಗಳು ನಡೆಯಲಾರಂಭವಾಯಿತು. ಅಂದು ಪ್ರಾರಂಭವಾದ ಅನ್ನ ಸಂತರ್ಪಣೆ ಮುಂದೆ ೩೫ ವರ್ಷಗಳವರೆಗೆ ನಿರಂತರವಾಗಿ ನಡೆಯಿತು. ಕೃಷ್ಣ – ರುಕ್ಮಿಣಿ – ಸತ್ಯಭಾಮೆಯರ ವಿವಾಹೋತ್ಸವ, ಶ್ರೀನಿವಾಸ – ಪದ್ಮಾವತಿಯರ ಕಲ್ಯಾಣಗಳು ತಿರುಪತಿಯ ಅವರ ಮನೆಯಲ್ಲಿ ಯಾವ

ಶ್ರೀಮಂತರ ಮನೆಯ ಮದುವೆಯ ಸಂಭ್ರಮಕ್ಕೂ ಕಡಿಮೆಯಿಲ್ಲದಂತೆ ವೈಭವೋಪೇತವಾಗಿ ನಡೆದವು. ಶ್ರೀ ಉತ್ತರಾದಿಮಠದ ಶ್ರೀ ಸತ್ಯಧ್ಯಾನ ತೀರ್ಥರು ತಿರುಪತಿಗೆ ಬಂದಾಗಲೆಲ್ಲಾ ಹುಚ್ಚಾಚಾರ್ಯರ ಮನೆಯಲ್ಲಿಯೇ ತಂಗಿ ಪೂಜೆ, ಆಶೀರ್ವಾದಗಳಿಂದ ಅವರನ್ನು ಅನುಗ್ರಹಿಸುತ್ತಿದ್ದರು. ತಮ್ಮ ಗುರುಗಳ ಆರಾಧನೆಯನ್ನು ಕೂಡ ಹುಚ್ಚಾಚಾರ್ಯರ ಮನೆಯಲ್ಲಿಯೇ ಅತ್ಯಂತ ಸಂತೋಷದಿಂದಲೂ, ತೃಪ್ತಿಯಿಂದಲೂ ನಡೆಸುತ್ತಿದ್ದರು. ಹೀಗೆ ತಂಗಿದಾಗಲ್ಲೆಲ್ಲಾ ಆಚಾರ್ಯರ ವಿದ್ವತ್ತಿನ, ಭಕ್ತಿ ಪರವಶತೆಯ ಪರಿಚಯವನ್ನು ತಾವೂ ಕಂಡು ಲೋಕಕ್ಕೂ ತೋರಿಸುವ ಉಪಕಾರವನ್ನೂ ಮಾಡುವಂತಾಯಿತು.

ವೃದ್ಧಾಪ್ಯದ ದೆಸೆಯಿಂದ ಹುಚ್ಚಾಚಾರ್ಯರು ಕ್ರಮೇಣ ದೃಷ್ಟಿಯನ್ನು ಕಳೆದುಕೊಂಡರು. ಆಗ ತಮ್ಮ ಕುಲದೈವ ಮಹಾಲಕ್ಷ್ಮಿಯನ್ನು

'ಹೊಸಗಣ್ಣು ಎನಗೆ ಹಚ್ಚಲಿಬೇಕು ಜಗದಂಬ
ವಸುದೇವ ಸುತನ ಕಾಂಬುದಕೆ

ಎಂದು ಬೇಡಿದರು. ವೃದ್ಧಾಪ್ಯದ ದೆಸೆಯಿಂದ ಕಣ್ಣುಕಾಣದಾದಾಗ, ಮೈಯಲ್ಲಿ ಶಕ್ತಿ ಇಲ್ಲವಾದಾಗ ಅಚ್ಯುತನ ನಾಮವೆಂಬ ಮೆಚ್ಚುಮದ್ದು ಹಿಡಿದ ಹುಚ್ಚಾಚಾರ್ಯರು ಮಾನಸಿಕ ಪೂಜೆಗೆ ತೊಡಗಿದರು. ಮಹಾಜ್ಞಾನಿಗಳಿಗೆ ಮಾತ್ರ ಸಾಧ್ಯವಾಗಬಹುದಾದ ವ್ಯಾಪ್ತೋಪಾಸನೆ ಮತ್ತು ಬಿಂಬೋಪಾಸನೆಯನ್ನು ತಿಳಿಸುವ ಅನೇಕ ಹಾಡುಗಳನ್ನು ನೋಡಬಹುದು.

'ಮಾನವಾತ್ಮರೆ ನಿತ್ಯ ಮಾನಸಪೂಜೆಯ
ಮಾಧವನಿಗೆ ಮಾಡಿ ಮೋಕ್ಷ ಸಾಧಿಸಿರಿ'

ಎಂಬ ಸುದೀರ್ಘ ಹಾಡಿನಲ್ಲಿ ಮಾನಸಿಕವಾಗಿಯೇ ಪೂಜೆಯ ವಿವಿಧ ಘಟ್ಟಗಳನ್ನು ಮಾಡುವ ಬಗೆಯನ್ನು ಸೂಚಿಸಿದ್ದಾರೆ.

ತಮ್ಮ ಅಂತಿಮ ಕಾಲದಲ್ಲಿ ಕೂಡ ಹುಚ್ಚಾಚಾರ್ಯರು ಇಚ್ಛಾಮರಣಿಯಂತೆ, ದೇಹತ್ಯಾಗಕ್ಕೆ ೧೫ ದಿನ ಮೊದಲೇ ಅನ್ನಾಹಾರಗಳನ್ನು ತೊರೆದು

ಭಗವಂತನಲ್ಲಿಯೇ ತಮ್ಮ ಸಂಪೂರ್ಣ ಧ್ಯಾನವನ್ನು ಕೇಂದ್ರೀಕರಿಸಿ 'ಹರಿನಾಮ ಸ್ಮರಣೆ ಮತ್ತು ಹರಿಭಜನೆಯೇ ತಾರಕ' ಎಂದು ತಮ್ಮ ಶಿಷ್ಯರಿಗೂ, ಪರಿವಾರಕ್ಕೂ ಉಪದೇಶಿಸಿ ಕ್ರಿ.ಶ. ೧೯೩೯ ಪ್ರಮಾಥಿ ಸಂವತ್ಸರದ ಕಾರ್ತೀಕ ಬಹುಳ ಪಂಚಮಿ ಶುಕ್ರವಾರ ಇಹಲೋಕವನ್ನು ತೊರೆದರು.

ಇಂದಿರೇಶರ ಕೃತಿಗಳನ್ನೆಲ್ಲಾ ನೋಡಿದಾಗ ಎದ್ದುಕಾಣುವ ಒಂದು ಅಂಶವೆಂದರೆ ಅವರು ಸ್ತುತಿಸಿದ ಮಹಾಲಕ್ಷ್ಮಿ ಸ್ತೋತ್ರಗಳು ಮತ್ತು ಬಾಲಕೃಷ್ಣನನ್ನು ಕುರಿತ ಹಾಡುಗಳು. ಕೊಲ್ಹಾಪುರದ ಮಹಾಲಕ್ಷ್ಮಿ ಇವರ ಮನೆದೇವರಾದ್ದರಿಂದ ಸಹಜವಾಗಿಯೇ ಮಹಾಲಕ್ಷ್ಮಿಯನ್ನು ಕುರಿತ ಹಾಡುಗಳು ಸಾಕಷ್ಟು ಸಂಖ್ಯೆಯಲ್ಲಿವೆ.

'ಮಂದಹಾಸದಿ ಭವಸಿಂಧುವಿನೊಳಗಿಟ್ಟು
ಚಂದವೇ ಅಮ್ಮಾ ನೋಡುವುದು
ಕಂದನಂದದಿ ಬಾಲ್ಯದಿಂದ ಸೇರಿದೆ ನಿನ್ನ
ಮಂದರೋದ್ಧರನ ತೋರಮ್ಮಾ

ಎಂದು ಬೇಡಿದ ಅವರು

'ಥರವೆ ಪೋಗೋದು ಕರವೀರಪುರಕೆ ಹೀಗೆ'

ಎಂದು ಪ್ರಶ್ನಿಸುತ್ತಾರೆ.

'ಬರುವ ಹಾದಿಯ ಪೇಳೆ ಶ್ರೀಹರಿ ಬರುವ ಹಾದಿಯ ಪೇಳೆ'

ಎಂದು ಕಾಡುವ ಸಲುಗೆ ಲಕ್ಷ್ಮಿಯಲ್ಲಿದೆ ಅವರಿಗೆ,

'ನಿಮ್ಮ ಮಾತು ಮೀರ ನಮ್ಮ ಮಾರಜನಕ ಕೃಷ್ಣ'
'ನಿನ್ನ ಹೊರತು ಆತನನ್ನು ತೋರುವರ ಕಾಣೆನಮ್ಮಾ'

ಎನ್ನುವ ವಿಶ್ವಾಸದಿಂದ ಮಹಾಲಕ್ಷ್ಮಿಯನ್ನು ಸ್ತುತಿಸಿದ್ದಾರೆ.

ಬಾಲಕೃಷ್ಣನಂತೂ ಆಚಾರ್ಯರ ಪ್ರೀತಿಯ ಶಿಶು. ಆ ಪುಟ್ಟ ಕೂಸನ್ನು ತೊಡೆಯ ಮೇಲಿಟ್ಟು ತಟ್ಟಿ ಮಲಗಿಸುವ ಪರಿ ಇದು.

'ಬಾರೋ ಮಲಗು ಎನ್ನ ಏರು ಪೊಟ್ಟೆಯ ಮೇಲೆ
ಸಾರಸಾಕ್ಷನೆ ಚುಕ್ಕಭೂರಿ ತಟ್ಟುವೆನು'
'ಹೆರಳ ಹಾಕುವೆ ಬಾ ಮುರಳೀಧರನೆ ಕೃಷ್ಣಾ
ಮುಂಗುರುಳು ಮೋರೆಯ ಮೇಲೆ ಹರವಿ ಬಿದ್ದಿಹವು'

ಎನ್ನುವಲ್ಲಿ ಪುಟ್ಟ ಬಾಲಕನ ನೈಜ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಪ್ರತಿವರ್ಷ ಮಕರ ಸಂಕ್ರಮಣದ ಮರುದಿನ ಬಾಲಕೃಷ್ಣನಿಗೆ ಕರಿ ಎರೆಯುವ ಮಹೋತ್ಸವವನ್ನು ತಮ್ಮ ತಿರುಪತಿಯ ಮನೆಯಲ್ಲಿ ಆಚಾರ್ಯರು ತಪ್ಪದೇ ಆಚರಿಸುತ್ತಿದ್ದರಂತೆ.

'ಕರಿಯ ನೆರೆಯಿರೆ ಹರಿಗೆ ಮುರಾರಿಗೆ
ಕರಿಯ ನೆರಿಗೆ ರತ್ನಾಭರಣವಸನಗಳ
ಧರಿಸಿ ದೇಹದಿ ಸುರ ತರುಣಿ ಪೋಲುವರೆ'

ಎಂದು ಹಾಡುತ್ತಾ ಕರಿಯನ್ನು ಎರೆಯುವ ಪರಿ ಅಸದೃಶವಾದುದು.

'ಬಿಡು ಎನ್ನ ಶರಗನು ಬಾಲಕೃಷ್ಣಾ
ಉಡುಗಿ ದೇವರ ಮನೆ ಬರುವೆ ಬೇಗ'

ಎನ್ನುವಲ್ಲಿ ಮತ್ತು

'ಬಿಸಿನೀರಿನಲಿ ಮೋರೆ ತೊಳೆಯೆ ಅಮ್ಮ
ಬಿಸಜಾಕ್ಷ ವೆಂಕಟ ವಸುದೇವನ ಸೂನು'

'ಕಾಲು ಸಮ ಮಾಡಿ ತೋರಿಸೊ ಹೇ ಬಾಲಕೃಷ್ಣ'

ಎನ್ನುವಲ್ಲಿ ಬಾಲಕೃಷ್ಣನನ್ನು ಕುರಿತ ಒಂದು ಅಪರೂಪದ ಆತ್ಮೀಯತೆ, ಮಗುವಿನಲ್ಲಿ ತಾಯಿಗಿರುವ ಪ್ರೀತಿ – ವಾತ್ಸಲ್ಯಗಳು ಕಾಣುತ್ತವೆ.

'ಕೊಳಲೇನು ಪುಣ್ಯವ ಮಾಡಿ ರಂಗನ ಬಳಿಗೆ ಬಂದಿತೇ
ನಳಿನ ನೇತ್ರರ ಮನಸು ಎಳೆದು ಸೆಳೆದು ಪೋದಿತೆ'

ಎನ್ನುವಲ್ಲಿ

'ದೃಷ್ಟಿ ಆಗುವುದಲ್ಲೆ ಪುಟ್ಟ ನಮ್ಮಪ್ಪನಿಗೆ
ನಗುವನು ಬೆಳದಿಂಗಳ ಹಗಲೆ ಬಂದಿಹುದೆನೆ'

ಎನ್ನುವಲ್ಲಿ ಕಾಣುವ ಸುಮಧುರ ಭಾವ ಗಮನಾರ್ಹ. ಹೀಗೆ ಸುಮಾರು ೩೦ ಹಾಡುಗಳಲ್ಲಿ ಬಾಲಕೃಷ್ಣನ ವಿವಿಧ ಲೀಲಾ ವಿನೋದ ಗಳನ್ನು ಅತ್ಯಂತ ಹೃದ್ಯವಾಗಿ ಸ್ತುತಿಸಿದ್ದಾರೆ.

ಗುರು ರಾಘವೇಂದ್ರರನ್ನು ಕುರಿತ ಅನೇಕ ಹಾಡುಗಳಿವೆ. ಸ್ವಪ್ನದಲ್ಲಿ ಒಮ್ಮೆ ಅವರಿಂದ ಆಜ್ಞೆಯಾದ ಮೇಲೆ 'ನೇತ್ರಗಳ ಸಾಫಲ್ಯ ಮಾಳ್ಪ ಸುಗಾತ್ರನ ಕಂಡೆ' ಇತ್ಯಾದಿ ಅನೇಕ ಸ್ತುತಿ ಪದ್ಯಗಳು ಅವರಿಂದ ರಚಿಸಲ್ಪಟ್ಟಿವೆ. ಇದಲ್ಲದೇ ಸಾಧಾರಣವಾಗಿ ಎಲ್ಲ ದಾಸರಲ್ಲಿ ಕಂಡುಬರುವ ತಾರತಮ್ಯೋಕ್ತ ಸ್ತುತಿ ಪದ್ಯಗಳೂ, ಸ್ತ್ರೀಯರಿಗಾಗಿ ವಿಶೇಷ ಪೂಜಾಕ್ರಮದ ಹಾಡುಗಳು, ಮಾನಸ ಪೂಜೆಯ ಹಾಡುಗಳು, ದೀರ್ಘವಾದ ಶ್ರೀಲಕ್ಷ್ಮೀ ಲೀಲಾಮೃತ ಇತ್ಯಾದಿ ಒಟ್ಟು ಸುಮಾರು ೧೮೦ರಷ್ಟು ಹಾಡುಗಳು ದೊರಕಿವೆ.

ಇಂದಿರೇಶರ 'ಲಕ್ಷ್ಮೀಶೋಭಾನ'ದ ಬಗ್ಗೆ ತುಸು ವಿವರಗಳನ್ನು ಕೊಡಬಹುದಾಗಿದೆ. ಮಹಾಲಕ್ಷ್ಮಿಯ ಕುರಿತು ಶ್ರೀ ವಾದಿರಾಜರಾದಿಯಾಗಿ ಹಲವಾರು ಜನ ಕೀರ್ತನ ರಚಿಸಿದ್ದಾರೆ. ಇಂದಿರೇಶರ ಕ್ರಮ ಅವರಿಗಿಂತ ತುಸು ಭಿನ್ನವಾಗಿದೆ. ಅದರ ಅಂತರ್ಯದ ಎಳೆಯೆಂದರೆ –

'ನಿನ್ನ ತುತಿಸೆ ಆತನನ್ನು ತುತಿಸಿದಂತೆ
ಧನ್ಯನ ತುತಿಸಲು ನಿನ್ನ ತುತಿಸಿದಂತೆ'

ಹೀಗಾಗಿ ಶ್ರೀಹರಿಯು ವಿವಿಧ ಅವತಾರಗಳಲ್ಲಿ ಆಕೆ ಎಲ್ಲೆಲ್ಲಿ ಜೊತೆಗೂಡಿರುವಳೂ ಅವೆಲ್ಲ ರೂಪಗಳನ್ನು ಅವರು ಮನದುಂಬಿ ವರ್ಣಿಸಿದ್ದಾರೆ. ಶ್ರೀಕೃಷ್ಣನ ರುಕ್ಮಿಣಿಯಾಗಿ, ರಾಮಚಂದ್ರನ ಸೀತೆ ಯಾಗಿ, ಅದರಂತೆ ಇತರ ಅವತಾರಗಳಲ್ಲಿ ಆಕೆ ಯಾವ ಯಾವ ರೂಪಗಳಿಂದ ವ್ಯಕ್ತಳಾದಳೋ

ಅವುಗಳ ವರ್ಣನೆಯನ್ನ ಕಾವ್ಯಾತ್ಮಕ ಶೈಲಿಯಲ್ಲಿ ಮಾಡಿದ್ದಾರೆ. ಇದೊಂದು ಮಾದರಿ. ಶ್ರೀಕೃಷ್ಣನು ತನ್ನನ್ನ ಮೋಹಿಸಿದ ರುಕ್ಮಿಣಿಯನ್ನು ಸೆಳೆದೊಯ್ಯುವನಲ್ಲವೆ. ಅದರ ವರ್ಣನೆ ಹೀಗಿದೆ:

ಪತ್ರವ ಬರೆದಿಲ್ಲ ಮಿತ್ರತ್ವ ಮೊದಲಿಲ್ಲ
ಹತ್ತಿರದಣ್ಣಗೆ ಎತ್ತೊ ವಾರ್ತೆಗಳಿಲ್ಲ
ಹಸ್ತದಕ್ಷರ ನೋಡಿ ಚಿತ್ತ ಭ್ರಮಿಸಿ ಕರ
ವೆತ್ತಿ ರಥದಿ ನಿನ್ನ ಹತ್ತಿಸಿದ.

ಮುಂದುವರಿದು ಶ್ರೀಹರಿಯ ಕೃಪೆ ತನ್ನ ಮೇಲೆ ಆಗುವಂತೆ ನೆರವಾಗು – ಎಂದು ದಾಸರು ಅವಳನ್ನು ಪ್ರಾರ್ಥಿಸುತ್ತಾರೆ.

ಹರಿಯ ಎಡಕೆ ಬಲಕಿರುವಿ ನಿನ್ನೊಳು ಸ್ನೇಹವ
ಬೆರಸು ವನತಿಶಯ ಪರಮ ಪುರುಷ ಕೃಷ್ಣ
ವರುಣತನಯೆ ಹರಿ ಬರುವಂತೆ ಮಾಡೆನ್ನ
ಗುರುಳು ಮುಖೆ ಚಿತ್ತಸರಸಜದಿ.

ಇದನ್ನು ನಾವು ದೀರ್ಘಕವನವೆಂದು ಕರೆದಿದ್ದರೂ ಶತಕ ರೂಪದಲ್ಲಿ ಸಾಂಗತ್ಯದ ಧಾಟಿಯಲ್ಲಿರುವ ಈ ಹಾಡನ್ನು ಹೆಣ್ಣುಮಕ್ಕಳು ಪ್ರತಿ ಶುಕ್ರವಾರ ಒಮ್ಮೊಮ್ಮೆ ಸಾಮೂಹಿಕವಾಗಿ ಹಾಡುತ್ತಾರೆ.

ಇಂತು ಇಂದಿರೇಶರು ಜ್ಞಾನ, ಭಕ್ತಿ, ವೈರಾಗ್ಯಗಳ ಸಾಕಾರ ಮೂರ್ತಿ–ಯಾಗಿದ್ದುದರ ಅಪ್ರತಿಮ ವೈದಿಕ ವಿದ್ವಾಂಸರಿದ್ದುದರ ಜೊತೆಗೇ ಪ್ರಾಸಾದಿಕವಾಣಿಯ ಹರಿದಾಸರೂ ಆಗಿದ್ದರು. ಹರಿ ದಾಸರ ಪಂಕ್ತಿಯಲ್ಲಿ ಮೇಲಿನ ಸ್ಥಾನದಲ್ಲಿ ಮೆರೆದರು.

ಇವರನ್ನು ಕುರಿತು ಶ್ರೀ ಪಾಂಡುರಂಗಿ 'ಹುಚ್ಚಾಚಾರ್ಯರ ಚರಿತ್ರೆ ಹಾಗೂ ಅವರ ತಾರತಮ್ಯೋಕ್ತ ಕೃತಿಗಳು' ಎಂಬ ಗ್ರಂಥವನ್ನು ಶ್ರೀ ಪ್ರಹ್ಲಾದಾಚಾರ್ಯ ಕೃ. ಜೋಶಿ ಎನ್ನುವವರು ರಚಿಸಿದ್ದಾರೆ (ಕ್ರಿ.ಶ. ೨೦೦೦). ಇಂದಿರೇಶರ ವಂಶಸ್ಥರಾದ ಸುಪ್ರಸಿದ್ಧ ಡಾ.ಕೆ.ಟಿ. ಪಾಂಡುರಂಗಿ ಅವರಲ್ಲಿಯೂ ಅವರ ಕೃತಿ ಸಂಕಲನವಿದೆ.

# ಗುರು ಇಂದಿರೇಶ

ಗುರು ಇಂದಿರೇಶ ಅವರ ಬಗೆಗೆ ಬರೆಯುವ ಮುನ್ನ ಇವರ ಗುರುಗಳು ಯಾರು? ಎಂದು ಕೇಳಬೇಕಾಗಿ ಬಂದಿದೆ! ಯಾಕೆಂದರೆ 'ಇಂದಿರೇಶ' ಎನ್ನುವ ಮುದ್ರಿಕೆಯ ಇನ್ನೊಬ್ಬ ದಾಸರು ಆಗಿಹೋದರು. ಇವರು ಪಾಂಡುರಂಗಿ ಹುಚ್ಚಾಚಾರ್ಯರ ಸಮೀಪಕಾಲೀನರೇ. ಪೂರ್ಣ ಹೆಸರು ಹರಪನಹಳ್ಳಿ ರಾಮಾಚಾರ್ಯ ಎಂದು. ಇವರು ಹರಪನಹಳ್ಳಿಯವರೇ. ಇವರ ಮಗ ಕೃಷ್ಣಾಚಾರ್ಯರು ತಂದೆಯಿಂದ ಉಪದೇಶ ಹೊಂದಿ 'ಗುರು ಇಂದಿರೇಶ'ರ ಮುದ್ರಿಕೆಯಲ್ಲಿ ಹಾಡುಗಳನ್ನು ರಚಿಸಿದ್ದಾರೆ. ತಂದೆ ಇಂದಿರೇಶರ ಹೆಸರಿನ ಹಾಡುಗಳನ್ನು ಪ್ರತ್ಯೇಕವಾಗಿ ಯಾರೂ ಮುದ್ರಿಸಿದಂತಿಲ್ಲ. ಇನ್ನೊಬ್ಬ ಇಂದಿರೇಶಾಂಕಿತ ಹಾಡುಗಳಲ್ಲಿ ಸೇರಿಹೋಗಿರಲೂ ಸಾಕು. ಈ ಗುರು ಇಂದಿರೇಶರ ಮೂರೇ ಹಾಡುಗಳು ಸಿಕ್ಕಿವೆ. ಒಂದರಲ್ಲಿ (೫೧೩ ಅ) ಮಂತ್ರಾಲಯ ಮಠದ ಶ್ರೀ ಸುಗುಣೇಂದ್ರತೀರ್ಥರನ್ನು ನೆನೆದಿರುವರು. ಅವರ ಕಾಲವು ೧೮೩೨ರಿಂದ ೧೮೮೪. ಅಂತೂ ಈ ದಾಸರು ೧೯ನೆಯ ಶತಮಾನದ ಕೊನೆಯಲ್ಲಿದ್ದರೆಂದು ಶ್ರೀ ಕಲಮದಾನಿ ಗುರುರಾಯರು ಸರಿಯಾಗಿಯೇ ಊಹಿಸಿದ್ದಾರೆ. (ಹರಿದಾಸರ ಕಥೆಗಳು ಪು. ೨೫೦).

## ಶ್ರೀ ಗುರು ಇಂದಿರೇಶ

ಅನುಬಂಧ (ದೀರ್ಘಕೃತಿ ೨ ರಲ್ಲಿ) 'ಗುರುಕಥಾಮೃತ' ಎಂಬ ಮೂರು ಸಂಧಿಯ ಒಂದು ಕೀರ್ತನೆಯನ್ನು ಕೊಟ್ಟಿದೆ. ಅದರಲ್ಲಿ 'ಕೃಷ್ಣಾರ್ಯ' ಎಂಬ ಗುರುಗಳ ವರ್ಣನೆ ಇದೆ. ಆದರೆ ಮೇಲೆ ಹೇಳಿದ 'ಗುರು ಇಂದಿರೇಶ' ಮುದ್ರಿಕೆಯವರ ಹೆಸರೂ ಕೃಷ್ಣಾ ಚಾರ್ಯ! ಆದ್ದರಿಂದ ಇಲ್ಲಿ ವರ್ಣಿತರಾದವರು ಬೇರೊಬ್ಬ ಭಗವದ್ಭಕ್ತರೂ, ಆಚಾರ ಸಂಪನ್ನರೂ ಇರಬೇಕೆನ್ನಿಸುತ್ತದೆ. ವಿಶೇಷ ಸಂಗತಿಯೆಂದರೆ ಈ ಕೃಷ್ಣಾಚಾರ್ಯರು ಮೈಸೂರಿಗೆ ಹೋಗಿ ಅಲ್ಲಿಯ ಭೂಪಾಲನಿಂದ ಸನ್ಮಾನಿತರಾದರಂತೆ.

ಚಾರುತರ ಮೈಸೂರ ಪುರದೊಳು
ದಾರ ಮಹಿಮನು ಮೆರೆದ ವೈಭವ
ಸಾರಲೆನ್ನೊಶವಲ್ಲ ಯಂದಿಗಪಾರವಾಗಿಹುದು
ಪೌರಜನಸಂದಣಿಯು ಅದ್ಭುತದಿ
ಭೋರಿಡುವ ವಾರಿತ್ರಗಲ್ಲಿ ಹೂಂ
ಕಾರ ಮಾಡುವ ವಾಜಗಟ ಶೃಂಗಾರವೇನೆಂಬೆ
ಈ ಪರಿಯ ವೈಭವದಿಂದಲವ
ನೀಪತಿಯು ಕರೆತರಲು ಸದನದಿ
ವ್ಯಾಪಿಸಿದ ಪರಿಮಳವ ನೋಡುತ ಭೂಪ ಬೆರಗಾಗಿ
ತಾಪಸೋತ್ತಮರಡಿಗೆ ವಂದಿಸಿ
ಶ್ರೀಪತಿಯ ಭಕ್ತರೊಳು ಬಿಂ
ಬಾಪರೋಕ್ಷಿಗಳರ್ಚಿಸಿದ
ಸಕಲೋಪಚಾರದಲಿ

ಹೀಗೆ ಸಕಲೋಪಚಾರ ಮಾಡಿದವರ ಹೆಸರೂ ಕೃಷ್ಣ ಅರ್ಥಾತ್ ಮುಮ್ಮಡಿ ಕೃಷ್ಣರಾಜ ಒಡೆಯರು (ಮರಣ – ೧೮೬೮). ಕೀರ್ತನೆಯ ಕೊನೆಯಲ್ಲಿ ಕವಿ ತನ್ನ ವಂಶದ ಬಗ್ಗೆ ಹೀಗೆ ಹೇಳಿದ್ದಾನೆ.

'ಚಾರು ಹರಪನಹಳ್ಳಿ ವರ ಮಧ್ವಾಚಾರ್ಯರ ಸುತ ವೆಂಕಟ ಸುನಾಮಕ ಧೀರ ಕವಿಯೆಂದೆನಿಸಿ ಹರಿಯ ಪ್ರೇರಣೆಯ ಕೊಂಡು ಭಾರತೀಶನ ಸೂರಿವರ ಕೃಷ್ಣಾರ್ಯರ ಶೃಂಗಾರ ಮಹಿಮೆ ಭಕುತಿ ಪೇಳಿದೆ ಮೂರು ಸಂಧಿಗಳು'. ಇದರರ್ಥ ಈ ಗುರುಕಥಾಮೃತ ಕರ್ತೃವಿನ ಹೆಸರು ವೆಂಕಟಾಚಾರ್ಯ. ತಂದೆಯ ಹೆಸರು ಮಧ್ವಾಚಾರ್ಯ ಎಂದಂತಾಯಿತು. ಅರ್ಥಾತ್ ಮೇಲೆ ಹೇಳಿದ ರಾಮಾಚಾರ್ಯ ಗುರು ಇಂದಿರೇಶರೂ ಇವರೂ ಬೇರೆ ಬೇರೆ ಎನ್ನಬೇಕು. ಒಂದೇ ಊರಿನವರು ಒಂದೇ ಕಾಲದವರು ಹೀಗಾಗಲು ಸಾಧ್ಯವೇ ? ಸಾಧ್ಯವಿದೆ – ಎನ್ನಿಸುತ್ತದೆ. ಏಕೆಂದರೆ ಈ ಗುರು ಕಥಾಮೃತದ ಮೂರೂ ಸಂಧಿಗಳ ಕೊನೆಯಲ್ಲಿ 'ಶ್ರೀ ಗುರುಇಂದಿರೇಶ' ಎಂಬ ಮುದ್ರಿಕೆಯಿದೆ. ಬಿಡಿ ಕೀರ್ತನೆ ೫೧೨ – ೫೧೩ ರಲ್ಲಿ ಬರಿಯ 'ಗುರು ಇಂದಿರೇಶ' ಇದೆ. ವೆಂಕಟನಾಮಕ

ಈ ದಾಸರನ್ನು ಕರ್ಜಗಿಯ ರಮಾಪತಿವಿಠಲರು ಅಪೂರ್ಣವಾಗಿ ದೊರೆತ ಈ ಹಾಡಿನಲ್ಲಿ ಗುರು ನಮನ ಸಲ್ಲಿಸಿದ್ದಾರೆ.

ವಂದಿಸುವೆ ಆನಂದದಲಿ ಭಕುತಿಂದ
ನರಹರಿ ಚರಣ ಯುಗಳ
ಇಂದಿರಾದೇವಿಯನು...
ಸಂಕಟವ ಪರಿಹರಿಸುತಿಹ ನಮ್ಮ
ವೆಂಕಟಾರ್ಯರ ಮೊದಲೆ ಭಜಿಸುವೆ
ಮಂಕುಮತಿ ಬಿಡಿಸುತಿಹ
ಅಂಣ್ಣೈದಾಸರನು ನೆನೆವೆ
ಓಂಕಾರ ಪ್ರತಿಪಾದ್ಯನನು ಹೃ
ತ್ವಂಕಜದಿ ತೋರುತ್ತ ತತ್ವದೆ
ಶಂಕೆ ಬರದ್ಹಾಂಗುಸುರುತಿಹ
ತೀರ್ಥಾಂಕಿತರ ಭಜಿಪೆ

ಇಲ್ಲಿ ವೆಂಕಟಾರ್ಯರೆಂದರೆ ಹರಪನಹಳ್ಳಿಯ ವೆಂಕಟದಾಸರು. ಅಂಣ್ಣೈದಾಸರೆಂದರೆ ದೀಪದ ಅಣ್ಣಯ್ಯಾಚಾರ್ಯರು. ತೀರ್ಥಾಂಕಿತರಂತೂ (ತೀರ್ಥಪಾದವಿಠಲ) ಇವರ ಖಾಸಾ ಗುರುಗಳು.

## ಗೋಪತಿ(ಕೃಷ್ಣ) ವಿಠಲರು

ಇವರ ಮೊದಲಿನ ಹೆಸರು ಸುರಪುರದ ಸುಬ್ಬಣ್ಣಾಚಾರ್ಯ ಎಂಬುದು. ಮಧ್ಯ ವಯಸ್ಸಿನಲ್ಲಿ ಹೊಳೆ ಆನವೇರಿ (ಹಾವೇರಿ ಜಿಲ್ಲೆ) ಯಲ್ಲಿ ನೆಲೆನಿಂತರು. ಈ ಸ್ಥಳವೆಂದರೆ ತುಂಗಭದ್ರಾ ಕುಮುದ್ವತಿ ನದಿಗಳ ಸಂಗಮ. ಅಲ್ಲಿ ಶಿವಮಂದಿರವಿದೆ ಎಂಬುದು ಅವರ ಕೀರ್ತನೆಗಳಿಂದ ತಿಳಿದುಬರುತ್ತದೆ.

ತುಂಗಾ ಕುಮುದ್ವತಿ ಸಂಗಮೇಶ್ವರ ನಿನ್ನ
ಕಂಗಳಿಂದಲಿ ನೋಡೋ ಕರುಣದಿಂದ

ಅವರು ರಚಿಸಿರುವ ಶ್ರೀ ರಾಘವೇಂದ್ರ ಗುರುಗಳ ಮೇಲಿನ ಹಾಡು ಹೊನ್ನಾಳಿಯಲ್ಲಿರುವ ವೃಂದಾವನದ ಪ್ರಸ್ತಾಪವನ್ನೊಳಗೊಂಡಿದೆ.

ಕೋಲ ತನಯೆಯ ತೀರದಲಿ
ಹೊನ್ನಾಳಿಯಲಿ ವಿಹರಿಸುವಾ

ಹೊಳೆ ಆನವೇರಿಯ ಹತ್ತಿರವೇ ಇರುವ ಮುದೇನೂರಿನಲ್ಲಿ ಇಳಿವಯಸ್ಸನ್ನು ಭಗವತ್ಪಾರಾಯಣದಲ್ಲಿ ಕಳೆದು ಸಿದ್ಧಪುರುಷರೆನಿಸಿದರು. ಮುದೇನೂರಿನಲ್ಲಿ ಪ್ರಾಣದೇವರ ಮೂರ್ತಿಯನ್ನು ಸ್ಥಾಪಿಸಿದರು. ಆ ಕುರಿತು ಒಂದು ಹಾಡು ರಚಿತವಾಗಿದೆ. ಮುದೇನೂರಿನಲ್ಲಿ ಇವರ ಯೋಗಕ್ಷೇಮಕ್ಕೆಂದು ಬೇಡರ ಕನಕ ಎಂಬುವನಿದ್ದನಂತೆ. ಆಚಾರ್ಯರು ಅದೇ ತುಂಗಭದ್ರಾತಟದ ಹಾವನೂರಿಗೆ ಒಮ್ಮೆ ಬಂದಾಗ ಪ್ರಾಣೋತ್ಕ್ರಮಣವಾಯಿತು. ಇವರನ್ನು ರೂಢಿಯಲ್ಲಿ ಮುದೇನೂರ ಆಚಾರ್ಯರೆಂದೂ ಕರೆಯುತ್ತಿದ್ದರು.

ಇವರು ರಚಿಸಿದ ಹಾಡುಗಳಲ್ಲಿ ಕೆಲವೇ ದೊರೆತಿವೆ. ಅವು ಮೇಲೆ ಸಂದರ್ಭಿಸಿದ ಸ್ತುತಿಪರ ಪದ್ಯಗಳು ಮಾತ್ರ.

## ರಮಾಪತಿವಿಠಲರು

ಇವರ ಪೂರ್ವದ ಹೆಸರು ನರೇಗಲ್ಲ ರಾಮಣ್ಣ ಎಂದು. ಶ್ರೀದವಿಠಲರ ತಂಗಿಯ ಮಗ. ಆಗಿನ ಕಾಲದಲ್ಲೇ ಹೈಸ್ಕೂಲ್ ಶಿಕ್ಷಣ ಪಡೆದವರು. ಕಾರಕೂನರಾಗಿ ಅಲ್ಲಿ ಇಲ್ಲಿ ನೌಕರಿ ಮಾಡಿದರು. ಜೊತೆಗೇ ದಾಸಕೂಟದಲ್ಲೂ ಒಲವಿದ್ದಿತು. 'ವೆಂಕಟ' ಎಂಬ ಅಂಕಿತದಿಂದ ಪ್ರಾರಂಭದಲ್ಲಿ ಕೆಲವು ಕೀರ್ತನೆಗಳನ್ನೂ ರಚಿಸಿದರು. ಮುಂದೆ ಕರ್ಜಗಿಯ ತೀರ್ಥಪಾದವಿಠಲರಿಂದ 'ರಮಾಪತಿವಿಠಲ' ಎಂಬ ಮುದ್ರಿಕೆ ಲಭಿಸಿತು. ಈ ಅಂಕಿತದ ಅಡಿಯಲ್ಲಿಯೂ ಹಾಡುಗಳನ್ನು ರಚಿಸಿದ್ದಾರೆ.

ಮೋಜೆಂದರೆ ತಾವೇ ಬರೆದಿಟ್ಟ ಹಸ್ತಪ್ರತಿಯಲ್ಲಿ 'ನರೇಗಲ್ಲ ರಾಮದಾಸ ನಾಮಕ ನರಕೀಟಕನ ಹಸ್ತಾಕ್ಷರ' ಎಂದು ಬರೆದು, ಕೊನೆಯಲ್ಲಿ ಅದರ ಕಾಲವನ್ನೂ

ಸೂಚಿಸಿದ್ದಾರೆ ! ಇಲ್ಲಿ ದಾಖಲಾದ ಸಂವತ್ಸರದ ಮೇಲಿಂದ ಆ ವರ್ಷವು ೧೮೭೬ ಎಂದಾಗುತ್ತದೆ. ಇವರ ಕಾಲವನ್ನು ೧೮೩೦-೧೯೦೦ ಎಂದು ಸ್ಥೂಲವಾಗಿ ಹೇಳಬಹುದು.

ತವರ್ಮೊಂದು ಕೀರ್ತನೆಯಲ್ಲಿ ದೀಪದ ಅಣ್ಣಯ್ಯಾಚಾರ್ಯರನ್ನೂ (ಅಂಣ್ಣೈಯ್ಯಾದಾಸ), ಶ್ರೀ ಸತ್ಯಪರಾಕ್ರಮರನ್ನೂ (೧೮೭೨ - ೧೮೭೯), ಶ್ರೀ ಸತ್ಯವೀರರನ್ನೂ (೧೮೮೦ - ೧೮೮೭) ನೆನೆದಿದ್ದಾರೆ.

## ರಾಜಗೋಪಾಲದಾಸರು

ಇವರ ಮೂಲ ಮನೆತನ ಧಾರವಾಡ ಜಿಲ್ಲೆಯ ಕಾರಡಗಿಯದು. ಈ ಮನೆತನದ ಒಂದು ಪೀಳಿಗೆ ಕಡಕೋಳಕ್ಕೆ ಬಂದು ನೆಲಸಿತು. ಅವರಲ್ಲಿ ಮೊದಲಿಗರಾದ ಭೀಮಾಚಾರ್ಯ ಎಂಬುವರ ಮೊಮ್ಮಗ ಈ ರಾಜಗೋಪಾಲಾಚಾರ್ಯರು. ನಿಶ್ಚಿತ ಕಾಲ ತಿಳಿಯದಿದ್ದರೂ ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದರು.

ಇವರ ಆಶುಕವಿತ್ವವು ಪ್ರಸಿದ್ಧಿಯನ್ನು ಪಡೆದಿದ್ದಿತು. ಒಮ್ಮೆ ಕೃಷ್ಣರಾಜರನ್ನು ಕಾಣಲೆಂದು ಮೈಸೂರಿಗೆ ಹೋದರು. ನಗರ ಪ್ರಾಂತ್ಯದಲ್ಲಿ ದಂಗೆ ಎದ್ದರೆಂದು ರಾಜರು ಅಲ್ಲಿಗೆ ಹೋಗಿದ್ದರು. ಅಲ್ಲಿಗೇ ಹೋಗಿ ಭಕ್ಷಿ ಭೀಮರಾಯರೆಂಬ ಖಾಸಾ ಕಾರ್ಯದರ್ಶಿಗಳ ಮುಖಾಂತರ ರಾಜರ ಭೇಟಿ ಮಾಡಿದರು. ಆಗಿನ ಬಂಡಾಯ ಕುರಿತು ಲಾವಣಿ ರಚಿಸಿದರು.

ಎಂತು ಪೇಳಲಿ ಪ

ಸಂತತ ನಗರ ಪ್ರಾಂತದೊಳಗೆ
ಸ್ವಂತ ಸಾಹಸದಿ ನಿಂತು ಮಾಡಿದ ಲಢಾಯಿ
ದಿಗಂತದಲಿ ಪ್ರಖ್ಯಾತವಾಯಿತು ಮಹರಾಯಾ ೧

ಮೈಸೂರು ದೊರೆ ಮುಮ್ಮಡಿ ಕೃಷ್ಣರಾಜರನ್ನು ಕಂಡುಬಂದಿರುವುದರಿಂದ ಈ ರೀತಿಯಲ್ಲಿ ಮುಂದುವರಿದ ಹಾಡನ್ನು ಮಹಾರಾಜರ ಮುಂದೆ ಹೇಳಿದಾಗ, ಅವರು ನಂಬಲಿಲ್ಲ. 'ಯಾರೋ ಕಟ್ಟಿದ ಪದ ಹೇಳ್ತಿದ್ದೀಯ. ನೀನೇ ಆಗಿದ್ದರೆ ಈ ನಮ್ಮ ಕುದುರೇ ಲಾಯದ ಬಗ್ಗೆ ಹಾಡನ್ನು ರಚಿಸು ನೋಡೋಣ' ಎಂದರಂತೆ. ರಾಜಗೋಪಾಲದಾಸರು ಹಾಗೆ ರಚಿಸಿ ಮಹಾರಾಜರಿಂದ ಸಂಭಾವನೆ ಪಡೆದು ಬಂದರಂತೆ.

ಅವರ ಬಳಿ ಗಿಡ್ಡ (ತಟ್ಟು) ಕುದುರೆ ಇದ್ದಿತು. ಅದನ್ನು ಹತ್ತಿ ಕರ್ಜಗಿ, ಹಾವೇರಿ ಸವಣೂರು ಮುಂತಾದ ಸ್ಥಳಗಳಿಗೆ ಸುತ್ತುತ್ತಾ ಇದ್ದರು. ಒಮ್ಮೆ ಈ ಕುದುರೆಯು ತಡೆದು ನಿಂತಾಗ ನೆರೆದ ಜನ ಚೇಷ್ಟೆ ಮಾಡಿದರಂತೆ. ಆಗ ಕೂಡ ಒಂದು ಪದ ಹೊರಹೊಮ್ಮಿತು.

ನಡಿಯಬಾರದೇ ಲುಟುಲುಟು
ನಡಿಯಬಾರದೇ
ನಡಿಯಬಾರದೇ ಸರಿಯ ಕುದುರಿಯೋಳ್
ಕಡಲಿಯ ತಂದು ನಿನ್ನೊಡಲಿಗೆ ಇಡುವನು
ನಡೆಯಬಾರದೆ... ಇತ್ಯಾದಿ

ಹಂದಿಗನೂರಿನ ದೇಸಾಯಿಯುವರು ದೊಡ್ಡ ಕವುತವನ್ನು ಇಟ್ಟುಕೊಂಡವರು. ತಮ್ಮ ಎತ್ತುಗಳ ಮೇಲೆ ಹಾಡು ರಚಿಸಿ, ಎತ್ತಿಗೊಂದರಂತೆ ವರಹ ಕೊಡುವೆ ಎಂದರಂತೆ. ಆಗ ರಾಜಗೋಪಾಲದಾಸರು.

ಎತ್ತು ನೋಡು ದೌ-
ಲತ್ತಿನೊಳಗೆ ನಾ
ಲ್ವತ್ತು ಸೂರತಿ
ಮುತ್ತಿನ್ಹಾಂಗ.....

ಎಂದು ಮುಂತಾಗಿ ಪದ ಕಟ್ಟಿ ನಾಲ್ವತ್ತು ವರಹ ಸಂಪಾದಿಸಿದರಂತೆ. ಅವರು ರಿತ್ತಿಯ ಧೀರೇಂದ್ರಸ್ವಾಮಿಗಳ ಕುರಿತು ವಿಶೇಷವಾದ ಹಾಡನ್ನು ರಚಿಸಿದ್ದಾರೆ.

ಅದರಂತೆ, ಚಿಕ್ಕ ಕಾವ್ಯ 'ಕೀಚಕ ವಧವು' ಎಂಬುದನ್ನೂ ರಚಿಸಿದ್ದಾರೆ. ಕೀರ್ತನೆಗಳಂತೂ ಸರಿಯೇ. ಆದರೆ ದೊರೆತದ್ದು ಒಂದೆರಡು ಕೀರ್ತನೆಗಳು, ಹಾಗೂ 'ಕೀಚಕ ವಧವು.' ಅದಷ್ಟನ್ನು ಇಲ್ಲಿ ಕೊಟ್ಟಿದೆ.

'ಕೀಚಕವಧವು' ನಿಜಕ್ಕೂ ಒಂದು ಸುಂದರ ಸುರಮ್ಯ ಕಿರು ಕಾವ್ಯ. ಕಥೆ ಎಲ್ಲರಿಗೂ ತಿಳಿದಿದ್ದೇ. ಅನುಪ್ರಾಸವಂತೂ ಮೇಳ್ವಾಯ್ದು ಕಾವ್ಯಕ್ಕೆ ಸೊಗಸನ್ನು ನೀಡಿದೆ. ವಿವಿಧ ರಾಗಮಟ್ಟುಗಳಲ್ಲಿದ್ದು ಹಾಡುವುದಕ್ಕೆ ಖುಶಿ ಕೊಡುತ್ತದೆ. ಒಂದೆರಡು ಮಾದರಿಗಳನ್ನು ಇಲ್ಲಿ ಕೊಡಲಾಗಿದೆ.

(ಭೀಮಸೇನನು ದ್ರೌಪದಿಯನ್ನು ರಮಿಸುವುದು)

ಕೆಳದಿ ಬಳಲುವುದು ಕೇಳಿ ಕಳವಳಿಸಿ ತಾನೆದ್ದು
ಕಳೆಹೀನವಾದಂಥ ನಳಿನ ಮುಖವನೆ ನೋಡಿ
ಜಡಜಾಕ್ಷಿಯನ್ನೆಡದ ತೊಡೆಯ ಮೇಲಿರಿಸಿ
ಕಡುಮಮತೆಯಿಂದ ನೇತ್ರಜಲವನ್ನೆಲ್ಲ
ಧೋತ್ರದಿಂದೊರೆಸುತ್ತ ॥
ಬಲಭೀಮ ನುಡಿದನಿಂತೆಂದು
(ಕೀಚಕನ ಸಂಹಾರವಾದ ಮೇಲೆ)

ನೋಡಬಾರೆ ನೀ ನೋಡಬಾರೆ
ಒದ್ದು ತುಳಿದು ಒಂದು ಮುದ್ದಿಯ ಮಾಡಿಸಿ
ನಿದ್ದೆಯ ಬಿಟ್ಟು ನೀ ಎದ್ದು ಬ್ಯಾಗನೆ
ಟೊಂಕ ಮುರಿದು ಮೈಡೊಂಕ ತಿದ್ದಿಸಿ
ಕೊಂಕು ಬಿಟ್ಟು ಮನ ಶಂಕಿಸದೆ.....

ಹೀಗೆ ವರ್ಣನೆಯನ್ನೂ ಸುಂದರವಾಗಿ ಮಾಡಿರುವ ಅವರು ಒಳ್ಳೆಯ ಕವಿಹೃದಯದವರು.

# ಕಳಸದ ಗೌಡದಾಸರು

ಮಿತ್ರ ಅನಂತ ತಡಸ ಅವರು 'ಕಳಸದಲ್ಲಿಯ ಗೌಡರ ಮನೆತನದಲ್ಲಿ ಕೆಲವರು ದಾಸರು ಆಗಿಹೋದರು. ಅಲ್ಲಿಗೆ ಹೋಗಿ ಅವಶ್ಯ ವಿಚಾರಿಸಿರಿ' ಎಂಬುದಾಗಿ ಸೂಚಿಸಿದರು. ಕಳಸ ಗ್ರಾಮವು ಧಾರವಾಡ ಜಿಲ್ಲೆಯ ಕುಂದಗೋಳ ತಾಲ್ಲೂಕಿನ ಒಳಹಳ್ಳಿ. ಶಿಶುನಾಳ ಶರೀಫರ ಗುರುವಿನ ಊರು. ಅಲ್ಲಿಗೆ ಹೋದೆ. ಮಧ್ಯ ವಯದ ಗೋಪಾಲಗೌಡರನ್ನು ಕಂಡೆ. ನನ್ನ ನಿವೇದನೆಯನ್ನು ಕೇಳಿದ ಮೇಲೆ ತಮ್ಮ ತಾಯಿಯ ತಲೆದಿಂಬಿನ ಕೆಳಗೆ ಇಟ್ಟಿದ್ದ ೭-೮ ವಹಿಗಳನ್ನು ಹೊರತೆಗೆದು ತೋರಿಸಿದರು. (ಅಧಿಕೃತವಾಗಿ ಕೊಟ್ಟಿರಲಿಲ್ಲ.) ಶ್ರೀಪಾದರಾಜರಿಂದ ಹಿಡಿದು ಅನೇಕ ದಾಸರ ಹತ್ತಾರು ಅಪರಿಚಿತ ಅಂಕಿತಗಳುಳ್ಳ ಹಾಡುಗಳಿದ್ದವು. ಅವರ ತಾಯಿಯವರು ಊರಲ್ಲಿರಲಿಲ್ಲ. ಅವರ ಅನುಮತಿಯಿಲ್ಲದೆ ಅದರ ತುಂಡು ಕಾಗದವನ್ನೂ ಕೊಡುವಂತಿರಲಿಲ್ಲ ! ಆದರೆ ಆ ರಾತ್ರಿಯೂ ಅಲ್ಲಿಯೇ ಊಟಮಾಡಿ ವಹಿಗಳನ್ನು ತಿರುವಿ ಹಾಕುತ್ತಲಿರುವುದನ್ನು ಕಂಡು ಆ ಎಲ್ಲ ವಹಿಗಳನ್ನು ಕೊಟ್ಟರು.

ವಿಶೇಷವಾಗಿ ಕಂಡುಬಂದದ್ದು ಆ ಮನೆತನದ ಎಲ್ಲ ದಾಸರುಗಳಿಗೆ ಸೋದೆಯ ಶ್ರೀ ವಾದಿರಾಜರು ನಿಜಗುರುಗಳಾಗಿದ್ದುದ್ದು. ಯಾವುದೇ ಇರಲಿ ಪ್ರತಿ ಹಾಡಿನ ಮೇಲ್ಗಡೆ 'ಶ್ರೀ ಭಾವೀ ಸಮೀರ ಗುರುಭ್ಯೋನ್ನಮಃ' ಎಂದು ತಪ್ಪದೇ ಬರೆದದ್ದು. ಬೇರೆ ಯತಿಗಳನ್ನು ನೆನೆದಿದ್ದರೂ ಅವರ ಯಾತ್ರಾಸ್ಥಳವು ಹುಬ್ಬಳ್ಳಿ ಮಾರ್ಗವಾಗಿ ಹತ್ತಿರದ ಸೋದೆಯೇ. ಗೌಡರ ಮನೆತನದ ಪ್ರಮುಖ ದಾಸರಾದ 'ತಂದೆ ವರದ ಗೋಪಾಲವಿಠಲ'ರ ಚರಿತ್ರೆ ಯನ್ನು ಮೈಸೂರಿನ ಗುರು ಗೋವಿಂದದಾಸರು ಬರೆದಿದ್ದಾರೆ. ಆ ಮಟ್ಟಿಗೆ ಪ್ರಸಿದ್ಧರೂ ಆಗಿದ್ದರು. ಮಾತ್ರವಲ್ಲ ಆ ಅಂಕಿತದ ದಾಸರು ಭೂತರಾಜರ ಅಂಶಜರೆಂದೂ ಆಗಿನ ದಿನಗಳಲ್ಲಿ ತಿಳಿಯಲಾಗುತ್ತಿತ್ತು.

ಹಯಗ್ರೀವ ಪದಾಸಕ್ತ ವಾದಿರಾಜೇನ ಸ್ವಾಮಿನಾ
ಪ್ರಾರ್ಥಿಸೋ ಹಯರೂಪೋಸ್ ಗೋಪಾಲದಾಸರೂಪನಾ

ಸ್ವಪ್ನಾಂಕಿತ ಪದೋಯಸ್ಯ ತಂ ದಾಸಾರ್ಯಮಹಂ ಭಜೇ
ತಂದೆ ವರದಗೋಪಾಲಂ ಭೂತರಾಜಾಂಶ ಸಂಭವಂ ॥

ಇನ್ನೊಂದು ವಿಶೇಷವೆಂದರೆ ಈ ಮನೆತನದವರು ತಾವು ವಿಜಯದಾಸರ ವಂಶದವರೆಂದು ನಂಬಿದ್ದರು. ಕಳಸದ ಈ ಪೀಳಿಗೆಯ ಜೊತೆಗೆ ಬೇರೆ ಮೂರು ಮನೆತನಗಳ ಪರಸ್ಪರ ಸಂಬಂಧವಿದ್ದು ಮೊದಲಿಗೆ ಒಟ್ಟಿನ ಪೀಳಿಗೆಯನ್ನು ಕೊಡಬಯಸಿದೆ.

## ಕಳಸ ಮನೆತನ

ವಾಯು ಮನೆತನ
ನಾರಾಯಣಾಚಾರ್ಯರು
ಕೃಷ್ಣಚಾರ್ಯ ಕಮಲಾಬಾಯಿ – ನರಸಿಂಹಗೌಡ
ಸುಂದರಮ್ಮ ಪ್ರಹ್ಲಾದಗೌಡರು ರುಕ್ಮಿಣಿ

(ಪತಿ ಕೃಷ್ಣಾಚಾರ್ಯ ವಾಯಿ) (ತಂದೆ ವರದ ಗೋಪಾಲ ವಿಠಲ) (ಪತಿ–ರಾಘವೇಂದ)

ಕಾಳೀಯ ಮರ್ದನ ಕೃಷ್ಣ
ಶಿಷ್ಯ ಶಿಷ್ಯ ಶ್ರೀನಿವಾಸಾರ್ಯ (೧೯೧೨–೪೪)

ಗುರು ಕಾಲೀಯ ಮರ್ದನ ಕೃಷ್ಣ ನರಸಿಂಗರಾವ ಕಟ್ಟೀಮನಿ (ತಂದೆ ವರದವಿಠಲ)

(ಧಾರವಾಡದವರು) (ಗುರುತಂದೆ ವರದಗೋಪಾಲವಿಠಲ) ಗೋಪಾಲರಾವ (ಮಗ)

ಶಿಷ್ಯ : ಸಿರಿಗುರುತಂದೆ ವರದಗೋಪಾಲವಿಠಲ

ಈ ವಂಶಾವಳಿಯಲ್ಲಿ ಹಲವಾರು ಜನ ಅಂಕಿತಯುಕ್ತರು ಇರುವರಾದರೂ ಈ ಸಂಪುಟದಲ್ಲಿ ಕಾಣಿಸಿಕೊಂಡವರೆಂದರೆ ತಂದೆ ವರದಗೋಪಾಲವಿಠಲರು (ಪ್ರಹ್ಲಾದಗೌಡ), ಗುರುತಂದೆ ವರದ ಗೋಪಾಲವಿಠಲರು (ನರಸಿಂಗರಾವ), ತಂದೆ ವರದವಿಠಲರು (ಶ್ರೀನಿವಾಸರಾವ), ಹಾಗೂ ಸಿರಿಗುರು ತಂದೆ ವರದಗೋಪಾಲವಿಠಲರು (ಹೆಸರು ?)

ಇವರ ವಿವರವಾದ ಪರಿಚಯಮಾಡಿಕೊಳ್ಳುವುದಕ್ಕೆ ಮೊದಲು ಈ ಮೂರು ಕುಟುಂಬಗಳಿಗೆ ಸಂಬಂಧಿಸಿದ ಕೆಲವು ಅಂಶಗಳನ್ನು ನೋಡೋಣ. ಎಲ್ಲರಿಗೂ ಹಿರಿಯರಾಗಿದ್ದ ವಾಯಿ ನಾರಾಯಣಾಚಾರ್ಯರು ಮೂಲತಃ ಹೈದರಾಬಾದು ಕರ್ನಾಟಕದವರು. ಇವರ ಮಗಳಾದ ಕಮಲಾಬಾಯಿಯನ್ನು ಕಳಸದ ನರಸಿಂಹಗೌಡರಿಗೆ ಮದುವೆಮಾಡಿಕೊಟ್ಟಿತ್ತು. (ಕಮಲಾ ಬಾಯಿಯ ಮರಣ ೧೯೧೯ರಲ್ಲಿ). ಇವರ ಮಕ್ಕಳಲ್ಲಿ ಇಬ್ಬರು ಹರಿದಾಸರಾಗಿ ಕೀರ್ತನೆಗಳನ್ನು ರಚಿಸಿದ್ದಾರೆ. ಮಗಳು ಸುಂದರಮ್ಮ ತನಗೆ ಸೋದರಮಾವನಾದ ಕೃಷ್ಣಾಚಾರ್ಯರನ್ನು ಮದುವೆಯಾಗಿ, ಮೈಸೂರಿಗೆ ಪತಿಯೊಡನೆ ಬಂದು ನೆಲಸಿದಳು. ಅಲ್ಲಿ ಪುತ್ತಿಗೆ ಮಠದ ಆಗಿನ ಶ್ರೀಗಳು ಬಂದಾಗ ಸುಂದರಮ್ಮನಿಗೆ 'ಕಾಳೀಯ ಮರ್ದನ ಕೃಷ್ಣ' ಎಂಬ ಅಂಕಿತದೊಂದಿಗೆ ದಾಸದೀಕ್ಷೆಯಿತ್ತರಂತೆ. ಚಿಕ್ಕವಯದಲ್ಲಿ ತೀರಿಕೊಂಡರೂ ಮನನೀಯವಾದ ಹಾಡುಗಳನ್ನು ರಚಿಸಿದ್ದಾರೆ. (ಅವರ ಕೃತಿಗಳನ್ನು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಮಹಿಳಾ ಸಂಪುಟವೊಂದರಲ್ಲಿ ಸೇರಿಸಲಾಗಿದೆ.)

ಇನ್ನೀಗ ಕಳಸದಲ್ಲಿ ದಾಸಪ್ರಮುಖರಾಗಿದ್ದ ಪ್ರಹ್ಲಾದಗೌಡರ ಪರಿಚಯ ಮಾಡಿಕೊಳ್ಳೋಣ. ಬಾಲ್ಯದಲ್ಲಿ ಸೋದರಮಾವ ಕೃಷ್ಣಾಚಾರ್ಯರಲ್ಲಿ ಸಂಸ್ಕೃತಾಭ್ಯಾಸ ಮಾಡಿ, ಶಾಸ್ತ್ರ ಪಂಡಿತರಾಗಿದ್ದರು. ಅವರಿಗೆ ಸ್ವಪ್ನದಲ್ಲಿ ಅಂಕಿತವಿತ್ತವರು ಗೋಪಾಲ ದಾಸರು. ತಮ್ಮ ಗುರುಗಳಲ್ಲಿ ಅನನ್ಯ ಭಕ್ತಿ. ಅವರ ಶೇಷವಸ್ತ್ರಗಳನ್ನೇ ಬಳಸುತ್ತಿದ್ದರಂತೆ. ಊರಲ್ಲಿಯ ಪಾಟೀಲರಿಗೆ ತಮ್ಮ ಗಳಿಕೆಯ ಬಹುಭಾಗವನ್ನು ಗುರುಗಳಿಗೇ ಅರ್ಪಿಸುತ್ತಿದ್ದರು. ಹರಿಕಥೆ, ಆರಾಧನೆ, ಹಬ್ಬಹರಿದಿನ ಮುಂತಾದ್ದನ್ನು ವೈಭವೋಪೇತವಾಗಿ ಆಚರಿಸುತ್ತಿದ್ದರು. ಆದರೂ ಸಾಂಸಾರಿಕ ಜೀವನದಲ್ಲಿ

ವಿರಕ್ತಭಾವ. ಹೆಂಡತಿಯನ್ನು ದೂರವೇ ಇಟ್ಟಿದ್ದರಂತೆ. ಧಾರವಾಡದ ಶರಣಪ್ಪನೆಂಬ ವೀರಶೈವನು ಇವರ ಶಿಷ್ಯನಾಗಿದ್ದ. ಸೊಂಡೂರು ಕಮಲಾಬಾಯಿ ಎಂಬುವವಳೂ ಶಿಷ್ಯೆ. ಇವರು ರಚಿಸಿದ್ದ ಕೀರ್ತನೆಗಳನ್ನು ಹಾಡುತ್ತಿದ್ದಿರಬೇಕು.

ಕಟ್ಟೆಮನೆ ನರಸಿಂಗರಾಯರು ಇವರ ಶಿಷ್ಯತ್ವವನ್ನಪೇಕ್ಷಿಸಿ ಬಂದಾಗ 'ಗುರು ತಂದೆ ವರದಗೋಪಾಲವಿಠಲ' ಎಂಬ ಮುದ್ರಿಕೆಯಿತ್ತರು. ಮಂತ್ರಾಲಯದ ಶ್ರೀ ಸುಶೀಲೇಂದ್ರರನ್ನು ವಿಶೇಷ ಭಕ್ತಿ ಭಾವದಿಂದ ಕಾಣುತ್ತಿದ್ದರು. ಕೊನೆಗಾಲದಲ್ಲಿ ಮಾದನೂರಿನಲ್ಲಿ (ಮಾದಲಾಪುರ) ವಾಸಿಸತೊಡಗಿದರು. ದೇಹಾದ್ಯಂತ ಊದು ಬಂದಾಗ ಪುಟ್ಟಮ್ಮ ಎಂಬಾಕೆ ಸೇವೆ ಮಾಡಿದಳಂತೆ. ಇವರ ಮರಣ ಹಾಗೂ ಜನನದ ವರ್ಷ ನಿಶ್ಚಿತವಾಗಿ ತಿಳಿಯದು. ಆದರೂ ೧೯ನೇ ಶತಮಾನದ ಕೊನೆ ೨೦ರ ಆರಂಭದಲ್ಲಿ ಇದ್ದರೆಂದು ತಿಳಿಯಬಹುದು.

ಇವರು ರಚಿಸಿದ ೮೦ಕ್ಕೂ ಮೇಲ್ಪಟ್ಟು ಹಾಡುಗಳಲ್ಲಿ ಹೆಚ್ಚಿನವು ಸ್ತುತಿಪರವಾಗಿವೆ. ವಿಶೇಷತಃ ಹಲವಾರು ಮಾಧ್ವ ಯತಿಗಳನ್ನು ಸ್ತುತಿಸಿರುವುದು ಗಮನಾರ್ಹವಾಗಿದೆ. ಆತ್ಮನಿವೇದನೆಯ ಹಾಡು ಗಳಲ್ಲಿಯೂ ಶ್ರೀಹರಿಯ ಸ್ತುತಿಯು ಮೇಲ್ವಾಯ್ದು ಬಂದಿದೆ. ಹರಿದಾಸರ ಗದ್ಯರಚನೆ ಅಪೂರ್ವ. ಆ ಕಾರಣದಿಂದ 'ಪಂಚಭೇದ' ಎಂಬ ಮಧ್ವತತ್ವವನ್ನು ಗದ್ಯದಲ್ಲಿ ವಿವರಿಸಿದ್ದನ್ನು ಮಾದರಿಯಾಗಿ ಇಲ್ಲಿ ಕೊಟ್ಟಿದ್ದೇವೆ. (೭೮೩)

ಇವರೇ ದೀಕ್ಷೆಯಿತ್ತ ನರಸಿಂಗರಾಯರ ಕೆಲವೇ ಕೀರ್ತನೆಗಳು ದೊರೆತಿವೆ. ಅವು ಸುಲಭವಾಗಿ ಅರ್ಥಗಮ್ಯವಾಗಿವೆ. ತಂದೆ ವರದವಿಠಲರ ಹಾಡುಗಳು ಕಡಿಮೆ ಸಂಖ್ಯೆಯಲ್ಲಿ ಸಿಕ್ಕಿವೆ. ಅವರ ಜೀವಿತ ಕಾಲವು ೧೯೧೨ರಿಂದ ೧೯೪೪. ಎಂದರೆ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡವರು. 'ಗುರುಕಥಾಮೃತಸಾರ' ಎಂಬ ಸುದೀರ್ಘ ಸುಳಾದಿ ಲಭ್ಯವಿದ್ದು, ಶ್ರೀನಿವಾಸಾಚಾರ್ಯ ಎಂಬುವರನ್ನು ವರ್ಣಿಸಲಾಗಿದೆ (ಪ.೨೩೯). ಅದರಲ್ಲಿಯ ಮುದ್ರಿಕೆ ಸಿರಿಗುರುತಂದೆ ವರದಗೋಪಾಲವಿಠಲ ಪ್ರಾಯಶಃ ಕನ್ನಡ ದಾಸಸಾಹಿತ್ಯದಲ್ಲಿಯ ಅತ್ಯಂತ ದೀರ್ಘವಾದ ಮುದ್ರಿಕೆಯಿದು. ಇವರ ಹೆಸರು ತಿಳಿಯದು. ಆದರೆ ಗುರುಗಳು

ಕಟ್ಟೆಮನೆ ನರಸಿಂಗರಾಯರು ಎಂಬುದು ಇದರಿಂದ ವಿದಿತವಾಗುತ್ತದೆ. ಈ ಸುಳಾದಿಯಿಂದ ಶ್ರೀನಿವಾಸಾರ್ಯರು ರುಕ್ಮಿಣಿ ಮತ್ತು ರಾಘವೇಂದ್ರರ ಮಗನೆಂದೂ 'ಓರ್ವ ದ್ವಿಜನ ನೈಜ ಮರ್ಮವ ತಿಳಿಯದೆ ನಿಂದಿಸುವ' ಮನ ಮಾಡಿದ್ದರಿಂದ ಪಶ್ಚಾತ್ತಾಪಪಟ್ಟು ವಿವಿಧ ಗುರುಗಳನ್ನು ವಿಶೇಷತಃ ಶ್ರೀ ವಾದಿರಾಜರನ್ನು ನೆನೆದರಂತೆ. ಕೊನೆಗಾಲ (೩೨ನೇ ವಯಸ್ಸಿನಲ್ಲಿ) ದಲ್ಲಿ ಏಳುದಿನ ಪ್ರಾಯೋಪವೇಶನ ಗೈದು ಆಶ್ವೀಜ ಶುದ್ಧ ನವಮಿ ಮಂಗಳವಾರ ಅಸುನೀಗಿದರೆಂದು ಪ್ರಸ್ತಾಪ ಗೊಂಡಿದೆ. ಅವರ ಜೀವನದ ಬಗ್ಗೆ ಹೆಚ್ಚಿನ ವಿವರಗಳಿಲ್ಲ.

ಆದರೆ ನಾನು ಕಳಸಕ್ಕೆ ಹೋದಾಗ ಅವರ ಮಗ ಗೋಪಾಲರಾಯರಿಂದ ಅವರ ಲೌಕಿಕ ಜೀವನದ ಬಗ್ಗೆ ಬೇರೆ ಹಲವು ವಿವರಗಳು ತಿಳಿದುಬಂದವು. ಅವರೊಬ್ಬ ಶಾಸ್ತ್ರೀಯ ಸಂಗೀತಗಾರರಾಗಿದ್ದರು. ನಾಟಕ ಕಂಪನಿಗಳವರ ನಾಟಕಗಳಲ್ಲಿ ಅಭಿನಯಸಿದ್ದರು. (ಪದ್ಮಾವತಿ ಪರಿಣಯ, ಬಡತನದ ಭೂತ, ಉತ್ತರಭೂಪ ಇತ್ಯಾದಿ) ವೇಷ ಭಾಷೆಗಳಲ್ಲಿ ಆಧುನಿಕರಂತೆ ಕಾಣುತ್ತಿದ್ದರಂತೆ. ಇದಾವುದರ ಸೂಚನೆ ಈ ಗುರುಕಥಾಮೃತದಲ್ಲಿ ಇಲ್ಲ. ಇಬ್ಬರು ಶ್ರೀನಿವಾಸರು ಇದ್ದರೆ? ಅದರ ಸುಳಿವು ಎಲ್ಲಿಯೂ ದೊರೆತಿಲ್ಲ.

## ಸಿರಿವಿಠಲರು (೧೮೮೨-೧೯೬೩)

ಇದೇ ಕಾಲದಲ್ಲಿದ್ದ ಕಲಮದಾನಿ ಮನೆತನವೂ ದಾಸಸಾಹಿತ್ಯದಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಹೊಂದಿದ್ದಿತು. ಎದ್ದು ಕಾಣುವ ಹೆಸರು ಶ್ರೀ ಕಲಮದಾನಿ ನಾರಾಯಣರಾಯರದು. ಮೆಟ್ರಿಕ್ ಪಾಸಾಗಿದ್ದ ಅವರು ಕೋಲಾರದಲ್ಲಿ ರೈಲ್ವೆ ನೌಕರರಾಗಿದ್ದರು. ಲೇಬ್ಬ ಮನೆತನದ ರಮಾಬಾಯಿ ಎಂಬುವರೊಡನೆ ವಿವಾಹವಾಯಿತು. ಮನೆಯ ವಾತಾವರಣವೇ ಹರಿದಾಸಮಯವಾಗಿದ್ದಿತು. ಮಗಳು ಗೋದಕ್ಕ ಹಾಗೂ ಅಣ್ಣನ ಮಗಳು ತುಂಗಕ್ಕನಿಗೆ ವಾಸದೀಕ್ಷೆಯನ್ನು ಕೊಟ್ಟಿದ್ದರು. (ಸಿರಿನಾರಾಯಣ, ತಂದೆ ಸಿರಿವಿಠಲ - ಅಂಕಿತ ಪ್ರದಾನ) ನಾರಾಯಣರಾಯರದು ಸುಸ್ವರದ ಶ್ರೀಕಂಠ. ಪ್ರತಿದಿನ ಸಂಜೆ ಕುಟುಂಬದ-ವರೊಂದಿಗೆ ಬೆರೆತು ಹಾಡುತ್ತಿದ್ದರು.

ತಂದೆ ಭೀಮರಾಯರಿಂದ ಬಂದ ಈ ಒಲವು ಕೀರ್ತನ ರಚನೆ ಮಾತ್ರವಲ್ಲ, ದಾಸಸಾಹಿತ್ಯದ ಪುನರುಜ್ಜೀವನಕ್ಕೂ ಪ್ರೇರೇಪಿಸಿತು. ಎಲ್ಲೆಲ್ಲಿಯೋ ಅಲೆದಾಡಿ ಹರಿದಾಸರ ಬಗ್ಗೆ ಮಾಹಿತಿಯನ್ನು ಕಲೆಹಾಕಿದರು. ಹಾಗೆ ದೊರೆತ – ಹರಿದಾಸರ ಕಿರುಪರಿಚಯವೇ ಆಗಲಿ – ಒದಗಿಸಿದರು. ಅದನ್ನೆಲ್ಲ ಅವರ ಮಗ ಕಲಮದಾನಿ ಗುರುರಾಯರು 'ಹರಿದಾಸರ ಕಥೆಗಳು' ಎಂಬುದಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ. ಇಂದಿಗೂ ಅದೊಂದು ಮಹತ್ವದ ಆಕರ ಗ್ರಂಥವಾಗಿದೆ. ನಾರಾಯಣರಾಯರು 'Mystic Teachings of Haridasas of Karnataka' ಎಂಬ ಕೃತಿಯಲ್ಲಿ ಹರಿದಾಸರನ್ನು ಕುರಿತು ಇಂಗ್ಲಿಶ್‌ನಲ್ಲಿ ಬರೆದಿದಾರೆ (೧೯೩೯). ಅದಕ್ಕೆ ಜೊತೆಗೂಡಿದವರು ಎ.ಪಿ. ಕರಮರಕರರು. ನಾರಾಯಣರಾಯರ ಇನ್ನೊಂದು ಕೃತಿ ಜಗನ್ನಾಥದಾಸರ ಚರಿತ್ರೆಯನ್ನು ಒಳಗೊಂಡಿದೆ. ಜಗನ್ನಾಥದಾಸರು ತ್ರಿಪದಿರೂಪದಲ್ಲಿ ಕೃತಿರಚನೆ ಮಾಡಿದ್ದು ಗೊತ್ತಿರಲಿಲ್ಲ. ಅಂಥ ೧೨೦೦ ತ್ರಿಪದಿಗಳನ್ನು ಒಂದೆಡೆ ತಂದಿದ್ದಾರೆ. ವಿಷ್ಣುತೀರ್ಥರು ರಚಿಸಿದ್ದ ಭಾಗವತ ಸಾರೋದ್ಧಾರಕ್ಕೆ ಟೀಕೆ ಬರೆದಿರುವುದಾಗಿಯೂ ತಿಳಿಯುತ್ತದೆ. ಇನ್ನಿತರ ಕೃತಿಗಳೆಂದು ಸುಮಧ್ವವಿಜಯ ಸಾರಸಂಗ್ರಹ, ಏಕಾದಶೀ ಮಹಾತ್ಮೆ ಹಾಗೂ ಮಧ್ವನಾಮಗಳನ್ನು ಹೆಸರಿಸಬೇಕು. ದಾಸಸಾಹಿತ್ಯವನ್ನು ಪುನರುಜ್ಜೀವಿಸುವಲ್ಲಿ ಉಡುಪಿಯ ಪಾವಂಜೆ ಗುರುರಾಯರೂ ಶ್ರಮಿಸುತ್ತಿದ್ದರಷ್ಟೆ. ಅವರಿಗೆ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರುವ ಅವೆಷ್ಟೋ ಹಾಡುಗಳನ್ನು ಕಾಲಕಾಲಕ್ಕೆ ಕಳಿಸುತ್ತಿದರಂತೆ.

ಅವರು ಸವಣೂರಿನ ಸತ್ಯಬೋಧರ ಪರಮ ಭಕ್ತರಾಗಿದ್ದರು. ಸವಣೂರು ನಿಯಮಿತ ಯಾತ್ರಾಸ್ಥಳವಾಗಿದ್ದಿತು. ಅವರ ಮೇಲೆ ಹಲವು ಕೀರ್ತನೆಗಳನ್ನು ರಚಿಸಿದ್ದಾರೆ. ಹಾಗೆ ಅವರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ನಮಗೆ ದೊರೆತದ್ದು ಕೇವಲ ಏಳು ಮಾತ್ರ. ಅವುಗಳಲ್ಲಿ ಹರಿಭಕ್ತಿಗೆ ಸಾಕ್ಷಿ ಇದ್ದವರ ಮತ್ತು ಶ್ರೀ ರಾಘವೇಂದ್ರರನ್ನು ಸ್ತುತಿಸುವ ಹಾಡುಗಳು, ಅರ್ಥಗರ್ಭಿತವಾಗಿವೆ. ಇವುಗಳ ಜೊತೆಗೆ 'ಅಖಿಲಾಂಡಕೋಟಿ...' ಎಂದು ಆರಂಭವಾಗುವ ದೀರ್ಘ ಕೃತಿಯನ್ನೂ (೧೨೪ ನುಡಿಗಳು) ಉಲ್ಲೇಖಿಸಬೇಕು (೭೯೫). ವಿಷಯ ಮಂಡನೆ ಪ್ರೌಢವಾದುದು. ೨೦ನೆಯ ಶತಮಾನದ ಹರಿದಾಸರಲ್ಲಿ ಅಪೂರ್ವವಾಗಿ ಕಾಣಿಸಿ ಕೊಳ್ಳುವಂಥವರು.

# ಐಹೊಳೆ ವೆಂಕಟೇಶ

## (ಭೀಮರಾಯ)

ವಿಜಾಪುರ ಜಿಲ್ಲೆಯ ಚಾರಿತ್ರಿಕ ಸ್ಥಳವಾದ 'ಐಹೊಳೆ'ಯವರು ಈ ದಾಸರು. ಭಾರದ್ವಾಜ ಗೋತ್ರದ, ಐಹೊಳೆಯ ಮುತಾಲಿಕ ದೇಸಾಯರ ಮಕ್ಕಳು. ಭೀಮರಾವ್ ರಾಘವೇಂದ್ರ ಕುಲಕರ್ಣಿ ಇವರ ಪೂರ್ವದ ಹೆಸರು. ಕನ್ನಡ, ಸಂಸ್ಕೃತಗಳಲ್ಲಿ ಪಂಡಿತರಾಗಿದ್ದರು. ಬೆಳಗಾವಿಯಲ್ಲಿ ಸರದಾರ್ ಹೈಸ್ಕೂಲಿನಲ್ಲಿ ಕೆಲಕಾಲ ಅಧ್ಯಾಪಕ ವೃತ್ತಿಯಲ್ಲಿದ್ದರು. ಮುಂದೆ ರೋಣದಲ್ಲಿಯೂ, ಮುರಗೋಡ ದಲ್ಲಿಯೂ ಫೌಜುದಾರರಾಗಿದ್ದರು. ಆದರೆ ವೈರಾಗ್ಯವನ್ನು ತಾಳಿ ಹರಿದಾಸರೂ ಕೀರ್ತನಕಾರರೂ ಆಗಿ ಬದುಕನ್ನು ಸಾಗಿಸಿದರು.

ಸ್ವಪ್ನ ಸೂಚನೆಯಂತೆ, 'ಐಹೊಳೆ ವೆಂಕಟ' ಎಂಬ ಅಂಕಿತವನ್ನು ಹೊಂದಿ ಹಾಡುಗಳನ್ನು ಬರೆಯಲಾರಂಭಿಸಿದರು. ಕಲಮದಾನಿ ಗುರುರಾಯರು ಇವರ ಕಾಲವನ್ನು ಸುಮಾರು ೧೮೩೫ರಿಂದ ೧೯೧೫ ಎಂದು ಗುರುತಿಸಿದ್ದಾರೆ. ಪಾರಿಜಾತ ನಾಟಕಗಳನ್ನು ರಚಿಸಿ, ಆಡಿಸುವುದರಲ್ಲಿ ವಿಶೇಷವಾದ ಆಸ್ಥೆಯಿತ್ತು. ವಿರಾಟಪರ್ವ – ರಾಮ ಪಾರಿಜಾತ, ರುಕ್ಮಾಂಗದ ನಾಟಕ, ನಳೋಪಾಖ್ಯಾನ, ಅಂಬರೀಷನಾಟಕ, ಕೃಷ್ಣಪಾರಿಜಾತ, ಮುಂತಾದ ಕಥನಕಾವ್ಯಗಳನ್ನೂ, ಏಕಾದಶೀ ಮಹಾತ್ಮೆ ಎಂಬ ಷಟ್ಪದಿ ಗ್ರಂಥವನ್ನೂ ರಚಿಸಿದ್ದಾರೆ. ರುಕ್ಮಿಣಿ ಸತ್ಯಭಾಮೆಯರ ಮುಯ್ಯದ ಹಾಡುಗಳು ಸ್ವಾರಸ್ಯವಾಗಿವೆ. 'ರಾಮ ಪಾರಿಜಾತ', 'ಗೋಪ ನಾರಿಯರ ಕರುಣಾಲಾಪ' ಇವು ಪ್ರಕಟಿತ ಕೃತಿಗಳು. 'ಶ್ರೀರಾಮಪಾರಿಜಾತ' ರಾಮಾಯಣದ ಬಾಲಕಾಂಡದ ಕಥೆಯನ್ನು ಹೇಳುತ್ತದೆ (ಅನುಬಂಧ ೫ರಲ್ಲಿ ಕೊಟ್ಟಿದೆ). ಏಕಾದಶೀ ಮಾಹಾತ್ಮ್ಯದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ ಮತ್ಸ್ಯಪುರಾಣದ ೧೧ನೇ ಅಧ್ಯಾಯದ ಕಥೆಯಿದೆ. ಇದರ ಫಲಶ್ರುತಿಯ ಪದ್ಯದಲ್ಲಿ ತಾವು ಭಾರದ್ವಾಜ ಗೋತ್ರೋದ್ಭವರೆಂದೂ, ಮಧ್ವಮಾತಾನುಯಾಯಿಯಾದ ರಾಘಪ್ಪನ ಮಗ ಭೀಮರಾಯನೆಂದೂ ಹೇಳಿಕೊಂಡಿದ್ದಾರೆ. ಇವರ ಕೀರ್ತನೆಗಳಲ್ಲಿ ವಿಜಾಪುರ ಜಿಲ್ಲೆಯ ಅಚ್ಚಗನ್ನಡದ ಸೊಗಡು ಎದ್ದುಕಾಣುವಂತಿದೆ. ಕೃಷ್ಣನ ಬಾಲಲೀಲೆಯನ್ನು

ಗೋಪಿಕ ವರ್ಣಿಸುತ್ತಾ, ಬಾಲ ಗೋಪಾಲನನ್ನು ಸಮಾಧಾನಿಸುವ ಪರಿ ರಂಜನೀಯವಾಗಿದೆ.

'ಸುಮ್ಮನೆ ಹಟವ್ಯಾತಕಮ್ಮ ನಿನಗೆ ಮೊಮ್ಮನುಣಿಸುವೆ ನಾನು
ಹಾಲು ಕುಡಿಸುವೆನೊ ನಾನು ಒಬ್ಬ ಕೀಳತಿರುಕ ಬಾಗಿಲಲಿ
ಬಂದಿಹನೊ, ಬಾಲಯ್ಯ ಅಳದಿರೋ ನೀನು, ತನ್ನ
ಜೋಳಗೆಯಲಿ ನಿನ್ನ ಕೊಂಡೊಯ್ಯುವನು'

ಎನ್ನುವಲ್ಲಿ ಕಾಣುವ ತಾಯಿ – ಮಕ್ಕಳ ಚಿತ್ರ ನಿತ್ಯ ನೂತನ.

'ಪಾಪ ಕರ್ಮವ ಮಾಡಬ್ಯಾಡ ನರಕ ಕೂಪದೊಳಗೆ ಹೊರಳಬ್ಯಾಡಾ
ಕಾಕ ಪುರುಷರ ಸಂಗ ಕೇಡಾನಮ್ಮ
ಶ್ರೀಪತಿ ಸ್ಮರಣೆ ಬಿಡಬ್ಯಾಡ'
ಸತ್ಯ ವಚನದಿಂದ ಬಾಳೊ ಬಲು
ಭಕ್ತಿಪೂರ್ವಕದಿ ಸಚ್ಚಾರಿತ್ರವ ಕೇಳೊ
ಚಿತ್ತದಿ ಶಾಂತಿಯ ತಾಳೊ ದುಷ್ಟರುಕ್ತಿ
ಕೇಳದೆ ನಿನ್ನ ಕಿವಿ ಮುಚ್ಚಿಕೊಳ್ಳೊ'

ಎನ್ನುವಲ್ಲಿಯ ನೀತಿ ವಚನ ನಿತ್ಯ ಸತ್ಯ. ಇವರ ಕೃತಿಗಳು ಇನ್ನಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಾದರೆ ಈ ದಾಸರ ಬಗ್ಗೆ ವಿಶೇಷ ವಿಷಯಗಳು ತಿಳಿಯಬಹುದು.

## ಶ್ರೀ ಹುಯಿಲಗೋಳ ನಾರಾಯಣರಾಯರು

'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬುದಾಗಿ ಪೂರ್ಣ ಹೇಳುವುದೇನು ಬೇಡ. ಬರಿ 'ಉದಯವಾಗಲಿ' ಎಂದರೆ ಸಾಕು ಅದನ್ನು ರಚಿಸಿದ ಶ್ರೀ ಹುಯಿಲಗೋಳ ನಾರಾಯಣರಾಯರ ಹೆಸರನ್ನು ಥಟ್ಟನೆ ನೆನೆಯದ ಯಾವ ಕನ್ನಡಿಗನೂ ಇರಲಕ್ಕಿಲ್ಲ. ಇದೇ ಒಂದು ಕೀರ್ತನೆಯಂತೆ ಇರುವಾಗ, ಅವರು ಭಗವಚ್ಚಿಂತನೆಯ ಕೀರ್ತನೆಗಳನ್ನೂ ರಚಿಸಿದ್ದಾರೆ – ಎನ್ನುವುದು ಮಾತ್ರ

ಎಂಥವರಿಗೂ ಗೊತ್ತಿರಲಿಲ್ಲ. ಮಿತ್ರ ಜಿ.ಡಿ. ಜೋಶಿಯವರು ಅವರ ಬಗ್ಗೆ ಸಂಪ್ರಬಂಧವನ್ನು ಬರೆಯಹೊರಟಾಗ ಈ ಅಂಶ ಬೆಳಕಿಗೆ ಬಂತು.

ಸಾತ್ವಿಕ ಕಾರ್ಯಕರ್ತರಾದ ಹುಯಿಲಗೋಳ ನಾರಾಯಣ ರಾಯರು ಹುಟ್ಟಿದ್ದು ಗದಗಿನಲ್ಲಿ. ಫುಟ್‌ಬಾಲ್ ಆಟಗಾರರ ತಂಡ ನಿರ್ಮಿಸಿದರು.

ವಿದ್ಯಾದಾನ ಸಮಿತಿಯ ಹೈಸ್ಕೂಲ್ ಮೂಲಕ. ಜೊತೆಗೆ ವಕೀಲ ವೃತ್ತಿ. ಪ್ರವೃತ್ತಿಯಿಂದ ಕೀರ್ತನಕಾರರಾಗಿ ಹೆಸರು ಮಾಡಿದ್ದರು. ಆಗೆಲ್ಲ ಸದ್ದಿಲ್ಲದೆ ಹರಿದಾಸ ಕೀರ್ತನೆಗಳನ್ನೂ ರಚಿಸುತ್ತಾ ಇದ್ದರು. ಈ ವಿಷಯದಲ್ಲಿ ಅವರಿಗೆ ಗದಗಿನ ವೀರ ನಾರಾಯಣ ದೇವರು ಹಾಗೂ ಮಹಾಕವಿ ಕುಮಾರವ್ಯಾಸ ಪ್ರೇರಣೆ ಇತ್ತವರು.

ಅವರು ರಚಿಸಿದ 'ಗದುಗಿನ ವೀರನಾರಾಯಣಾಂಕಿತವಾದ' ೮೦ಕ್ಕೂ ಮಿಕ್ಕಿದ ಹಾಡುಗಳ ಒಂದು ವೈಶಿಷ್ಟ್ಯವೆಂದರೆ ಭಾಷಾ ಸೌಷ್ಠವ, ಶ್ರೀಪಾದರಾಜ, ವ್ಯಾಸರಾಯ, ವಾದಿರಾಜ ಯತಿವರ್ಯರುಗಳ ಬಂಧದ ಬಿಗುವನ್ನು ನೆನಪಿಗೆ ತರುವಂತಿವೆ. ೧೯ – ೨೦ ನೆಯ ಶತಮಾನದಲ್ಲಿ ಹರಿದಾಸರುಗಳು ಭಕ್ತಿಭಾವವನ್ನು ತಮ್ಮ ಕೃತಿಗಳಲ್ಲಿ ತಂದಿರುವರಾದರೂ ಭಾಷಾ ಶುದ್ಧತೆಯ ಬಗ್ಗೆ, ಛಂದಸ್ಸಿನ ನಿಯಮಗಳ ಬಗ್ಗೆ ಸಾಮಾನ್ಯವಾಗಿ ಗಮನಕೊಟ್ಟವರಲ್ಲ. ನಮ್ಮ ಸಂಪುಟದಲ್ಲಿ ಕಡೆಯವರಾದ ಶ್ರೀ ಹುಯಿಗೋಳರು ಇದಕ್ಕೆ ಅಪವಾದವಾಗಿದ್ದಾರೆನ್ನುವುದು ನಮಗೆ ತುಂಬಾ ಸಂತಸ ಮೂಡಿಸಿದೆ.

ಇವರ ಕೃತಿರಚನೆಯ ಇನ್ನೊಂದು ವೈಶಿಷ್ಟ್ಯವೆಂದರೆ ಪ್ರಾಸಾದಿಕವೆನಿಸುವ ಕಲ್ಪಕತೆ. ಅದಕ್ಕೆ ಮಧ್ವ ಸಿದ್ಧಾಂತದ ಹಾಗೂ ಆರ್ಷೇಯ ಗ್ರಂಥಗಳ ವ್ಯಾಸಂಗವು ಹಿನ್ನೆಲೆಯಾಗಿ ನಿಂತಿದೆ. ಇದೊಂದು ಮಾದರಿ :

ಎಂಥ ವಿಲಕ್ಷಣನೋ ಶ್ರೀಹರಿ ಪ

ಪಂಥವು ತಿಳಿಯದನಂತ ಮೂರುತಿಯೆ ಅ.ಪ.

ಅಣುವೆಂದರೆ ನೀ ಮಹತನಾಗುವೆ
ಅಣುವಾಗುವಿ ನೀ ಮಹತನೆಂದರೆ

ಅಣುಮಹತ್ತೆರಡೂ ಕೂಡಿರಲೂ ಸಹ
ಗುಣವು ತಿಳಿಯದೊ ಅಜ್ಞೇಯಾ ೧

('ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಉಪನಿಷದ್ವಾಕ್ಯದ ಸೊಗಸಾದ ಭಾವಾನುವಾದ).

ಧನನ ಕೊಟ್ಟರೆ ನೀ ಬೇಡೆನ್ನುವಿ
ತಿನಿಸು ಕೊಟ್ಟರೆ ಒಲಿಯದಲಿರುವಿ
ಅನುದಿನ ಮನವನ್ನಿತ್ತು ಮಾಳ್ಪ ಬರಿ
ಘನ ಭಕ್ತಿಗೆ ಬಹು ನೀನು ಮೆಚ್ಚುವಿ ೨

ಆಕಾರವು ನಿನಗಿಲ್ಲವೆಂತೆನೆ
ಸಾಕಾರ ನೀನಾಗಿ ತೋರುವಿ
ಈ ಕಾರಣ ನಿಜ ನಿಜ ತಿಳಿಯದು ಪೇಳಲು
ಬೇಕೈ ಗದುಗಿನ ವೀರನಾರಾಯಣ ೩

ಅದರಂತೆ ಮಹಾಲಕ್ಷ್ಮಿಯ, ಇತರ ದೇವತೆಗಳ ವರ್ಣನೆ ಹೃದ್ಯವಾಗಿದೆ. ಅವರು ನಮನ ಮಾಡಿದ ಗುರುಗಳಲ್ಲಿ ಶ್ರೀರಾಘವೇಂದ್ರ ಯತಿಗಳಿಗೆ ಮೊದಲ ಸ್ಥಾನ. ಅದರಲ್ಲಿ 'ಕಥೆಯ ಕಟ್ಟಿದೆ ನಾಟಕ ಪದ್ಯವ ರಚಿಸಿದೆನೆಂಬ ಹೆಮ್ಮೆಯೊಳಿದ್ದ ಯತಿರಾಯಾ ನಿನ್ನ ಸುಚರಿತೆಯ ಕಥಿಸಲು ಗತಿಕಾಣದೆ ನಿಂತು ಬಾಯ್ಬಿಡುವ' ಎಂದು ಪ್ರಾಂಜಲವಾಗಿ ಒಪ್ಪಿಕೊಂಡಿದ್ದಾರೆ.

ಪುರಂದರದಾಸರ ಮೇಲಿನ ವ್ಯಾಜನಿಂದಾರೂಪದ ಸ್ತುತಿಯಂತೂ ತುಂಬಾ ಮನೋಜ್ಞವಾಗಿದೆ.

ಜಿಪುಣರ್ರೈ ನೀವೆಂದು ಹೇಳಿದುದು ಸುಳ್ಳಲ್ಲ.
ಘನತರದ ವೈರಾಗ್ಯ ತಳೆದು ದ್ವಿಜರಿಗೆಲ್ಲ
ಧನಕನಕ ಸಂಪತ್ತು ದಾನ ಮಾಡಿದರೆಲ್ಲ
ವನಜನಾಭನ ಸ್ತುತಿಗೆ ಶಬ್ದ ಸಂಪತ್ತೆಲ್ಲ

ಒಸೆದು ನೀವೇ ಬಳಸಿ ನನಗೇನು ಕೊಡಲಿಲ್ಲ!
ಖಂಜೂತನ ಕಥೆಯನು ಹೇಳೂಸಲ್ಲ
ಕಂಜನಾಭನ ಮಹಿಮೆ ಬಣ್ಣಿಸುವ ನೆವದಲ್ಲಿ
ರಂಜನೆಯ ಶಬ್ದಗಳ ಸವಿದುಂಡೆಯಲ್ಲಿ
ಎಂಜಲವನುಳಿದೆನಗೆ ಕಿಂಚಿತ್ತು ಬಿಡಲಿಲ್ಲ !!

ಇಂಥ ಸರಸ ಸುಂದರ ಭಾವದ ಹಾಡುಗಳಿಂದಾಗಿ ಈ ಸಂಪುಟದ ಶೋಭೆ ಹೆಚ್ಚಿದೆಯೆಂದು ಬಗೆಯುತ್ತೇವೆ.

(ಹುಯಿಲಗೋಳ ನಾರಾಯಣರಾಯರ ಕೀರ್ತನೆಗಳನ್ನು ಈ ಸಂಗ್ರಹದಲ್ಲಿ ಸೇರಿಸಲು ಸಮ್ಮತಿಯಿತ್ತ ಅವರ ಮಕ್ಕಳನ್ನು ಅಭಿವಂದಿಸುವೆವು.)

## ಸವಣೂರ ದಾಸರು (ದೂರಪ್ಪದಾಸರು)

ಇವರು ಸವಣೂರ ದಿವಾನ ಖಂಡೇರಾಯರ ಮಕ್ಕಳು. ದೊಡ್ಡ ಪೂರ್ಣಯ್ಯನವರು ತಮ್ಮ ನಂತರ ಇವರನ್ನು ದಿವಾನಗಿರಿಗೆ ತರಬೇಕೆಂದು ಪ್ರಯತ್ನಮಾಡಿದ್ದರಂತೆ. ಅರಮನೆಯಿಂದ ದೊಡ್ಡ ಅಧಿಕಾರ ಕೊಡುವ ಆಮಂತ್ರಣ ಬಂದಾಗ ರಾಯರು ಕರ್ಜಗಿದಾಸರ ಆಜ್ಞೆಯನ್ನು ಕೇಳಿದರಂತೆ. ಲೌಕಿಕ ಮಾಡುವುದು ದೇವರ ಸಂಕಲ್ಪದಲ್ಲಿ ಇಲ್ಲವಾದ ಕಾರಣದಿಂದ ನೀನು ಹರಿದಾಸನಾಗೆಂದು ದಾಸರು ಅಪ್ಪಣೆ ಮಾಡಿದರಂತೆ. ರಾಯರು ದಾಸರಿಂದ 'ಭಾಗ್ಯನಿಧಿ ವಿಠಲ' ಎಂಬ ಅಂಕಿತ ಪಡೆದು ಹರಿದಾಸರಾಗಿ ರಾಜದರ್ಶನಕ್ಕೆ ಬಂದರಂತೆ. ಲೌಕಿಕ ಮಾಡಲಿಚ್ಛಿಸದೆ ಹರಿದಾಸರಾಗಿ ಬಂದ ರಾಯರನ್ನು (ಮು.ತಿ.ನೋ.) ಕೃಷ್ಣರಾಜ ಒಡೆಯರು ಬಹುವಾಗಿ ಸನ್ಮಾನಿಸಿದರಂತೆ.

ದೂರಪ್ಪದಾಸರ ದೇವರನಾಮಗಳು ಬಲು ಬಂಧುರವಾಗಿವೆ. ದಿವಾನಗಿರಿ ಮಾಡಿದವರ ಮಕ್ಕಳಾಗಿದ್ದುದರಿಂದಲೂ, ಕೃಷ್ಣರಾಜ ಒಡೆಯರ ಮಹದಾಶ್ರಯ ದೊರೆತುದರಿಂದಲೂ ರಾಯರು ಪುನಃ ಸವಣೂರಿಗೆ ಹೋಗಿ ವಾಸಮಾಡುವದನ್ನು ಗೌರವವಾಗಿ ಎಣಿಸಲಿಲ್ಲ! ಹೀಗಿರಲು ಮೈಸೂರಿನ ರಾಜಕೀಯವು ಕೆಟ್ಟು ರಾಜ್ಯಾಡಳಿತವು ಕಮೀಶನರ ಪಾಲಾಯಿತು. ರಾಯರಿಗೆ

ರಾಜದರ್ಶನವು ಅತ್ಯಂತ ದುರ್ಲಭವಾಯಿತು. ದೊಡ್ಡಸ್ತಿಕೆಯ ಜೀವನದಿಂದ ಋಣಭಾರವು ಹೆಚ್ಚಾಯಿತು. ಮಹಾಪ್ರಭುಗಳು ಪಶ್ಚಿಮ ವಾಹಿನಿಯ ಕಾವೇರೀ ಸ್ನಾನಕ್ಕೆ ಬರುವ ಮಾರ್ಗದಲ್ಲೇ ಕಾದಿದ್ದು ಕಾಣುವುದರ ವಿನಾ ಅನ್ಯೋಪಾಯ-ವಿಲ್ಲದಂತಾಯಿತು. ಕಾದಿದ್ದುದರ ಫಲವಾಗಿ ದಾಸರಿಗೆ ಸುಬ್ಬರಾಯನ ದೇವಸ್ಥಾನದ ಬಳಿಯಲ್ಲಿ (ಮೈಸೂರಿಗೆ ಮೂರು ಮೈಲು ದೂರದಲ್ಲಿ) ಪಂಚ ಕಲಶದ ರಥದಲ್ಲಿ ಸವಾರಿ ಬರುತ್ತಿದ್ದ ಮಹಾರಾಜರ ದರ್ಶನವಾಯಿತು.

ಮಹಾರಾಜರು "ಏನು ದಾಸರೆ ಇಲ್ಲಿ ಬಂದಿರಿ, ಹೀಗೆ ಬಂದಿರಿ" ಎಂದರು. ದೂರಪ್ಪದಾಸರು "ಪ್ರಭುದರ್ಶನಕ್ಕೆ ಅನ್ಯೋಪಾಯವನ್ನರಿಯದೆ ಹೀಗೆ ಇಲ್ಲಿಗೆ ಬಂದೆ" ಎಂದರು. ಮಹಾರಾಜರು ಕನಿಕರದಿಂದ ದಾಸರ ಗೃಹಕೃತ್ಯಗಳ ಕಷ್ಟ ಕಾರ್ಪಣ್ಯಗಳನ್ನು ವಿಚಾರಿಸಿ, ಅವರ ಋಣಭಾರವನ್ನು ಪರಿಹರಿಸಿ, ರಾಯರ ಮಕ್ಕಳಿಗೆ ಬೆಂಗಳೂರಿನಲ್ಲಿ ಕಮೀಶನರ ಕಚೇರಿಯಲ್ಲಿ ನೂರು ರೂಪಾಯಿಗಳ ಉದ್ಯೋಗವನ್ನು ಕೊಡಿಸಿ ಉಪಕರಿಸಿದರು. ಕೆಳಕಂಡ ಪದವು ತಮ್ಮ ತಾಪತ್ರಯಗಳನ್ನು ಹೇಳಿಕೊಳ್ಳುವ ಸಂದರ್ಭದಲ್ಲಿ ದಾಸರು ಪ್ರಭುಗಳ ಮುಂದೆ ಹಾಡಿದುದಾಗಿದೆ.

ಚಕ್ಕನಿರಾಜ ಎಂಬಂತೆ –

ಧನನಿಲ್ಲದಯ್ಯ ಸಾಧನ ನಿಲ್ಲುವುದಯ್ಯ
ತನು ನಿಲ್ಲದಯ್ಯ ದಾಸನು ಎನಿಸಯ್ಯ ಪ

ಹಣ ಪುಟ್ಟುವದೋ ಸುಗುಣ ಪುಟ್ಟದಯ್ಯ
ಗುಣನಿಧಿ ಹರಿಗುಣ ಗುಣಿಸಿ ಬಾಳಯ್ಯ ೧

ಜನ ಬರುವರೊ ಸಜ್ಜನ ಬಾರರಯ್ಯ
ಅನುಸರಿಸಿ ಜೀವನ ಪೊರೆಯಯ್ಯ ೨

ಭಾಗ್ಯನಿಧಿವಿಠಲನ ಆಜ್ಞೆಯಿದಯ್ಯ
ಸುಜ್ಞರ ಸೇವಿಸಿ ಪ್ರಾಜ್ಞನಾಗಯ್ಯ ೩

**ಕಲ್ಯಾಣಿ ರೂಪಕತಾಳ**

ಛೀ ಛೀ ಪಾಪಿ ಮನವೆ ಛೀ ಛೀ
ನಾಚಿಕಿಲ್ಲವೇ ನಿನಗೆ ಛೀ ಛೀ ೧

ನಾಚಿಕಿಲ್ಲಿ ಇನ್ನು ದುರಾಲೋಚನೆಯೊಳ್ ಸೇರಿ ಇಂಥಾ
ನೀಚರನ್ನು ಯಾಚಿಸುವರೇ ಅ.ಪ.

ಅಲ್ಪರಿಗಾಲ್ವಿಡಿದರೆ ಸ್ವಲ್ಪವಾದರು ಕರುಣೆವುಂಟೆ
ಕಲ್ಪಕಲ್ಪಕು ದಾತರ ಅಹಿತಲ್ಪಿಶಾಯಿ ಕರುಣಿಸಿಹನು ೧

ಬರಡೆಮ್ಮೆಗೆ ಉಪಚರಿಸಲು ಕರೆಬಲ್ಲದೆ ಪಾಲು ಜಾಲಿ
ಕೊರಡನು ತೆಯ್ದರೆ ಪರಿಮಳ ಹೊರಡುವುದೇ ಎಂದಿಗಾದರು ೨

ಎಷ್ಟು ವಿಧದಿ ನೀಲಿಯ ತೊಳೆದರೆ ಬಿಟ್ಟುಕೊಡುವುದೇ ವರ್ಣ
ದುಷ್ಟಗೆ ಸಿರಿ ಭಾಗ್ಯನಿಧಿವಿಠಲ ಒಲಿವನೆ ಎಂದಿಗು ೩

ಈ ಮೇಲಿನ ಪದವು ರಾಜಾನುವರ್ತಿಗಳಿಂದ ರಾಜದರ್ಶನಕ್ಕೆ ಪ್ರತಿಬಂಧಕವಾದಾಗ ರಚಿತವಾಗಿದೆ.

ಈ ಸಂಪುಟವನ್ನು ಸಿದ್ಧಗೊಳಿಸಿದ ಕೊನೆಗಳಿಗೆಯಲ್ಲಿ ಈ ದಾಸರ ಪ್ರಸ್ತಾಪ ಬಂತು. ಕರ್ನಾಟಕ ಭಕ್ತಿವಿಜಯದಲ್ಲಿ ಅಂತರ್ಗತವಾದ ಈ ವಿವರಗಳನ್ನು ಸವಣೂರಿನ ಕೆ.ವಿ. ದೇಶಪಾಂಡೆ ನಮ್ಮ ಗಮನಕ್ಕೆ ತಂದು ಉಪಕಾರ ಮಾಡಿದ್ದಾರೆ. ಇಲ್ಲಿ ಅನುಬಂಧ ವೆಂಬಂತೆ ಅದನ್ನು ಕೊಡಲಾಗಿದೆ. ಅವರ ಬೇರೆ ಹಾಡುಗಳು ದೊರಕಿಲ್ಲ.

# ಕೀರ್ತನೆಗಳ ಕ್ರಮಸೂಚಿ

## ಗುರು ಇಂದಿರೇಶರ ಕೀರ್ತನೆಗಳು



## ಗೋಪತಿ ವಿಠಲರ ಕೀರ್ತನೆಗಳು

## ದೀರ್ಘಕೀರ್ತನೆಗಳು

## ದೀರ್ಘಕೀರ್ತನೆಗಳು

| | | | |
|---|---|---|---|
| ಅ. | ಲಕ್ಷ್ಮೀಲೀಲಾಮೃತ | – | ಇಂದಿರೇಶ |
| ಆ. | ಗುರುಕಥಾಮೃತ ಸಾರ | – | ಗುರು ಇಂದಿರೇಶ |
| ಇ. | ಕೀಚಕ ವಧವು | – | ರಾಜಗೋಪಾಲದಾಸ |
| ಈ. | ಪಂಚಭೇದವು | – | ತಂದೆವರದಗೋಪಾಲ ವಿಠಲ |
| ಉ. | ಶ್ರೀರಾಮ ಪಾರಿಜಾತ | – | ಐಹೊಳೆ ವೆಂಕಟೇಶ |
| ಊ. | ಅಖಿಳಾಂಡಕೋಟಿ ಬ್ರಹ್ಮಾಂಡನಾಯಕ | – | ಸಿರಿವಿಠಲ |
| ಋ. | ಪ್ರಹ್ಲಾದ ಚರಿತ್ರೆ | – | ಸಿರಿವಿಠಲ |

## ಅನುಬಂಧ (ಅ)

### ೪೧೮

### ಲಕ್ಷ್ಮೀಲೀಲಾಮೃತ

ಬಾರೆ ವೆಂಕಟ ರಮಣಿ ಶ್ರೀ ಶ್ರೀ ದೇವಿ ಬಾರೆ
ವೆಂಕಟ ರಮಣಿ ಪ

ಬಾರೆ ವೆಂಕಟರಮಣಿ ಪಾರಾಯಣ ಕೇಳೆ ಚಾರುವದನೆ ಉಪಹಾರ
ಕಾಲಕೆ ನಿತ್ಯ ಅ.ಪ

ಏನು ಪುಣ್ಯವೇ ಎನ್ನದು ಪಾರಾಯಣ ನೀನೆ ಕೇಳುವೆ ಬಂದು
ಹೀನ ಮನವನರಿಯೆ ನೀನು ಬರುವಿಯೆಂಬೊ ಜ್ಞಾನವಿಲ್ಲವೋ
ಉಚ್ಚ ಸ್ಥಾನದೊಳಗೆ ಕೂಡೆ ೧

ಸ್ವಪ್ನದೊಳಗೆ ಬರುವಿ ಶ್ರೀ ಶ್ರೀದೇವಿ ಕ್ಷಿಪ್ರತನದಿ ಪೋಗುವಿ
ಸರ್ಪಶಯನ ನಮ್ಮಪ್ಪ ಗೋಕುಲ ಬಾಲ ನಪ್ಪಿಕೊಂಬುವ
ಸುಖವರ್ಷಿಸು ಬ್ಯಾಗನೆ ೨

ಮಂಗಳಾಂಗಿಯೆ ನಿನ್ನ ಕಾಣದೆ ಬಹು ಭಂಗ ಬಡುವೆ ನಮ್ಮಾ ಗಂಗಾ
ಜನಕ ಸಿರಿರಂಗನಂಕದಿ ಕೂತು ಭೃಂಗ ಕುಂತಳೆ
ಹೃದಯಾಂಗಣದೊಳಗಾಡೆ ಬಾಲೆ ೩

ಎಲ್ಲ ದೇವತೆಗಳನು ತಡದಿಹೆ ಫುಲ್ಲವಾರಿಜನಯನೆ ಗೊಲ್ಲಬಾಲನ
ಪದಪಲ್ಲವ ನೋಡದೆ ನಿಲ್ಲವಲ್ಲದು ಮನ ಸೊಲ್ಲು ವಾಲಿಸು ಬೇಗ ೪

ಇಂದಿರೇಶನ ರಾಣಿ ಎನ್ನಯ ಮನ ಮಂದಿರದಲಿ ಬಾ ನೀ
ನಂದಗೋಕುಲಬಾಲನಿಂದು ಕರದೊಳೆತ್ತಿ ತಂದು ತೋರಿಸೆ ಅರ
ವಿಂದನಯನೆ ಲಕ್ಷ್ಮೀ ೫

## ಅ. ಗಣೇಶಸ್ತುತಿ

೧

ವಂದಿಪೆ ಗಜಮುಖನೆ ನಿನ್ನನು  ಚಂದ್ರಶೇಖರ ಸುತನೆ
ನಂದಬಾಲನ ಸ್ಮರಣೆ ಮನದೊಳು ತಂದು ನಿಲಿಸು ಇದನೆ ಪ

ಮಂಗಳ ಮೂರುತಿಯೆ ಕೊಡುವೆನು ತೆಂಗು ಬಾಳೆಯ ಗೊನೆಯ
ರಂಗನಮಲ ಕಥೆಯ ಮಾಡುವೆ ಸಂಗ ತೋರಿಸು ದೊರೆಯೆ ೧

ಪಾಶಾಂಕುಶಧರನೆ ಸುಂದರ ಮೂಷಕವಾಹನನೆ
ಪೋಷಿಸು ಭಕ್ತರನೆ ಹರಿಕಥೆ ಭಾಷೆಲಿ ನುಡಿಸುವನೆ ೨

ಪಾರ್ವತಿ ಪಂಕಜನೆ ವಿಘ್ನಗಳ್ಹಾರಿಸಿ ಪಾಲಿಪನೆ
ಮಾರಜನಕ ಭಜನೆ ಮಾಡುವೆ ತೋರಿಸು ಮಾರ್ಗವನೆ ೩

ಭಾರತ ಬರೆದವನೆ ವ್ಯಾಸರ ಭಾಷಿತದಿಳೆದವನೆ
ಮಾರಜನಕ ಭಜನೆ ಮಾಡುವೆ ತೋರಿಸು ಮಾರ್ಗವನೆ ೪

ಇಂದಿರೇಶನ ಭಜಕ ನಿನ್ನನು ತಂದು ಮನದಿ ತೂಕ
ಆನಂದದಿ ದಿನ ವಾರಾ ಮಾಳ್ಪುದು ಸುಂದರ ಸುರಲೋಕ ೫

೨

## ಆ. ಧನ್ವಂತರಿ

ಅಂತರಂಗದ ರೋಗ ಚಿಂತೆ ಪರಿಹರಿಸಿ ಮೋಕ್ಷ
ಪಂಥ ಸಾಧಿಸು ಧನ್ವಂತ್ರಿ ಪ್ರಭುವೆ ಪ

ಸುರರು ಅಸುರರು ಕೂಡಿ ಶರಧಿಯಾ ಮಥಿಸಲು
ಕರದೊಳಮೃತ ಪಾತ್ರೆ ಧರಿಸಿ ನೀ ಬಂದೆ ೧

ಇಂದ್ರ ನೀಲಾಂಭ್ರಣಿ ಸನ್ನಿಭರೂಪ
ಚಂದ್ರ ಮಂಡಲದೊಳು ನಿಂತು ರಾಜಿಸುವಿ ೨

ಯೋಷಿತ ರೂಪದಿ ಸುಧೆಯನು ಕೊಟ್ಟು
ಪೋಷಿಸಿದೆಯೋ ಇಂದಿರೇಶ ದಿವಿಜರಾ ೩

೩

ಅನ್ನದಾನದ ಸುಖ ನಿನಗಲ್ಲದೆ ಬೇರೆ
ಅನ್ಯ ಜನರೊಳಗುಂಟೆ ಜನ್ಯ ಜನಕಾ ಪ

ಸಹಿತ ಒಂದು ಕೂಸು ಬರಲು
ಜಗತ್ ಕೋಶ ಅನ್ನವ ಮಾಡಿ ನೀ ಸಮರ್ಪಿಸಿದೆ ೧

ಕೊಟ್ಟ ಅನ್ನಕೆ ಸಮ ಇಷ್ಟನ್ನವೇನುಂಬಿ
ಇಷ್ಟು ಜನರು ಬಲಿಕೊಟ್ಟು ಭುಂಜಿಪರು ೨

ಇಂದಿರೇಶಗೆ ಕೊಟ್ಟ ದಾನದಿ ಶತಾನಂದನಾದಿಯೇ
ಮುಕ್ತಿ ಮಂದಿರದೊಳಗೆ ಹರಿತಂದು ತೋರೆನಗೆ ೩

## ಇ. ಶ್ರೀ ಹರಿಯ ಸ್ತುತಿ

೪

### ತಿರುಪತಿ ಶ್ರೀನಿವಾಸ ದೇವರು

ಎಡ್ಡಂ ತಿಡ್ಡಂ ಮಾತುಗಳಾಡುವಿ
ದಡ್ಡನು ಶಾಣ್ಯಾನೋ
ಗುಡ್ಡದಿ ಸೇರುತ ಬಡ್ಡಿ ಸಹಿತ ಪರ
ದುಡ್ಡು ಸೆಳೆವರೇನೋ ಪ

ಕೊಟ್ಟಾದನ್ನುಣ್ಣುತ ದೇಹವ ಪುಷ್ಟಿಸಿ ಕಾದಿರುಶ
ಕಟ್ಟಿದ ಹಣವನು ಕಷ್ಟದಿ ಕೊಡದಿರೆ ಕುಟ್ಟಿ ಸೆಳೆದು ತರುವಿ
ಚಾಳಿ ಕೆಟ್ಟದು ಕಲಿತಿರುವಿ ೧

ಶಿಷ್ಟರು ಗುಡಿಯೊಳು ಬಂದರೆ ಅವರನು ಅಟ್ಟಿಸಿ ಹೊರಡಿಸುವಿ
ಮೊಟ್ಟೆಯಲಿ ಹಣ ಕಟ್ಟಿದವರು ಬರೆ ದೃಷ್ಟಿಸಿ ಮನ್ನಿಸುವಿ
ಚಾಳಿ ಕೆಟ್ಟದು ಕಲಿತಿರುವಿ ೨

ಹೇಳಿದ ಮಾತನು ಕೇಳದೆ ನಮ್ಮೊಳು ಕಾಳಗ ನಡೆಸಿರುವಿ
ಶ್ರೀಲೋಲನೆ ಮುಖತೋರಿಸು ಎಂದರೆ ಆಲಯಕ್ಹೋಗೆನುವಿ
ಚಾಳಿ ಕೆಟ್ಟದು ಕಲಿತಿರುವಿ ೩

ಹುಚ್ಚುನ ತೆರದೆಲೆ ಮಾತುಗಳಾಡುವಿ ನಿಶ್ಚಯ ಒಂದಿಲ್ಲಾ
ತುಚ್ಛಿಸಿ ಎಲ್ಲವ ನಿನ್ನಲಿ ಬಂದರೆ ಮತ್ಸರ ನಡೆಸಿರುವಿ
ಚಾಳಿ ಕೆಟ್ಟದು ಕಲಿತಿರುವಿ ೪

ಭೂಸುರ ನಿಲಯದಿ ವಾಸಿಸೆ ನಿಜ ಶುಭ ದಾಸನಾಗಿದ್ದಿ
ಈ ಸಮಯದೀತನು ಪೋಷಿಸಲು ವಿಷಯಾಸೆಯನಾಗಿದ್ದಿ
ಧನರಾಸಿಯೊಳಗೆ ಬುದ್ಧಿ ಇಂದಿರೇಶನೆ ಕಲಿಸಿದ್ದಿ ೫

## ೫

ಏನು ಕಾರಣ ಕೃಷ್ಣಾ ಏನು ಕಾರಣ ಪ

ಏನು ಕಾರಣ ಎನ್ನ ಕಣ್ಣಿಗೆ ನೀನು ತೋರದಿರುವುದು ಇದು ಅ.ಪ

ಖಗ ಮೃಗಾದಿಗಳಿಗೆ ನೀನು
ರಘು ಕುಲೇಶ ದರ್ಶನವಿತ್ತೆ
ಸೊಗಸು ಮೋಕ್ಷವಿತ್ತೆ ಅದಕು
ಖಗವರೂಢ ಕಡಿಮೆಯೇನು ೧

ಶಬರಿ ಎಂಜಲುಂಡು ವನದಿ
ಅಬುಜ ಶಯನ ದರುಶವಿತ್ತೆ
ಕುಬುಜೆ ಕೂಡಿದೆಲ್ಲೊ ಅದಕು
ವಿಬುಧ ವಂದ್ಯ ಕಡಮೆನೋವಾ ೨

ಮುರಲಿನೂದಿ ವನದಿ ಹರಿಯು
ತರುಲತಾದಿಗಳಿಗೆ ದರ್ಶನವಿತ್ತು ಕಾಯ್ದು
ಅದಕು ಪರಮ ಪುರುಷ ಕಡಿಮೆ ನೋವಾ ೩

ಹಾದಿಲ್ಹೋಗೋ ಕೀಟನಿಗೆ
ವೇದನಾಥ ದರುಶನಿತ್ತಿ
ಆದಿ ವರ್ಣದವನು ಅದಕು
ಬಾದರಾಯಣ ಕಡಿಮೆ ಏನೋ ೪

ಎಷ್ಟು ಎಷ್ಟು ಜನರಿಗೀಗ
ಭೆಟ್ಟಿ ನೀಡಿ ಸುಖವನಿತ್ತೆ
ಶ್ರೇಷ್ಠನೆಂದು ಸ್ತುತಿಪೆ ನಿನ್ನ
ಕೃಷ್ಣ ಕರುಣಿ ಬೇಗನೆ ಬಾ ೫

ಇಂಥಾ ಜನುಮದಲ್ಲಿ ನಿನ್ನ
ಕಂತು ಪಿತನೆ ಕಾಣದಿರಲು
ಪಂಥಗಾಣೆ ಮುಂದಿನ ತನು
ಎಂಥದಾಗುವುದೋ ತಿಳಿಯೆ ೬

ಇಂದಿರೇಶ ಮುರಲಿ ಶೋಭಿತ
ಇಂದು ಬಿಂಬ ವಿಜಯ ವದನ
ತಂದು ತೋರಿಸೆನ್ನ ಮನಕಾ–
ನಂದಿಸೀಗ ನಂದನಸುತ ೭

## ೬

ಏನು ಮಾಡಿದರೆ ನಾ ನಿನ್ನ ಕಾಂಬೆ
ಶ್ರೀನಿವಾಸನೆ ಭಕ್ತ ದೀನಜನ ಬಂಧೊ ಪ

ದುಷ್ಟ ತಂದೆಯ ತಪಕೆ ಬೆಟ್ಟವೇರಲು ತಾಯಿ–
ಪೊಟ್ಟೆಯೊಳು ಪರಮೇಷ್ಠಿ ಸುತನು
ಕೊಟ್ಟ ಹರಿಮಂತ್ರ ತುಷ್ಟನಾಗುತ ನರಹರಿಯ
ದೃಷ್ಟಿಯಿಂದ ಕಂಡವನಾ ಭೆಟ್ಟಿ ಸಾಧಿಸಲ್ಯಾ ೧

ಹುಡುಗತನದಲಿ ತಂದೆ ತೊಡೆಯಾಸಿಗೆ ಬರೆ ತಾಯಿ–
ನುಡಿದ ಮಾತನು ಕೇಳಿ ಅಡವಿಯೊಳಗೆ
ಮೃಡ ಶಿಷ್ಯನುಪದೇಶವನು ನಂಬಿ ವೈಕುಂಠವನು
ಪಡೆದಿರುವ ಬಾಲಕನ ನಡತೆ ನಂಬಿರಲ್ಯಾ ೨

ಐದು ಮಂದಿ ತನ್ನ ಕಾದುಕೊಳ್ಳದೆ ಇರಲು
ದುರುಳನೊಬ್ಬನು ರಾಜಬೀದಿಯೊಳಗೆ
ಕೂದಲು ಹಿಡಿದೆಳೆದು ತರಲು ಶ್ರೀಧರನೆ ಎಂದೊದರಿ
ಮೋದಿಸಿದ ಕಾಮಿನಿಯ ಹಾದಿ ಸೇರಿರಲ್ಯಾ ೩

ಕುಲಯೋಗಿ ಮುನಿ ಪೂತಾ ನಿನ್ನನು ಬಿಡಲು
ಕೋತಿ ಸತಿ ಸಹಾಯ ವೃಂದದಿ ಸಹಾಯ ಭೂತನಾಗಿ
ಪ್ರೀತಿಯಲಿ ಲಂಕಾನಾಥನಾಗಿಹ ಮುನಿ
ಪೋತ ರಾಕ್ಷಸನ ಸಖ ನೀತಿ ಸಾಧಿಸಲ್ಯಾ ೪

ಹೇ ಸುರಾರ್ಚಿತ ಮನುಜ ಕೇಸರಿಯ ಸುರಗೀತಾ
ವಾಸುದೇವ ದ್ವಾರಕೀಶ ಕೃಪಾ ದಾಶರಥೆ
ಶ್ರೀವೆಂಕಟೇಶ ಬದರಿನಿವಾಸ ದಾಸರ ಕಾಯೋ
ಆದರದಿ ಇಂದಿರೇಶ ಕರುಣಾಬ್ಧಿ ೫

೭

## ಬಾಲಕೃಷ್ಣ

ಏನು ಮೋದವೊ ವೇಣು ಬಾಲಕೃಷ್ಣಾ
ನೀನು ಮಲಗಿ ತೊಡಿಯೊಳು ಗಾನ ಕೇಳಿದೆಯೋ ಪ

ವ್ಯಾಳರಾಜ ಚರಿತೆ ಪೇಳುತಿರಲು ಒಬ್ಬ
ಲೋಲ ಕಣ್ಣು ತೆರೆದು ಕೇಳಿದೆಯೋ ಕೂಸೇ ೧

ಹಿಂದೆ ಎರಡು ಕಾಲು ಮುಂದೆ ಎರಡು ಕರವು
ಪೊಂದಿ ತೊಡಿಯಲಿ ಗಾನ ಚೆಂದ ಕೇಳಿದೆಯೋ ೨

ಇಂದಿರೇಶನ ಪೂಜಾಕಾಲದಲ್ಲಿ
ನಂದತನಯ ಪದವ ಬಂದು ಕೇಳಿದೆಯೋ ೩

೮

ಕಂಜಜ ವರದ ನಿರಂಜನ ಶರಧಿಜ
ಕಂಜಕರದಿ ಸುರಸ ಭುಂಜಿಸೋ ದೇವ ಪ

ಜಂಬು ನೀರಲ ಸುಗೋಡಂಬಿ ಪಲಸು ದಾ–
ಳಿಂಬ ಸುರಸ ಇಕ್ಷುರಂಭೆ ಫಲಗಳಾ ೧

ನಾರಿಕೇಳವು ದ್ರಾಕ್ಷಿ ಪೇರು ಖರ್ಜೂರ ಕವಳಿ
ಭೂರಿ ಕಿತ್ತಳೆ ಚೂತಕೇರು ಫಲಗಳು ೨

ಕಾಯಿಸಿದಾ ಪಾಯಸ ದೋಸೆ ಮೊಸರು
ಬೆಣ್ಣೆದೋಸೆ ಕೊಡುವೆ ಇಂದಿರೇಶ ಯಾದವಗೆ ೩

## ೯

## ತಿರುಪತಿ ವೆಂಕಟೇಶ

ಕಂಡೆನೋ ನಿನ್ನ ವೆಂಕಟನೇ ಸ್ವಪ್ನೆ
ಪುಂಡರೀಕಾಕ್ಷ ಸಂಪೂರ್ಣ ಸದ್ಗುಣನೇ ಪ

ಗಿರಿಯ ಮೇಲ್ಹತ್ತಿ ಬಂದಿಹೆನು ನಿನ್ನ
ಶರಣರೊಳಗೆ ಬಂದು ನುತಿಯ ಮಾಡಿಹೆನು
ಪರದೇಶ ಜನರ ನೋಡಿದೆನು ಅವ
ರ್ದ್ವಾರಗೆ ಪೋಗಲು ನಾನ್ದ್ವಾರಗೆ ಬಂದಿಹೆನು ೧

ಮತ್ತು ನಾ ಒಳಗೆ ಬಂದಿಹೆನು ತೆರ
ದುತ್ತಮ ದ್ವಾರಗಳನ್ನೇ ನೋಡಿದೆನು
ಚಿತ್ರ ವಾಲಗರ ಕೇಳಿದೆನು ಪೋಗ–
ಲುಕ್ತಿ ಪೇಳುತಲೆ ಸನ್ನಿಧಿಲೆ ಬಂದಿಹೆನು ೨

ಸುಂದರಾಂಗಿಯರ ಮಧ್ಯದಲಿ ನಿನ್ನ
ಚಂದ್ರಮಂಡಲ ಮುಖ ಕಮಲ ನೋಡುತಲಿ
ಇಂದಿರೇಶನೆ ನಯನದಲಿ ಪೊಕ್ಕೆ–
ನಿಂದು ಸಂತೋಷ ನಿರ್ಭರ ಶರಧಿಯಲಿ ೩

## ೧೦

ಕರಿಯನೆರಿರೇ ಮುರಾರಿಗೆ ಪ

ಕರಿಯನೆರಿರೆ ಭರಣ ವಸನಗಳ
ಧರಿಸಿ ದೇಹದಿ ಸುರತರುಣಿ ಪೋಲುವರೆ ಅ.ಪ.

ಹಂಸವಾಹನ ಶಿವರಂಶಗಳನು ಕೂಡಿ
ಕಂಸ ಶಾಸ್ತ್ರವ ತ್ರಿವಂಶ ಬೆಳೆಸಿದಾ ೧

ಹತ್ತು ರಾತ್ರಿಯಲಿ ಬಂದ ಮತ್ತ ಕಾಮಿನಿಗೊಮ್ಮೆ
ಭೃತ್ಯ ಭೂತಿದ ಗೋಪಿ ಪುತ್ರನ ಪಾಡಿ ೨

ಕರಿಪುದಸರಾಧ್ವರ ಧನುರ್ದನು ತನ್ನ
ಕರದಿ ಮುಟ್ಟುತ ಮೃತ ತರುಳನ ಕಾದಾ ೩

ರಾಮನಾಮದಿ ಭೂಪ ಧಾಮದೊಳಗೆ ಪುಟ್ಟಿ
ಕಾಮಿನಿ ಸಹ ಕೂತ ಪ್ರೇಮ ಪುರುಷಗೆ ೪

ಕರಿ ಕರ ಕರದೊಳು ಸುರಭಿ ಕುಸುಮವೆತ್ತಿ
ಪರಮ ಪುರುಷ ವಿಪತ್ ಪರಿಹರಿಸಿದನು ೫

ಕತ್ತಿ ಪಿಡಿದು ಕರ ಕತ್ತರಿಸುವೆನೆಂಬೋ–
ನ್ಮತ್ತನಾಸ್ತ್ರವ ಕರೆ ಕಿತ್ತು ರಕ್ಷಿಸಿದಾ ೬

ಪೇಸಿಯಿಂದಲಿ ಪುಂಸ್ತ್ರೀ ಕೂಸುಗಳನೆ ಮಾಡಿ
ತೋಷಿಸಿದನು ಬದರೀಶ ಮೌನಿಜನು ೭

ಇಂಥ ಮಹಿಮೆಗಳಾನಂತ ಮಾಡಿದ ಲಕ್ಷ್ಮೀ–
ಕಾಂತಗಬ್ದಾಪತ್ತಿ ಶಾಂತಿ ಮಾಡುವುದೇ ೮

ಸುಂದರ ಭೂಷಣಗಳಿಂದ ಶೋಭಿಪ ಬಾಲ
ಇಂದಿರೇಶನ ಕೃಪಾ ಪೊಂದಿ ಸುಖಿಸುತಿರೆ
ಕುಂದಣದಾರತಿ ನಿಂದು ಬೆಳಗಿರೆ ೯

## ೧೧

## ತೊರವಿ ನರಸಿಂಹ

ಕರುಣದಿಂದ ಕರವ ಪಿಡಿಯೊ ತೊರವಿ ನರಹರೆ
ಆಹಾ ತೊರವಿ ನರಹರೆ ಪ

ಶರಣಾಗತರಮಲ ತೋರುವ ಕರುಣ ವಾರಿಧೆ ಅ.ಪ.

ಸ್ತಂಭಜಾತ ನಂಬಿ ನಿನ್ನ ಅಂಬುಜಾತನೆ
ಬಿಂಬದಂತೆ ಪಾಲಿಸೆನ್ನ ಸಾಂಬವಿನುತನೆ ೧

ಛಟಿಛಟೆಂದು ಒಡೆದು ಕಂಬ ಪುಟಿದು ಸಭೆಯೊಳು
ಕಟಿಯ ತಟದೊಳಿಟ್ಟು ರಿಪುವ ಒಡಲ ಬಗೆದೆಯೊ ೨

ಇಂದಿರೇಶ ಎನ್ನ ಹೃದಯ ಮಂದಿರದೊಳು
ಬಂದು ತೋರೆ ಮುಖವ ನಿನ್ನ ವಂದಿಸುವೆನು ೩

## ೧೨

ಕೂಸಿನಲ್ಲಿ ಬಾಲಕೃಷ್ಣ ಕೇಶವಾರ್ಯ ಪುತ್ರನಲ್ಲಿ
ವಾಸಮಾಡಿ ಸತತ ಮನವ ಪೋಷಿಸೂವನು ೧

ತರುಣಿಯಲ್ಲಿ ಮಾಧವವಿರುವ ಶರಣರೊಳಗೆ ವಸುದೇವ
ನರಿತು ತೋಷಿಸುವುದು ಸತತ ಹರುಷದಿಂದಲೀ ೨

ಮಗಳ ಮಹಿಳೆ ತನುವಿಲಿರುವ ಅಗಣಿತಾತ್ಮ ಗೋವಿಂದ
ಮಗಳೊಳಿರುವ ವಾಸುದೇವ ಖಗವರೇಣ್ಯನು ೩

ಮಿತ್ರನಲಿ ಮುಕುಂದ ಪತ್ನಿ ಸೋದರನಿರುದ್ಧ
ಧಾತ್ರಿ ದಿವಿಜ ನಾರಾಯಣನು ವಸ್ತಿ ಮಾಡಿಹನು ೪

ಸುರಭಿಯಲ್ಲಿ ವಿಷ್ಣುರೂಪಿ ತುರಗದಲ್ಲಿ ವಾಮನಾತ್ಮ
ಇರುವ ಸಂಕರ್ಷಣಾಖ್ಯ ಚರಮ ಜಾತಿಯಲೀ ೫

ಕ್ಷತ್ರಿಯರಲ್ಲಿ ಜನಾರ್ದನನು ನಿತ್ಯ ವೈಶ್ಯ ಪ್ರದ್ಯುಮ್ನ
ಭೃತ್ಯರಲ್ಲಿ ಮಹಿದ್ರಾಸ ಕೃತ್ಯ ನಡೆಸುವಾ ೬

ಮಹಿಷಿಯಲ್ಲಿ ಉಪೇಂದ್ರ ಗಜದಲ್ಲಿ ಚಕ್ರಪಾಣಿ
ಬೆಕ್ಕಿನಲ್ಲಿ ವಿಶ್ವರೂಪ ಸತತ ತಿಳಿವುದೂ ೭

ಇರುವೆಯಲ್ಲಿ ತ್ರಿವಿಕ್ರಮನು ಇರುವ ಶುನಕ ಭೂತ ಭಾವನ
ಸರ್ವರೊಳಗೆ ಅನಂತರೂಪ ಹರಿ ನಿವಾಸಿಪ ೮

ನಿತ್ಯದಲ್ಲಿ ಹರಿಯು ಹೀಗೆ ಚಿತ್ತವಿಟ್ಟು ಲಕ್ಷಣೀಯು
ವರ್ತಿಸುತಲಿ ಯದುವರೇಣ್ಯನ ಪತ್ನಿಯಾದಳು ೯

ಪರಮಪುರುಷನಮಲ ರೂಪ ಸ್ಮರಿಸುತಲೆ ಪೋಷ್ಯರಲ್ಲಿ
ತೋರೆದು ಕರ್ಮಲೇಪ ಶಿರಿಯ ಹೋದುವಾ ೧೦

ನಂದಸುತನ ತಿಳಿದು ಪೋಷ್ಯ ವೃಂದದಲ್ಲಿ ಭೋಗ ನೀಡಿ
ಇಂದಿರೇಶ ನಮಗೆ ಮೋಕ್ಷಾನಂದ ಕೊಡುವನು ೧೧

## ೧೩

ಕೊಡು ಸುಖಾನಂದ ಬಾಷ್ಪದ
ರೋಮಾಂಚನ ಗದ್ಗದವಾ ಪ

ಕೊಡು ಸುಖ ಬೇಗನೆ ಮೃಡ ಮುಖ ಸುರನುತ
ಅಡಿಗೊಂದಿಸುವೆನು ಕಡು ಮುದ್ದು ಕೃಷ್ಣಯ್ಯ ನಾ ಅ.ಪ

ಶ್ರುತಿ ತತಿಯಲಿ ನಿನ್ನ ವಿತತ ಮಹಿಮೆ ಕೇಳಿ
ಅತಿಶಯದಲಿ ರೋಮ ಸತತ ಸುರಿಸುವಂಥ ೧

ನಿನ್ನ ಚೆಲುವ ರೂಪವನ್ನೆ ನೋಡುತ ಮುಖ
ಉನ್ನತ ಸುಖ ಜಾಲ ಕಣ್ಣೆಲಿ ಸುರಿವಂಥ ೨

ಇಂದಿರೇಶನ ಕಥೆ ಇಂದು ಕೇಳುತ
ಕಂಠ ನಿಂದು ಬಿಗಿದು ಮಾತು ಒಂದೂ ಬಾರದಂತೆ ೩

## ೧೪

ಚಲುವಾ ಕೃಷ್ಣಾ ನಿನ್ನ ನಿಲುವು ನೋಡದೆ ದುಃಖ
ಬಲು ಭಾರವಾಗಿಹುದೋ ಪ

ನಳಿನ ನಯನನೆ ಮನ ನಿಲಯದೊಳಗೆ
ಇಲ್ಲಿ ಸುಳಿವು ತೋರಿಸಬಾರದೆ – ಹೆಚ್ಚಿನದೆ ಅ.ಪ

ಇಂದು ಮಧ್ಯಾಹ್ನ ಒಂದೇ ಮನದಿ ನಾನು
ನಿನ್ನ ಮಾತೇ ಚಿಂತಿಸಿ
ಕುಂದಣ ಕೆತ್ತಿದ ಸುಂದರಾಭರಣಗಳು
ಇಂದು ಶೋಭಿಪ ರೂಪದಿ ನೀ ಪೊಳೆದಿ ೧

ಇಂಥಾ ರೂಪವೆ ಮತ್ತೆ ಕಂತುಪಿತನೆ ತೋರೋ
ಅಂತರಂಗದಿ ಎನ್ನಲಿ ಚಿಂತಿಸಿದೆನು
ಸಿರಿಕಾಂತಾ ತೋರದ ದಾರಿ
ಭ್ರಾಂತಿಯಾಗಿದೆ ಮನಕೆ ಪೇಳದಕ್ಕೆ ೨

ಇಂದಿರೇಶನೆ ಇಂಥಾ ಆನಂದಕ್ಕೆ ಸಮವಾದ
ಆನಂದವಿಲ್ಲವೋ ಜಗದಿ
ನಿಂದು ಕರವ ಮುಗಿದು ಇಂದು ಪ್ರಾರ್ಥಿಪೆ ಬೇಗಾ
ನಂದ ಬಾಲನೆ ಸುಳಿಯೋ ನೀ ನಲಿಯೋ ೩

## ೧೫

ದರ್ಪಣದಲಿ ಮುಖ ನೋಡಿಕೊಂಡನೆ ಪ

ನಮ್ಮ ವೆಂಕಟೇಶ ಸರ್ಪಶಯನ
ಸರ್ವೋತ್ತಮ ಕಮಲೆಯ ಅಪ್ಪುತ ಸರ್ವೇಶ ಅ.ಪ.

ಮಲ್ಲಿಗೆ ಮುಗುಳಿನ ತೆರದಲಿ ಶೋಭಿಪ ಪಲ್ಲುಗಳಲೆ ಸಿರಿಯು
ಗಲ್ಲವು ಭೂಪತಿಯಂದದಿ ಬೃಸ್ವರಾಬಿಲ್ಲಿನ ಸೌಭಗವು ೧

ಶರದುದಿತಾಮಲ ತರುಣಿಕರಾರ್ಚಿತ ಸರಸಿಜದಳನಯನಾ
ಕರುಣಪೂರ್ಣ ಕಟಾಕ್ಷ ರಕ್ಷಣ ವರಪಲ್ಲವರರಸನು ೨

ರತ್ನಕುಂಡಲದ್ವಯ ಸಂಶೋಭಿತ ಸ್ತೋತ್ರಯುಗಳ ನೇಮ
ಮಸ್ತಕದಲಿ ಮಾಣಿಕ ಮುಕುಟ ಶ್ರೀ ಉತ್ತಮ ಮುಖಧಾಮ ೩

ನಿತ್ಯಾನಂದ ಚಿದಾತ್ಮಕ ಶಕ್ತನು ಭಕ್ತಕಾಮಿತದಾತ
ಎತ್ತುವೆ ಕರಯುಗ ತವ ಕಮಲಕೆ ಚಿತ್ರ ಚರಿತ್ರ ಗಾತ್ರಾ ೪

ನಾಸಕ ಚಂಪಕ ಕೋಶವು ಬಿಂಬಾಧರ ಯುಗಳ
ದೋಷರಹಿತ ಸುರಾಹ ಸರೋಜ ಇಂದಿರೇಶ ವದನ ೫

## ೧೬

ದಾಶರಥೇ ದಯಮಾಡು ನಿನ್ನ ದಾಸದಾಸನ ನೋಡು
ದಾಸದಾಸನ ನೋಡು ಮುದ್ದು ದಾಶರಥೇ ದಯ ಮಾಡು ಪ

ನೀರಜಾಕ್ಷ ನಿಜ ಮಾಯ ಮಮತೆ ಸಂಸಾರ ಶರಧಿಯೊಳು ಬಿದ್ದು
ಪಾರುಗಾಣದೆ ಬರಿದೆ ಪೋಗುವಾ ತಾರಕ ಬ್ರಹ್ಮ ನೀನೆಂದೂ ೧

ತುಂಬಿದ ಭಂಡಿಗೆ ಮೊರ ಭಾರವೆ ಯೆನಗಿಂಬಿಲ್ಲವೆ ನಿನ್ನಲ್ಲಿ
ನಂಬಿದ ವಿಶ್ವ ಕುಟುಂಬನೆ ಎನಗಾ ಇಂಗು
ಗೊಡದೆಯೆಲ್ಲರ್ಗಲ್ಲಿ ೨

ಇಂದಿರೇಶ ಮುಚುಕುಂದ ವರದ ಮುನಿ ವಂದ್ಯನೆ ದಶರಥ ಕಂದಾ
ಚಂದದಿ ನಿನ್ನ ಪದದ್ವಂದ್ವಗಳನುದಿನ ವಂದಿಸುವೆನು
ಮುದದಿಂದಾ ೩

## ೧೭

ನಂದ ವ್ರಜ ಮಧುರಿ ದ್ವಾರಕೀಯೊಳಾಡಿದ ಕೂಸೆ
ಎಂದು ಬಾಹುವಿ ಇಲ್ಲಿಗೆ ಪ

ಕಂದರ್ಪ ಕೋಟಿ ಸುಂದರಾನಿನ ಬಿಟ್ಟು
ನಿಂದಿರಲೊಲ್ಲದು ಮನಸಾ ಶ್ರೀಶಾ ಅ.ಪ.

ಮಧುರೆಯಲಿ ನೀಪುಟ್ಟಿ ಪಿತೃಗಳ ರಕ್ಷಿಸಿದಿ
ಹಿತದಿಂದ ಯಾದವರ ತಲೆಯ ಕಾಯ್ದಿ
ಮೃತವಾದ ಮಗುವನು ಗುರುಸತಿಯ ಮಾತಿಗೆ ಕೊಟ್ಟೆ
ಪ್ರತಿಗಾಣೆನೊ ನಿನ್ನ ಬಲಕೆ ಛಲಕೆ ೧

ಘೋರ ದಿತಿಜನು ತನ್ನ ಪೋರನಿಗೆ ಭಯವಿತ್ತು
ಸಾರಿ ಕಂಬದಿ ನಿನ್ನ ತಂದು ತೋರೆನಲು
ನಾರಸಿಂಹನೆ ನೀನು ವೈರಿ ಬಾಧೆಯ ಬಿಡಿಸಿ
ಭೂರಿ ಸುಖವಿತ್ತು ಪೊರೆದಿ ಭರದಿ ೨

ಸರಯು ತೀರದಿ ಅಯೋಧ್ಯಾ ಪುರದೊಳಗೆ ಕಾಂಚನದ
ಪರಮ ಪೀಠದಿ ಕುಳಿತು ಸೀತೆಯೊಡನೆ
ಹರಳು ಕೆತ್ತಿದ ನಾನಾ ಭೂಷಣಂಗಳನಿಟ್ಟು
ಮರುಳು ಮಾಡುವಿ ನಮ್ಮನೂ ನೀನು ೩

ನಂದ ಗೋಕುಲದಿ ರವಿ ನಂದನೀಯ ತೀರದಲ್ಲಿ
ಚಂದದಿಂದಲಿ ನಿಂತು ಕೊಳಲನೂದಿ
ಮಂದಗಮನಿಯರ ಮನಸು ಮರುಳು ಮಾಡುತ ಸುಖವ
ದ್ವಂದ್ವಲೋಕದಿ ಕೊಟ್ಟೆ ಭೆಟ್ಟೆ ೪

ಮಂದಿ ಮಾತುಗಳೊಲ್ಲೆ ಚೆಂದವೆಂಬುವುದೊಲ್ಲೆ
ಸುಂದರ ಸಿರಿ ಸಂಪತ್ತು ಬಲ್ಲೆ

ಇಂದಿರೇಶನೆ ಎನ್ನ ಚಿತ್ತ ಮಂದಿರದೊಳು ನಿನ್ನ
ಸುಂದರಾನನ ತೋರೋ ಬಾರೋ ೫

## ೧೮

ನೀರಜಾಕ್ಷನೆ ಚಾರುರೂಪನೆ
ಸೇರಿ ಚಿತ್ತದೊಳು ಮೋರೆ ತೋರಿಸೀಗಾ ಪ

ಎಷ್ಟು ಭಕ್ತರಾಭೀಷ್ಟ ನೀಡಿದಿ
ವೃಷ್ಣಿವರ್ಯನೆ ಭೆಟ್ಟಿ ಪಾಲಿಸೀಗಾ ೧

ಮುಷ್ಠಿ ಅವಲಿಯಾ ಕೊಟ್ಟ ವಿಪ್ರಗೆ
ಕೊಟ್ಟೆ ಸಂಪದವಾಭೀಷ್ಟದಾಯಕನೆ ೨

ಇಂದಿರೇಶನೆ ಬಂಧ ಮೋಚನೆ ಗೈದು
ಬಂದು ಕಾಯೋ ನಂದ ಬಾಲಕನೇ ೩

## ೧೯

## ಉಡುಪಿಯ ಕೃಷ್ಣ

ನೋಡಿರಿವನೊಳದ್ಭುತವಾ ಪಾಡುವರಿಗೆ ಸುಪ್ರೀತ ದಾತಾ ಪ

ಮುರಳಿ ಮುಖದೊಳಿಟ್ಟು ನಿಂತುಕೊಂಡಿಹನೊ
ಕರುಣಾಮೃತ ಸುಧೆ ಸುರಿಸುತಲಿಹನೊ
ಕರುಣಾಪಾಂಗದಿ ನೋಡು ತಲಿಹನೋ ಸುಸ್ವಭಾವದಾತ ೧

ಶುಕ್ರವಾರದಿ ಸೀರೆಯನುಡುವನೋ ಮಕ್ಕಳ ಪಡೆದ್ಹೆಂಗಸು ಇವನೋ
ಲಕ್ಕುಮಿದೇವಿಗೆ ವರನಾಗಿಹನೋ ವಿಲಕ್ಷಣ ಸ್ವಭಾವದಾತ ೨

ಈಶನು ಕ್ಷಣದಲಿ ದಾಸನಾಗುವನೋ ಭೂಷಣ ಭೂಷಿತ
ಬತ್ತಲಾಗುವನೋ

ಪೋಷ ಪೋಷಕ ಇಂದಿರೇಶ ಭೂಷಿತನೋ ದಾಸರ
ಪೋಷಿಪನೋ ೩

## ೨೦

ಶ್ರೀ ಸಮೀರನ ಮಹಿಮೆ ಪೇಳುವೆ
ವಾಸುದೇವ ವಿಧೀರ ಮುಖಸುರ
ರಾಶಿತಸ್ತ್ರೀ ಮುನಿಯತೀಶ ಸು–
ದಾಸರಭಿ ನಮಿಪೆ ಪ

ವಾರಿಧಿಯನು ದಾಟಲೋಸುಗ
ಶ್ರೀ ರಮೇಶನ ನಮಿಸಿ ಗಿರಿಯನು
ಚಾರು ಚರಣದಿ ಮೆಚ್ಚಿ ಮೇಲಕೆ
ಹಾರಿದನು ಹನುಮಾ ೧

ಹರಿಯ ಬಲವನು ಸರಿಸಿ ಪೋದುವು
ತರುಗಳಬ್ಧಿಯು ಯಾದಸಂಗಳು
ಶರಧಿ ತಳಗತ ಕಪಿಯಗೋಸುಗ
ಗಿರಿಯು ಎದ್ದಿಹನು ೨

ಧರಣಿಧರ ಪಕ ನಾಶ ಕಾಲದಿ
ಮರುತ ರಕ್ಷಿತ ಪಕ್ಷ ಹೈಮನು
ಶರಧಿ ಭೇದಿಸಿ ಹನುಮ ವಿಹೃತಿಗೆ
ತ್ವರದಿ ಬಂದಿಹನು ೩

ಪರಮ ಪೌರುಷ ಬಲನು ಕಪಿವರ
ಚರಿಸದಲೆ ವಿಶ್ರಮವನದರೊಳು
ಹರುಷದಿಂದಪ್ಯವನ ಕಂಡನು
ಉರಗ ಮಾತೆಯನು ೪

ಸುರಸೆಯೆಂಬುವ ನಾಗಮಾತೆಗೆ
ವರವ ನೀಡುತ ಕಪಿಯ ಬಲವನು
ಅರಿಯಲೋಸುಗ ಕಳುಹಿಸೀದರು
ಸುರರು ಶರಧಿಯಲಿ ೫

ಯಾವ ವಸ್ತುವ ತಿನ್ನೋ ಇಚ್ಛೆಯು
ದೇವಿ ನಿನಗಾಗುವದೊ ಅದು ತವ
ಬಾಯಿಗನ್ನಾಗಿರಲಿ ಎಂದರು
ದೇವತೋತ್ತುಮರು ೬

ಸುರರ ವರವನು ಕಾಯೊಗೋಸುಗ
ಸುರಸೆ ಮುಖದೊಳು ಹೊಕ್ಕು ಹೊರಡುತ
ಪರಮಮಣು ರೂಪದಲಿ ದಿವಿಜರ
ಹರುಷ ಬಡಿಸಿದನು ೭

ಅಸುವರಾತ್ಮಜನುರು ಪರಾಕ್ರಮ
ಹೃಷಿತರಾಗುತ ನೋಡಿ ದಿವಿಜರು
ಕುಸುಮವೃಷ್ಟಿಯ ಮಾಡುತವನಲಿ
ಯಶಸು ಪಾಡಿದರು ೮

ಛಾಯಾ ಪ್ರಾಣಿಗಳನ್ನು ಹಿಡಿಯುವ
ಮಾಯಾ ಸಿಂಪಕೆ ನಾಮ ಕಸುರಿಯ
ವಾಯುಸುತ ನೋಡಿದನು ಎದುರೆ ವಿ
ಹಾಯ ಮಾರ್ಗದಲಿ ೯

ವಿಧಿಯು ಲಂಕೆಯ ಕಾಯಲೋಸುಗ
ಸುತಿಗ್ವರಗಳನಿತ್ತು ಕಾದಿಹಾ
ಮದದಿ ಅಸುರಿಯು ತನ್ನ ಛಾಯವ
ವದಗಿ ಪಿಡಿದಿಹಳು ೧೦

ಆಗ ಆಕೆಯ ಪೊಕ್ಕು ಪೊಟ್ಟೆಯ
ಯೋಗದಿಂದಲಿ ಪಾವಮಾನಿಯು
ಬೇಗ ಬಂದನು ಹೊರಗೆ ತತ್ತನು
ಭಾಗ ಮಾಡುತಲೆ ೧೧

ಆತ್ಮಬಲವಮಿತೆಂದು ತೋರಿವಿ
ಧಾತೃ ವರವುಳ್ಳವಳ ಕೊಲ್ಲುತ
ವಾತನಂತೆ ತ್ರಿಕೂಟ ಪರ್ವತ
ಕೇತ ಹಾರಿದನು ೧೨

ಬೆಕ್ಕಿನಂದದಿ ಹನುಮ ತನ್ನಯ
ಚಿಕ್ಕ ರೂಪವ ಮಾಡಿ ಲಂಕೆಯ
ಪೊಕ್ಕು ನಿಶಿಯಲಿ ಮಧ್ಯಮಾರ್ಗದಿ
ರಕ್ಕಸಿಯ ಕಂಡಾ ೧೩

ಬಟ್ಟೆಯಲಿ ಬಂದಡ್ಡಗಟ್ಟುವ
ದುಷ್ಟ ರಾಕ್ಷಸೀಯನ್ನು ಗೆಲ್ಲುತ
ಮುಷ್ಟಿಯಿಂದಲಿ ಹೊಡೆದು ಲಂಕಾ
ಪಟ್ಟಣವ ಪೊಕ್ಕಾ ೧೪

ಪುರದ ಹೊರಗೊಳಗ್ಹೊಕ್ಕು ರಾಮನ
ತರುಳೆ ಕಾಣದೆ ಹನುಮ ಶಿಂಶುಪ
ತರುನ ಮೂಲದಿ ಕಂಡ ಸೀತೆಯ
ಉರುತರಾಕೃತಿಯಾ ೧೫

ನರಜನಂಗಳ ಮೋಹ ಮಾಡುವ
ಪರಮ ಪುರುಷನ ಚೇಷ್ಟೆಗಳನನು
ಸರಿಸಿ ನಡೆಯುವ ದೇವಿ ಚರಿಯನು
ಸರಿಸಿ ಚೇಷ್ಟಿಸಿದಾ ೧೬

ರಾಮನಿಂದಲಿ ಅಂಗುಲಿಯನು
ಪ್ರೇಮದಿಂದಲಿ ಕೇಸರಿಯ ಸುತಾ
ಭೂಮಿ ಜಾತೆಗೆ ಕೊಟ್ಟು ಸುಖಿಸಿದಾ
ನಾಮ ಹದ್ದನದಿ ೧೭

ಎರಡು ಭಾಗಗಳಾಗಿ ಭೂಷಗಳ್
ಸರಸಿಜಾಕ್ಷಿಯ ಪ್ರತಿಮೆ ಮಹಿಳಿಗೆ
ಪರಮ ರುಚಿ ನೀಡಿದವು ರಾವಣ
ನ್ಹರಣ ಕಾಲದಲಿ ೧೮

ಧರಣಿದೇವಿಯ ಸುತೆಯ ತನ್ನಯ
ಪರಮ ಚೂಡಾಮಣಿಯನಿತ್ತಳು
ಗುರುತು ತೋರಿಸು ರಾಮದೇವಗೆ
ಮರುತಾ ಸುತನೆಂದು ೧೯

ಸೀತೆ ಹನುಮರದೀ ವಿಡಂಬನ
ಯಾತು ಧಾನರಿಗಲ್ಲಾ ನಾಕಗ
ಭೂತ ವಿಡಂಬನ ಧೈತ್ಯವಂಚನ
ಹೇತು ಆಗುವದು ೨೦

ಇಂಥ ಕಾರ್ಯವ ಮಾಡಿ ತನ್ನಯಾ
ನಂಥ ಪೌರುಷ ಪ್ರಕಟ ಮಾಡುವ
ದಿಂತು ಮನವನು ಮಾಡಿದನು ಮತಿ
ವಂತ ವಾನರನು ೨೧

ಚಾರು ಶಿಂಶುಪ ಬಿಟ್ಟು ರಾಕ್ಷಸ
ವಾರ ವಳಿಸುವ ಮನದಿ ಹನುಮನು
ಭೂರಿವನವನು ಮುರಿದು ಲಂಕೆಯ
ತೋರಣೇರಿದನು ೨೨

ದುಷ್ಟ ರಾವಣ ಕಪಿಯ ಮಾಡಿದ
ಚೇಷ್ಟೆ ಕೇಳುತ ಭೃತ್ಯ ಜನರಿಗೆ

ಕಟ್ಟಿ ಹಾಕಿರಿ ಕಪಿಯನೆಂದನು
ರುಷ್ಟನಾಗುತಲೆ ೨೩

ಹರನ ವರದಲಿ ಮರಣ ವರ್ಜಿತ
ಸರವ ಭೃತ್ಯರು ರಾಕ್ಷಸೇಶನ
ಮರುತ ಸೂನುನ ಮೇಲೆ ಬಂದರು
ಪರಮ ವೇಗದಲಿ ೨೪

ಹತ್ತು ಒಂದು ಕೋಟಿ ಯೂಥವ
ತತ್ಸಮಾನ ಪುರಃ ಸರಾನ್ವಿತ
ಎತ್ತಿ ಆಯುಧ ಸೈನ್ಯ ಹನುಮನ
ಸುತ್ತಿಕೊಂಡಿಹುದು ೨೫

ಹಿಡಿದು ಕರದಲಿ ಆಯುಧಂಗಳ
ಹೊಡೆವ ಸೈನ್ಯವ ನೋಡಿ ಹನುಮನು
ಹೊಡೆದು ಕರತಳದಿಂದಲೆಲ್ಲರ
ಪುಡಿಯ ಮಾಡಿದನು ೨೬

ನೀಲಕಂಠನ ವರಗಿರಿಪ್ರಭ
ಏಳುಮಂದಿಯ ಮಂದಿ ಪುತ್ರರ
ಕಾಲಿನಿಂದಲಿ ಒದ್ದು ಕೆಡಹಿದ
ನಾಳು ಮಾಧವನಾ ೨೭

ಧುರದಿ ಮುಂಭಾಗದಲಿ ಪೋಗುವ
ಗರುವ ಮಾಡುವ ರಾಕ್ಷಸಂಗಳ
ಮುರಿದು ಸೈನ್ಯದ ತೃತೀಯ ಭಾಗವ
ಹರಿಯು ಕೊಂದಿಹನು ೨೮

ಪೋರ ಬಲವನು ಕೇಳಿ ಹನುಮನ
ಚಾರ ಮುಖದಲಿ ಸ್ವಾತ್ಮ ಸದೃಶರು
ಮಾರ ಕಾಕ್ಷಾಭಿಧನ ಕಳುಹಿದ
ವೀರ ರಾವಣನು ೨೯

ಉತ್ತುಮಾಸ್ತ್ರಗಳಿಂದ ಮಂತ್ರಿತ
ವೆತ್ತಿ ಬಾಣಗಳ್ಹೊಡೆದು ಹನುಮನ
ಕೆತ್ತಿ ಹಾಕಲು ಅಕ್ಷ ಸಾಲದೆ
ಶಕ್ತಿ ನಿಂತಿಹನು ೩೦

ಮಂಡ ಮಧ್ಯೆಯ ತನಯ ಅಕ್ಷನು
ಪುಂಡ ರಾವಣ ಸಮನು ಸೈನ್ಯದ
ಹಿಂಡಿನೊಳು ತೃತೀಯಾಂಶ ಯಂದು
ದ್ದಂಡ ಚಿಂತಿಸಿದಾ ೩೧

ಹತ್ತು ತಲೆಯವನನ್ನೆ ಕೊಲ್ಲುವ
ದುತ್ತಮಾತ್ಮವು ಆದರೀತನು
ತುತ್ತು ರಾಮಗೆ ಕಾರಣಿಂಥಾ
ಕೃತ್ಯ ಥರವಲ್ಲಾ ೩೨

ಇಂದ್ರಜಿತನನು ನಾನು ಈಗಲೆ
ಕೊಂದು ಹಾಕಿದರಿವನ ಕೃತಿಗಳ
ಛಂದ ನೋಡುವುದಿಲ್ಲಾ ಕಪಿಗಳ
ವೃಂದ ಯುದ್ಧದಲಿ ೩೩

ತತ್ಸಮಾಗಿಹ ಮೂರನೆಯವ
ನ್ಹತ್ಯೆ ಮಾಡುವೆನೆಂದು ಹನುಮನು
ಚಿತ್ತದಲಿ ಚಿಂತಿಸುತ ತತ್ವದ
ವೆತ್ತಿ ಹಾರಿದನು ೩೪

ತಿರುಹಿ ಚಕ್ರದ ತೆರನೆ ರಾಕ್ಷಸ
ರರಸೀನಾತ್ಮಜನನ್ನು ಕ್ಷಣದಲಿ
ಧರಿಯ ಮೇಲಪ್ಪಳಿಸಿ ಒಗೆದನು
ಮರುತನಾತ್ಮಜನು ೩೫

ಹನುಮನಿಂದಲಿ ತನ್ನ ಕುವರನು
ಹನನ ಪೊಂದಲು ನೋಡಿ ರಾವಣ

ಮನದಿ ಶೋಕಿಸುತಾತನಣ್ಣನ
ರಣಕೆ ಕಳುಹಿದನು ೩೬

ಇಂದ್ರಜಿತು ಪರಮಾಸ್ತ್ರಯುತ ಶರ
ವೃಂದದಲಿ ಹೊಡೆದು ಹನುಮನ
ಹಿಂದಕಟ್ಟಲು ಶಕ್ತಿ ಸಾಲದೆ
ನಿಂದು ಚಿಂತಿಸಿದಾ ೩೭

ಸರವ ದುಃಸಹವಾದ ಬ್ರಹ್ಮನ
ಪರಮಮಸ್ತ್ರವ ಬಿಡಲು ರಾವಣಿ
ಹರಿಯು ವ್ಯಾಕುಲನಾಗದಲೆ ಈ
ಪರಿಯ ಚಿಂತಿಸಿದಾ ೩೮

ವಾಣಿನಾಥನ ಎಷ್ಟೊ ವರಗಳ
ನಾನು ಮೀರಿದೆ ದುಷ್ಟ ಜನದಲಿ
ಮಾನಿನೀಯನು ಕಾರಣಾತನ
ಮಾನ ಮಾಡುವೆನು ೩೯

ದುಷ್ಟ ರಾಕ್ಷಸರೆಲ್ಲ ಎನ್ನನು
ಕಟ್ಟಿ ಮಾಡುವದೇನು ಮರಿವಳ
ಗಿಷ್ಟು ಪೋಗಲು ರಾಕ್ಷಸೇಶನ
ಭೆಟ್ಟಿಯಾಗುವದು ೪೦

ಹೀಗೆ ಚಿಂತಿಸಿ ಹನುಮನಸ್ತ್ರಕೆ
ಬಾಗಿ ನಿಲ್ಲಲು ಅನ್ಯ ಪಾಶಗ
ಳಾಗೆ ಬಿಗಿದರು ಬ್ರಹ್ಮನಸ್ತ್ರವು
ಸಾಗಿತಾಕ್ಷಣದಿ ೪೧

ಕಟ್ಟಿ ಕಪಿಯನು ರಾಕ್ಷಸೇಶನ
ಭೆಟ್ಟಿಗೊಯ್ಯಲು ಆತನೀತನ
ದೃಷ್ಟಿಯಿಂದಲೆ ನೋಡಿ ಪ್ರಶವ
ನೆಷ್ಟೊ ಮಾಡಿದನು ೪೨

ಕಪಿಯೆ ನೀನು ಕುತೋಸಿ ಕಸ್ಯವಾ
ಕೃತಿಯ ಮಾಡಿದಿ ಯಾತಕೀಪರಿ
ಕಿತವ ಕೇಳಲು ರಾಮನೊಂದಿಸಿ
ಚತುರ ನುಡಿದಿಹನು ೪೩

ಹೀನ ರಾವಣ ತಿಳಿಯೇ ಎನ್ನನು
ಮಾನವೇಶ್ವರ ರಾಮದೂತನು
ಹಾನಿಮಾಡಲು ನಿನ್ನ ಕುಲವನು
ನಾನು ಬಂದಿಹೆನು ೪೪

ಜಾನಕೀಯನು ರಾಮದೇವಗೆ
ಮಾನದಿಂದಲಿ ಕೊಡದೆ ಹೋದರೆ
ಹಾನಿ ಪೊಂದುವಿ ಕೇಳೊ ನೀ ನಿಜ
ಮಾನವರ ನೀ ಕೂಡಿ ೪೫

ಶಕ್ತರಾಗರು ಸರ್ವ ದಿವಿಜರು
ಮರ್ತ್ಯನಾತನ ಬಾಣ ಧರಿಸಲು
ಎತ್ತೋ ನಿನಗಿವಗಿನ್ನು ಧರಿಸಲು
ಹತ್ತು ತಲೆಯವನೆ ೪೬

ಸಿಟ್ಟು ಬಂದರೆ ಆತನೆದುರಿಲಿ
ಘಟ್ಟಿನಿಲ್ಲುವನಾವ ರಾಕ್ಷಸ
ಇಷ್ಟು ಸುರದಾನವರೊಳಾತನ
ದೃಷ್ಟಿಸಲು ಕಾಣೆ ೪೭

ಇಂಥಾ ಮಾತನು ಕೇಳುತಾತನ
ಅಂತ ಮಾಡಿರಿಯನ್ನೆ ವಿಭೀಷಣ
ಶಾಂತ ಮಾಡಲು ಪುಚ್ಛ ದಹಿಸಿರಿ
ಯಂತ ನುಡಿದಿಹನು ೪೮

ಅರಿವೆಯಿಂದಲಿ ಸುತ್ತಿ ಬಾಲಕೆ
ಉರಿಯನ್ನಚ್ಚಲು ಯಾತುಧಾನರು

ಮರುತ ಮಿತ್ರನು ಸುಡದೆ ಹನುಮಗೆ
ಹರುಷ ನೀಡಿದನು ೪೯

ಯಾತುಧಾನರು ಮಾಡಿದಂಥಪ
ಘಾತವೆಲ್ಲವ ಸಹನ ಮಾಡಿದ
ವಾತಪೋತನು ಲಂಕೆ ದಹಿಸುವ
ಕೌತುಕಾತ್ಮದಲಿ ೫೦

ತನ್ನ ತೇಜದಿ ವಿಶ್ವಕರ್ಮಜ
ಘನ್ನಪುರಿಯನು ಸುಟ್ಟು ಬಾಲಗ
ವನ್ಹಿಯಿಂದಲೆ ಸರ್ವತಃ ಕಪಿ
ಧನ್ಯ ಚರಿಸುತಲೆ ೫೧

ಹೇಮರತ್ನಗಳಿಂದ ನಿರ್ಮಿಸಿ
ದಾಮಹಾ ಪುರಿಯನ್ನು ರಾಕ್ಷಸ
ಸ್ತೋಮದಿಂದಲಿ ಸಹಿತ ಸುಟ್ಟು
ಸುಧಾಮ ಗರ್ಜಿಸಿದಾ ೫೨

ಹನುಮಸಾತ್ಮಜ ರಾಕ್ಷಶೇಶನ
ತೃಣ ಸಮಾನವ ಮಾಡಿ ನೋಡಲು
ದನುಜರೆಲ್ಲರ ಭಸ್ಮ ಮಾಡುತ
ಕ್ಷಣದಿ ಹಾರಿದನು ೫೩

ಕಡಲ ದಾಟುತ ಕಪಿಗಳಿಂದಲಿ
ಧಡದಿ ಪೂಜಿತನಾಗಿ ಮಧುವನು
ಕುಡಿದು ರವಿಜನ ವನದಿ ರಾಘವ
ನಡಿಗೆ ಬಂದಿಹನು ೫೪

ಸೀತೆ ನೀಡಿದ ಚೂಡಾರತ್ನವ
ನಾಥನಂಘ್ರಿಯೊಳಿತ್ತು ಸರ್ವಶ
ಗಾತ್ರದಿಂದಲಿ ನಮಿಸಿ ರಾಮಗೆ
ಶಾತ ನೀಡಿದನು ೫೫

ರಾಮನಾದರು ಇವಗೆ ನೀಡುವ
ಕಾಮ ನೋಡದೆ ಭಕ್ತಿಭರಿತಗೆ
ಪ್ರೇಮದಿಂದಲಿ ಅಪ್ಪಿಕೊಂಡನು
ಶ್ರೀ ಮನೋಹರನು ೫೬

ಇಂದಿರೇಶನೆ ಎನ್ನ ಚಿತ್ತದಿ
ನಿಂದುಮಾಡಿದ ನೀಸುಕವನವ
ನಿಂದು ಭಕ್ತಿಲಿ ತತ್ಪದಾಂಬುಜ
ದ್ವಂದ್ವಕರ್ಪಿಸುವೆ ೫೭

ಇತಿ ಶ್ರೀ ಸುಂದರ ಕಾಂಡಃ ಸಮಾಪ್ತಃ (ಪ್ರಾಕೃತ)
ಶ್ರೀ ಗುರುವರದ ಇಂದಿರೇಶಾರ್ಪಣಮಸ್ತು

## ೨೧

ನೋಡುವೆನು ನೋಡುವೆನು ತೋರಿಸು
ನಿಮ್ಮ ನೋಡುವೆ ಪ

ನೋಡುವೆ ಮಾಡು ದಯ ಎನ್ನೊಳು
ರೂಢಿಯೊಳಗೆ ನಿಮ್ಮ ಪಾಡುತ ಮಹಿಮೆ ಅ.ಪ.

ಮದನ ಜನಕನೊಳು ಕದನ ಮಾಡಿದ ದು–
ರ್ಯೋಧನನ ಶಿರದೊಳಿಟ್ಟ ಪದುಮ ಪಾದಗಳನು ೧

ನೂರುಗಾವುದ ಜಲ ಹಾರುವಾಗಲೆ ದಿವ್ಯ
ಭೂರುಹ ಕೆಡದಿಹ ಊರುಗಳನ್ನು ಸ್ವಾಮಿ ೨

ಕೆಟ್ಟ ಬಕನ ಕೊಂದು ಅಷ್ಟು ಅನ್ನವನುಂಡ
ಹೊಟ್ಟೆ ನೋಡುವೆ ದಿವ್ಯ ದೃಷ್ಟಿ ನೀಡಿರಿ ಸ್ವಾಮಿ ೩

ಭೂಮಿ ಸುತೆಯ ವಾರ್ತೆ ರಾಮನು ಕೇಳಿದಾ
ಪ್ರೇಮಾಲಿಂಗನವಿತ್ತ ಆ ಮಹಾವುರವನ್ನೆ ೪

ಮದಗಜಗಳ ಕೂಡ ಕದನ ಮಾಡಿದ ದಿವ್ಯ
ಗದೆಯ ಪಿಡಿದ ಕರವದು ಮಗಳನು ಸ್ವಾಮಿ ೫

ಅಜಗರ ನಹುಷನ ವಿಜಯ ಸಹೋದರ ಪದುಮನಾಭನ ಗುಣ
ಮುದದಿ ಸಾರುತ ದೈತ್ಯ ಕದನಗೆಳೆದ ನಿನ್ನ ವದನಕಮಲವನ್ನು ೬

ವೇದ ಶಾಸ್ತ್ರಗಳನ್ನು ಓದಿ ಹೇಳುತ ಶಿಷ್ಯ
ಮೋದಗರೆವ ನಿನ್ನ ವಾಣಿ ಸ್ವಾದು ಕೇಳುವೆ ನಿನ್ನ ೭

ಇಂದಿರೇಶನ ದಯದಿಂದ ಗೆಲಿದಿ ಇಪ್ಪ-
ತ್ತೊಂದು ಮತವ ಆನಂದ ತೀರ್ಥರೆ ನಿಮ್ಮ ೮

## ೨೨

ಪರಮ ಪುರುಷನ ಮೊದಲು ನಮಿಸುತ
ಚರವವ್ಯೆದಿದ ದೈವತಂಗಳಿ
ಗೆರಗುವೆನು ಕ್ರಮದಿಂದ ಕೂಡುತ
ಧರಣಿ ತಳದಲ್ಲಿ ೧

ದರ್ಭ ಮುಖ ವಿಸ್ತರದಿ ಹಾಕುತ
ಪದ್ಮ ಮೊದಲಾಸನದಿ ಪ್ರಾಂಗ್ಮುಖ
ಇದ್ದರಗ್ರ್ಯಾಳ ಸಮ್ಮುಖ
ಶ್ರದ್ಧೆ ಮಾಡುವುದು ೨

ವಾಸನಾದೊಳಗೊಂದು ಬಿಂಬದಿ
ವಾಸ ಮಾಡುತ ಕೂರ್ಮ ಆಸನ
ಈಸು ಚಿಂತಿಸಬೇಕು ಎಂಬೋ
ಭಾಷೆ ರಾಜಿಪುದು ೩

ಧಾರುಣಿ ಮಂತ್ರದಲಿ ಕೂಡುತ
ನಾರಸಿಂಹ ಸುದರ್ಶನಾಸ್ತ್ರದಿ

ಆರು ದಿಕ್ ದಿಗ್ಬಂಧನಾಡಿಯ
ಸೂರಿ ಮಾಡುವುದು ೪

ನಾಗಭೂಷಾಜ್ಞೆಯಲಿ ಭೂತಗಳ್
ಹೋಗಲೆಂಬುವ ಮಂತ್ರ ಪಠಿಸುತ
ಯೋಗಿಗಳ ಪ್ರಾರ್ಥಿಸುತ ಸಂತತ
ಯಾಗ ಮಾಡುವದು ೫

ಹರಿಯ ಗುರುಗಳ ನಮನಗೋಸುಗ
ಕರವ ಮನವನು ಶೋಧಿಸೂವುದು
ಎರಡು ಬೀಜಾಕ್ಷರದಿ ನಾಂಕು
ಎರಡು ಸ್ಥಾನದಲಿ ೬

ಬ್ರಹ್ಮಹತ್ಯಾ ಮಂತ್ರದಿಂದಲಿ
ತಮ್ಮ ವಾಮಾಂಗವನೆ ಮುಟ್ಟುತ
ಅಧರ್ಮ ಪುರುಷನ ಚಿಂತಿಸುವುದು
ಕರ್ಮ ಕರ್ತೃಕನು ೭

ಶೋಕ್ಷ ನಾಭಿಲಿ ಪಾಪ ಪುರುಷನ
ನಾಶ ಹೃದಯದಿ ಭಸ್ಮ ತ್ಯಜಿಸುತ
ಲೇಸು ವರುಣದಿ ಸುಧೆಯ ವೃಷ್ಟಿಲಿ
ಸೂಸುವುದು ತನುವ ೮

ಹೀಗೆ ನಿತ್ಯದಿ ಕಾಮಿನೀಯರು
ಬಾಗಿ ಪತಿಯಲೆ ಕಾರ್ಯ ಮಾಡುತ
ನಾಗಶಯನ ನಕ್ಷರದ ತತ್ಸುಖ
ಭೋಗ ಬಯಸುವುದು ೯

ನಾರಿಯರು ಗುರು ಮಂತ್ರದೀಪರಿ
ಪೂರ್ವದಲೆ ಮಾಡುತ ಕೃಷ್ಣನ

ಆರು ವರ್ಣವ ಪಠಿಸುತಲೆ ಗೃಹ
ಕಾರ್ಯ ಮಾಡುವುದು ೧೦

ರಾಮ ಮೊದಲಾದನ್ಯ ಮಂತ್ರಗಳ್
ಕಾಮಿನೀಯರು ಜಪಿಸುತಲೆ ನಿಜ
ಕಾಮದಿಂದಲೆ ಯೋಗ್ಯತಾವನು
ನೇಮದಿಂದಿರಲು ೧೧

ತಾರತಮ್ಯವು ಪಂಚಭೇದವು
ಭೂರಿ ಭಕುತಿಲಿ ಭಜಿಸಿ ಕೃಷ್ಣನ
ಆರು ವರ್ಣವು ಪಠಿಸುತಲೆ ತನ್ನು –
ದ್ಧಾರ ಮಾಡುವನು ೧೨

ವಾಸು ಮಾಡುತಲೆನ್ನ ಮನದೊಳು
ಆಶು ಭೇದಕ ಸ್ತ್ರೀಜನಂಗಳಿ
ಗೀಶ ಮಾಡಿದ ಇದನ ಇಂದಿ–
ರೇಶಗರ್ಪಿಸುವೆ ೧೩

## ೨೩

## ಶ್ರೀನಿವಾಸಾಷ್ಟಕ

ಪಾಹಿಮಾಮರೇಂದ್ರ ವಂದಿತ ಪಾಹಿಮಾಮ ಜರಾವೃತ
ಪಾಹಿಮಾಮಿಭರಾಜ ಪೂಜಿತ ಪಾಹಿ ಪಾಂಡವ ಕಾಮಿತ ಪ

ಶ್ರೀನಿವಾಸ ಸರೋಜ ಶೋಭಿತ ಪಾಣಿ ಕಾಂಚನ ಕಂಕಣ
ಜ್ಞಾನ ವೀರ್ಯ ಬಲ ಪ್ರಮೋದ ಮುಖೋರು ಸದ್ಗುಣ ಕಾರಣ
ವೇಣುನಾದ ವಿಮೋಹ ಗೋಕುಲ ಕಾಮಿನೀ ಸುಖ ಸಾಧನ
ಸಾನುರಾಗ ಕಟಾಕ್ಷ ಸುಸ್ಮಿತ ಭಾನು ಕೋಟಿ ಸಮಾನನ ೧

ಸುಂದರೀವ ಪುರಿಂದು ವಕ್ತ್ರ ಸುಮಂದಹಾಸ ವಿಮೋಹನ
ಮಂದರೋದ್ಧರ ಮಾಧವಾವರ ವೃಂದಪಾಲನ ಭಾವನ
ಇಂದ್ರ ಮುಖ್ಯ ಸುರೇಂದ್ರ ಶತ್ರು ಬಲೀಂದ್ರ ದಾನವ ಬೋಧನ
ಸಿಂಧು ಸಂಭವ ಸುಂದರಾಮೃತ ಭೋಜನಾಮರ ಮೋದನ ೨

ಕಂಸಕಾಲ ಜರಾಸುತಾದ್ಯ ಸುರಾಂಶ ಸಂಘ ನಿಷೂದನ
ಸಂಶಿತವ್ರತ ಕಾಮಿನೀ ವರ ಹಿಂಸಿತಾಸುರ ಕಾಮನ
ಹಂಸನಾಶ ಭವಾಂಶ ತೋಷ ಸುಧಾಂಶು ಬಿಂಬ ನಿಕೇತನ
ಕಂಸಚಾಪ ವಿನಾಶನಾಮರ ಸಂಶಯಾಂಕುರ ಮೋಚನ ೩

ಮತ್ಸ್ಯ ಕೂರ್ಮ ವರಾಹ ವಾಮನ ವತ್ಸ ಭಾಷಿತ ಪಾಲನ
ಕತ್ಸಿತಾವನಿಪಾಲನ ಶತ್ರುದಚ್ಚುತಾತ್ಮ ಸುಬೋಧನ
ವತ್ಸವಾಟ ಚರೋರು ರಾಕ್ಷಸ ಭರ್ತ್ಸನಾಮೃತ ಸಾಧನ
ಸ್ವೇಚ್ಛೆಯಾತ್ತ ಸಮಸ್ತ ವಿಗ್ರಹ ಮತ್ ಶರೀರ ಸುಖಾಸನ ೪

ನೀರಜಾಕ್ಷ ಸರೋಜ ಪಂಕಜ ಹಾರ ಭೂಷಿತ ಕಂಧರ
ಸಾರಸಾಸನ ನಾರದೇಡಿತ ವಾರಿಪಾಲಿತ ಸಿಂಧುರ
ಮಾರ ಸುಂದರ ಶೂರ ನಂದನ ಚಾರು ಲಕ್ಷ್ಮಣ ಸೋದರ
ವೀರರಾಘವ ಭೋನರೇಂದ್ರ ಸಮೀರ ಸೂನು ದಯಾಕರ ೫

ಮಂದಹಾಸ ಮುಖೇಂದು ಮಂಡಲ ಸುಂದರಾಮೃತ ಭಾಷಣ
ನಂದ ಚಿದ್ಘನ ವೃಂದ ಭೂಷಣ ನಂದಗೋಪ ಸುನಂದನ
ಸಿಂಧುತೀರ ವಿಹಾರ ಗೋಕುಲ ಕಾಮಿನಿ ಸುಂದರೀಕರ ಪೂಜನ
ನಂದ ಚಿದ್ಘನ ದೇವ ಭಾಸ್ಕರ ನಂದಿನೀ ರತಿ ಸಾಧನ ೬

ಕೃಷ್ಣ ಕೇಶವ ಜಿಷ್ಣು ಸಾರಥಿ ವೃಷ್ಣಿವಂಶ ಸಮುಜ್ವಲ
ಪ್ರೇಷ್ಠ ಸಂಸದಿ ಸೇವಿತಾಮರ ಸರ್ವದಿವೌಕ
ಸಾಮುರು ಮುಷ್ಟಿಕಾದ್ಯ ಸುರಾನಳ

ಮುಷ್ಟಿಧಾನ್ಯದ ಕಷ್ಟ ನಾಶನ ವೃಷ್ಣಿವರ್ಯ
ಮಹಾಬಲ ತುಷ್ಟದಾಶ್ರಿತ ಸತ್ಫಲ
ವಿಷ್ಣುರೂಪಮಮೇಷ್ಟ ದೋಹವಶಿಷ್ಠ ಸೇವಿತ ವಿಠ್ಠಲ ೭

ಇಂದಿರೇಶ ಸುಕಂದ ಮಾಲ್ಯ ರವೀಂದು ವಹ್ನಿ ಸುಲೋಚನ
ಸಿಂಧುಮಂದಿರ ಸಾರಸಾಂಬುದ ವೃಂದ ಗಾತ್ರಿ ವಿಕಾಸನ
ಕಂದರೋಜ್ವಲ ಕೌಸ್ತುಭಾಹಿ ನಿರೀಂದ್ರ ವಕ್ತ್ರ ನಿಷೇವಣ
ಬಂಧನಂ ಪರಿಹೃತ್ಯ ಮಾಮವ ಸುಂದರಾಂಬರ ಭೂಷಣ ೮

## ೨೪

ಬಂದು ಪೊರೆಯೆಲೊ ಇಂದಿರೇಶಾ ಎನ್ನ
ವಂದಿಸುವೆನೂ ಸಿಂಧುಶಯನ ಬೇಗ ಪ

ಶಿಷ್ಟರ ಸಂಗತಿ ಕೊಟ್ಟು ಕಾಯೊ ಮತಿ
ಭ್ರಷ್ಟನಾದೆನತಿ ಧಿಟ್ಟ ರಘುಪತಿ ೧

ಮುಕ್ತಿದಾಯಕನಾ ಭಕ್ತಿಯೊಳ್ ಭಜಿಪರೆ
ಶಕ್ತಿ ಸಾಲದು ಶ್ರೀ ಭಕ್ತವತ್ಸಲನೆ ೨

ವಂದಿತ ಭಕ್ತರ ಚಂದದಿಂ ಪಾಲಿಪ
ಸುಂದರ ಮೂರುತಿ ಸಂದೇಹ ಮಾಡದೆ ೩

ಹಿಂಡು ಬಾಲರೊಡಗೊಂಡು ಗೋಕುಲದಿ
ಪುಂಡು ಮಾಡಿದ ಪ್ರಚಂಡ ಕೃಷ್ಣ ಬೇಗ ೪

ಅಂಗನೆಯರ ವ್ರತ ಭಂಗಗೈಸಿ ತನ್ನ
ಸಂಗವಿತ್ತು ಕಾಯ್ದ ರಂಗನಾಥ ಸ್ವಾಮಿ ೫

## ೨೫

ಬರುವ ಹಾದಿಯ ಪೇಳೆ ಶ್ರೀಹರಿ
ಬರುವ ಹಾದಿಯ ಪೇಳೆ ಪ

ಬರುವ ಹಾದಿಯ ಪೇಳೆ ಬರುವೆನು ಅಲ್ಲಿಗೆ
ಪರಮ ಮಂಗಳ ದ್ರವ್ಯ ಕರದಿ ತೆಗೆದುಕೊಂಡು ಅ.ಪ.

ಉತ್ತರ ದಿಕ್ಕಿನಲ್ಲಿ ಇರುತಿಹ ಉತ್ತಮ ಪುರದಲ್ಲಿ
ಮುಕ್ತ ಜನರು ಅವನ್ನತ್ತಿರ ಇರುವರು ಇತ್ತ ಬಿಡುವರೇನೇ ಏನೇ ೧

ಗರುಡನ ಏರಿಹನೆ ತೊಡಿಯೊಳು ತರುಣಿಯ ಕೂಡಿಹನೆ
ಶರಣಾಗತರನು ಪೊರೆವಗೋಸುಗ ತನ್ನ ಪುರವ
ಬಿಟ್ಟಿಹನೇನೇ ಏನೇ ೨

ಛತ್ರವ ಪಿಡಿದಿಹರೆ ಚಾಮರ ಸುತ್ತಲು ಬೀಸುವರೇ
ಮತ್ತೆ ಘನ್ನೋದಕ ದಾಟಿ ಬ್ರಹ್ಮನ ಮನಿ ಹತ್ತಿರ
ಬಂದಿಹನೇ ಏನೇ ೩

ಸುರಪುರ ಬಿಟ್ಟಿಹನೆ ಕರಿಪುರ ಹತ್ತಿರ ಬಂದಿಹನೆ
ಸ್ಮರಿಸಿ ದ್ವಾರಕೆಯನು ಕುರುಕುಲದಲ್ಲಿ ವಸ್ತಿ ಇರಳು
ಮಾಡಿದನೇನೇ ಏನೇ ೪

ಇಂದು ಈ ಪುರದಲ್ಲಿ ಮನ್ಮನ ಮಂದಿರ ಮಧ್ಯದಲೀ
ಇಂದಿರೇಶನು ಕೃಷ್ಣ ಸುಂದರ ಮೂರುತಿ ಬಂದು
ತೋರುವನೇನೇ ೫

## ೨೬

ಬಾ ಬಾ ಬಾ ಬಾ ಎನ್ನ ಎದುರಲಿ
ಭೋ ಭೋ ಭೋ ಎಂದು ಭಜಿಪರ ಸಲಹುವ ಪ

ಸರಸಿಜಭವ ಮುಖ ಸುರ ವರ ಸೇವಿತ
ಚರಣ ಕಮಲ ಹರಿ ಪರಮ ಪುರುಷ ಕೃಷ್ಣ ೧

ಕರಿವರದಾನೆ ಮುರಲಿಯನೂದುತ
ಚರಿಸಿ ವನಾದಿ ಗೋಪುರದೊಳು ನಲಿವುತ ೨

ಇಂದಿರೇಶನ ಮುಚಕುಂದ ವರದ ಗೋವಿಂದಗೆ
ಗೋವಳರ ವೃಂದವ ಕರೆಯುತ ೩

## ೨೭

ಬಾರೋ ಗೋಪಿಯ ಬಾಲಾ ಮಾನಸದೊಳು
ತೋರಿಸೋ ಮುಖಕಮಲಾ ಪ

ಸೇರಿಸೊ ನಿನ್ನ ಪದ ಸಾರಸಯುಗಳ–
ಪಾರ ಸದ್ಗುಣ ಶೀಲ ಅಪ್ಪಯ್ಯ ಕೃಷ್ಣ ಅ.ಪ.

ವಕ್ತ್ರಲಂಬಿತವಾಲಾ ಮಣಿಮಯ ಚಿತ್ರಶೋಭಿತ ಭಾಲಾ
ರತ್ನಕುಂಡಲ ನವಮೋಕ್ತಿಕ ಮಾಲಾ ಭೃತ್ಯಭಾಷಿತ ಪಾಲಾ ೧

ಕಂಕಣಾಂಗದ ಭೂಷಾ ಮಣಿಮಯಾಲಂಕೃತ ಶುಭ ವೇಷಾ
ಶಂಕರಮುಖ ಸುರಾತಂತಂ ವಿನಾಶ ಕಿಂಕರ ಜನ ಪೋಷ ೨

ವೇದವನಿತ್ತವನೇ ವಾರಿಧಿಯೊಳು ಭೂಧರ ಪೊತ್ತವನೆ
ಮೇದಿನಿಯನು ಕೋರಿಲ್ಯಾ ಧರಿಸಿದನೇ ನರ
ಮೃಗದಾ ಮೊಗದವನೆ ೩

ಧಾರುಣಿ ಅಳೆದವನೆ ಭಾರ್ಗವ ಸೀತಾ ಚೋರನ ಗೆಲಿದವನೆ ನಾರಿ
ಮೋಹನ ಜಿನಾಚಾರ್ಯ ಸುತನೆ ಘೋರ ಮ್ಲೇಂಛರ ಹರನೇ ೪

ಮಂದಹಾಸನ ಮುಖನಾ ಸುರವರವೃಂದ ಶೋಭಿತ ಸದನಾ
ಇಂದಿರೇಶನ ಯದುನಂದನ ಕರುಣಾಸಿಂಧು ಸಾಮಜ ಶರಣಾ ೫

## ೨೮

ಬಾರೋ ಬಾರೆಲೋ ಹೃದಯ ವಾರಿಜದೊಳು
ಬಾರಿ ಬಾರಿಗೆ ಕರೆವೆ ನಿನ್ನ ಮೋರೆ ತೋರೆಲೋ ಪ

ಪುಟ್ಟ ಪಾದವ ಕ್ಷಿತಿಯೊಳಿಟ್ಟು ಮೋದವ
ಕೊಟ್ಟು ಭಕ್ತರಿಗೆ ತೋರೋ ಕೃಷ್ಣ ರೂಪವಾ ೧

ಸಿಂಧು ಮಥಿಸಿದಿ ಸುಧೆಯ ತಂದು ಬಡಿಸಿದಿ ಕೃಷ್ಣಾ
ಚಂದದಿಂದ ದೇವತೆಗಳ ವೃಂದ ಸಲಹಿದಿ ೨

ಇಂದು ವದನನೆ ಶಾಮಸುಂದರಾಂಗನೇ
ಆನಂದದಿಂದ ತೋರೋ ಎನಗೆ ಕುಂಜಹೃದಯನೇ ೩

ಇಂದಿರೇಶನೆ ಭವೇಂದ್ರ ವಂದ್ಯನೆ ಕೃಷ್ಣಾ ನಿನ್ನ
ಕಂದನೆಂದು ಕರೆಯೋ ಎನ್ನ ನಂದ ಬಾಲನೇ ೪

## ೨೯

ಬಾರೋ ಬಾಲಾ ಬಾ ಅಪ್ಪುವೆ ತಾರೋ ತೋಳನು ತಾ
ಭೂರಿ ದೃಷ್ಟಿಯ ಮಾಲಿಯನ್ಹಾಕಿದಾಪಾರ ಮಹಿಮ ಬಾ ಪ

ಐದು ವರುಷ ಬಾ ಎನಗೆ ಬೋಧವ ನೀಡಿದಿ ಬಾ
ಸಾಧು ಸೇವಿತ ಶ್ರೀಧರ ಭೂಧರ ಗೋಧರಧರನೇ ಬಾ ೧

ಗೌರ ಮುಖನೆ ಬಾ ಕರುಣಾವಾರಿ ನಿಧಿಯೇ ಬಾ
ಆರ ಮಾತನು ಹಚಿಕೋ ಬ್ಯಾಡೆಲೆ ಸಾರಿದ ಕೃಷ್ಣ ೨

ಸಿಂಧುರ ವರದ ಬಾ ಗೋಪಿ ಬಂಧನ ಹರಣಾ ಬಾ
ಮುಂದೆ ನಿಲ್ಲುತ ಮಾತುಗಳಾಡಿಸಿ ಇಂದಿರೇಶ ಬಾ ೩

## ೩೦

## ಬಾದರಾಯಣರು

ಬಾರೋ ಬೇಗನೆ ಬಾದರಾಯಣ ನಿನ್ನ
ಸಾರುವೆ ಸಂತತ ಪ

ಗ್ರಂಥಗಳನು ತೋರಿಸು ತವ ಸುಸ್ಮಿತ ವದನ
ದೇಹಗಾರದೊಳಗೆ ತಪ್ಪಿಸಭಿಮಾನ ಅ.ಪ.

ಬಾದರಿ ಸುಖ ವಲಜೆ ಮುನಿತವ ಪೂರ್ಣ-
ಬೋಧ ವೈಶಂಪಾಯನ ಮುನಿ
ಸಾಧು ಸಂಸೇವಿತ ಪದಾಂಭೋಜಿನೀ ಯೆಮಗ-
ಗಾಧ ಮಹಿಮೆ ತೋರಿಸೋ ೧

ವೃಂದ ಚಕೂತ ಮುನಿಗಳಿಗೆ ಸುಖ
ಸಂದೋಹದಾರ್ಥ ಪೇಳುತಿರಲು
ಬಂದ ಸಂಶಯ ಹರಿಸುತ ಬೇಗ ಮಹಾ-
ನಂದ ನೀಡಿದಿ ಕೇಳಿದವರಿಗೆ ೨

ಸತ್ಯವತಿಯ ಸುಕುಮಾರನೆ
ಧಾತ್ರಿಯೊಳಗೆ ಪುಣ್ಯಚರಿತನೆ
ಸುತ್ತಮುತ್ತಲೂ ಶೇಷಶಯ್ಯನೆ ಎನ್ನ
ನೇತ್ರಕ್ಕೆ ಪೊಳಿ ಇಂದಿರೇಶನೆ ೩

## ೩೧

ಬೀಸಣಿಗೆಯಿಂದಲಿ ಬೀಸೋರು ಪ

ಬಾಳದ ಬೇರ ಬೀಸಣಿಗೆಯಲಿ ಬೀಸೋಳೀ
ಸಮಯದಿ ನಿಂತು ವಾಸುದೇವನಿಗೆ ಅ.ಪ.

ಅಂಬೆಯು ನಿಂತಿಹಳು ಎದುರು ಚಿನ್ನ
ಗೊಂಬೆಯಂತ್ಹೊಳೆವಳು
ತುಂಬಾ ಭರಣ ಭೂಷಿತಾಂಬುಜ ಕರದೊಳು
ಲಂಬಿಸಿ ವ್ಯಜನವ ಸಂಭ್ರಮದಲಿ ಸರಸಿಜಾಕ್ಷ ತಾನು ೧

ಮಲಯ ಜಾಲಗ ಮಾರುತಾದೋದ್ಭವ
ಹಲವು ಸಾರವು ಬೀರಿತಾ ನಳಿನಾಕ್ಷಿ
ನೀರಜಕರ ನಿಲಯದೊಳಗೆ ಪೊಕ್ಕು
ಹಲಧರನುಜ ನಿನ್ನ ಬಲು ಸೇವಿಸುವ ನಿತ್ಯ ೨

ತಂದೆಯ ಸೇವೆಗಾಗಿ ವ್ಯಜನದೊಳು
ಮಂದ ಮಾರುತನಾಗಿ ಇಂದಿರೇಶನ ಸರ್ವ
ಸುಂದರಾಂಗವ ಮುಟ್ಟಿ
ಮುಂದಿನ ಸಾಯುಜ ಇಂದು ಭೋಗಿಸುವನು ೩

## ೩೨

ಮರಣ ಕಾಲವ ತಿಳಿಸೋ ಮಧುಸೂದನಾ ಪ

ಶರಣು ಬಂದವರ ಭಯಹರಣಾ ಅ.ಪ.

ಸ್ನಾನಮಾಡಲಿಬೇಕು ಮೌನದಿಂದಿರಬೇಕು ಹರಿ
ಜ್ಞಾನಪೂರ್ವಕ ಹರಿಯ ಧ್ಯಾನಬೇಕು
ನಾನಾ ವಿಷಯದ ಚಿಂತೆ ಮಾನಸದಿ ಬಿಡಬೇಕು
ದಾನ ಧರ್ಮಗಳನು ಮಾನಸದಿ ಮಾಡಬೇಕು ೧

ಸುತ್ತಲು ಜನರುಗಳ ಹತ್ತಿರ ಕೂಡುತಲಿ
ನಿತ್ಯ ಭಾಗವತಾದಿ ಶಾಸ್ತ್ರಗಳನು
ಮೃತ್ಯು ಕಾಲದಿ ಪಠಿಸೆ ಶ್ರೋತ್ರದಿಂ ಕೇಳಿ ಯಮ–
ಭೃತ್ಯರು ಓಡಲಿಬೇಕು ಎತ್ತಿ ಕಾಲುಗಳು ೨

ಮಕ್ಕಳು ಮನೆಗಳಲಿ ಚಿಕ್ಕ ಯುವತಿಗಳಲ್ಲಿ
ಮಿಕ್ಕಾದ ಪಶು ಕೃಷಿ ರೊಕ್ಕಗಳಲ್ಲಿ
ಪೊಕ್ಕಿ ಮನಸಿಲಿ ವಿಷಯ ಸಿಕ್ಕಿ ತೊಡಕೆನೊ ಎನ್ನ
ವಕ್ರವಾ ತೋರಿಸುತ ಮೆಲ್ಲ ಕೈ ಬಿಡಿಸಿನ್ನು ೩

ಹಿಂದೆ ಮುಂದೆ ದಿನದ ನಿಂದೆ ಸಂಸ್ಕಾರದಲಿ
ಸಂದೇಹ ಚಿಂತಿಸಿರಿ ಎಂದೊಲಿದ ಚಂದ್ರು ಚಕ್ಷ ಚರನಾ
ಸುಂದರ ಮುಖ ಕಮಲ ಮಂದಹಾಸವ ತೋರೋ
ಸಿಂಧು ಉದ್ಧರನೆ ವೃಂದಾವನೀಯೋ ೪

ಸಿಂಧುವಿನ ತಟದಿ ಗೋವೃಂದದೊಳಗೆ
ಚಂದದಲಿ ಕೊಳಲೂದೋ ಸುಂದರ ಮುಖ ಕಮಲ
ಒಂದೇ ಮನದಲಿ ನೋಡಾನಂದದಲಿ ಮಾಡೋ
ಇಂದಿರೇಶ ನಿನ್ನ ಮುಂದೆ ನಿಂತಿರುವಾ
ನಾರಂದ ಮುನಿ ಗುರುವರ ಮಂದಸ್ಮೃತಿ ನೀಡೋ ೫

## ೩೩

ಮಾನವಾತ್ಮರೆ ನಿಮ್ಮ ಮಾನಸ ಪೂಜೆಯಿಂ
ಮಾನವನಿಗೆ ಮೋಕ್ಷ ಸಾಧಿಸೀರಿ ಪ

ರತ್ನ ನಿರ್ಮಿತ ಸುಚರಿತ್ರ ಮಂಟಪವನ್ನು
ಸತ್ಯಭಾಮೆಯ ಪತಿಗಿತ್ತು ಪೂಜಿಸುವೆ ೧

ಆಸನ ನೀಡುವೆ ಶೇಷಶಯನನೆ ಇಲ್ಲಿ
ವಾಸ ಮಾಡಿ ಎನ್ನ ಸೇವೆ ಸ್ವೀಕರಿಸು ೨

ಧ್ಯಾನ ಮಾಡುವೆ ನಿನ್ನ ಗಾನ ಮಾಡುವೆ ನಿನ್ನ
ಜ್ಞಾನ ಭೂಷಣ ಶೋಭಿತಾನನಾಂಬುಜ ೩

ಧೃತ ವೇಣುಗೋಪಾಲ ಬಾರೋ ಮನಸಿಗೆ ತೋರೊ
ಮೂರುತಿ ನಿನ್ನಯ ಸಮೀರ ಸಂಸ್ತುತನೆ ೪

ಅರ್ಘ್ಯ ನೀಡುವೆ ನಾನು ಅನರ್ಘ್ಯ ವಸ್ತುಗಳಿಂದ
ಸ್ವರ್ಘ್ಯಗ್ರಹಣ ಮಾಡೋ ಭರ್ಗ ಸೇವಿತನೆ ೫

ಪಾದ್ಯ ನೀಡುವೆ ವೇದ ವೇದ್ಯ ಮಹಿಮನೇ ಮುನ್ನಾ
ವದ್ಯ ಕಳೆದು ಭವದಿಂದ ಉದ್ಧರಿಸೆನ್ನ ೬

ಆಚಮನವ ನೀಡುವೆ ಹೇ ಚತುರಾನನೇಶ
ವಾಚಾಮಗೋಚರ ಮೋಚಕ ಹೇತು ೭

ಮಧುರೆಯರಸನೆ ಗೋಪ ಸುದತಿ ಮೋಹನ ತವ
ಮಧುಪರ್ಕವನೀವೆ ಮುದದಿ ಸ್ವೀಕರಿಸು ೮

ಮತ್ತೆ ಆಚಮನವನಿತ್ತು ಪೂಜಿಪೆ ಕರ
ವೆತ್ತಿ ಮುಗಿವೆ ಸರ್ವಭಕ್ತ ಪೋಷಕನೆ ೯

ಗಂಗೆ ಯಮುನೆ ಗೋದಾ ತುಂಗೆ ಜಲವ ತಂದಿಹೆ ಅ–
ನಂಗ ಜನಕ ಮಾಡೋ ಅಭ್ಯಂಗ ಸ್ನಾನ ೧೦

ನಿರಿಗೆಗಳನೆ ಹಾಕಿ ಜರದ ಪೀತಾಂಬರ ಗ–
ರುಡವಾಹನ ನೀನು ಧರಿಸು ಮಧ್ಯದಲಿ ೧೧

ಹಾರ ಕಿರೀಟ ಕಾಂಚಿ ನೀರ ನೂಪುರ ಸು–
ಕೇಯೂರ ನೂಪುರನೀವೆ ಧಾರುಣಿಪತಿಗೆ ೧೨

ಸ್ವರ್ಣ ರಚಿಸಿದ ಸೂತ್ರವನು ಕೊಡುವೆ ಲಕ್ಷ್ಮೀ
ರನ್ನ ಸೌರಭ ಗಂಧವನು ಸ್ವೀಕರಿಸು ೧೩

ವಾಸುದೇವನೆ ದಿವ್ಯ ನಾಸಿಕೇಂದ್ರಿಯದಿಂದ
ಈಸು ಧೂಪದ ಗಂಧ ವಾಸನೆ ಗ್ರಹಿಸೋ ೧೪

ಮರುಗು ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ
ಸುಮಗಳ ಪರಿಮಳ ಧರಿಸೋ ಮಧ್ಯದಲಿ ೧೫

ಹತ್ತು ಅಂಗಗಳಿಂದ ಉತ್ತಮ ಸುಧೂಪವ
ಎತ್ತುವೆ ನಿನಗೆ ಸರ್ವೋತ್ತಮ ಹರಿಗೆ ೧೬

ಆಕಳ ಘೃತದ ಅನೇಕ ದೀಪಗಳಚ್ಚಿ
ಶ್ರೀಕರ ತವ ಮುಖಾವಲೋಕಿಸುತ್ತಿಹೆನು ೧೭

ಏಕಾರತಿ ಗೋಪಿಪ್ರೀತನೆ ಬೆಳಗುವೆ
ನಾಕ ನಾಯಕ ಸುರಲೋಕ ಸೇವಿತನೆ ೧೮

ಆರು ವಿಧದ ಅನ್ನ ಸಾರು ಪಾಯಸ ಭಕ್ಷ್ಯ
ಭೂರಿ ಶಾಕಗಳೀವೆ ನೀರಜಾಂಬಕನೆ ೧೯

ಮಾರಜನಕನೆ ಮುತ್ತಿನಾರತಿ ಬೆಳಗುವೆ
ಶ್ರೀರಾಮನೆ ನಿನ್ನ ಮೋರೆಯ ತೋರೊ ೨೦

ಛತ್ರ ಚಾಮರ ವ್ಯಜನ ದರ್ಪಣ ಪರ್ಯಂಕ
ಕರ್ಪುರ ತಾಂಬೂಲವಿತ್ತು ಪೂಜಿಸುವೆ ೨೧

ಹತ್ತಾರು ಉಪಚಾರ ಚಿತ್ರ ಚರಿತನೆ ನಿನಗೆ
ಅರ್ಥಿಯಲಿ ಕೊಡುವೆನು ಮುಕ್ತಿ ನೀಡೆನಗೆ ೨೨

ಇಂದಿರೇಶನೆ ನಿನ್ನ ಮುಂದೆ ತುತಿಪನೆ ನಿಂತು
ನಂದಬಾಲನೆ ಕೃಪೆಯಿಂದ ನೋಡೆನ್ನ ೨೩

## ೩೪

## ದಶಾವತಾರ

ಮೀನಾತ್ಮನಾಗಿ ಭವ ದೀನಾತ್ಮ ಜನಗಳಿಗೆ ಜ್ಞಾನಾರ್ಥವಾಗಿ
ನದಿಯೋಳ್
ಸ್ನಾನಾರ್ಥ ಮುಣಗಿರುವ ಶೋಣೀತ ಸತ್ಯವ್ರತ ಪಾಣೀಲಿ
ಬಂದು ಭರದೀ

ಮಾನವರಂತೆ ಮೃದು ವಾಣೀಲಿ ತನಗೆ ಭೂಸ್ಥಾನವಾ
ಬೇಡಿ ಬೆಳೆದೂ
ಪಾನೀಯ ಪಾತ್ರಸ್ಥ ವಿಷಾಣಾದಿ ಧರಿಸಿ ರವಿ ಸೂನುನ
ಮಾಡಿಹನು ೧

ವೃಂದಾರಕಾರು ಬಲ ವೃಂದಾವ ಕೂಡಿ ಗಿರಿಯಿಂದಾಲೆ
ಕ್ಷೀರಧಿಯನೂ
ವಂದಾಗಿ ಮಥಿಸುತಿರೆ ಸಿಂಧೂವಿನೋಳ್ ಜರಿದು
ಪೊಂದೀತು ತತ್ತಳವನೂ
ಮಂದಾತ್ಮರಾದುಭಯ ಮಂದೀಯ ನೋಡಿ ಬೆನ್ನಿಂದಾಲೆ
ಯೆತ್ತಿ ಸುಧೆಯಾ
ತಂದ್ಯೋರು ರೂಪನಮರಿಂದ್ರಾರಿಗಿತ್ತು ದಿತಿಜೇಂದ್ರಾರ
ಮೋಹಿಸಿದನು ೨

ಕ್ಷೋಣೀಶ ಕ್ಷೋಣೀಯನೆತ್ತಿ ಪಥಿ ದಾನಾವ
ತಡಿಯುತಿರಲೂ
ನಾಸವಾತ್ಮನವನ್ಹಾನೀಯ ಮಾಡಿ ನಿಜ ಸೂನೂಗೆ
ಒಪ್ಪಿಸಿದನು
ಣೇಶ ಜಾತ ನಿಜಮಾನಿನೀ ಸಹಿತ ಸಂಸ್ಥಾನಾದಿ ಕೂತು
ಸುಖದೀ
ತಾನವರಾನ ಪಡಿಸಿದಾನಂದ ಭೋಗಿಸಲು ತಾ ನೋಡಿ
ಮೋದಿಸಿದನು ೩

ತಾನಕೊಂದ ರಿಪು ಘಾತದಿ ಮಾಡಿ ಮನಧಾತಾನ
ವರವ ಪಡೆದೂ
ತ್ರಾದಿಗಳಿಗ್ಗರಿನಾಥಾರಿಗಿತ್ತು ಭಯ ಪೋತಾನ
ಬಾಧಿಸಿದನೂ
ಪೂತಾತ್ಮ ಬಾಲಕನ ಮಾತನ ಕೇಳಿ ಸಭೆಯಾ
ಸ್ಥೂಣರಬಿರಿದು ಬಂದೂ
ಘಾತೀಸುತವನ ಶುಭ ಭರಾತೀಯ ತತ್ಸುತಗೆ ಪ್ರೀತೀಲಿ
ಪಾಲಿಸಿದನೂ ೪

ದುಷ್ಟಾತ್ಮರಿಂದ ಬಹು ದುಷ್ಟಾತ್ಮರಾಗಿ ಸುರರಿಷ್ಟಾವ ಸ್ವರ್ಗ
ಸುಖವಾ
ಬಿಟ್ಟಾವನಲ್ಲ ನಿಜ ಪೊಟ್ಟೀಯಗೋಸುಗದಿ ಕಷ್ಟಾದಿ
ಸಂಚರಿಸಲೂ
ದೃಷ್ಟಿಂದ ಕಂಡದಿತಿ ತುಷ್ಟೀಸುತಿರಲವಳ ಪೊಟ್ಟೀಯೊಳವತರಿಸಲೂ
ಪುಟ್ಟಾತ್ಮ ಬಲಿಗೆ ಸುತಲಿಷ್ಟಾವ ನೀಡಿ ಸುರರಿಷ್ಟಾವ
ಪಾಲಿಸಿದನೂ ೫

ಭೂತೇಶನೊಬ್ಬ ತನ ತಾತಾನ ಕೊಂದುನವ ಮಾತೇಯನಪಹರಿಸಲೂ
ಭೀತೀಲಿ ತಾಯಿಯುರ ಘಾತಕ್ಕ ಸದೃಶ ಭುವಿ ಧಾತ್ರೀಶ
ದುಷ್ಕಲವನೂ
ಘಾತೀಶಿ ಪೂರ್ವಜರ ಪ್ರೀತೀಯ ಪಡೆದು ಮುನಿ ಪೋತಾನ
ರಕ್ಷಿಸುತಲೇ
ಪಾಥೋದಿ ತಟದಿ ರಘುನಾಥೇಷ್ಟದಾತ ನಿಜ ಶಾಪಾವ
ಭೋಗಿಸುವನೂ ೬

ಮಾತೇಯ ಗೇಹದಲಿ ತಾತಾನ ತಾಪ ರಘುನಾಥಾನು
ನೋಡಿ ವಿಧಿಲಾ
ಜಾತಾಸಮೇತ ಸಹಜಾತಾನ ಕೂಡಿ ವನಜಾತಾದಿ
ಸಂಚರಿಸುತಾ
ಘಾತೀಸಿ ರಾಕ್ಷಸರ ಪ್ರಿಯನಿತ್ತು ಮುನಿಪಾತ್ರರಿಗೆಲ್ಲ ಪುರದೀ
ಸೀತಾಸಮೇತ ಕಪಿ ಪೋತಾನ ಕೂಡಿ ನಿಜ ಭೂತಿಯ
ಭೋಗಿಸಿದನು ೭

ಕಾರಾಳಯಾದಿ ನಿಜ ನಾರೀಯ ಕೂಡುತಲೆ
ಶೂರಾತ್ಮಜಾತನಿರಲೂ
ನಾರಾಯಣಾತ್ಮತನು ತೋರೀಸಿ ಬಾಲವಪು
ಗೋರಾಜನಾಲಯದಲೀ
ಶೀರೀಯ ಕೂಡಿ ಸುರವೈರಿಗಳಳಿದು ನದಿ ತೀರಾದಿ
ಕೊಳಲನೂದಿ

ನಾರೇರಿಗೆಲ್ಲ ನಿಜ ಜಾರಾಟ ಸೌಖ್ಯವನು ತೋರೀಸಿ
ತೋಷಿಸಿದನು ೮

ವೃಷ್ಣೀಯ ಮಧುರೆಯಲಿ ಪುಟ್ಟೂತ ಗಾರ್ಗಸುತನಟ್ಟೂಳಿಗಾಗಿ
ಜಲದೀ
ಪಟ್ಟಣ ನಿರ್ಮಿಸುತಲಿಷ್ಟಾಪ್ತ ಜನರುಗಳ ನಿಟ್ಟಲ್ಲೆ ಪಾಲಿಸಿದನು
ಸೃಷ್ಟೀಶಮಕ್ಕಳನು ಮುಟ್ಟೂತ ಕರದಿ ತದಭಿಷ್ಟಾರ್ಥಗಳನು
ಸುರಿದೂ
ತೃಷ್ಣೇಶ ಪಾಂಡವರ ಕಷ್ಟಾವ ಕಳಿದು ಗಜಪಟ್ಟಣವ
ಸಾಧಿಸಿದನು ೯

ಪಾರ್ಥಾರ ಶಾಲೆಯೊಳು ಪೂತಾತ್ಮರಿಂದ ಹರಿ ಭೂತೀಶು
ಕೇಳಿ ಮನದೀ
ಪ್ರಾತಃ ಸಮಾರಭಿಸಿ ರಾತ್ರೀಯತನಕ ಹರಿ ಮೂರ್ತೀಯ
ಪೂಜಿಸುತಿಹಾ
ದೈತ್ಯಾರ ನೋಡಿ ಸುರನಾಥರ ಜಯಿಸಿ ಜಿನ ಪೋತಾತ್ಮ ಮಲಗಿ
ತೊಡಿಯೋಳ್
ಶಾಸ್ತ್ರಾವ ಬೋಧಿಷ್ಚವರಾತ್ಮಾವ ಕೆಡಿಸಿ ಸುರವೈತಾವ
ತೋಷಿಸಿದನೂ ೧೦

ಸೃಷ್ಟಾತ್ಮಾ ಭೂಸುರರಭೀಷ್ಟಾವ ಕಳೆದು ಶುಭ ಭೃಷ್ಟಾರ
ಮಾಡುತಿರಲೂ
ತುಷ್ಟಾತ್ಮಾ ಮ್ಲೆಂಭರನ ದೃಷ್ಟೀಲಿ ನೋಡಿ ಸತಿ ಮಿಷ್ಟಾತ್ಮ
ಹಯವ ಮಾಡಿ
ಅಷ್ಟಾಷ್ಟ ಖಡ್ಗವನು ಮುಷ್ಟೀಲಿ ಪಿಡಿದು ಬಹು ಶಿಟ್ಟೀಲಿ
ಸುತ್ತೆ ಚರಿಸೀ
ವಿಪ್ಲವಾತ್ಮಕ ಕಲ್ಕಿ ಖಳರ್ತೊಟ್ಟೀಯವಡೆದು ಶುಭ
ಪಾಲಿಸಿದನು ೧೧

ವೆಂಕಟನಾಥ ಭವಪರಿಕವ ಹರಿಸೂತ
ಕಿಂಕರನಾಗಿರುವೆನೂ
ಶಂಬಾಸುರೋದರಜ ಶಂಖಾವಪಿಡಿದು ಮುಖ
ಪಂಕೇಜದಿಂದೂದುತಾ
ಹುಂಕಾರ ಮಾಡುತಲೆ ಕಿಂಕಿರನೆಂದು ಭುವಿ ಸಂಕರ್ಷಣದಿ
ಸುರರೂ
ಶಂಕೀತರಾಗುತ ಭಯಂಕಾರವೆಂದು ಮಹಾತಂಕಾದಿ
ಸಂಸ್ಮರಿಪರೂ ೧೨

ದಂಷ್ಟ್ರೇಶ ಬ್ರಹ್ಮಾನಾಸಿ ಪುಟ್ಟೂತವಾರಿನಿಧಿ ಮೆಟ್ಟೂತ
ಘರ್ಘವಿಸಲೂ
ದೃಷ್ಟೀಲಿ ನೋಡಿ ಕಿವಿಗೊಟ್ಟಾಲಿಸೂತ ನಿಜ
ಪೊಟ್ಟೀಯರಾಂತರದಲೀ
ಯಷ್ಟೇನೊ ಸನ್ನಾವಿದು ಪುಟ್ಟೂತಲ್ಲಂದಿ ಮರಿ
ಬೆಟ್ಟೇಶದಂತಿರುವದೂ
ಧಿಷ್ಟ್ಯಾದಿ ಕೂತು ಪರಮೇಷ್ಠೀಯ ಮಹಿಮೆಯನು
ತುಷ್ಟಿಸಿ ಪಾಡುತಿಹನು ೧೩

ತರೂನ ಮೂಲದಿ ಕೂತು ಬೋರೆಯಾ ಹರಿಯ
ಶಾಸ್ತ್ರವ ಪೇಳೆ ಮುನಿಪನ ಸ್ವರವ ಸ್ಮರಿಸಿರಿ ಮನುಜರೇ
ಭವದರವು ಪೋಗುವದು ೧೪

ಚಿಕ್ಕ ಹುಡುಗೆಯು ತನ್ನಾಗತ ಚಕ್ರದಲಿ ಬ್ರಹ್ಮಾಂಡ ಕಟಹವ
ಟೊಕ್ಕ ವೆನಿಸುತ ಜೀವ ಸಂಸ್ಕಾರ ಮುಕ್ಕು ಮಾಡುವಳು ಮೋಕ್ಷ
ಸೌಖ್ಯ ನೀಡುವಳು ೧೫

ಪ್ರಾಣಸೂನುನು ಯುದ್ಧ ಭೂಮಿಲಿ ಧ್ವಾನ ಮಾಡಲು
ಧರ್ಮರಾಜಗೆ
ಮಾನವಾದಿಗಳೆಲ್ಲ ಮುಖಭವ ಶೋಣಿತಾಗುವದು ೧೬

ತತ್ವ ದಿವಿಜರು ನಮ್ಮ ದೇಹದಿ ನಿತ್ಯದಲಿ ಹರಿ
ಸ್ಮರಿಸಿ ತುತಿಸುತ
ಸತ್ವ ದಿವಿಜರಿಗೆತ್ತುವೆನು ಕರವಾ ೧೭

ಸುರಮುನೀಶನು ತನ್ನ ವಾದ್ಯ ಕರದಿ ಬಾರಿಸಿ ಹರಿಯ
ತುತಿಯನು
ಸ್ಮರಣೆ ಮಾಡಲು ಜನರ ದುರ್ಧರ ದುರಿತ ಹರಿಸುವನೂ ೧೮

ಯಲ್ಲಿ ಬ್ರಹ್ಮಾಂಡದಲಿ ಶಿರಿ ವರವಲ್ಲಭವ ಸಂಸ್ಮರಿಸಿ ಹಿಗ್ಗುವ
ಫುಲ್ಲನಾಭನ ಭಕ್ತರನು ಮನದಲ್ಲಿ ಸ್ಮರಿಸುವೆನೂ ೧೯

ಶ್ರೀಶಾನು ಭಕ್ತಜನದಾಶೀಯ ಪೂರೈಸಲು ಕೂಸಾಗಿ
ದೇವಕಿಸುತಾ
ಯೇಷಾದಿಗಳ ದಿಶುಭರಾಶೀಲಿ ಪುಟ್ಟುತವನೀಶಾರ ವಂಶ
ಬೆಳೆಸಿ ೨೦

ದೋಷಾತ್ಮಾ ದೈತ್ಯಕುಲ ಘಾಶೀಶಿ ಭೂದೇವಿ ಕ್ಲೇಶಾವನೆಲ್ಲ
ಕಳೆದೂ ದಾಶೀಜ
ನಾಗಿ ನಿಜ ಕೋಶಾದಿ ಮೋಕ್ಷಾ ಪದಮೀರೇಶ
ತೋರಿಸಿದನು ಇಂದಿರೇಶನ ಸಾಧಿಸಿದನು ೨೧

ನಾರದರ್ಷಿಯ ಕರುಣದಲಿ ಶನಿವಾರ ಮಾಡೀದ ಪರಮ
ತುತಿಯನು
ಭೂರಿ ಪಠಿಸಲು ಇಂದಿರೇಶನುದಾರ ನೋಡುವನು ೨೨

## ೩೫

ಮುಂದೆ ನಡಿ ಬೇಗ ಬೇಗನೆ ಪ

ಮುಂದೆ ನಡಿ ಬೇಗ ಬೇಗನೆ ನಂದತನಯ ನಾರಿ ಪತಸಿ
ಇಂದು ನಿನ್ನ ಬೇಡಿಕೊಂಬೆ ಸುಂದರಾಂಗ ಸಣ್ಣ ಕೂಸೆ ಅ.ಪ

ಕಾಲಿನೊಳಗೆ ರುಳಿಯ ಗೆಜ್ಜೆ ಬಹಳ ಭಾರವಾಯಿತೇನೋ
ನೀಲವಾಲೆಗಳನು ಮುಖದ ಮೇಲೆ ಮಾಡಿಕೊಂಡು ನಡೆಯೊ ೧

ಹೊದ್ದ ಜರದ ವಲ್ಲಿ ಕೆಳಗೆ ಸುತ್ತಲಲೆಯತಿಹುದು ನೆಲದಿ
ಎತ್ತಿಕೊಂಡು ಪೋಗೋ ಗೋಪಿ ಮುತ್ತಿನಂಥ ಮುದ್ದು ಕೂಸ ೨

ಮೆಲ್ಲಮೆಲ್ಲನ್ಹೀಗೆ ಪೋದರೆ ಇಲ್ಲೆ ಕತ್ತಲಾಯಿತಯ್ಯ
ಗೊಲ್ಲರ್ಪುಡುಗ ಇಂದಿರೇಶ ಇಲ್ಲೆ ನಿಲ್ಲೊ ಎತ್ತಿಕೊಂಬೆ ೩

## ೩೬

ರಾಮೇತಿ ಮಂಗಳಂ ದಿವ್ಯನಾಮಾ
ಪ್ರೇಮದಲಿ ಪಾಡುವರ ಕಾಯೋ ಕರುಣಾಳೋ ಪ

ಚಿತ್ರ ಚರಿತಾಂಬೂಜ ಪುತ್ರ ದಶರಥ ಬಾಲಾ
ಉತ್ತುಮಾನಾಮವನೆ ಭಕ್ತಿಯಿಂದ
ನಿತ್ಯ ಪಠಿಸಲು ನಿಜ ಭಕ್ತರಿಗೆ ಸಂಸಾರ
ಮೃತ್ಯು ಸುಖ ಹರಿ ಮೋಕ್ಷ ಇತ್ತು ಪಾಲಿಸುವ ೧

ಶಬರಿ ಸಾಕ್ಷಿ ಇದಕೆ ಶರಭಂಗ ಋಷಿ ಸಾಕ್ಷಿ
ಸಿಲೆಯು ಸಾಕ್ಷಿ ಸುತನ ಕಪಿಯು ಸಾಕ್ಷಿ
ಶಿವನ ಸಾಕ್ಷಿಯು ಸೂರ್ಯಸುತ ಮುಖ್ಯ ವಾಹನರ
ಗೋಚರನ ರಾಕ್ಷಸರ ಸಾಕ್ಷಿ ನರ ಸಾಕ್ಷಿ ೨

ದಾಶರಥೆ ಸಕಲ ಮುನಿ ಪೋಷಕನು ಲಂಕಾದಿ
ಪ್ರೇಶನಾಶಕ ಭೃಗುಜ ತೋಷಿತಾಶಾ
ಶ್ರೀಚರಿಯ ತೀರದಲೆ ಸೀತೆ ಸಿಂಧೆ ಇಂದಿ-
ರೇಶ ಪಾಹತ ಸದ್ಗುಣತ ವಿಭೀಷಣ ತ್ರಾತಾ ೩

## ೩೭

ವಂದಿಸುವೆನು ರಘುವರನಾ ಸುರ
ವಂದಿತ ಚರಣಾಂಬುಜನ ಪ

ತಂದೆ ಮಾತಿಗೆ ವನಕ್ಹೋಗಿ ಬಂದವನಾ
ಸುಂದರ ಸಹ ಸೀತೆಯಿಂದ ಅನುಜನಾ ಅ.ಪ

ಮುನಿಯ ಸತಿಯ ಕಾಯ್ದವನ ಋಷಿ
ವನಿತೆಯರ ಪಾಲಿಸಿದವನಾ
ಮನಸಿಜ ರಿಪುಹರ ಚಾಪ ಭಂಜಕನಾ ೧

ವಾರಿಧಿ ಸೇತು ಬಂಧಕನಾ ಸೀತಾ -
ಚೋರನ ಶಿರವಳಿದವನಾ
ಚಾರು ಸಿಂಹಾಸನವೇರುತ ಸರಯು -
ತೀರದ ಅಯೋಧ್ಯಾ ವಿಹಾರ ಸುಂದರನಾ ೨

ಕೇಸರಿ ಸುತಗೆ ತನುಧನಮಣಿ
ಆಶ್ರಯವನು ಕೊಟ್ಟವನಾ
ಕೋಸಲ ಜನರಿಗೆ ಮೋಕ್ಷವವಿತ್ತವನಾ
ಇಂದಿರೇಶ ಸುಖಾತ್ಮ ನಿರ್ದೋಷ ಪುರುಷನಾ ೩

## ೩೮

ವಾಮ ಭಾಗದಿ ಲಕ್ಷ್ಮೀದೇವಿಯು
ಭೂಮಿ ದೇವಿಯು ದಕ್ಷಭಾಗದಿ
ಶ್ರೀ ಮನೋಹರನಿಹನು ಮಧ್ಯದಿ
ಪ್ರೇಮದಲಿ ನಮಿಸು ೧

ನಮಿಸು ಕೃದ್ದೋಲ್ಕ ವಾಸುದೇವರ
ಸ್ಮರಿಸು ಕೇಶವದ್ವಿತಿ ಮತ್ತರ

ಸ್ಮರಿಸು ಕೂರ್ಮಾನಂತ ಶಕ್ರರ
ಸುರಿಪ ದಿಶಿಯಲ್ಲೀ ೨

ಸ್ಮರಿಸು ಸಹಸ್ರೋಲ್ಕ ಮಾಯರ
ಶಿರಿವರಾವನಿ ಧರನ ವಾರುಣಿ
ಸ್ಮರಹರಾಂಚಿತನು ವಹ್ನಿಯ
ಶರನ ಕೋನದಲಿ ೩

ನಮಿಸು ಮಹೋಲ್ಕ ಸಂಕರ್ಷಣನ
ನಮಿಸು ಗೋವಿಂದ ವಿಷ್ಣು ನರಹರಿ
ನಮಿಸು ವಾಮನ ಬ್ರಹ್ಮ ಯಮರನು
ಕ್ರಮದಿ ದಕ್ಷಿಣದಿ ೪

ಸ್ಮರಿಸು ಸಹಸ್ರೋಲ್ಕ ಜಯರನು
ಸ್ಮರಿಸು ಮಧುಹನ ಪರಷುರಾಮನ
ಸರಸಿಜಾಸನ ಸತಿಯು ನಿಋುತಿಯ
ತಿಋುತಿ ಕೋಣದಲಿ ೫

ವೀರ ಉಲ್ಕ ಪ್ರದ್ಯುಮ್ನ ತ್ರಿವಿಕ್ರಮ
ಸಾರ ರಘುವರ ವೃಷ್ಣಿನಾಥಸ-
ಮೀರ ವರುಣರ ಪೂಜಿಸೂವುದು
ವಾರಿ ದಿಶೆಯಲ್ಲೀ ೬

ನುತಿಸು ಸಹಸ್ರೋಲ್ಕ ಕೃತಿಯರ
ನತಿಸು ಶ್ರೀಧರ ಬುದ್ಧಿ ಭಾರತಿ
ಸತತ ಗಮನರ ವಾಯು ಕೋಣದೊ
ಳತಿ ಸುಭಕ್ತಿಯಲಿ ೭

ದ್ಯುಲ್ಕ ಅನಿರುದ್ಧೇಂದ್ರಿಶೇಯರ
ನಳಿನನಾಭನ ಕಲ್ಕಿ ನಂತರ
ಸಲಿಲ ಮೂರುತಿ ರೋಹಿಣೇಶರ
ಒಲಿಸು ಉತ್ತರದೀ ೮

ಸ್ಮರಿಸು ಸಹಸ್ರೋಲ್ಕ ಶಾಂತರ
ಸ್ಮರಿಸು ದಾಮೋದರನ ವಿಶ್ವನ
ಗಿರಿಜೆಯನು ಪಾರ್ವತೀ ಪತಿಯ
ಹರನ ಕೋಣದಲಿ ೯

ವಾರಣಾಸನ ಮೊದಲು ನಿಜಪರಿ
ವಾರ ಸಹಿತದಿ ಸರ್ವದಿವಿಜರು
ಮಾರನಯ್ಯನ ಸುತ್ತಲೂ ಪರಿ–
ಚಾರರಾಗಿಹರು ೧೦

ಈಸು ಪೀಠಾವರಣ ತ್ರಿದಿವನಿ
ವಾಸಿಗಳ ಮಧ್ಯದಲಿ ಸಂತತ
ವಾಸುದೇವನ ಪೂಜಕೇಶನಿ–
ವಾಸ ಪೊಂದುವರು ೧೧

ಗಿರಿಯೊಳಿರುತಿಹ ವೆಂಕಟೇಶನ
ಸರಸ ಪೀಠಾವರಣ ಪೂಜೆಯ
ಕರಡಿ ಮಗಳಿಗೆ ಜೈಗಿಷವ್ಯನು
ಅರುಹಿದನು ಮುದದಿ ೧೨

ಗರುಡನಿಗೆ ಶ್ರೀಕೃಷ್ಣ ಪೇಳಿದ
ಹರಿಯ ಪೀಠಾವರಣ ಪೂಜೆಯ
ಸರ್ವ ಜನರಿಗೆ ತಿಳಿಯಲೋಸುಗ
ವಿರಚಿಸಿದೆ ನಾನೂ ೧೩

ಇಂದಿರೇಶನು ಎನ್ನವಾಣಿಲಿ
ನಿಂದು ಮಾಡಿದನೀ ಸುಗ್ರಂಥವ
ಲೆಂದು ಆತನ ಪಾದಕಮಲ
ದ್ವಂದ್ವಕೊಪ್ಪಿಸುವೆ ೧೪

## ೩೯

ಸೂರ್ಯ ನಾಮಕನಾಗಿ ಸಂತತ
ಶೇರಿ ರವಿಮಂಡಲದಿ ಶ್ರೀಹರಿ
ಮೂರು ಕರ್ಮಕೆ ಮೂಲನೀತನು ಭೂರಿ ವಂದಿಸುವೆ
ಚೈತ್ರಮುಖ ಮಾಸದಲಿ ದ್ವಾದಶ
ದಾತ್ಮ ರೂಪಗಳಿಂದ ಗಗನದಿ
ವ್ಯಾಪ್ತನಾಗುತ ಸರ್ವಜೀವರ ವಾರ್ತೆ ನುಡಿಸುವನು ೧

ಸೂರ್ಯ ಹರಿ ಹವಿ ಭೂತಿ ರೂಪವ
ಯಾರು ಸಂಧಿಗಳಲ್ಲಿ ಘಟಿಪರು
ಘೋರ ಪಾತಕವಳಿದು ಅವರನು ಶೌರಿ ರಕ್ಷಿಪನು
ಹತ್ತು ಆರು ಸಹಸ್ರ ಋಷಿಗಳಿ
ಗೆತ್ತುವೆನು ಕರಗಳಾ ನಮಣ
ಸತ್ಕೃತಿ ಪೂರ್ಣಮಾಡುತ ಇಂದಿರೇಶನ ಜ್ಞಪ್ತಿ ಕೊಡಲೆಂದು ೨

## ೪೦

## ನರಸಿಂಹ

ಹ್ಯಾಂಗೆ ಮಾಡಲೋ ನರಸಿಂಗ ದೊರೆಯ ಪ

ಹ್ಯಾಂಗೆ ಮಾಡಲಿನ್ನು ಭವದಿ
ಭಂಗ ಪಡುವೆ ನಿಮ್ಮ ಪಾದ
ಸಂಗ ದೊರಕುವದಕೆ ಅಂತ-
ರಂಗದ ಸಾಧನ ವ್ಯಾವುದ್ಹೇಳೋ ಅ.ಪ.

ಎಲ್ಲಿ ಪೋದೆಯೋ ನಮ್ಮಲ್ಲೆ ನೀನು
ಕಲ್ಲು ಆದೆಯೋ ಬಲ್ಲೆ ಸುಖದ ಬಾಧೆ
ಎಲ್ಲ ಬಿಟ್ಟು ನಿಮ್ಮ ಪಾದದಲ್ಲಿ ಸೇರಿ ಸೇವೆ
ಮಾಳ್ಪರಲ್ಲಿ ಛಲವ ಮಾಡುವರೆ ೧

ಎಷ್ಟು ಮರುಗಲೋ ನಾ ಮನದಿ
ಬಾಯಿಬಿಟ್ಟು ಒದರಲೋ
ಸಿಟ್ಟು ಮಾಡದಲೆ ನೀನು ಇಷ್ಟು ಮಾತುಗಳನ್ನೆ ಕೇಳಿ
ಸೃಷ್ಟಿಗೀಶ ಸರ್ವ ಅಭೀಷ್ಟ ಕೊಡುವೆ ಎಂದು ಬಂದೆ ೨

ಬೇಸರವಾಯಿತೋ ದೇಹ ಎನಗೆ ಸೋಸು ಇಲ್ಲವೋ
ವಾಸುದೇವ ನಿನ್ನ ಪೂಜೆ ಆಸೆ ಮಾತ್ರದಿಂದ ದೇಹ
ಪೋಷಿಸುವೆನು ನಿತ್ಯ ಇಂದಿರೇಶ ಮನದಿ ಭಾಷಿಸುವುದು ೩

## ೪೧

## ಶ್ರೀಹರಿಯ ಮಂಗಳ ಪದಗಳು

ಆರುತಿ ಬೆಳಗುವೆನು ಮಾಧವಗಾರುತಿ ಬೆಳಗುವೆನು ಪ

ಆರುತಿ ಬೆಳಗುವೆ ಮಾರುತಿ ಪ್ರಿಯ ಯದು–
ಕೀರುತಿಕರ ಪಾರ್ಥಸಾರಥಿ ಹರಿಗೆ ಅ.ಪ.

ನೀರೊಳು ಪೊಕ್ಕವಗೆ ಕಡಲೊಳು ಭಾರವ ಪೊತ್ತವಗೆ
ಮೂರು ಪಾದದಿ ಸರ್ವಧಾರುಣಿ ಅಳೆಯುತ
ಧೀರ ಬಲಿಯ ಮನೆ ದ್ವಾರ ಕಾಯ್ದವಗೆ ೧

ಕ್ಷತ್ರಿಯರ ಗೆಲಿದವಗೆ ಗಾರ್ಜಿತ ಸತ್ರವ ಕಾಯ್ದವಗೆ
ಸತ್ಯ ರುಕ್ಮಿಣಿ ಮುಖ್ಯ ಪತ್ನಿಯರಾಳಿದ
ಬತ್ತಲೆ ಕುದುರಿಯ ಹತ್ತಿ ಮೆರೆದವಗೆ ೨

ಸೃಷ್ಟಿಯು ಇಲ್ಲದವಗೆ ಜಗವನು ಸೃಷ್ಟಿ ಪಾಲಿಪಗೆ
ಬಟ್ಟಿಲಿಂದಲೇ ಗಿರಿ ಬೆಟ್ಟನೆತ್ತಿದ–
ಭೀಷ್ಟ ನೀಡಲು ಸುಖ ಪುಷ್ಪವಂದಿತಗೆ ೩

ನಂದಗೋಕುಲದಲ್ಲೆ ಬೆಳೆಯುವ ಮಂದಜಾಕ್ಷಿಯರಲ್ಲೆ
ಒಂದೊಂದು ಆಟಗಳಾಡಿ ಸುಖವನಿತ್ತ
ನಂದ ಬಾಲಕನಾದ ಇಂದಿರೇಶನಿಗೆ ೪

## ೪೨

ಆರುತಿ ಮಾಡಿದೆವೆ ನಾರಿಯಮಣಿಯರು ಪ

ಆರುತಿ ಮಾಳ್ಪೆವು ಚಾರು ಪುಸ್ತಕದಿ
ಭೂರಿ ಶೋಭಿಪ ಪರಾಶರ ತನುಜಗೆ ಅ.ಪ.

ಚಿತ್ರ ಮಂಟಪದೊಳು ಮುತ್ತಿನಂದದಿ ಕೂತು
ಭಕ್ತ ಪೂಜಿತನಾಗಿ ಭಾಗ್ಯವ ತತ್ವ ಪೇಳಿದವಗೆ ೧

ಹರಿಯೇ ಸರ್ವೋತ್ತಮ ನರರು ತದ್ದಾಸರು
ಹಿಂಗರುಹಿ ಶಾಸ್ತ್ರವ ಅಖಿಳ ದುರ್ವಾದಿ ವಿಜಯಗೆ ೨

ಭಾರತ ಮುಖ ಬಹುಸಾರ ಶಾಸ್ತ್ರವ ಮಾಡಿ
ಧಾರುಣಿಯೊಳು ಮುಕ್ತಿದಾರಿ ತೋರಿದವಗೆ ೩

ನಾರದ ಶುಕಪೈ ಸೇರಿ ವೈಶಂಪಾಯನ
ದ್ವಾರಪಾಲಕರಿಂದ ನಿರುತ ಪೂಜಿತಗೆ ೪

ವಾಸವೀ ತನುಜಾ ವ್ಯಾಸನ ಸ್ತುತಿಸಿದಾ
ಭಾಷಿ ಭಾಷಿಗೆ ಇಂದಿರೇಶ ಪಾಲಿಸುವನು ೫

## ೪೩

ಚಾಮರವನು ಹಾಕಿರೆ ಕೋಮಲಾಂಗಿಯರು
ಶ್ರೀ ಮಹಾಮಾರುತನ ಸ್ಮರಿಸುತ ನೀವೆಲ್ಲರು ಪ.

ರಾಮ ನರಹರಿ ಕೃಷ್ಣ ಶ್ರೀಮಹಿಧರಗೆ
ಇಹ ಆಲದೆಲೆಯ ಮೇಲಿದ್ದು ಕ್ರೀಡಿಪಗೆ ಅ.ಪ.

ಮುತ್ತಿನ ಮಾಲೆಗಳು ಸುತ್ತ ಶೋಭಿಪವು
ನಕ್ಷತ್ರಮಾಲೆ ವಿಚಿತ್ರ ಶೋಭಿಪುದು
ರತ್ನ ಪೀಠಗಳಿಂದ ನೀಲಹತ್ತಿ
ಕುಳಿತಿಹ ಗೋಪಿ ಪುತ್ರಗೆ ನೀವು ೧

ರಾಮ ಕುಳಿತಿರುವ ನಿಜ ಕಾಮಿನಿಯ ಸಹಿತ
ಶ್ರೀ ಮಹೀ ಸಹಿತ ಭೂಮಿಧರನುತಾ
ತಾಮಸರ ನಯನ ಮುನಿ ಕಾಮಿನಿವರ ಪ್ರೀತ
ಶ್ರೀಮಲಸಹಾರ ಸಿರಿಧಾಮ ವಿಖ್ಯಾತ ೨

ಸುಂದರಾಂಗಿಯರು ತ್ವರದಿಂದ ಪಾಡುತಲಿ
ಮಂದಾಕಿನಿಯರ ಪ್ರಮುಖರಿಂದ ಸರತಿಗಳೇ
ಮಂದಹಾಸ್ಯಗಳ ಮುಖದಿಂದ ನೋಡುತಲಿ
ಇಂದಿರೇಶನ ಹತ್ತಿರ ಹೊಂದಿ ನಿಲ್ಲುತ್ತಲೆ ೩

## ೪೪

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಮಂದರೋದ್ಧಾರಗೆ ಇಂದಿರಾದೇವಿಗೆ
ಛಂದದಿಂದಲಿ ಬ್ರಹ್ಮ ವಾಯು ಚರಣಕ್ಕೆ
ಮಂದಗಮನೆ ಭಾರತಿಯರಂಘ್ರಿಗೆ
ಚಂದದಿಂದಲಿ ಗರುಡ ಶೇಷ ರುದ್ರರಿಗೆ ೧

ಹರಿಯ ರಾಣಿಗಳಾರು ಮಂದಿಗಳ ಚರಣಕ್ಕೆ
ಗರುಡ ಶೇಷ ರುದ್ರರ ಪತ್ನಿಯರಿಗೆ
ಭರದಿಂದ ಇಂದ್ರ ಕಾಮರರಂಘ್ರಿಗೆ
ಸರಸಿಜಾಕ್ಷಿ ಶಚಿ ರತಿಯರ ಚರಣಕ್ಕೆ ೨

ಇಂದ್ರ ಮೊದಲಾದವರ ಪ್ಯಾರಾಂತ ಸುರಸಭೆಗೆ
ಮುನಿವಂದ್ಯ ಗಂಧರ್ವರಾಯರ ಚರಣಕ್ಕೆ
ಮಂದರೋದ್ಧಾರ ನಮ್ಮ ಇಂದಿರೇಶನ ಪಾದ
ವಂದಿಸುವಾ ಯತಿವರ್ಯರ ದಾಸಕೂಟಕೆ ೩

೪೫

ಜೋ ಜೋ ಜೋ ಜೋ
ವೆಂಕಟಾಧೀಶ ಜೋ ಜೋ ಪ

ಜೋ ಜೋ ಸುಂದರ ಸಾಧಿಸವೇಷ
ಜೋ ಜೋ ಪದುಮಿನಿ ಕಲಹ ಸಂಭಾಷ
ಜೋ ಜೋ ಜೋ ಜೋ ಶ್ರೀಶ ವರಾಂಗನ ವೇಷ
ಜೋ ಜೋ ಅ.ಪ.

ಜೋ ಜೋ ಮದುಮಗನಾಗಿ ಬಂದವನೆ
ಜೋ ಜೋ ಮದುವೆ ಮಂಟಪದಿ ಕೂತವನೆ
ಜೋ ಜೋ ಪದುಮಿನಿ ಕರಪಿಡಿದವನೆ
ಜೋ ಜೋ ಮದಗಜವೇರಿ ಮೆರೆದವನೆ ಜೋ ಜೋ ೧

ಜೋ ಜೋ ಓಕುಳಿ ವಸನ ಭೂಷಿತನೆ
ಜೋ ಜೋ ಶರದೃತಿ ಸೌರಾಂಕಿತನೆ
ಜೋ ಜೋ ಕಮಲೋದ್ಭವ ಪಿತನೆ
ಜೋ ಜೋ ಕರಕಂಜ ಮೂಲಕಂದರನೇ ಜೋ ಜೋ ೨

ಮಂದಗಮನೆ ಎನ್ನ ತೂಗು ಎಂದವನೆ
ಸುಂದರ ವೆಂಕಟ ಹರಿ ಪ್ರೀತಸ್ಥಿತನೆ
ಇಂದಿರೇಶನೆ ಶೇಷ ಪರ್ಯಂಕ ಶಯನನೆ
ಇಂದು ತೂಗುವೆನು ಬಕುಳ ಬಾಲಕನೆ ಜೋ ಜೋ ೩

## ೪೬

## ಪರಶುರಾಮ ದೇವರು

ಬೆಳಗಿರಾರುತಿಯನು ಜಲಜ ನೇತ್ರರೆ ನೀವು
ಛಲವ ಸಾಧಿಸಿದಂಥ ಚೆಲುವರಾಯನಿಗೆ ಪ

ರೇಣುಕಾಸುತ ಕ್ಷೋಣಿಪಾಲಕರ ಕೊಂದು
ಕಾಮಧೇನುವಿನ ಆಶ್ರಮ ಸ್ಥಾನದಿ ತಂದಾ ೧

ಹತ್ತೇಳು ಒಂದು ಅಕ್ಷೋಹಿಣೀ ಸೈನ್ಯ
ಹತ್ಯೆ ಮಾಡುತ್ತ ರಕ್ತದ ನದಿಯನು ಸುತ್ತಹರಿಸಿದವಗೆ ೨

ವಂದ್ಯ ಮಹಿಮನೆ ಇಪ್ಪತ್ತೊಂದು ಬಾರಿಲೆ ಕ್ಷಾತ್ರ
ವೃಂದವನಳುಹಿದ ಇಂದಿರೇಶನಿಗೆ ೩

## ೪೭

ಮಂಗಳಾರತಿ ಎತ್ತಿರೀತಗೆ ಮಾನಿನೀಯರು ಹರಿಗೆ ಪ

ಕೃಷ್ಣಗೆ ಮಾನಿನೀಯರು ಕಂಗಳಿಂದಲೆ ನೋಡಿ
ಸುಖಿಸಿ ಕಮಲಮುಖಿಯರು ಅ.ಪ.

ಕಿರೀಟ ಕುಂಡಲ ಹಾರ ಪದಕ ಧರಿಸಿ ಕುಳಿತಿಹಾ
ಪದಕ ಧರಿಸಿ ಕುಳಿತಿಹಾ
ಸರಸಿಜಾಕ್ಷನೊಳ್ಪಜನನೆ ಹರುಷ ಕೊಡುತಿಹಾ ೧

ಕಡಗ ಕಂಕಣ ವಂಕಿ ನಾಗಮುರಿಗೆ ಪೊಳೆವುದು
ನಾಗಮುರಿಗೆ ಪೊಳೆವುದು
ಜರದಗೊಂಡೆ ತಾಯತ ಮುತ್ತು ಸಿರಿಯು ತೂಗೊದು ೨

ಕಾಲಕಡಗ ರುಳಿಯು ಗೆಜ್ಜೆ ಸಾಲು ಚರಣದಿ
ಗೆಜ್ಜೆ ಸಾಲು ಚರಣದಿ
ಭಾಳ ದನಿಯ ಮಾಡುತಿಹುದು ಕೇಳಿ ಕರ್ಣದಿ ೩

ಕನಕ ವಸನ ಹೀರ ಕಾಂಚಿ ಕಟಿಯ ತಟದಲಿ
ಕಾಂಚಿ ಕಟಿಯ ತಟದಲಿ
ಮಿಂಚಿನಂತೆ ಮಿನುಗುತಿಹದೊ ನೋಡಿ ಸುಖದಲಿ ४

ಬೊಟ್ಟು ಹಿಡಿದು ಬಾಲನಿಂದ ಚರಿಸಿದಂದದಿ
ಹಿಡಿದು ಬರಿಸಿದಂದದಿ
ಕೃಷ್ಣ ವಿಷ್ಣು ಜಯದ ಸಿರಿಯು ಕೃಷ್ಣ ಜನ್ಯದೀ ೫

ತ್ವರದಿ ಪಾರ್ಥ ರಥದಿ ಕುಳಿತು ತುರಗ ನಡೆಸುವಾ
ಪಾರ್ಥನ ತುರಗ ನಡೆಸುವಾ
ಕರದಿ ಕರವ ಪಿಡಿದು ಹಯದ ಷಣಶ ತಿರುಗುವಾ ೬

ಧರಣಿಪಾಲರ ನೋಡಿ ಆಯುಷ್ಯ ಹರಣ ಮಾಡಿದ
ಆಯುಷ್ಯ ಹರಣ ಮಾಡಿದ
ಧುರದಿ ಪಾರ್ಥನ ಹೆಸರು ಮಾಡಿ ಹರಿಯ ನಡೆಸಿದಾ ೭

ಹರಿಯು ಮುಖವ ನೋಡಿ ರಾಜರು ಹರುಷಬಟ್ಟರು
ರಾಜರು ಹರುಷಬಟ್ಟರು
ಮುಖವ ದಯದಿ ಮೋಕ್ಷದ ಸಿರಿಯನುಂಡೆಯೋ ೮

ನಂದಬಾಲ ನಿನ್ನ ಮುಖವ ಎಂದು ನೋಡುವೆ
ಮುಖವ ಎಂದು ನೋಡುವೆ
ಇಂದಿರೇಶ ಮನದಿ ನಿತ್ಯ ತಂದು ಸುಖಿಸುವೆ ೯

## ೪೮

ಮಂಗಳಾರತಿ ಮಾಡಿರೇ ಶೃಂಗಾರದ ಸಿರಿಗೇ ಪ

ಮಂಗಳ ಮುಖಪದದಿಂದ ಪಾಡುತಲೆ
ಪೊಂಗೊಳಲೂದುವನಂಗ ಜನಕಗೇ ಅ.ಪ.

ಹೆಂಗಳೆಯ ರಕ್ಷಿಸುವವಗೆ ಸುಮನಂಗಳಯುತನು
ಭಂಗಾರಾಭರಣಂಗಳಿಟ್ಟಿಹನು ಭೃಂಗಾವಳಿಯುತನು
ಕಂಗಾಳಿಂದಲೆ ನೋಡುತಲಿಹನು ಮನ ಮೋಹಿಸುತಿಹನು
ಮಂಗಳ ಮಹಿಮಹಹೆಂಗವದನ ನಿಜ ಸಂಗ ಕಾಮದಾ–
ನಂಗ ಜನಕ ಬೆಳದಿಂಗಳೆಸನ ಕ್ರೂರಂಗ ವೈರಿ
ಭ್ರೂ ಭೃಂಗ ಚದುರ ಭವ
ಸಂಗಹೀನ ನರಸಿಂಗ ಕೂಪ ಜಂಗುಳೇಂದ್ರ
ಯದೋಪಾಂಗ ವೇದ ಮದ
ಗಂಗ ಜನಕ ವೃಜಭಂಗ ಮಾತುಳನ
ಮುಂಗುರುಳ್ಹಿಡಿದೆಳೆದನು ಸಂಗರದೊಳಗೇ ೧

ಮರುಗ ಮಲ್ಲಿಗೆ ಚಂಪರಗಳನು ಕುರುಬಕ ಕುಟಿಜವನು
ಸುರಗಿ ಸೇವಂತಿಗೆ ಕೇತಕೆಗಳನು ಸರಸಿಜ ಬಕುಳವನು
ಪರಿಮಳಾ ತುಳಸಿ ಮಾಲೆಗಳಾನು
ಕೊರಳೊಳಗಿಟ್ಟಿಹನು ಕೊರಳೊಳಗಿಟ್ಟಿಹನು
ಸುರಗಿ ಪದಕ ಕಂದರಮಣಿಧರ ಸುವರ್ಣ
ಕಾಂಚಿಕಟಿ ಕರದಿ ಕಂಕಣದಿ
ಮುರಗಿ ತೋಡೆ ಮಣಿ ಜರದ ವಸನಾ
ಬೆರಳಿಗುಂಗುರ ಕರ್ಣ ಕುಂಡಲ
ಗುರುಳು ತಿಲಕ ಭ್ರೂಸ್ವರ್ಣಚಾಪ ಶುಭಸಿರಿ ವಕ್ಷಸುಂದರ
ಮುಖ ನಾಸಿಕ ಧರ ಉಪವಳ ಗೋಕುಲಧರಗಿಳಿಗೇ ೨

ಇಂದಿರೇಶನು ಬಂದಿಹನಿಲ್ಲೆ ಚಂದಿರ ಬಿಂಬದಲೇ
ದ್ವಂದ್ವ ಸುಕೇಶ ಗಿರಿವರದಲ್ಲೇ ನಿಂದಿಹ ತೀರದಲೇ
ವೃಂದಾರಾಕಾರ ಕೂಡಿಹನಿಲ್ಲೆ
ಭೂವೈಕುಂಠದಲೆ ಭೂವೈಕುಂಠದಲೆ
ಕಂಧರಧರ ಅರವಿಂದ ನಯನ ಮುದದಿಂದ ರಂಜಿಸುತ
ಚಂದ್ರಮೌಳಿ ದಿವಿಜೇಂದ್ರ ವಿನುತ ನಾರದ ಮುನಿನುತ
ಗಂಧರ್ವರಪ್ಸರದಿಂದ ನರ್ತನಾದಿಂದ ಸಂಸ್ಕೃತ
ಮಂದ ಸುಗುಣಸಿಂಧು ಪಾಂಡವರ ಗೋ–
ವಿಂದ ಸಚ್ಚಿದಾನಂದಮೂರ್ತಿ ಮುಚುಕುಂದ ವರದಗೇ ೩

## ೪೯

ಮಂಗಳವೆನ್ನಿ ಮುಖದಲೆ ಜಯಾ
ಮಂಗಳಾರತಿಗಳ ಎತ್ತಿ ಕರದಲೇ ಪ

ಮಂಗಳ ಶ್ರೀನಿವಾಸನಿಗೆ ಜಯ
ಮಂಗಳ ತದ್ವಕ್ಷವಾಸಿ ಲಕ್ಷುಮಿಗೆ
ಮಂಗಳ ಸರಸಿಜ ತನುಜಗೆ ಜಯ
ಮಂಗಳ ಮೂರವತಾರ ಮೂರುತಿಗೆ ೧

ಮಂಗಳ ವಾಣಿ ಭಾರತಿಗೆ ಜಯ
ಮಂಗಳ ಗರುಡಹ ಪಾರ್ವತೀಶ್ವರಗೆ
ಮಂಗಳ ಷಣ್ಮಾಹೇಶರಿಗೆ ಜಯ ೨

ಮಂಗಳ ನಾರದ ಮುನಿಗೆ ಜಯ
ಮಂಗಳ ರಾಘವೇಂದ್ರಾಯ ಯತಿಗೆ
ಮಂಗಳ ದಾಸಮಂಡಳಿಗೆ ಜಯ
ಮಂಗಳ ಇಂದಿರೇಶನ ಭಜಕರಿಗೆ ೩

## (ಈ) ಬಾಲಕೃಷ್ಣಲೀಲೆ

### ೫೦

ಅಣ್ಣ ಬಲರಾಮನ ಸ್ತುತಿ

ಚಂದ್ರವಾರಿಧಿಮಣಿ ನಂದನ ರೋಹಿಣಿ
ಸುಂದರ ರವಿ ಸಮಾ ವಂದಿಪೆ ನಿಮಗೆ ಪ

ಮೂಲಪುರುಷ ಯದು ಬಾಲಕೃಷ್ಣಗೆ ಹಾರ
ಬಾಲ ಭೂಷಣ ಹರಿ ಬಾಲ ಸೋದರನೆ ೧

ಅಂಗದ ಕಪಿವರನಂಗಜ ರಾಘವ
ಅನಂಗಾ ನಾರಿಗಳು ಉತ್ತುಮಾಂಗನ ಸಖನೆ ೨

ಈಶ ಮನಸ ದೋಷ ಧೀಶ ಕಳೆದು
ಇಂದಿರೇಶನಲಯತವ ತೋಷಿಸು ಪ್ರಭುವೆ ೩

### ೫೧

ಅಂಜಬ್ಯಾಡಂಜಬ್ಯಾಡವೋ ಭೂನಂದಸೂನು ಪ

ಅಂಜಬ್ಯಾಡಂಜಬ್ಯಾಡ ಕರುಣನಿಧಿಯೆ
ಸಂಜೆ ಮುಂಜಾನಿಲ್ಲೆ ಬಾರೋ ಮಂಜುಳಾದ ಕಥೆಯ ಪೇಳ್ವೆ ಅ.ಪ.

ಪಾಂಡುತನಯನಂತೆ ನಿನ್ನ ಭಂಡಿ ಬಾಹು ಕನ್ನೆಮಾಡಿ
ಕಂಡ ಕಂಡ ಕಾರ್ಯದಲ್ಲೆ ದಂಡಿಸುವುದು ಎನ್ನೊಳಿಲ್ಲ ೧

ಗೋಪಿಯಂತೆ ಸೊಂಟದಲ್ಲೆ ತ್ರಾಪಿ ಹಗ್ಗಗಳನೆ ಕಟ್ಟಿ
ಶ್ರೀಪತಿಯ ಒರಳಿಗ್ಹಾಕಿ ಆಪರಿಂದ ಕಟ್ಟೋಣಿಲ್ಲ ೨

ಜಾರ ಚೋರನಂತೆ ನಿನ್ನ ನಾರೇರಂತೆ ವ್ಯಾಸಮುನಿಯ
ಮಾರಿಗ್ಹಾಕಿ ವಾರ್ತೆಯನ್ನು ದೂರೋಣಿಲ್ಲ ಜಗದಿ ಸ್ವಾಮಿ ೩

ಮಂದಗಮನೆ ಮೋಹಕಾಗಿ ಚಂದ್ರಮೌಳಿಯಂತೆ ಬೆಣ್ಣೆ
ಹಿಂದೆ ಮುಂದೆ ಓಡಿಸಿಂದು ದಣಿಸೋಣಿಲ್ಲ ಶ್ರೀಶಕೃಷ್ಣ ೪

ಇಂದಿರೇಶ ಎನ್ನ ಹೃದಯ ಮಂದಿರದೊಳಿಟ್ಟುಕೊಂಡು
ಚಂದ ಚಂದ ಕಥೆಯ ಪೇಳ್ವೆ ನಂದತನಯ ನೊಂದಿಸುವೆನು ೫

## ೫೨

ಅಕ್ಕ ಕೊಳಲನೂದುವ ಸುಂದರನ್ಯಾರೇ ಅಕ್ಕ ಪ

ಸುಂದರನ್ಯಾರೇ ನೋಡೋಣ ಬಾರೆ ಅ.ಪ.

ಅಮ್ಮಮ್ಮಾ ಮಾರನಸ್ತ್ರವ ತಾಳಲಾರೆವೆ ಅಕ್ಕ
ಬೊಮ್ಮನ ಪಿತನಂತಃಕರಣಿರಲೇ ಅಕ್ಕ ೧

ಪತಿಯು ನಮ್ಮನು ಬಿಟ್ಟರೆ ಬಿಡಲೇ ಅಕ್ಕ
ರತಿಪತಿ ಪಿತನ ದಯವು ಇರಲೇ ಅಕ್ಕ ೨

ಮನೆ ಧನವೆತ್ತ ಪೋದರೆ ಪೋಗಲೇ ಅಕ್ಕ
ಮನಸಿಜ ಪಿತನ ದಯವು ಇರಲೇ ಅಕ್ಕ ೩

ಕಂದರ ಎತ್ತಲಾರೆವು ನಾವು ಕೇಳೇ ಅಕ್ಕ
ಕಂದರ್ಪ ಸುತನ ಕರೆದು ತಾರೇ ಅಕ್ಕ ೪

ನೀರೆ ಪೋಗೋಣು ನಡಿ ಆ ವನಕೆ ಅಕ್ಕ
ಮಾರಸುಂದರನ ನೋಡುವುದಕ್ಕೆ
ಇಂದಿರೇಶನ್ನ ಕರೆತರುವುದಕ್ಕೆ ೫

## ೫೩

ಆರಮ್ಮ ಮುರಲಿಯನೂದುವನು
ಮಾರ ಸುಂದರ ಸುಖ ಸಾರುವ ಜಗಕೆ ಪ

ಪುಂಡರೀಕಾಕ್ಷನು ಹಿಂಡುಗೋವ್ಗಳ ಕಾಯ್ದು
ಕಂಡ ಕಂಡವರನ್ನು ಕರೆಯುತಾನೆ
ಚೆಂಡು ಬಗರಿ ಗೋಲಿ ಗುಂಡುಗಳನೆ ಕಟ್ಟಿ
ತಂಡ ತಂಡವಾಗಿ ಪೋದನಮ್ಮ ೧

ತಾಯಿ ಕಟ್ಟಿರುವಂಥಾ ತೋರ ಬುತ್ತಿಯ ಗಂಟು
ತೂಗುತ ಯಮುನೆಯ ತೀರದಲ್ಲೇ
ತೋರ ಉಪ್ಪಿನಕಾಯಿ ಬುತ್ತಿಗಳನೆ ತಿಂದು
ತೀರಿದವರಿಗೆಲ್ಲಾ ತಾ ಕೊಡುವಾ ೨

ಇಂದಿರೇಶನು ಕೊಟ್ಟ ತಿಂದ ಉಪ್ಪಿನಕಾಯಿ
ಆನಂದಬಟ್ಟರು ಗೋಪನಂದನರು
ಹಿಂದಿನ ಪುಣ್ಯವು ಬಂದೊದಗಿತು ಎಂದು
ತಿಂದ ಎಂಜಲನಿಟ್ಟ ಇಂದಿರೇಶ ೩

## ೫೪

## ಬಾಲಕೃಷ್ಣ

ಇಂದುವದನೆ ಎನ್ನ ಕಂದನ ನೋಡೆ ಪ

ಮಂದಿರದೊಳಗೆಷ್ಟು ಚಂದದಿಂದಾಡುವನೆ ಅ.ಪ

ದೃಷ್ಟಿ ಮಾಲೆಯ ಕಟ್ಟಿಪೆ ಕೊರಳೊಳು
ದೃಷ್ಟಿ ಆಗುವುದಲ್ಲೆ ಪುಟ್ಟ ನಮ್ಮಪ್ಪನಿಗೆ ೧

ನಗುವನು ಬೆಳದಿಂಗಳ ಹಗಲೆ ಬಂದಿಹುದೇನೆ
ನಗುತ ನಿಂತಿರುವ ಸುಗುಣವಂತನ್ನ ಎನ್ನ
ಬಗಲೊಳಗೆತ್ತಿಕೊಂಬುವೆನೆ ೨

ತುಡುಗನೆಂಬುವರಲ್ಲೆ ಮಡದೇರು ಊರೊಳು
ಕೊಡ ಕೊಡ ದಧಿ ಪೇಯ ಪಿಡಿಯನು ಒಂದಿನಾ ೩

ಅಂಗಿ ಕುಂಚಿಗಿ ಹಾಕಿ ಶೃಂಗರಿಸುವೆನು
ಅಂಗಳದೊಳಗೆಷ್ಟು ಮಂಗಳ ತೋರುವನೆ ೪

ಕೂಸಿನಿಂದಲೆ ಗೋಷ್ಟ ಭೂಷಿತವಾಗಿದೆ
ಸಂತೋಷಿಸುತ ಇಂದಿರೇಶನು ನಲಿವನು ೫

## ೫೫

ಇಷ್ಟು ದಿನ ಇಂಥ ಸುಖ ಕಾಣಲಿಲ್ಲ
ಕೃಷ್ಣ ಈ ದಿನ ನೋಡಿ ತುಷ್ಟನಾದೆನೊ ದೇವಾ ಪ

ಆಟಗಳು ಸುಖವಲ್ಲ ಕೃಷ್ಣ ನೋಟಗಳು ಸುಖವಲ್ಲ
ಪಾಠಗಳು ಸುಖವಲ್ಲ ಕೂಟವಲ್ಲ
ತೋಟದೊಳು ರವಿಸುತನ ಕೂಟದೊಳು ಗೋಪಿಯರ
ಆಟಕದ ಕೊಳಲೂದೊ ನೋಟ ಸ್ಮರಣೆಗೆ ತರುವೆ ೧

ಏನು ಸೌಂದರ್ಯವೊ ಕೃಷ್ಣ ಏನು ಸೌಭಾಗ್ಯವೊ
ಧೇನುಪಾಲನ ನೋಟಕಾಶ್ಚರ್ಯವೊ
ನಾನು ಒಲ್ಲೆನು ಸೀದಾ ಆಣೆ ಮಾಡುವೆನೀಗ
ಧೇನು ಮುಖ ಸಮ ತೋರಿ ಧ್ಯಾನ ತಪ್ಪಿಸೋ ಜಗದಿ ೨

ನಿಂದು ಕೊಳಲನು ಕರದಿ ಇಂದು ಬಾಯೊಳಗಿಟ್ಟು
ಮಂದಹಾಸವ ಮಾಡುತಿಂದಿರೇಶ

ಕಂದರ್ಪಸಮರೂಪದಿಂದ ನೋಡುವೆನೀಗ
ಸಿಂಧುನೊಳು ಮುಳುಗಿದೆನು ನಂದಬಾಲಕನೆ ೩

## ೫೬

ಉದ್ಧವನು ಯಮುನೆಗೆ ಪೋಗುವಾಗ
ಗದ್ದಲವ ಕೇಳಿದನು ಗೋಪನಾರಿಯರ ಪ

ಎದ್ದು ಗೋಪಿಯರೆಲ್ಲ ಮುದ್ದು ಮುಖವನೆ ತೊಳೆದು
ತಿದ್ದಿ ತಿಲ್ಕವನಿಟ್ಟು ಬಾಲ್ಯದಲ್ಲೆ
ಶ್ರದ್ಧೆಪೂರ್ವಕ ಹರಿಯ ಪದ್ಮಂಗಳಿಗೆ ನಮಿಸಿ
ಉದ್ಧಾರ ಮಾಡೆಂದು ಪ್ರಾರ್ಥಿಸಿದರು ೧

ಅಂಗಳಕೆ ಥಳಿಹಾಕಿ ರಂಗವಾಲಿಯನಿಕ್ಕಿ
ಮಂಗಳಾತ್ಮಕ ದೀಪ ಮನೆಯ ಮುಂದ
ತೆಂಗುಬಾಳೆ ಸ್ತಥ ಫಲಂಗಳ್ಹೊಸ್ತಲಿಕಿಟ್ಟು
ರಂಗಗರ್ಪಿತವೆಂದು ನುಡಿದಲಾಗ ೨

ಮಂದಗಮನಿಯರೆಲ್ಲ ಸುಂದರಾಂಬರವುಟ್ಟು
ಚಂದ್ರಕುಪ್ಪಸಗಳನು ತೋಳಿಲಿಟ್ಟು
ಛಂದಾದ ವಾಲೆ ಸರಪಣಿಯಾ ಕಿವಿಯಲಿಟ್ಟು
ಮಂದಹಾಶ್ಯದಿ ಮುಖದಿ ಮುಖರೆನಿಟ್ಟು ೩

ಕಾಲಿಕಾಲ್ಕಡ್ಗ ರುಳಿಯು ಘಾಲು ಪೈಝಣ
ಕಾಲುಂಗ್ರಗಳು ಪಿಲ್ಲೆ ಕಾಲಿನಲ್ಲೆ
ಸಾಲುಗೆಜ್ಜೆಗಳುಳ್ಳ ಮೇಲೆ ಕಾಂಚಿಯನುಟ್ಟು
ಮುಕ್ತಮಾಲೆಗಳು ಕೊರಳಲ್ಲೆ ಲೋಲಪದಕ ೪

ಕಂಕಣವು ಕರದಲ್ಲಿ ವಂಕಿ ತಾಯಿತ ಭುಜದಿ
ಬಿಂಕದಿಂದಲೆ ಮಂಲಿ ಹೆರಳ್ಹಾಕಿ
ಅಂಕೆಯಿಲ್ಲದ ಸರ್ವಲಂಕಾರಗಳನಿಟ್ಟು
ಪಂಕಜಾಕ್ಷನ ಮನದಿ ಸ್ಮರಿಸಿದ ೫

ಲೋಲಾಕ್ಷಿ ಗೋಪಿಯರು ಭಾಳ ವಸ್ತ್ರಗಳಿಟ್ಟು
ಲೋಲ ಲತೆಯಂತೆ ಬಳುಕಾಡುತ
ಮಾಲೆ ಹೆಗಲ್ಹಾಡುತಿರೆ ಮೇಲೆ ಸ್ವರಗಳನೆತ್ತಿ
ನೀಲವರ್ಣನ ಮಹಿಮಿ ಪಾಡಿದರು ೬

ಬಂಗಾರದ ತಬಕಿನಲಿ ಮಂಗಳಾರುತಿಯೆತ್ತಿ
ಶೃಂಗಾರ ಪದಗಳನೆ ಪಾಡುತಲೆ
ರಂಗು ನೀಲದ ರತ್ನದುಂಗುರವು ಬೆರಳಲ್ಲೆ
ರಂಗಗಾರತಿ ಬೆಳಗಿ ಬೇಡಿದರು ೭

ಮಸರನೆಲ್ಲವನಾಕಿ ಹೊಸ ಪಾತ್ರೆಯಲಿ ಮಂತ
ಹೊಸದು ಹಗ್ಗವ ಕಟ್ಟಿ ಕಡಿಯುವಾಗ
ಶಶಿಮುಖೀಯರೆಲ್ಲ ಕುಸುಮನಾಭನ ಚರಿತೆ
ಉಸುರುತಲೆ ಕಂದರ್ಪ ಶರಾದರತಿ ೮

ಘಿಲ್ಲು ಘಿಲುಕೆಂದು ಮೈಯ್ಯಲ್ಲಿ ವಸ್ತ್ರದ ಶಬ್ದ
ಪುಲ್ಲಾಕ್ಷಿಯರು ಕಡಿದ ಮಥನ ಶಬ್ದ
ನಲ್ಲೆರ್ಹಾಡುವ ಕಂಠದಲ್ಲೆ ಗಾಯನದ ಶಬ್ದ
ಎಲ್ಲ ಶಬ್ದವು ಸ್ವರ್ಗ ೯

ನಿಂತು ನಿಜಕರದಿಂದ ಮಂತಧಾಮವ ಪಿಡಿದು
ಕಂತುಪಿತ ಕೃಷ್ಣನ್ನ ಪಾಡುತಲೆ
ಕಾಂತೆರೆಲ್ಲರು ಮಸರು ಕಡೆವ ಶಬ್ದವ ಕೇಳಿ
ಭ್ರಾಂತಿಯಲಿ ಉದ್ಧವನು ನಿಂತನಲ್ಲೆ ೧೦

ಅವರ ಭಕುತಿಯ ನೋಡಿ ಅನುದಿನದಿ ಉದ್ಧವನು
ಅವರ ಪಾದದ ಧೂಳಿ ಸ್ವೀಕರಿಸಿದ
ಅವರರುಹದೊಳಗೆನ್ನ ಆಗಲುದಯವು ಎಂದ
ಅವರೊಳಗೆ ಅವರಂತೆ ಅನುಕರಿಸಿದ ೧೧

ಇಂಥ ಪರಿಯಲಿ ಗೋಪಕಾಂತೆ ಕಾಲಾಪಗಳು
ನಿಂತು ನೋಡುತ ತನ್ನ ಮೈಯ್ಯ ಮುರಿದ

ಭ್ರಾಂತನಾಗುತಲೆ ಅವರಂತೆ ಮಥನವ ಮಾಡಿ
ಅವರಂತೆ ಕರಗಳ ಮಾಡಿ ನಲಿದು ಕುಣಿವ ೧೨

ಎರಡು ಸಾಲಲಿ ದೀಪ ಕರಗಳಂಬಾರಗಳು
ತುರವು ತರಿಸುವ ದನಿಯು ಮಥನ ಶಬ್ದ
ಸರಸಿಜಾಕ್ಷಿಯರೆಲ್ಲ ಗಾಯನ ಮಾಡುವ ಶಬ್ದ
ಬೆರಗಾಗಿ ಕೇಳಿದನು ಪರಿಹರುಷದಿ ೧೩

ಕುಂದ ಮಲ್ಲಿಗೆ ಜಾಜಿ ಪಾರಿಜಾತಾಂಬುಜವು
ಮಂದಾರ ಮರವು ಕೇತಕಿ ಬಕುಳವು
ನಂಧವರ್ತಾದಿ ಸುಮದಿಂದವೆರಡು ಸಾಲು
ಮಂದಿರದ ಮಂದ ಸುಗಂಧಡಗಿತು ೧೪

ಸರಸಿಜಾಕ್ಷಿಯರೆಲ್ಲ ಪರಮಪುರುಷನ ಸ್ಮರಿಸಿ
ಸುರಿಸುತಲಿ ಕಣ್ಣೀರು ಪರವಶದಲೇ
ಸೆರಗು ಬೀಳಲು ಹೊರದೆ ಹೆರಳ ಮಾಲೆಯ ಮರೆದು
ಬರೆದ ಚಿತ್ರಗಳಂತೆ ಪರಿಯಾದರು ೧೫

ವಾರಿಜಾಕ್ಷಿಯರ್ಹರಿಯ ಧ್ಯಾನಮನದಲಿ ಕೃಷ್ಣ
ಸಾರ ಸುಂದರ ಮೂರ್ತಿಯಳೆ ಕಾಣುತ
ಮದ ಜಾನಕನ ಮಾತನಾಡುತ ಮನದಿ
ಪಾರುಗಾಣದೆ ಸುಖದ ವಾರಿಧಿಯೊಳು ೧೬

ಮನೆಯ ಹಂಬಲವಿಲ್ಲ ಮಾವನಂಕೆಯಿಲ್ಲ
ಮೊದಲೆಯಿಲ್ಲ ಅತ್ತಿ ಪತಿಗಳಂಜಿಕೆ
ಮಾರಜನಕನ ಕೂಡ ಮೈಯ್ಯಕೈಯನ ಮುರಿದು
ಮಾಧವನೆ ಪಾಲಿಸೆಂದೊದರಿದಾರು ೧೭

ಮಂದಜಾಕ್ಷರು ಮಾಳ್ಪ ನಂದಬಾಲನ ಕಥೆಯ
ಆನಂದದಲಿ ಕೇಳಿ ಉದ್ಧವನು
ಇಂದಿರೇಶನ ಚರಣ ದ್ವಂದ್ವ ಸ್ಮರಿಸುತ
ಮಧುರೆಲ್ಹಿಂದ ಬಂದ್ಹೇಳಿದನು ನಂದಸುತಗೆ ೧೮

## ೫೭

ಎಂದಪ್ಪಿಕೊಂಬೆ ರಂಗಯ್ಯನ ಎಂದಪ್ಪಿಕೊಂಬೆ ಪ

ಎಂದಪ್ಪಿಕೊಂಬೆನೋ ಎಂದು ಮುದ್ದಾಡುವೆ
ನಂದ ಕಂದನ ಗೋವಿಂದನೆಂಬುವ ಕೂಸ ಅ.ಪ.

ಕರದಲಿ ತನ್ನಯ ಬೆರಳು ಬಾಯೊಳಗಿಟ್ಟು
ಜುರು ಜುರು ಚೀಪುವ ವರಮುದ್ದು ಬಾಲನ ೧

ಗುರುಳು ಮಧ್ಯದಿ ರತ್ನ ಅರಳೆಲೆ ಹೊಳೆಯುತ
ಜರದ ಕುಂಚಿಗೆ ಹೊದ್ದು ಚರಿಸುವ ಕೂಸಿನ್ನ ೨

ಪುಟ್ಟ ಪುಟ್ಹೆಜ್ಜೆಯನಿಟ್ಟು ಗೋಕುಲದೊಳು
ತುಷ್ಟಿ ನೀಡಲು ಬಾಲಕೃಷ್ಣನೆಂಬುವ ಕೂಸ ೩

ಬಾಲೆರ ಮನೆಪೊಕ್ಕು ಪಾಲುಮೊಸರು ತಿಂದ
ಲೀಲೆ ಮಾಡುತ ಅಂಬೆಗಾಲನಿಕ್ಕುವ ಕೂಸ ೪

ಕಾಲಕಡಗ ರುಳಿಯ ಪೂಲು ಪೈಜಣನಿಟ್ಟು
ಮ್ಯಾಲೆ ಉಡುದಾರ ಪೊಳೆವಂಥ ಕೃಷ್ಣನ ೫

ತಂದೆ ತಾಯರ ಮುಂದೆ ನಿಂದು ಮಾತಾಡಿದ
ನಂದ ಬಾಲಕನಾದ ಇಂದಿರೇಶನೆ ಬೇಗ ೬

## ೫೮

## ಇಂದಿರೇಶ ಭಾಗವತ

ಎಂದು ಬರುವನು ಇಲ್ಲೆ ಮಂದಸೂನನು
ನಮಗೆ ಮುಂದೆ ಗತಿಯೇನುದ್ಧವಾ
ಒಂದು ಕಾರ್ಯವು ಬಾರದಂದಿನಾದಿ
ಈಶ ಸುರಸುಂದರನು ಪೋದನಲ್ಲೋ ಉದ್ಧವಾ ಪ

ಸರಿ ರಾತ್ರಿಯೊಳು ಯಮುನೆ ಸರಿತ ತೀರದಿ ನಿಂತು
ಮುರಲಿ ಊದಿದನುದ್ಧವಾ
ಶರಣದೊಳು ಪತಿ ಸುತರ ಪರಿಚರಿಸುತಿಹ ನಮ್ಮ
ಮರುಳು ಮಾಡಿದನುದ್ಧವಾ ೧

ತೊರೆದು ಮನೆ ಧನಗಳನೆ ಬರಲು ಬಳಿಯಲಿ ಭಾಳ
ತರಲಿ ಮಾಡಿದನುದ್ಧವಾ
ಅರಿಯಲಿಲ್ಲವೊ ನಾವು ಸಿರಿಯರಸ ಇವನೆಂದು
ಪರಿಮೋಹಿಸಿದೆವುದ್ಧವಾ ೨

ಮರುಗ ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ
ತುರುಬಿನೊಳಗಿಟ್ಟುದ್ಧವಾ
ಸರಸ ಸೌಂದರ್ಯಕ್ಕೆ ಮರುಳಾದನಿವನೆಂದು
ಗರುವ ಮಾಡಿದೆವುದ್ಧವಾ
ಅಂತು ನಮ್ಮನು ಬಿಟ್ಟು ಮರೆಯಾಗಿ ರೋಧಿಸಲು
ಭರದಿ ಬಂದನುದ್ಧವಾ ೩

ಕೋಲು ಕುದುರೆಯನೇರಿ ಬಾಲಕರ
ಕೂಡಿ ತಾ ಕೇಳಿ ಮಾಡಿದನುದ್ಧವಾ
ಲೀಲೆ ಚತುರರ ಸದೃಶ ಬಾಲೆಯರ
ಕೂಡಿ ತಾ ಕೋಲನಾಡಿದನುದ್ಧವಾ ೪

ಕಾಲಿನೊಳು ರುಳಿಗೆಜ್ಜೆ ಕರದಿ ಕಂಕಣ
ವಂಕಿ ಶೀಲ ಸುಂದರನುದ್ಧವಾ
ಪಾಲು ದಧಿ ಬೆಣ್ಣೆ ನಮ್ಮಾಲಯದೊಳು
ತಿಂದು ಭಾಳ ಮೋಹಿಸಿದನುದ್ಧವಾ ೫

ಸುಖಿಸಿದನುದ್ಧವಾ ಉರಗರಾಜನ ತುಳಿದು
ಮಡದಿ ನುಡಿಸಲು ಡಾನು ಗರಳ ಹರಿಸಿನುದ್ಧವಾ
ಉರಿಯ ನುಂಗುತ ಮುಖದಿ ಬೆರಳೊಂದು

ಹತ್ತೊಂದು ವರುಷ ಇಲ್ಲಿದ್ದುದ್ಧವಾ
ಅರಿಯಲಿಲ್ಲವೊ ನಾವು ಸಿರಿಯರಸ ಇವನೆಂದು
ಪರಿಮೋಹಿಸಿದೆವುದ್ಧವಾ ೬

ಒಂದಿನಾದರೂ ಒಮ್ಮೆ ಮನದಿ ಗೋಕುಲದವರ
ಇಂದು ಸ್ಮರಿಪನೆ ಉದ್ಧವಾ
ಚಂದ್ರ ವದನೇರ ಸ್ನೇಹ ಕೂಡಿ ಪುರದೊಳು ನಮ್ಮ
ನಿಂದು ಮರೆತನೆ ಉದ್ಧವಾ ೭

ಬಂದು ಬಳಗವ ಬಿಟ್ಟು ಮಧುರೆಗೆಲ್ಲರು
ನಿನ್ನ ಹಿಂದೆ ಬರುವೆವೊ ಉದ್ಧವಾ
ಕಂದರ್ಪ ಪಿತನಿವನ ಸ್ಮರಿಸುತಲೆ ದೇಹದಿ
ಪ್ರಾಣವೊಂದೇ ಉಳಿದಿಹುದುದ್ಧವಾ ೮

ಪರಮ ವೈಕುಂಠನು ಸರತಿಯಲೆ ತೋರಿಸುತ
ಮರುಳು ಮಾಡಿದನುದ್ಧವಾ
ಗಿರಿಗಿರಿ ಝರಿಯೊಳಗೆ ಚರಿಸಿ ಚಿನ್ನದ ಚರಯ
ಗುರುತು ಮಾಡಿದನುದ್ಧವಾ
ಅರಿಯಲಿಲ್ಲವೋ ಸಿರಿಯರಸ ಇವನೆಂದು
ಪರಿಮೋಹಿಸಿದೆವುದ್ಧವಾ ೯

## ೫೯

ಎತ್ತಿಕೊಂಡ್ಹೋಗುವೆನೆ ಈ ಕೂಸಿನ್ನ ಎತ್ತಿಕೊಂಡ್ಹೋಗುವೆನೆ ಪ

ಎತ್ತಿಕೊಂಡ್ಹೋಗುವೆ ಮುತ್ತಿನಂಥಾ ಕೂಸು
ಹತ್ತಲಿ ಬರುವುದು ಚಿತ್ತಬಿಟ್ಟಗಲದು ಅ.ಪ.

ಗುಂಡು ಬಿಂದಲಿ ಕೈಯೊಳು ಮುತ್ತಿನ ದಿವ್ಯ ಚೆಂಡು
ಪಿಡಿದ ಬಿಡನು

ಹಿಂಡು ಬಾಲರ ಕೂಡಿಕೊಂಡು ಆಡುವ ಕೂಸು
ಇಂಥ ಕಂದನ್ನ ಪಡೆದಿಯೇನೇ ಗೋಪಮ್ಮ ನೀ ೧

ಕಾಲ ಕಡಗರುಳಿಯು ಕಾಲೊಳಗಿಟ್ಟು ನೀಲ ಮಾಣಿಕ ಗೆಜ್ಜೆಯು
ಭಾಳ ಕಡೆಗೆ ಪೋಗಿ ಲೋಲಾಡುವ ದೃಷ್ಟಿ
ಮಾಲೆಯನ್ಹಾಕಿ ತಾರೆ ಗೋಪಮ್ಮ ೨

ಅರಳೆಲೆನಿಟ್ಟಿಹದು ಮುಂದಲೆಯಲ್ಲಿ ಜರದ ಕುಂಚಿಗೆ ಇಹುದು
ತೆರದ ಕಣ್ಣು ಮುಚ್ಚಿ ತೆರೆದು ನೋಡುತಲಿದ್ದ
ಎರೆದು ಮಲಗಿಸಿದೆಯೇನೆ ಗೋಪಮ್ಮ ನೀ ೩

ಎಷ್ಟು ಜನ್ಮದ ಪುಣ್ಯವು ಬಂದೊದಗೀತ ಪುಟ್ಟಿದೆ ಇಂಥ ಕೂಸು
ಪುಟ್ಟ ಬಾಲಗೆ ಉಮ್ಮಕೊಟ್ಟು ಬಟ್ಟಲಿ ನಾನು
ದೃಷ್ಟಿಯು ಮುರಿಯುವೆನೇ ಗೋಪಮ್ಮ ನಾ ೪

ಮಂದಿ ಕೈಯಲಿ ಕೊಡೆನೆ ಈ ಕೂಸಿನ್ನ ತಂದು ಕೊಡುವೆನೆ ನಾನು
ಇಂದಿರೇಶನ ಬಿಟ್ಟು ನಿಂದಲಾರದ ಮನ
ಇಂಥ ಕಂದನ್ನ ಪಡೆದಿಹೆನೆ ಗೋಪಮ್ಮ ನೀ ೫

## ೬೦

ಎಷ್ಟು ಸುಸ್ವರ ಊದುತಿಹನಮ್ಮ
ಶ್ರೀಕೃಷ್ಣ ಕೊಳಲನ ಪ

ಎಷ್ಟು ಸುಸ್ವರ ಊದುತಿಹನೋ ಗೋಷ್ಠಿಯೊಳು ಗೋವುಗಳ
ಕಿವಿಗಳು ನೆಟ್ಟನಿಲ್ಲಿಗೆ ಕೇಳಿ ಮೋದದಿ ಕಟ್ಟಿದೆಲೆ ಕಣ್ಣಿಗಳ
ಹರಿವವೊ ಅ.ಪ

ತರಣಿ ತನುಜನ ತೀರದಲ್ಲಿಹನೆ ಕೊರಳೊಳಗೆ ಕೌಸ್ತುಭ
ಹರಳಿನಿಂದ ಜಗವ ಬೆಳಗುವನೆ ಕುರುಳು ಕುಣಿಸುತ
ಬಾಲಬಿಂಬದಿ

ಕರ್ಣಕುಂಡಲ ಗಂಡ ಸುಪ್ರಭ ಮರುಳು ಮಾಡುತ
ಮೂರು ಲೋಕವ
ಸಿರಿಯ ಮೋಹಿಪ ಪರಮ ಪುರುಷನು ೧

ಚರಣದೊಳು ಭೂಷಗಳ ನುಡಿಸುವನೆ ಕಟಿಯಲ್ಲಿ ಕಾಂಚನ
ಜರದ ಪೀತಾಂಬರವ ಹೊದ್ದವನೆ ಕರದಿ ಕಂಕಣ ವಂಕಿ
ಉಂಗುರ
ಹರಳು ಕೆತ್ತಿದ ಸರಿಗೆಸರ ನಗ ಮುರಿಗೆ ತೋಡೆ ಸುಹಾರ
ಭೂಷಿತ
ಉರದಿ ಕುಳಿತಿಹ ಸಿರಿಯ ಮೋಹಿಪ ೨

ಅರಗೀಮನೆ ಬಾಂಧವರು ಬೇಕೆ ನಿಜ ಪತಿಗಳೆಮ್ಮನು
ಮೀರಿ ಪೋದರು ಅಂದರೆನಲೇಕೆ ಮಾರನಯ್ಯನ ಮುರಲಿ
ಸುಸ್ವರ
ಸಾರಿ ಮನಸಪಹಾರ ಮಾಡಿತು ನಾರಿ ಮಣಿಯರೆ ಕ್ಷಣವು
ತಡೆಯದೆ
ವಾರಿಜಾಸನ ವನಕೆ ತೆರಳಿರೆ ೩

ಎಷ್ಟು ಜನ್ಮದ ಪುಣ್ಯವಿರುತಿಹದೆ ಈ ಮುರಲಿ ಬಾಲನ
ಪುಟ್ಟತುಟಿಯಲಿ ಸುಧೆಯ ಸುರಿಸುವದೇ
ಸೃಷ್ಟಿರವ ಬಳ್ಳಿಮನದಲಿ ವೃಷ್ಟಿಹಿಡಿಸದೆ ಕುಸುಮಫಲಗಳು
ವೃಷ್ಟಿಯಿಂದಲೆ ಹೊರಗೆ ಚೆಲ್ಲುತ ಅಭೀಷ್ಟೆ ಸುರಿಸುತ
ಪೇಳುತಿಹವೊ ೪

ಅರುಣನಂದಧಿ ಅದರ ಸೌಭಗವೊ ವನ ನಿಲಯ ಮೃಗಗಳು
ತೊರೆದು ವೈರವ ಸುತ್ತು ನಿಂತಿಹವೋ ಹರುಷದಲೆ ಮನ
ತೊರೆದು ನಿಲ್ಲಲು ಇಂದಿರೇಶನ
ತರುಣಿಯರು ಪೋಗೋಣ ನಡೆಯಿರಿ ೫

## ೬೧

ಎಷ್ಟು ಚಲುವರೋ ರಾಮಕೃಷ್ಣರೆಷ್ಟು ಚಲುವರೊ
ಎಷ್ಟು ಚಲುವರಿವರ ಶಿರದಿ ಬಿಟ್ಟ ಜುಲುಪಿ ಕೇಶ ಚಂದ
ಪುಟ್ಟ ಬಾಲಕಾರು ಕೂಡಿ ಗೋಷ್ಟದೊಳಗೆ ಚಲಿಸಿದಾರೊ ಪ

ನಿನಗು ಇದ್ದವೋ ಈ ಜುಲುಪಿ ನಿನ್ನನುಜಗಿದ್ದವೊ
ಮುನಿಯ ಕೂಡಿ ಪೋಗುವಾಗ ವನದಿ ನಾಲ್ಕು ಹತ್ತು ವರುಷ
ಜನತೆಗಾದ ನಯನ ಸುಖದ ಘನತೆ ನೀನು ತಿಳಿದು ಪೇಳೋ ೧

ಬಹಳ ಶೂರನೋ ತಥೋಪಿ ಧೈರ್ಯಶೀಲನಾಮನೋ
ಶೂಲ ಪಾಣಿ ಧನದ ಭೂಮಿ ಪಾಲು ಸಾಧಿಸಿ ಮುರಿದು ನಿಂತ
ಬಾಲಕೃಷ್ಣ ಶತ್ರುಗಣದಿ ಬಾಲೆಯೆತ್ತಿಕೊಂಡು ಪೋದ ೨

ಸತ್ತ ಕಪಿಗಳಾ ನೋಡದಲೆ ವನದೊಳಿತ್ತಿ ಅಸ್ತುಗಳು
ಮೃತ್ಯುಪೊಂದಿ ಬಹಳ ಕಾಲ ಎತ್ತಜೀವ ಎತ್ತಕಾಯ
ಪುತ್ರ ವೃತ್ತಿ ಮಾತೆ ಗುರು ಸುಪಾತ್ರರನ್ನು ಸುಖಿಸಿದಾರು ೩

ಪಿತೃನಾಜ್ಞದಿ ನೋಡುತಲೆ ವನದೊಳ್ಪೆತ್ತೆ ಮಾಡಿದೆ
ಮತ್ತ ಆನೆಯಮಲ್ಲ ಕಂಸನೊತ್ತಿ ತುಳಿದು ಮಧುರೆಯಲ್ಲಿ
ಹತ್ತು ಒಂದು ವಯದ ಬಾಲ ಮುತ್ಯಾ ಮಾತೆಯರನು ಕಾಯ್ದ ೪

ಕೂಸುಪಿಡಿಯಿತು ಪೂಥಣಿಯ ಮೊಲೆಯ ತಾಸು ತಿಂದಿತು
ಈ ಶರೀರದೊಳಗೆ ತಾಟಕಾಸುರೀಯ ಕೊಂದ ಇಂದಿರೇಶ
ಅದ್ಭುತಾವದಿದರೊಳಾರು ಪೇಳೊ ದಾಶರಥಿಯೆ ೫

## ೬೨

ಏನು ಚತುರನಮ್ಮಾ ಧೇನುಪಾಲಾ
ಸಾನುರಾಗದಿ ನಮ್ಮ ಮಾನಿನಿ ಕರೆದ ಪ

ನನ್ನ ಕರೆವ ನೋಡೆ ನಿನ್ನ ಕರೆವ ನೋಡೆ
ಅನ್ಯ ಗೋಪಿಯರನೆಲ್ಲ ಕರೆಯುತಾನೆ
ಮನ್ಮಥನಂಘ್ರಿ ಇನ್ನು ಬಿಟ್ಟಿರಲಾರೆ
ಸನ್ನುತಾಂಗಿಯರೆಲ್ಲ ಸಾಗಿ ಬನ್ನಿ ೧

ವೇಣುಸ್ವರವು ತಮ್ಮ ಮಾನಸದೊಳು ತುಂಬಿ
ಕಾನ ಮೇಲೆ ಮಾಡಿ ಕೇಳುತಾವ
ಖಾನ ಪುಲ್ಲನೆ ಬಿಟ್ಟುವ ವೃಂದಗೋಷ್ಟದಿ ನಿಂತು
ಸ್ಥಾನದೊಳಗೆ ಕಣ್ಣಿ ಕೀಳುತಾವ ೨

ಇಂದಿರೇಶನೆ ರವಿನಂದನೆ ತೀರದಿ
ಇಂದು ನೋಡದೆ ಸ್ಥಾನ ಪೊಂದಿತಂದು
ಸುಂದರ ಸುರಿಯೋಳು ಇಂದು ಪಿಡಿದು ಪೋಗಿ
ಆನಂದವಾಲನ ಮುಖ ಕಾಂಬೋಣಮ್ಮಾ
ಆನಂದವಾಲನ ಮುಖ ನೋಡೋಣಮ್ಮಾ ೩

## ೬೩

ಏನು ಹಾವಳಿ ಮಾಡುತಿಹನಮ್ಮ ಗೋಪಮ್ಮ ಕೇಳೆ
ಏನು ಹಾವಳಿ ಮಾಡುತಿಹನಮ್ಮ ಪ

ಏನು ಹಾವಳಿ ಮಾಡುತಿಹ
ಮನೆ ಓಣಿಯಲಿ ಕ್ರೀಡಿಸುವ ಮಕ್ಕಳನು
ತಾನು ಅಳಿಸುವ ಹಿಡಿಯ ಪೋಗಲು
ವೇಣುನೂದುತ ಮೋಹಿಸುವನು ಅ.ಪ.

ಮನಿಯೊಳು ತಾ ಪೊಕ್ಕು ನೋಡುವನೆ ಪಾಲ್ನೊಸರ ಕೊಡಗಳ
ಮನಸಿನಂದದಿ ತಿಂದು ಒಡೆಯುವನೆ
ತಿನಿಸಿ ಬೆಕ್ಕಿಗೆ ಕ್ಷಣವು ತಡೆಯದೆ ವನಿತೆರೆಲ್ಲರು ಹಿಡಿಯ ಕೂಸಿನ
ತನುವು ಧರಿಸಿ ನಿಂತ ಕಟಿಯಲಿ ಸ್ತನವ ತಿಂಬುವ ವನರುದೇಕ್ಷಣ ೧

ತರುಗಳಾಲಯದಲ್ಲಿ ತಾ ಬರುವ
ಕರೆಸದಲೆ ಮುಂಚಿತ ತೋರಿಸಿ ಮೊಲೆಗಳ ಪಾಲ ತಾ ಕುಡಿದ
ಕರಸಿಕೊಳ್ಳದೇ ಸುರಭಿ ತಿರುಗಲು
ಸರಣಿಯೊಳು ತಾ ನಿಂತು ನಗುತಲಿ ತರುಣಿಯರ ಹೆರಳ್ಹಿಡಿದು
ಜಗ್ಗುತ ಕರದಿ ಸಿಗದಲೆ ಭರದಿ ಓಡುವ ೨

ಕೂಸಿನಂದದಿ ತೊಡೆಯೊಳಾಡುವನೆ ಕ್ಷಣದೊಳಗೆ ಪತಿಗಳ
ವೇಷಧರಿಸಿ ಮೋಸ ಮಾಡುವನೆ
ತಾಸು ಘಳಿಗೆ ಬಿಡದೆ ನಮ್ಮ ನಿವಾಸ ಮಾಡುತ ಕಾಡುತಿಹ
ಇಂದಿರೇಶವಚ್ಛವ ಸಾಕು ಮಾಡು ಹೇ ಶುಭಾಂಗಿ ೩

## ೬೪

ಏನು ಹೇಳಲಿ ಕೂಸಿನ ಚರ್ಯ
ಮಾನಿನಿ ಉಳಿದದ್ದ ಆಶ್ಚರ್ಯ ಪ

ಪುಟ್ಟಿದೇಳನೆಯ ದಿನವೆ ಬಾಲಗ್ರಹ ಬಂದು
ಎಷ್ಟು ಕಾಡಿದಳು ನಮ್ಮಪ್ಪನ
ಸೃಷ್ಟಿಪಾಲಕ ಸಿರಿವಿಷ್ಣು ದಯದಿಂದ
ಕಷ್ಟ ಕಳೆದು ನಮ್ಮ ಕೂಸು ಉಳಿದಿತೇ ೧

ಒಂದು ಮಾಸದ ಕೂಸು ಅಂದು ಬಂಡಿಯ ಕೆಳಗೆ
ಹೊಂದಿಸಿ ಮಲಗಿಸಿದ್ದೆನೇ ನಾನು
ಅಂದು ಹಸಿದು ಮುಖದಿಂದ ಬೆರಳನೆ ಚೀಪಿ
ಬಂಧ ಕಳೆದು ಹೀಂಗೆ ಬದುಕಿತೇ ೨

ದುಷ್ಟತನವು ಬಹಳ ಎಂದು ಒರಳಿಗೆ
ಕಟ್ಟಿಹಾಕಿದೆ ಇವನ ಒಂದಿನಾ
ಬೆಟ್ಟದಂತೆರಡು ಮರಗಳು ಬೀಳಲು ಮಧ್ಯ
ಪುಟ್ಟ ನಮ್ಮಪ್ಪ ಹ್ಯಾಂಗೆ ಬದುಕಿತೆ ೩

ಅಂಗಳದೊಳಗೆ ಆಡುತ ಕುಳಿತಿದ್ದ ಕೂಸಿನಾ-
ಮಂಗಳಾ ಫಾಳಿ ಬಂದೊಯಿತೆ
ಅಂಗನೇರೆಲ್ಲರೂ ಅಳುತ ಕೂತೇವಲ್ಲೆ ನರ-
ಸಿಂಗನಾ ಕರುಣದಿಂದುಳಿದಿತೆ ೪

ನೀರು ಕುಡಿದು ಯಮುನೆ ಮೇಲೆ ಆಡಲು ಕೂಸು
ಘೋರ ಪಕ್ಷಿಯು ಬಂದು ನುಂಗಿತೆ
ಪೋರರೆಲ್ಲರು ನೋಡಿ ಗಾಬರಿಯಾಗಲು ಮತ್ತೆ
ಕಾರಿತವನ ಬಕ ಸೋಜಿಗವೆ ೫

ಕತ್ತೆಗಳನು ಕೊಂದು ತಾಳಫಲವು ಗೋಪ-
ಪುತ್ರರಿಗೆ ಉಣ್ಣ ಕೊಟ್ಟಿಹನಂತೆ
ಚಿತ್ರಚರಿತನ ನಂದಬಾಲನ ಚರಿತೆ ಏಕಾ-
ವೃತದಿಂದಲಿ ಪೇಳಲಳವೇನೆ ೬

ಕರುಗಳ ಕಾಯುತಿರಲು ವತ್ಸವೇಷದಿ
ದುರುಳನೊಬ್ಬನು ಬಂದಿಹನಂತೆ
ಅರಿಯದಾ ಕೂಸಿನಾ ಕಾಲ್ಹಿಡಿದು
ಬೆರಳ ಮರದ ಮೇಲಕ್ಕೆ ತೂರಿದನಂತೆ ೭

ಏಳೇ ವರ್ಷದವ ಕೇಳೆ ಗೋವರ್ಧನ
ಏಳು ದಿವಸ ಎತ್ತಿದನಂತೆ
ಬಾಳುವ ಗೋಪಿಯರ ಪಾಲನೆ ಮಾಡಿದ
ನೀಲವರ್ಣನ ಎಷ್ಟು ವರ್ಣಿಸಲೆ ೮

ಬಾಲನಾದರು ನಿನ್ನ ಹಾಳು ದೈತ್ಯನ ಕೊಂದು ಬ-
ಹಳ ಕುತ್ತುಗಳಿವೆ ಕೇಳಿದೇನೆ
ಬಾಲಕರಿಬ್ಬರು ಲೋಲರಿಬ್ಬರು ನಮ್ಮ ಬಾಲಕರೇನೇ ಸ್ವರ್ಗ
ಪಾಲನು ಇಳೆಯೊಳು ಉದಯಿಸಿದನೇ ೯

ಮಂದಗಮನೆ ಎನ್ನ ಕಂದನಾಟಗಳನ್ನು
ಮಂದಿಯ ದೃಷ್ಟಿಯ ಭಯದಿಂದ ನಾನು

ಒಂದೂ ಹೇಳದೆ ಹೀಗಾನಂದ ಬಡುವೆನು ನಾನು
ಚಂದ್ರವದನೆ ರೋಹಿಣಿ ಕೇಳೆ ೧೦

ಮುಂದೆ ಬಿದ್ದ ಕುರುಳು ಹಿಂದೆ ಮಾಡುತ ಗೋಪಿ
ಕಂದನಾ ಮುದ್ದಿಸುತ್ತಿಹಳು
ಇಂದಿರೇಶನ ಚರಿತೆ ಒಂದೊಂದು ರೋಹಿಣಿಗೆ
ಇಂದು ಹೇಳುತ ಗೋಪಿ ಸುಖಿಸುತಿಹಳು ೧೧

## ೬೫

ಏನು ಹೇಳಲಿ ನಾ ಧೇನುಪಾಲಕನ
ಆನನವ ತೋರಿ ಧ್ಯಾನ ಹಚ್ಚಿಹನು ಪ

ಸುತ್ತ ತಿರುಗುವಾಗ ಹತ್ತಿರಕೆ ಬಂದು
ಚಿತ್ತ ಸುಖಿಸಿ ಪೋದ ಮುತ್ತಿನಂಥ ಬಾಲ ೧

ಸಣ್ಣ ಕಂದನೆಂದು ಚಿನ್ನಾಭರಣನಿಟ್ಟು
ಬೆನ್ನಿನ್ಹಿಂದೇ ಬಂದು ತನ್ನ ತೋರಿದನು ೨

ನಂದಬಾಲಕನ ಎಂದು ಕಾಂಬೆನೆಂದು
ನಂದು ಮನಸ್ಸು ಹರಿವುದು ಇಂದಿರೇಶ ಕೃಷ್ಣ ೩

## ೬೬

ಏಳು ಬೆಳಗಾಯಿತು ಬಾಲಕೃಷ್ಣ
ಬಹಳ ಮಕ್ಕಳು ನಿನ್ನ ಕೇಳುತಿಹರೋ ಪ

ಬರುವಿ ಮನೆಯೊಳಗೆಂದು ಕರೆದು ಪಾಲನು ರುಚಿರ
ತರುಣಿಯರು ಬಚ್ಚಿಟ್ಟು ಶರಣದೊಳಗೆ
ಸರಸ ಮೊಸರನೆ ಕಡೆದು ತ್ವರದಿ ಬೆಣ್ಣೆಯ ತೆಗೆದು
ಮರೆಮಾಡಿ ಮೂಲೆಯೊಳು ಸುರಿಸುತಿಹರೊ ೧

ತುರುವುಗಳಿಗೆ ಸಣ್ಣ ಕರುವುಗಳನೆ ಬಿಟ್ಟು
ಕರೆದುಕೊಂಬುವರಿನ್ನು ಪುರದ ಜನರು
ತ್ವರದಿ ಕಣ್ಣನೆ ತೆರೆದು ಒಳಹೊರಗೆ ನೋಡುವರು
ಅರುಣ ಉದಯಾಗಿಹುದು ತರಣಿ ಬಂದಾ ೨

ಏಸು ಪುಡುಗರು ನಮ್ಮ ವಾಸದೆದುರಿಗೆ ನಿಂತು
ಘೋಷದಿಂದಲೆ ವತ್ಸರಾಶಿ ತುರುವಾ
ಕೂಸೆ ಕರೆವರು ನಿನ್ನ ಭೂಷಿಸುವೆ ಬೇಗೇಳು
ತಾಸು ಹೊರಗ್ಹೋಗಿ ಇಂದಿರೇಶ ಬಾ ಬೇಗ ೩

## ೬೭

ಒಂದಾನು ಒಂದು ದಿನ ಶಿಂಧುವಿನೊಳ್ ನೆರೆದು ಬಂದಾರು
ದೇವತೆಗಳು
ವೃಂದಾವು ದುಷ್ಟ ಜನರಿಂದಾಲೆ ಭೂಮಿ ನೊಂದಾಳು
ಎಂದುಸುರಿತಾ ಪ

ಕಂದರ್ಪತಾತ ನಿನಗೊಂದಿಸಿ ಬೇಡುವೆನು ಛಂದಾದ
ಸೂರ್ಯಸುತನಾ
ಮಂದಿರದೋಳ್ ಜನಿಸಿ ನಂದಾದಿ ಗೋಕುಲದಿ ನಿಂದಾತ್ಮ
ಲೀಲೆ ತೋರೊ ಅ.ಪ.

ಅಂದಾಡಿದೂತ ಸುರವೃಂದಾರ ವಾಕ್ಯಗಳ ಕಿವಿಯಿಂದಾಲೆ
ಕೇಳಿ ಹರಿಯು
ಛಂದಾದಿ ನೀವುಗಳು ಮುಂದಾಗಿ ಜನಿಸುವದು ಹಿಂದಾಗಿ
ನಾ ಜನಿಸುವೇ
ಅಂದಾಡಿದಂಥ ಹರಿ ಸುಂದರಾ ಮಾತವನು ತಂದಾನು
ಬ್ರಹ್ಮ ಮನದೀ
ಇಂದ್ರಾದಿಗಳಿಗೆಲ್ಲ ಅವನಂದದ್ದು ಪೇಳೆ ನಿಜ
ಮಂದಿರಕ್ಹೋಗಿರೆಂದಾ ೧

ಎಲ್ಲಾ ಅಮರರೂ ನಿಜವಲ್ಲಾಭಿಯರು ಸಹ ಅಲ್ಲಲ್ಲೆ
ಜನಿಸುತಿಹರೂ
ಫುಲ್ಲಾಕ್ಷತಾ ಮಥುರೆಯಲಿಟ್ಟು ಗೋಕುಲದಿ ಮೆಲ್ಲಾನೆ
ಬೆಳೆಯುತಿರಲು
ಅಲ್ಲಿದ್ದ ಗೋಪಿಯರು ಯಲ್ಲಾರು ತಾವು ನಿಜ
ವಲ್ಲಾಭೆರೆಂದು ಹರಿಯೋಳ್
ಎಲ್ಲಾನು ಬಿಟ್ಟು ಅವನಲ್ಲಿಗೆ ಸ್ನೇಹವನು ಉಲ್ಲಾಸ
ಮಾಡುತಿರಲು ೨

ಇಂದೀವರಾಕ್ಷ ಇಹ ಬಂದಾ ಸುರೇಂದ್ರಗಣ ನೊಂದಾನು
ಒಂದು ಬಿಡದೇ
ವೃಂದಾವನಾದಿ ತನನಂಥಾ ದಿನಗಳೆಲ್ಲ ಒಂದೊಂದೇ
ಲೀಲೆ ತೋರಿ
ಇಂದ್ರಾನ ಗರ್ವಕಳೆದಿಂದೆತ್ತಿ ಪರ್ವತವ ಒಂದಂಗುಲಿಯಲ್ಲಿ
ಧರಿಸೀ
ಮುಂದೇಳು ದಿವಸ ವ್ರಜ ಮಂದೀಯ ಕಾಯ್ದು ಕರ
ವೃಂದಾವನದಲ್ಲಿಳುಹಿದಾ ೩

ವಂದೀನ ರಾತ್ರಿ ರವಿನಂದಿನಿಯೋಳ್ ಹರಿಯು
ನಿಂದೂದಲಾಗ ಕೊಳಲು
ವೃಂದಾದರಾಗಗಳಿಂದಾಲೆ ಕೇಳಿ ವ್ರಜದಿಂದಾ
ವರಾನಿಹರೂ
ಮಂದೀರದೊಳಗೆ ನಿಜ ಕಂದಾರು ನಾಥಗಳು ಛಂದಾದ
ವಸ್ತ್ರಂಗಳು
ವಂದಾನು ನೋಡದಲೆ ವಂದಾರು ಯಮುನೆಯಲಿಂದಾರು
ಮೈಯ್ಯ ಮರೆತು ೪

ಬಂದೇವು ನಾವು ನಿಜ ಮಂದೀರ ಬಿಟ್ಟು ನಿಮ್ಮ ಸುಂದರ
ಕೊಳಲ ಧ್ವನಿಗೇ

ಛಂದಾದ ಸ್ಮರಣೆ ಸುಖದಿಂದಿತ್ತು ನಮಗೆ ದ್ವಿಜೇಂದ್ರೇತ
ಕಾಯೋ ಯನಲು
ಅಂದಾವರಾಮಾತು ನಂದಾನುಸೂನ ದಯದಿಂದಾಲೆ
ಕೇಳಿ ಹರಿಯೂ
ಮುಂದಣಿಯಾಗ ಅವರಿಂದಾಲೆ ಕೂಡಿ ದಯದಿಂದಾಲೆ
ನಲಿದು ಮರೆದೂ ೫

ಬಂದಾನು ಮಥುರೆಯಲಿ ಕೊಂದಾನು ಮಾತುಳನೆ
ತಂದೀಯಾ ಬಂಧನವ ಬಿಡಿಸೀ
ಸಾಂದೀಪಗಿತ್ತು ಕಂದಾನಸೂನ ಕುರು ನಂದಾರ
ಕೊಲ್ಲಿಸಿದನೂ
ಇಂದ್ರತ್ವ ಜ್ವಾಲೆಗಳೂ ಅಂತಿತ್ತು ರಾಜ ಸುಖ ಸಂದೇಹ ಸಂತೋಷದೀ
ಇಂದ್ರಾದಿ ಸರ್ವಸುರ ಸಂದೇಹ ಪ್ರಾರ್ಥಿಸಿದ ಒಂದೊಂದೆ
ಮಹಿಮೆಗಳನೂ ೬

ಛಂದಾಗಿ ಮಾಡಿದ್ವಶ ಮಡುಹಿಕರ ವೃಂದಾವ
ಪಾಲಿಸಿದನೂ
ನಂದಾತ್ಮ ಜಾತವು ಒಂದೊಂದೆ ಮಹಿಮೆಗಳ ತಂದೊಮ್ಮೆ
ಮನದಿ ಸ್ಮರಿಸೀ
ಬೆಂದಾವು ಪಾಪಗಳು ಬಂದಾವು ಸೌಖ್ಯಗಳು
ಸಂದೇಹವಿಲ್ಲನಿದರೋಳ್
ಕಂದಾರ ಕೊಡುವ ಧನ ವೃಂದಾವು ಪೊರೆವಾ
ಮಂದೀರವಿತ್ತು ಸಲಹುವ ೭

ಇಂದೆನ್ನ ಮಾನಸದಿ ತಂದಾತ್ಮ ರೂಪವನೂ
ಛಂದಾಗಿ ಸಂತೈಸಲೀ
ನಂದಬಾಲಾಷ್ಟಕವನೂ ಇಂದುವಾವರು ಪಠಿಸುವಾ
ಇಂದಿರೇಶನು ಪಾಲಿಸುವನೂ ೮

## ೬೮

ಓಡಿ ಓಡಿ ಬಾ ಅಂಕದೊಳಾಡೋ ಕೂಸೇ ಬಾ ಪ

ನೋಡುವೆ ನಿನ್ನ ರಾಮರ ಮುಖದಿ ಕೂಡಿ ಕರುಣಿಯೆ ಬಾ ಅ.ಪ.

ಚೆಂಡು ಕೊಡುವೆನು ಬಾ ಗೋಲಿಗುಂಡು ಕೊಡುವೆನು ಬಾ
ದುಂಡು ಕರದೊಳ್ ಗುಂಡು ಬಿಂದುಲಿ ಉಂಗುರ
ನೀಡುವೆ ಬಾ ೧

ಬೆಣ್ಣೆ ಕೊಡುವೆನು ಬಾ ಬಾಳೆಹಣ್ಣು ಕೊಡುವೆನು ಬಾ
ಸಣ್ಣ ಸಣ್ಣ ಹೆಜ್ಜೆನಿಕ್ಕುತ ಮನ್ಮಥಪಿತನೆ ಬಾ ೨

ನಾರಿವತ್ಸೆ ಬಾ ಮುತ್ತಿನ ಹಾರ ಹಾಕುವೆ ಬಾ
ಪಾರಿಜಾತ ಮುಡಿಸಿದ ರುಕ್ಮಿಣಿಧೀರ ಕೃಷ್ಣನೆ ಬಾ ೩

ಮುರಳೀಧರನೆ ಬಾ ಮುಂಗುರಗಳ ಭೂಷಿತ ಬಾ
ಪರಿಪರಿವಸ್ತ್ರವನಿಟ್ಟು ನೋಡುವೆ ಮರಳಿ ಮರಳಿ ಬಾ ೪

ನಂದನ ಕಂದನೆ ಬಾ ಮನಕಾನಂದಪಡಿಸುತ ಬಾ
ನಿಂದಿರಲಾರೆ ನಿನ್ನನು ನೋಡದೆ ಇಂದಿರೇಶನೆ ಬಾ ೫

## ೬೯

ಕಂಡ್ಯಾ ಕಂಡ್ಯಾ ಕಂಡ್ಯಾ ಕಂಡ್ಯಾ ಕಂಡ್ಯಾ ಕೂಸಿನ್ನ
ಚಂಡನಾಡುತಾಲೆ ಬಾಲೆರ್ಧಿಂಡು ಕೂಡಿ ಬಂದನಂತೆ ಪ

ದಂಡದಿಂದ ಚಿನ್ನಿ ಬಾಲೇರ್ಧಿಂದಿನೋಳು ಚಿಮ್ಮಿದನಂತೆ
ಕಂಡಕಂಡ ನಾರಿಯರೆಲ್ಲ ಪುಂಡ ಕೃಷ್ಣರೆಂಬರಂತೆ ೧

ದುಂಡು ಮುಖದೊಳಿಟ್ಟು ವೇಣುದಂಡವನೂದಲು ಕೃಷ್ಣ
ಹಿಂಡು ನವಿಲು ಪಕ್ಷಿಗಳು ಮಂಡಲ ಕಟ್ಟಿದವಂತೆ ೨

ದೃಷ್ಟಿಯಾದೀತೆಂದು ಕೂಸಿಗೆ ಎಷ್ಟು ಹೇಳಿದೆ ಮನೆ
ಬಿಟ್ಟು ಪೋಗಬ್ಯಾಡೆಂದರೆ ಕೃಷ್ಣ ಘಳಿಗೆ ನಿಲ್ಲವಲ್ಲ ೩

ಇಂದಿರೇಶ ಎನ್ನ ಮನೆ ಮುಂದಲಾಡೆಂದ್ಹೇಳಿದರೆ
ನಂದ ವ್ರಜದಿ ಪೊಕ್ಕು ಬಹಳ ದುಂದು ಮಾಡುವನು ಕೃಷ್ಣ ೪

## ೭೦

ಕೊಡು ತೊಡಿಯ ಮೇಲೆ ನೋಡು ಗಿಣಿಯು ತನ್ನ
ಗೂಡಿನೊಳಗೆ ಹ್ಯಾಂಗೆ ಆಡುತಲಿಹುದು ಪ

ಅತ್ತರೆ ನೀನು ಎನ್ನತ್ತಿರನಿರುವನು ಗುಮ್ಮಾ
ಪಟ್ಟಣದೊಳಗೆ ಪುತ್ರರನೊಯ್ಯುವನು ೧

ಓಡಿ ಬರುತಲುಣ್ಣು ಜೋಡು ಮಾವಿನ ಹಣ್ಣು
ನೀಡುವೆ ರಂಗಣ್ಣಿ ನೋಡು ಬಾ ಸಖಿಯೆ ೨

ಬುತ್ತಿ ಉಣ್ಣಿಸುವೆನು ವಕ್ರ ತೇಜಿಯನೇ ಎನ್ನ
ಹಿತ್ತಲ ಗುಬ್ಬಿಯೇ ಎನ್ನ ಹತ್ತಿರ ಕೂಡೋ ೩

ಪುಟ್ಟ ಮಗುವೆ ನೀರು ಗುಟುಕು ಕುಡಿದು ಉಣ್ಣು
ಕೊಟ್ಟು ಹೋಗೆಲೋ ಉಮ್ಮ ಅಷ್ಟು ಹುಡುಗರೊಳು ೪

ಕೂಸು ಪಡೆದವಳಿಂಥಾ ಏಸು ತಪಸು ಮಾಡಿ
ಬೇಸರಾಗದೆ ಇಂದಿರೇಶನ ಸಲಹುವಳು ೫

## ೭೧

ಕೊಳಲನೂದಿದ ಕೃಷ್ಣ ನಳಿನನಾಭಾ
ಎಳೆಯ ಗೋಗಳ ಕೂಡ ನಲಿದಾಡುವಾ ಪ

ಪುಂಡರೀಕಾಕ್ಷನು ಹಿಂಡು ಗೋಗಳ ಕೂಡೆ
ಕಂಡಕಂಡವರನ್ನು ಕರೆಯುತಲಿ
ಗುಂಡು ಗೋಲಿ ಬುಗುರಿ ಚಂಗುಳನೆ ಕಟ್ಟಿ
ಕೊಂಡು ಪೋದರು ತಂಡ ತಂಡವಾಗಿ ೧

ತಾಯಿ ಕಟ್ಟಿರುವಂಥಾ ಥೋರ ಬು
ತ್ತಿಯ ಗಂಟು ತೂಗುತ ಯಮುನೆಯ ತೀರದಲ್ಲಿ
ತಂದ ಉಪ್ಪಿನಕಾಯಿ ತಿಂದ ಎಂಜಲವನ್ನು
ತೀರಿದವರಿಗೆಲ್ಲ ತಾ ಕೊಡುತಾ ಇಂದಿರೇಶನು ೨

ಕೊಟ್ಟ ತಿಂದ ಉಪ್ಪಿನಕಾಯಿ
ಆನಂದ ಬಟ್ಟರು ಗೋಪನಂದನರು
ಹಿಂದಿಯ ಪುಣ್ಯವು ಬಂದೊದಗಿತು
ಹರಿ ತಿಂದ ಎಂಜಲನಿತ್ತಾ ನಂದಬಾಲಾ ೩

## ೭೨

## ಬಾಲಕೃಷ್ಣ

ಕೊಳಲನೂದುವ ಸುಂದರನ್ಯಾರೆ ತಂಗಿ
ಸುಂದರನಿವನೆ ಮಂದರೋದ್ಧರನೆ ಪ

ಪುರುಷರೂಪದಿ ಪಾಲುದಧಿ ಕಟಿದಾ ತಂಗಿ
ತರುಣಿರೂಪದಿ ಸುಧೆ ಸುರರಿಗಿತ್ತನು ತಂಗಿ ೧

ಸತಿಯಲ್ಲದಲೆ ಸುತರನು ಪಡೆದನು ತಂಗಿ
ಪತಿಯ ಕೂಡದ ಅಪ್ರತಿಮ ತರುಣಿ ತಂಗಿ ೨

ಮುಂಜಿ ಆಗದಲೆ ಮಕ್ಕಳ ಪಡೆದವ ತಂಗಿ
ಸಂಜೆ ಆಗದಲೆ ರಾತ್ರಿ ಮಾಡಿದ ತಂಗಿ ೩

ಅತ್ತೆಯಾ ಕಾಲಿಂದ ಪಡೆದಾನೆ ತಂಗಿ
ಚಿತ್ರ ಚರಿತ್ರೆ ವ್ರಜದೊಳಾಡಿದ ತಂಗಿ ೪

ವಾಸುದೇವ ಇಂದಿರೇಶ ಇವನ ತಂಗಿ
ಕೂಸು ತರುಣನಾಗಿ ಮೋಸ ಮಾಡಿದ ತಂಗಿ ೫

## ೭೩

ಕೊಳಲೇನು ಪುಣ್ಯವ ಮಾಡಿ ರಂಗನ ಬಳಿಗೆ ಬಂದಿತೇ ಪ

ನಳಿನ ನೇತ್ರೆಯರ ಮನಸು ಎಲ್ಲಾ ಸೆಳೆದು ಪೋದೀತೇ ಅ.ಪ.

ವನಜನಾಭನು ಯಮುನೆಯಲ್ಲಿ ಕೊಳಲನೂದುವ
ಮನಸು ನಿಲ್ಲದ ನಡೀರೆ ಪೋಗೋಣ ಕೇಳಿ ನಾದವ ೧

ನಂದಸುತನು ವೃಂದಾವನದಿ ನಿಂದು ಕೊಳಲನು
ಚ್ಛಂದದಿಂದಲಿ ಊದಿ ಕರೆವ ಇಂದು ಗೋವುಗಳ ೨

ಎಂಥ ರಾಗ ಮಾಡುವೋನು ಕಂತುಪಿತನು
ಅಂತರಂಗಕೆ ಸುಖವನಿತ್ತು ಭ್ರಾಂತಿಗೊಳಿಸುವ ೩

ಕಿರೀಟ ಕುಂಡಲ ಹಾರಪದಕ ಧರಿಸಿ ಕುಳಿತಿಹ
ಸರಸಿಜಾಕ್ಷಿಯರೆ ನೋಳ್ಪ ಜನಕೆ ಹರುಷ ಕೊಡುತಿಹ ೪

ಸಿರಿಯು ಬಂದು ಮುರಳಿಯಾಗಿ ಮರುಳು ಮಾಡುವನೆ
ಪರರಿಗಿಂಥ ಸುಖವುಂಟೆಂದು ಭ್ರಾಂತಿಗೊಳಿಸುವನೆ ೫

ಕುಂದ ಚಂಪಕ ಜಾಜಿ ಮಲ್ಲಿಗೆ ತಂದು ಮುಡಿಸಿದನೆ
ಇಂದಿರೇಶನು ಇಂದು ನಮ್ಮೊಳು ಸರಸವಾಡುವನೆ ೬

## ೭೪

## ಕೃಷ್ಣ

ಗೋಪಿ ಬಾಲನೆ ಬಹುಗುಣಶೀಲನೆ
ಗೋವಳಪಾಲನೆ ನೋಡುವೆ ಬಾ ಬಾ ಬಾ ಪ

ಗೋಪ ರೂಪನೆ ಪಾಪ ದೂರನೆ
ನೀಪದೊಳು ಕುಳಿತು ಗೋಪೇರ ವಸ್ತ್ರವ
ಶ್ರೀಪತಿ ನೀಡಿದಿ ಬಾ ಬಾ ಬಾ ೧

ಸಿಂಧು ಮಂದಿರ ಸುಂದರಾಂಬರ
ಮಂದಹಾಸವ ಮಾಡಿ ವಂದಾರುಗಳ ಮಾಡಿ
ಆನಂದದಿ ನೋಡುವೆ ಬಾ ಬಾ ಬಾ ೨

ದೋಷದೂರನೆ ವಾಸುದೇವನೆ
ಶೇಷಗಿರಿಯಲಿ ನಿಂತು ದಾಸ ಜನರಿಗೆಲ್ಲ
ಇಂದಿರೇಶನೆ ಕಾಯುವಿ ಬಾ ಬಾ ಬಾ ೩

## ೭೫

ಜೋ ಜೋ ಜೋ ಬಾಲಾ ಸುಂದರ ಲೀಲಾ ಪ

ತೊಟ್ಟಿಲೊಳಗೆ ನಿನ್ನ ಇಟ್ಟು ತೂಗುವೆ ರನ್ನ
ಗಟ್ಟಿ ಮುಚ್ಚುತ ಕಣ್ಣ ಪುಟ್ಟನೆ ಮಲಗಿನ್ನ ೧

ಗುಮ್ಮನು ಬಂದದ ಸುಮ್ಮನ ಮಲಗೆಂದು
ತಮ್ಮ ನಿನಗಿಂತೆಂದು ತಮ್ಮನೆಗ್ಹೋಗೆದ ೨

ಇಂದಿರೇಶನೀತಾ ನಂದಗೋಪನ ಪೋತ
ಸಿಂಧುರ ವರದಾತ ವೃಂದಕರಾರ್ಚಿತ ೩

## ೭೬

ತಂಗಿ ಕೊಳಲನೂದುವ ಸುಂದರನಿವನೇ
ತಂಗಿ ಕೊಳಲನೂದುವ ಸುಂದರನಿವನೇ
ಸುಂದರನಿವನೇ ಮಂದರಧರನೇ ಪ

ಪುರುಷರೂಪದಿ ಪಯೋಧಿಯ ಕಡೆದನೆ ತಂಗಿ
ತರುಣಿರೂಪದಿ ಸುಧೆ ಸುರರಿಗಿತ್ತನೆ ತಂಗಿ ೧

ಸತಿಯು ಇಲ್ಲದೆ ಸುತರನು ಪಡೆದನೆ ತಂಗಿ
ಪತಿಯು ಇಲ್ಲದೆ ಅಪ್ರತಿಮ ರೂಪನೆ ತಂಗಿ ೨

ಅತ್ತೆಯ ಕಾಲಿಲಿಂದಲೆ ಪಡೆದನೆ ತಂಗಿ
ಚಿತ್ರ ಚರಿತ ವ್ರಜದೊಳಗಾಡಿದನೆ ತಂಗಿ ೩

ಮುಂಜಿಯಾಗದೆ ಮಕ್ಕಳ ಪಡೆದನೆ ತಂಗಿ
ಸಂಜೆಯಾಗದೆ ರಾತ್ರಿಯ ಮಾಡಿದನೆ ತಂಗಿ ೪

ವಾಸುದೇವನು ಇಂದಿರೇಶನಿಗನೆ ತಂಗಿ
ಕೂಸು ತರುಣನಾಗಿ ಮೋಸಗೊಳಿಪ ತಂಗಿ ೫

## ೭೭

ತಂದುಕೊಟ್ಟಳು ವೀಳ್ಯ ಮಂದಗಮನೆ ಗೋಪಿ
ನಂದನವನ ನಿಧಿ ಆನಂದನ ಕರದಿ ಪ

ಮುತ್ತು ಬಿಗಿದ ನವರತ್ನದ ತಬಕದಿ
ಕೆತ್ತಿದ ಕಂಕಣ ಶೋಭಿತ ಉತ್ತಮ ಕರದಿ ೧

ನಾಗವಲ್ಲಿಯ ದಳಾ ಪುನುಗು ಪತ್ತರಿ
ಜಾಜಿ ಭಾಗ ಕಾದಿರೆ ನಾನಾ ಭೋಗ ದ್ರವ್ಯಗಳುಳ್ಳ ೨

ಭೂಷಿತಾಂಗಿಯು ಮಂದಹಾಸಾ ಮಾಡುತ ಇಂದಿ–
ರೇಶನೆದುರಲಿ ಇಭರಾಶಿ ಸುಂದರಿಯು ೩

## ೭೮

## ಬಾಲಕೃಷ್ಣ

ತುರುವು ಕಾಯಲು ಕಳುಹಿದಳು ತನ್ನ
ಬಾಲನ ಗೋಪಿಯು ಮುದ್ದಿಸುತಿಹಳು ಪ

ಕರೆದು ಪಾಲನು ಕುಡಿಸುತಿಹಳು ನಿಂಬು
ಪರಿಮಳುಪ್ಪಿನಕಾಯ ಬುತ್ತಿ ಕಟ್ಟಿದಳು
ಸುರಭಿಯ ಮೊಸರು ಬೆಣ್ಣೆಯನು ದೋಸೆ
ಸುರುಳಿ ಹೋಳಿಗೆ ಮಂಡಿಗೆಯ ಕಟ್ಟಿದಳು
ಸಂಡಿಗೆಯ ಕಟ್ಟಿದಳು ೧

ಕರುಗಳೆಲ್ಲ ಕೂಡಿಸಿದಳು ನಿನ್ನ
ಪರಿವಾರದವರು ಬಂದಾರೆ ನೋಡು
ನೀನು ಬಲರಾಮನು ಜೋಡು ಇಲ್ಲೇ
ಯಮುನಾ ತೀರದಲ್ಲಿ ಆಡೋ
ಹತ್ತಿರದಲ್ಲಿ ಆಡೋ ೨

ಕೂಸಿಗೆ ಕುಂಚಿ ಹೊಚ್ಚಿದಳು ಬಿದ್ದ
ಕೇಶಗಳೆಲ್ಲವು ತೀಡುತ್ತಲಿಹಳು
ಭೂಷಣಂಗಳ ಇಡುತಿಹಳು
ಇಂದಿರೇಶನ ಕೈಯ್ಯಲ್ಲಿ ಕೋಲು ಕೊಟ್ಟಿಹಳು
(ಮುರಲಿ) ಕೊಳಲ ಕೊಟ್ಟಿಹಳು ೩

## ೭೯

ತೋರಿದ ನಿಜರೂಪ ಶ್ರೀಕೃಷ್ಣ ಆಹಾ
ಗಾರ ಮಧ್ಯದಿ ವ್ರಜ ಚೋರ ಬಾಲಕನು ಪ

ಪೆಟ್ಟಿಗೆಯೊಳು ಕರವಿಟ್ಟು ಬೆಣ್ಣೆಯ ತೆಗೆ
ದಷ್ಟು ಇಷ್ಟನು ಮೆದ್ದು ಬೊಟ್ಟು ಚೀಪುವನು ೧

ಜರದ ಕುಂಚಿಗಿ ಗೊಂಡ್ಯಾ ಶಿರದಿ ತೂಗುತಲೆನ್ನ
ತಿರುಗಿ ತಿರುಗಿ ನೋಡಿ ಮುಚ್ಚದೆ ಪೋದನು ೨

ಇಂದು ತಿನ್ನುತಲಿಹ ಶ್ರೀಕೃಷ್ಣ
ಒಂದು ಎರಡು ವಯ ಇಂದಿರೇಶನ
ಕಂಡು ನಂದ ಭೋಗಿಪೆನು ೩

## ೮೦

ದುಂಡು ಮುಖವುಳ್ಳ ಹುಡುಗನ ಕಂಡಿರಾ
ಚಂಡನಾಡುತ ಬಂದ ಚದುರೆಯರ ಓಣಿಯಲಿ ಪ

ಕರದೊಳಗೆ ಕೊಳಲಿಹುದು ಚರಣದೊಳು ರುಳಿಗೆಜ್ಜೆ
ಕೊರಳೊಳಗೆ ಸರಪದಕ ಗುರುಳು ಮುಖದಿ
ಜರದೊಲ್ಲಿ ಹೊದ್ದಿಹನು ಸ್ಮರನ ಮೋಹಿಪ ರೂಪ
ಸಿರಿಯ ಕಂಡರೆ ಅವನ ಪರರು ಬಿಡರಮ್ಮ ೧

ವಾರಿಜಾಕ್ಷೆರೆ ಬಹಳ ಜಾರಚೋರೆನ್ನ ಮಗ
ವಾರೆನೋಟದಿ ಮನಸು ಹಾರಿಸುವನು
ಸಾರಿದರೆ ಮನೆಗಳಿಗೆ ದ್ವಾರಯಿಕ್ಕುತೆ ಬನ್ನಿ
ದೂರು ಪೇಳಲು ಕೇಳಿ ಸಾರಿದೆನು ಮೊದಲೆ ೨

ಕಂದನಾಗುವ ಕ್ಷಣದಿ ಒಂದೆ ಪ್ರಾಯದ ಪುರುಷ
ಸುಂದರಾಂಗಿಯಳಾಗಿ ಬರುವ
ನಂದಬಾಲನ ಮಹಿಮೆ ಬಂದು ನಂಬಲಿ ಬೇಡಿ
ಇಂದಿರೇಶನು ಬಹಳ ಮಂದಿ ಮೋಹಿಸುವ ೩

## ೮೧

## ಬಾಲಕೃಷ್ಣ

ನಡಿ ಬೇಗನೆ ಪೋಗೋಣ ವೃಂದಾವನ ಪ

ಪಾಡೋಣ ಯಶೋದೆಯ ಕಂದನ ಅ.ಪ.

ಎಲ್ಲ ಗೋಪೇರು ಮನಿಯಲ್ಲಿ ನಿಲ್ಲದೆ ಅವ–
ನಲ್ಲಿ ನಿಂತಿಹರು ನೋಡೋಣ ನಡಿ ೧

ಮುರಳಿಗಾನವ ಕೇಳಿ ಮರುಳಾಗಿದೆ ಮನ
ಸ್ಥಿರವ ಪೊಂದದು ಬಿಡುಮೌನ ನಡಿ ೨

ನಂದಸೂನು ಗಾನ ಇಂದು ಕೇಳುತ ಹೃದಯ
ಸಂದಿಸಿಹುದು ಸ್ಮರ ಬಾಣ ನಡಿ ೩

ಆರು ವಂದಿಸಲೇನು ಆರು ನಿಂದಿಸಲೇನು
ನೀರಜಾಕ್ಷನ ನೋಡೋಣ ನಡಿ ೪

ಇಂದಿರೇಶನ ಮುಖ ಮಂದಹಾಸವ ನೋಡಿ
ನಂದುತಿಹುದು ಭವ ಧ್ಯಾನ ನಡಿ ೫

## ೮೨

ನಿಲ್ಲ ಬಾ ನಿಲ್ಲ ಬಾ ಮೆಲ್ಲಮೆಲ್ಲನೆ ಹೆಜ್ಜೆನಿಟ್ಟು
ನಿಲ್ಲ ಬಾರೋ ಕೃಷ್ಣಾ ನಿಲ್ಲ ಬಾರೋ ಪ

ದುಷ್ಟ ಪೂತನಿಯ ದೊಡ್ಡ ಹೊಟ್ಟೆಯೊಳಾಡಿದಿ ಮಂದಿ
ದೃಷ್ಟಿ ತಾಕಿಹುದೊ ರಕ್ಷೆನಿಟ್ಟು ಮುದ್ದಿಸುವೆ ೧

ಆಲಯದಂಗಳದೊಳು ಲೀಲೆ ಮಾಡುವಿಯೊ ಕೆಟ್ಟ
ಬಾಲೆಯರ ಗಾಳಿ ಸೋಕಿಹುದೋ ಹಣ್ಣು ನಿವಾಳಿಸಿ
ಒಗೆವೆ ಕೃಷ್ಣ ೨

ಇಂದಿರೇಶ ನಿನ್ನ ಬಹುಮಂದಿ ನೋಡುವರೋ ದೃಷ್ಟಿ
ಇಂದು ಆಗಿಹುದೊ ಮಾಳ್ಪೆ ಕದಲಾರತಿಯ ಕೂಸೆ ೩

## ೮೩

ಪುಟ್ಟ ಬಾಲನೆ ಮನೆ ಕಟ್ಟೀಲಾಡೋ
ಕೆಟ್ಟ ಗೋಪರ ಮನೀಗ್ಹೋಗಬ್ಯಾಡಾ ಪ

ನಿನ್ನ ಮಗನು ಮೆದ್ದು ಬೆಣ್ಣೆ ಪಾಲ್ ಮೊಸರನೆ
ಉಣ್ಣೀಸುತಲೆ ಬೆಕ್ಕಿಗುಂಡನಮ್ಮ
ಸಣ್ಣ ಮಕ್ಕಳ ಕೈಯ್ಯ ಕಣ್ಣಿನಿಂದಲೆ ಕಟ್ಟಿ
ಓಡುತಲಿಹರಮ್ಮಾ ನೋಡೆಂಬರೋ ೧

ಕಂದಯ್ಯಾ ಗೋಪೆಯರ ಮಂದಿರಕ್ಹೋಗದೆ
ಇಂದು ಹುಟ್ಟಿದ ದಿನಾ ಎರಕೋ ಕೂಸ
ಮಂದಿರದೊಳು ವಿಪ್ರವೃಂದವ ಪೂಜಿಸಿ
ಛಂದಛಂದದ ವಸ್ತ ತಂದಿಡುವೆ ೨

ಮಂದಿ ಮಕ್ಕಳು ನೋಡು ಛಂದದಿ ತಮ್ಮನೆ
ಮುಂದಲೆ ಊರೊಳಗಾಡೆಂಬರೊ
ನಿಂದ ಧಾಂಧಲೆ ಭಾಳ ಬಂದು ಹೇಳುವರಲ್ಲೋ
ಇಂದೆಲ್ಲಿ ಪೋಗದಿರಿಂದಿರೇಶಾ ೩

## ೮೪

ಬಂದಾನೊ ನಂದಸುತ ಈ ಮಂದಿರದಿ ಪ

ಮುರಳಿಯನೂದುವನು ತುರುಗಳ ಕರೆಯುವನು
ಸರಸಿಜಾಕ್ಷರೆ ನಮ್ಮ ಶರಣರಂಗಳದೊಳು ೧

ತುರುಗಳ ಕಾಯುವನು ಸರಗಳ ಮುಡಿದಿಹನು
ಸರಣೀಯೊಳಗೆ ಮುದ್ದು ಚರಣವನಿಕ್ಕುತ ೨

ಅರಳೆಲೆ ತೂಗುವನು ಕೃಷ್ಣ ಅರಗಿಣಿಯಂತಿಹನು
ಹರುಷವ ಬಡಿಸುತವರ ಇಂದಿರೇಶನು ೩

## ೮೫

ಬಂದು ಕೂಡೋ ನಂದ ಬಾಲನೆ ಪ

ಬಂದು ಕೂಡೋ ನಂದ ಬಾಲನೆ ಇಂದು ಮುಖವ
ನೋಡಿ ಸ್ತುತಿಪೆ
ಬಂಧದೊಳು ವಂದಿಸುತ ಆನಂದವನು ಪೊಂದುವೆನಾ ೧

ಬಾಲಕೃಷ್ಣ ನಿನ್ನವೆರಡು ತೋಳು ತಾರೋ ಅಪ್ಪಿಕೊಂಬುವೆ
ಭಾಳಾ ದಿನ ತವಲೀಲೆ ಕೇಳದೆ ಮನ ತಾಳದಿಹುದು ೨

ಮುರಳಿ ಸ್ವರದಿ ಭೂಷಿತಾನನ ತ್ವರದಿ ತೋರೋ
ಉಮ್ಮ ಕೊಡುವೆ
ಕರುಣಾನಿಧಿ ಇರಲಾರೆನು ಮರುಳಾದೆನು ತವ ಪಾದಕೆ ೩

ಇಂದಿರೇಶ ಇಷ್ಟು ಜನುಮ ಹಿಂದೆ ಕಳೆದೆ ನಿನ್ನ ನೋಡದೆ
ಇಂದಿರೆಯ ಪೊಂದಿಹ ನಂದಾತ್ಮಜ ಬಂದು ಪೊರೆಯೋ ೪

## ೮೬

ಬಾರೋ ಮನೆಗೆ ಕೃಷ್ಣಯ್ಯ ಕೃಷ್ಣಾ
ಬಾರೋ ನಮ್ಮ ಮನೆಗೆ ಪ

ಬಾರೋ ನಮ್ಮ ಮನೆಗೆ ಪಾರೀಜನಾಭನೆ
ಬಾರಿ ಬಾರಿಗು ನಿನ್ನ ಸಾರಿ ಕರೆವೆ ಕೃಷ್ಣ ಅ.ಪ.

ಭಾನು ಭಾಸನೆ ನಿನ್ನ ವೇಣುನಾದವ ಕೇಳಿ
ಧ್ಯಾನಗೆಟ್ಟರು ಗೋಪಿ ಮಾನುನಿಯರು ಸ್ವಾಮಿ ೧

ಮಂದಾರ ಮಲ್ಲಿಗೆ ಕುಂದ ಚಂಪಕ ಜಾಜಿ
ವೃಂದ ಶೋಭಿಪ ಮುಖ ಗಂಧವರ್ಚಿಪ ಕೃಷ್ಣ ೨

ಇಂದುವದನ ನಿನ್ನ ಚಂದವ ನೋಡಲು
ದಿವಿಜೇಂದ್ರರು ಬಂದಿಹರು ಇಂದಿರೇಶನೆ ಕೃಷ್ಣ ೩

## ೮೭

ಬಾಲನ ಕಂಡಿಹೆನೆ ಗೋಪಾಲನ ಕಂಡಿಹೆನೆ ಪ

ಬಾಲನ ಕಂಡಿಹೆ ಲೀಲೆಯ ಮಾಡುತ ಅಂಬೆ-
ಗಾಲಿಕ್ಕುತ ಗೋಕುಲಾಲಯದೊಳಗಿಹ ಅ.ಪ.

ಮುರಳಿ ಮುಖದೊಳಿದ್ದು ಊದುತ ವ್ರಜದಿ
ಸರಸಿ ಗೋಪಿವನಿತೆರ ಮೋಹಿಪ ೧

ಕರದೊಳು ಕಂಕಣ ವಂಕಿ ಪೊನ್ನುಂಗುರ
ಅಲಂಕೃತ ಪೂರ್ಣ ಅಕಳಂಕ ಇಂದು ವಕ್ತ್ರನ ೨

ಕಾಶೀ ಪೀತಾಂಬರ ಭೂಷಿತ ಕಟಿ ಮಂದ-
ಹಾಸ ಮಾಡುತಲಿದ್ದ ಇಂದಿರೇಶನ ಹೇ ಸಖಿ ೩

## ೮೮

ಬಾಳು ಪ್ರೀತಿಯಲಿ ನಮ್ಮ ಬಾಲಕೃಷ್ಣಗೆ ದ್ರಾಕ್ಷಾ-
ದೋಳು ಬಂದಿಹ ಗೋಕುಲಾಲಯದಿಂದ ಪ

ಪುಟ್ಟ ಕರದಿ ಚೌಕಿಲಿಟ್ಟ ದ್ರಾಕ್ಷದ ಬೆಳ್ಳಿ
ಬಟ್ಟಲಾ ಪಿಡಿಯುತ ದೃಷ್ಟಿಗ್ಹೇಳಿದಾನು ೧

ಉದ್ಧವಾ ಪದವನ್ನು ಶುದ್ಧವಾಗಲೆ ಪಾಡೆ
ಮುದ್ದು ಕನಕಕಾಂಬೆ ಉದ್ದ ಬಾಲಕನು ೨

ಸುಂದರ ಬಾಲಕಾ ಇಂದಿರೇಶನೆ ಇವ
ಇಂದು ನೋಡುತ ಮುಖ ನಂದವಾಗಿಹುದು
ಆನಂದವಾಗಿಹುದು ೩

## ೮೯

ಬಾಳೆ ಕಿತ್ತಳೆ ಜಂಬುದ್ರಾಕ್ಷಿ ರಸಾಲ ಫಣಸ ಖರ್ಜೂರ
ಫಲಗಳ ಬಾಲಕೃಷ್ಣಗೆ ಮನುಜಾ ಸಾಯಂಕಾಲ ಪ್ರಾರ್ಥಿಪುದು ಪ

ಪರಮಪುರುಷನು ಪೂಜೆಕಾಲದಿ
ಸುರರು ಕರ್ಮಗಳಿಗೆ ಚಿಂತಿಸಿ
ಪರಿಚರಿಸುವ ಪುರುಷ ಮಾಧವ
ಚರಣ ಪೊಂದುವನು ೧

ನಾನು ಮಾಡುವ ಕವಿತೆ ಎಲ್ಲವ
ವೇಣು ಬಾಲನ ಮುಂದೆ ಪೇಳುವೆ
ಸಾನುರಾಗವ ಮಾಡಲೆನ್ನೊಳು
ಮೌನಿ ನಾರದರು ೨

ಇಂದಿರೇಶನ ಮುಖವ ನೋಡುತ
ನಂದಗೋಪಗೆ ಈ ಸುಶೃತಿಗಳಿಂದ

ವೃಂದ ಚರಿಸುತ ತತ್ವಾದಾಂಬುಜ
ದ್ವಂದ್ವಕರ್ಪಿಸುವೆ ೩

## ೯೦

ಬಿಡು ಎನ್ನ ಶೆರಗನು ಬಾಲಕೃಷ್ಣಾ
ಉಡುಗಿ ದೇವರ ಮನಿ ಬರುವೆ ಬೇಗ ಪ

ಅಂಗಳ ಥಳಿ ಹಾಕಿ ರಂಗವಲ್ಲಿಯ ಹಾಕಿ
ತಂಗಳ ಮೊಸರನ್ನಾ ಕಡೆಯಲ್ಹಾಕಿ
ಬಂಗಾರದ ಬಟ್ಟಲೊಳು ರಂಗ ಬೆಣ್ಣೆಯನೀವೆ
ಕಂಗಳನೆ ತೆಗಿ ಬೀರು ಮಂಗಳವಾ ೧

ಹಾಸಿಗೆ ಬಿಟ್ಟೇಳು ವಾಸುದೇವನೆ ನಿಮ್ಮ
ಹಾಸಿನ ತೊಟ್ಟಿಲೊಳು ಮಲಗು ಕೂಸಾ
ಏಸು ಹುಡುಗರೆಲ್ಲ ಸೋಸಿಲಿ ಕರೆವರು
ದೋಸೆ ಕೊಡುವೆ ತಿನ್ನೋ ಏಳು ಬೇಗ ೨

ತರುವು ಕಟ್ಟಲಿ ಬೇಕು ಕರುವು ಕಾಯಲುಬೇಕು
ತೊರೆದು ಮಲಿಯನುಣ್ಣು ಏಳು ಬಾಲ
ಜರದ ಕುಂಚಿಗೆ ಹೊದ್ದು ಹೊರಗೆ ಬಂದಿಹ ರಾಮ
ಕರೆಯುತ್ತಲಿರುವನು ಕಣ್ಣೆತ್ತಿ ನೋಡು ೩

ಕೋಳಿ ಕೂಗುತಲಿದೆ ಕಾಳು ಕಡಿವೆ ಹಾಕು
ಏಳು ಗಿಳಿಯು ನಿನ್ನ ಕೇಳುತಲಿವೆ
ಪಾಲು ಸಕ್ಕರಿನಿತ್ತು ಸಾಲು ಕೋಕಿಲ ಹಿಂಡು
ಗಾನ ಮಾಡುತಲಿವೆ ಏಳು ಬೇಗ ೪

ಅಂದ ಮಾತನು ಕೇಳಿ ಆ ಕಂದ ಎತ್ತಿಕೋ ಎನ್ನ
ಒಂದು ಬಟ್ಟಲದೊಳಗೆ ತಂದುಕೊಡು ಆಡುವೆ
ಎಂದು ತಾಯಿ ಚಿನ್ನಾ ಹಿಂದೆ ಸೆರಗಪಿಡಿದು ಇಂದಿರೇಶ ೫

## ೯೧

ಬಿಸಿ ನೀರಿನಲಿ ಮೋರೆ ತೊಳೆಯೆ ಅಮ್ಮ
ಬಿಸಜಾಕ್ಷ ವೆಂಕಟ ವಸುದೇವನ ಸೂನು ಪ

ನಡೆದು ಬರಲು ಒಬ್ಬ ಮಡದಿಯು
ಕೊಡಿರಿ ಸ್ಥಳವು ಎಂದು ನುಡಿಯುತಲಿ
ಗಡಿಬಿಡಿಯಲಿ ನಮ್ಮ ನಡುಮನೆಯೊಳು ಬಂದು ಇಂಥ
ಕಡುಮುದ್ದು ಬಾಲನ ಪಡೆದು ತೋರಿದಳಂತೆ ೧

ಮಾತೆ ಬಾಣಂತಿಯು ನವಜಾತ ಶಿಶುವು ಸದ್ಯೋ
ಜಾತನ ನಿಶೇಷ ಧಾತ್ರಿಧರನಾಥಾ
ಅತಿಶಯ ಥಂಡಿ ಪ್ರಾತಃಕಾಲವು ತವ
ಸೀತವಾಗಿದೆ ಎಂದು ಭೀತಿ ಉಂಟಾಗಿದೆ ೨

ಒಂದು ನಾಲಕು ದಿನ ಸಂಧಿಸಿ ಗುಡಿ ವ್ರಜ
ದಿಂದ ಕರದಿ ತನ್ನ ಕಂದನ್ನೆತ್ತಿ
ಇಂದಿರೇಶನ ಪ್ರಿಯೇ ಒಂದಿನಿತು ಧ್ಯಾನ
ಮಂದಿರದೊಳು ಬಂದು ಚಂದ ತೋರಿದಳಂತೆ ೩

## ೯೨

ಮಾಡಿದಿ ಸಂಧ್ಯೆಯನು ವೆಂಕಟಕೃಷ್ಣಾ
ಮಾಡಿದಿ ಸಂಧ್ಯೆಯನು ಕೂಡುತಾಸನದೊಳು
ಜೋಡು ಬಾಲಕರಿಬ್ಬರಾಡುತ ಮನೆಯೊಳು ಪ

ತಂಬಿಗಿ ಥಾಲಿಯ ತುಂಬಿಸಿಟ್ಟಿದ ಗೋಪಿ
ಡಿಂಬುರಿಬ್ಬರು ಆಪಸ್ತಂಭ ಶಾಕದಲಿ ೧

ಕೇಶವ ತುದಿ ಮೊದಲೀಸು ಸಂಧ್ಯೆಯ ಮಾಡಿ
ಕೂಸುಗಳು ಭಯತರಾಸು ಭುಂಜಿಸಿರಿ ೨

ಶೇಷ ಮಂಚದಿ ರಮಾ ಹಾಸಿಯೊಳ್ಹಾಸಿರೆ
ತೋಷದಿ ಮಲಗಿಂದಿರೇಶ ಸುಳಿಸಿರಿ ೩

೯೩

ಮುದ್ದು ಬಾಲಕ ತವನಿದ್ದೆ ಬಂದಿದೆ ಕಣ್ಣು
ಎದ್ದು ಮುಚ್ಚುತಲಿಹುದು ಪದ್ಮ ಪತ್ರಾಕ್ಷ ಪ

ಬಾರೋ ಮಲಗು ಎನ್ನ ಏರುಪೊಟ್ಟೆಯ ಮೇಲೆ
ಸಾರಸಾಕ್ಷನೆ ಚುಕ್ಕಭೂರಿ ತಟ್ಟುವೆನು ೧

ಕರಗಳ ಹೆಗಲಲ್ಲಿ ಚರಣಗಳನೆ ಚಾಚು
ಸರಳ ಮಲಗೋ ಪಾದಾಭರಣ ಒತ್ತುವುದು
ಕಂಠಾಭರಣ ಒತ್ತುವುದು ೨

ಕೇಶ ಬರುವುದೆನ್ನ ಆಶದೊಳಗೆ
ಇಂದಿರೇಶ ಟೊಪ್ಪಿಗೆ ಕಟ್ಟಿ ಕೂಸು ಮಸ್ತಕದಿ ೩

೯೪

ವಸುದೇವ ಸುತನ ಶಶಿ ಮುಖವನು
ತಂದು ತೋರಿಸೆ ಸಖಿ ತಂದು ತೋರಿಸೆ ಪ

ಹೊಸಬೆಣ್ಣೆ ಬುತ್ತಿಯ ಪಶುಪಾಲಗಿತ್ತು
ಪೊಗಳುವೆ ಕೇಳವನ ಚರಿತೆಯ ಅ.ಪ.

ಫುಲ್ಲಾಕ್ಷಿ ಇಟ್ಟ ಮನವನು ಅವನಲ್ಲಿ ತೆಗಿಯೆನೆ ಗೋ-
ವಲ್ಲಭ ಬೆನ್ನು ಬಾಗಿ ಮೋಹಿಸುತ ಪೋದನೆ ೧

ಸಖಿಕೇಳು ಮತಿಯು ಭ್ರಮಿಸಿತು ಅವನಲ್ಲಿ ಅತಿಶಯ
ಸುಖದಿಂದ ಸ್ಮರಿಸುವೆ ಕೇಳವನ ಚರಿತೆಯ ೨

ಇದು ನೋಡೆ ಎನ್ನ ಹಿಂದಿನ ಸುಕೃತ ಇದ್ದರೀತ ನಾ ಸಖೀ
ತಂದು ತೋರೆ ನೋಡುವೆನಾ ಇಂದಿರೇಶನಾ ೩

## ೯೫

ವೃಂದಾವನದೊಳು ನಿಂದು ಕೊಳಲನೂದಿ
ಮಂದಗಮನೆಯರ ಮರುಳು ಮಾಡುವ ಇವನ್ಯಾರೇ
ಪೇಳೆಲೆ ಸಖಿ ಯಾರೇ ಪ

ಯಾರೆ ಪೇಳಲೆ ಸಖಿ ಮಾರ ಸುಂದರ ಇವನ್ಯಾರೆ ಅ.ಪ.

ಮಲ್ಲಿಗೆ ಮಾಲೆಯೊಳ್ ಪುಲ್ಲನಾಭನ ಕಂಠ–
ದಲ್ಲೆ ಹಾಕುವ ಬೇಗ ವಲ್ಲಭೆ ಕರಿ ಇವನ್ಯಾರೆ ೧

ಎಳೆಯ ಗೋಗಳ ಮಧ್ಯೆ ಕೊಳಲ ಬಾಯೊಳಗಿಟ್ಟು
ನಲಿದಾಡುತಿಹ ದಿವ್ಯ ಚಲುವ ಬಾಲಕ ಇವನ್ಯಾರೆ ೨

.................................................. ಸಾಟಿ
ಇವಗ್ಹಾಟಕಾಂಬರ ಸುಸಲಾಟ ಚತುರನಿವನ್ಯಾರೆ ೩

ಇಂದು ಮೂಡಲದಂತೆ ಮಂದಹಾಸವ ಮಾಳ್ಪ
ಇಂದಿರೇಶನು ಬಹು ಸುಂದರ ಪುರುಷನಿವನ್ಯಾರೆ ೪

## ೯೬

ಶ್ಯಾಮಸುಂದರ ಕಾಮಿತಾರ್ಥದಾ ಪ್ರೇಮದಿ ಬಾ
ಶ್ಯಾಮಸುಂದರಾ ಕಾಮಜನಕನೆ ಪ್ರೇಮದಿಂದಲಿ
ಸೋಮಶೇಖರ ನುತ ಶಾಮಸುಂದರಾ ಪ

ನಾರೀಮಣಿಯ ದನಿಯ ಕೇಳುತ ಸೀರೆಗಳನು ಸೂರೆ ಮಾಡುತ
ಸಾರಸಾಕ್ಷನೆ ಪಾರು ಮಾಡಿದಿ ಭೂರಿ ಸಭೆಯೊಳು ನೀ ಶ್ಯಾಮ
ಸುಂದರಾ ೧

ಸಣ್ಣ ಶಿಶುವು ಬಂದು ವನದಿ ನಿಮ್ಮ ನಾಮ ಸ್ಮರಿಸೆ ಮನದಿ
ಧನ್ಯಬಾಲಕನನ್ನು ಕರುಣದಿ ಮನ್ನಿಸಿದೆಯೋ ನೀ
ಶ್ಯಾಮಸುಂದರಾ ೨

ಈ ಶರೀರದೊಳಗೆ ನಿನ್ನ ವಾಸುದೇವನೇ ನೋಡೋ
ಆಶೆಯಿಂದಲಿ ಪೋಷಿಸಿಂದಿರೇಶಾ ಬೇಗನೆ ಬಾ
ಶ್ಯಾಮಸುಂದರಾ ೩

## ೯೭

ಸರಸಿಜಾಕ್ಷಿಯರೆಲ್ಲ ಹರುಷದಿ ಬೆಳಗಿರೆ
ಕರ್ಮಾಭಿಮಾನಿ ಪುಷ್ಕರನಿಗಾರುತಿಯಾ ಪ

ಮಾಡಿದ ಕರ್ಮವ ನೀಡಿ ಹರಿಗೆ ಅಂಗ
ಗೂಡು ತೊಪ್ಪಿಸೋ ನಿನ್ನ ಪಾಡಿ ಪೊಗಳುವೆ ೧

ಭಕ್ತಿಯಿಂದ ಕರ್ಮವ ನಿತ್ಯ ಮಾಡುತ ಹರಿ
ಇಚ್ಛಿತ ಕರ್ಮವ ಪಥ್ಯ ಸಾಧಿಸಿದೆ ೨

ಏಸು ಜನುಮದಿ ನಾನು ಮೋಸ ಹೋದೆನೊ ಇಂದಿ–
ರೇಶಗರ್ಪಿಸೋ ಕೃಪಾಧೀಶ ಮರಿಯದೆ ೩

## ೯೮

ಹೆರಳು ಹಾಕುವೆ ಬಾ ಮುರಲಿಯಲ್ಲೇ ಇಟ್ಟು
ಗುರುಳು ಮೋರೆಯ ಮೇಲೆ ಹರವಿ ಬಿದ್ದಿಹವೋ ಕಣ್ಣ
ಮರೆಯ ಮಾಡಿಹವೋ ಪ

ಕೋಡಿನ್ಹೆರಳನ್ಹಾಕಿ ಕೂಸ ಮುಂದಲೆ ಹೂ
ಜೋಡಿರೆ ಅರಳೆಲೆ ನೋಡಿ ಇಡುವೆನೋ ೧

ಹಚ್ಚುವೆ ಕಾಡಿಗೆ ಮುಚ್ಚದೆ ತೆರಿ ಕಣ್ಣು
ಹೊಚ್ಚಿ ಕುಂಚಿಗೆ ನಿನ್ನ ಎತ್ತಿಕೊಳ್ಳುವೆ ಬಾ ೨

ಕಂದ ಎರೆದು ಭೂಷಿತಿಂದಿರೇಶನೆ ಗುಡಿ
ಮುಂದೆ ಕರವ ಪಿಡಿದಂದು ಎತ್ತುವೆ ಬಾ ೩

## ೯೯

ಹೊರಗ್ಹೋಗಿ ಆಡಬೇಡವೋ ಕಂದಾ ಮಹಾನಂದಾ ಬಹು
ಸರಸಿಜಾಕ್ಷಿಯರು ದೂರುವರೋ ಗೋವಿಂದಾ ಬಾ ಮನೆಗೆ
ಮುಕುಂದಾ ಪ

ಹೆಂಗಸ ಕೊಂದನೆಂಬುವರು ಮನೆ ಅಂಗಳದೊಳಗೆ ಬಚ್ಚಿಟ್ಟು
ಕೊಂಬುವರೋ
ಶೃಂಗಾರದಲಿ ಮೋಹಿಸುವರೋ ತಮ್ಮ ಕಂಗಳಿಂದಲಿ
ನೋಡಿ ದೃಷ್ಟಿ ಬಿಡುವರೋ ೧

ಕಳ್ಳತನವ ಕಲಿಸುವರೋ ಏನ ಬಲ್ಲೆ ಕಂದಮ್ಮ ನೀ ಸುಳ್ಳ
ಕಲಿಸುವರೋ
ಒಳ್ಳೆಯವರಲ್ಲ ಗೋಪಿಯರು ಗ್ರಾಮದಲೆ ನಿಲ್ಲಲು ಕೆಟ್ಟ
ಸೊಲ್ಲನಾಡುವರೋ ೨

ಸುಂದರ ಸೌಭಾಗ್ಯನಿಧಿಯೇ ನಿನ್ನ
ಒಂದು ಕ್ಷಣವು ಬಿಟ್ಟು ಇರಲಾರೆ ಹರಿಯೇ ಇಂದಿರೇಶನ
ಸುರ ದೊರೆಯೇ ೩

## ೧೦೦

ಹೋಗಿ ಗುಡಿಯೊಳಗುಂಡು ಬೇಗ ಬಾರೋ
ಭೋಗಿ ವರ ಕಾಲಿಂಗ ನಾಗ ಮರ್ದನನೇ ಪ

ಸರಸಿಜಾಸನ ಬ್ರಹ್ಮ ಸರಸತಿಯ ಒಡಗೂಡಿ
ಸಿರಿ ರಮಣ ವೈಕುಂಠ ಗಿರಿವಾಸನೆ
ಸುರ ನದಿಯ ಜಲದಿಂದ ಎರಡು ತುಳಸಿ ಗಂಧ
ಪರಮ ಕುಸುಮಗಳಿಂದ ಪರಿಚರಿಸುತಲಿಹರು ೧

ಗರುಡ ಬಂದಿಹನು ಸೌಪರ್ಣಿದೇವಿಯ ಕೂಡಿ
ಹರನು ಪಾರ್ವತಿ ಸಹಿತ ಬಂದಿಹನು
ಉರಗರಾಜನು ತನ್ನ ತರಣಿ ಸಹ ಬಂದಿಹನು
ಸುರರ ತರುಣಿಯರೆಲ್ಲ ನೆರಹಿಕೊಂಡಿಹರು ೨

ಸುಂದರಾಂಗಿಯು ಬಕುಲೆ ಮಿಂದು ಪಾಕವ ಮಾಡಿ
ತಂದಿಹಳು ಕ್ಷಿರಾಬ್ಧಿ ನಂದನೆಯು
ಇಂದಿರೇಶಗೆ ಕಾಮಿತೊಂದೊಂದೆ ಬಡಿಸುವಳು
ನಂದ ಸುಕುಮಾರ ಗೋವಿಂದ ಗಜವರದಾ ೩

## ಉ. ಲಕ್ಷ್ಮೀದೇವಿ

### ೧೦೧

ಅಂಬಾಬಾಯೇ ನಂಬಿದೆ ಬಾ ಜನನೀ ಪ

ಕೋಮಲಾಂಗಿಯೇ ಕಾಮಿತದಾಯಕೆ
ಕರುಣಾವಾರಿಧಿಯೇ ತಾಯೇ ೧

ಸಾರಸಾಕ್ಷಳೇ ತೋರಿಸು ಹರಿಯನ್ನು
ಪೋಷಿಸೆನ್ನ ಮನಸು ತಾಯೇ ೨

ಇಂದಿರೇಶನಂಕವಿಹಾರಿಣೀ
ಸುಂದರಾಂಗ ಸುಭಗೇ ತಾಯೇ ೩

## ೧೦೨

ಇಂದಿರೆ ನಿನ್ನ ಪೂಜೆ ಛೆಂದಾಗಿ ಮಾಡುವೆ ನಾನು ಪ

ಮಂದಹಾಸದಿ ಮೋದದಿಂದಲೇ ನೋಡು ದಯದಿ ಅ.ಪ.

ಜರದ ಪೀತಾಂಬರ ಕರದೊಳು ಧರಿಸಿರುವೆನೆ
ಎರಕೋ ಹರಿಯ ಕೂಡ ಸರಸಿಜದಳ ನೇತ್ರಿಯೇ ೧

ಮಂದಾರ ಮಲ್ಲಿಗೆ ಕುಂದದ ಚಂಪಕ ಜಾಜಿ
ತಂದು ನಿಂತಿಹೆ ಹರಿಸುಂದರಿ ಸರಸದಿ ಮುಡಿಯೇ ೨

ಗಂಧಕುಂಕುಮ ವೀಳ್ಯಾ ಬುಂದ್ಯಾ ಭಕ್ಷಗಳನು
ಬಂದು ಹರಿಯ ಕೂಡಿ ಛೆಂದಾಗಿ ಭುಂಜಿಸು ಬೇಗ ೩

ಹರಡಿ ಕಂಕಣ ದುಂಡು ಹೆರಳು ಭಂಗಾರಗಳನು
ಹರುಷದಿಂದಲಿ ಕೃಷ್ಣನರಸಿ ತಂದಿಹೆ ನಿನಗೆ ೪

ಚಂದ್ರಶೇಖರ ಸುರವೃಂದಾದಿ ವಂದಿತ ಚರಣೆ
ಇಂದಿರೇಶನ ಸಹ ಬಂದಿಲ್ಲಿ ತೋರಿಸು ಮುಖವಾ ೫

## ೧೦೩

ಏನು ಚೆಲುವಿಯೋ ಅಂಬುಜ ನಿಲಯ
ಳೇನು ಚಲುವಿಯೋ ಪ

ಏನು ಚೆಲುವಿ ಇವಳ ಸುಂದರಾನನವ ನೋಡೆ ಭವದ
ಬೇನೆ ಕಳೆದು ಹರಿಯ ಮುಕ್ತಿಸ್ಥಾನ ಕೊಡುವಳು
ಕರುಣಿ ಒಲಿದು ಸರಪಹಾಸದಿ ಕುಂತಳದಿ ಶೋಭಿಪ
ಸುರಭಿ ತಿಲಕದಿ ವಿಚಿತ್ರ ಓಲೆ ಕರ್ಣ ಭೂಷದಿ

ಮಸ್ತಕದಿ ಮಣಿಯು ಪುರುಟ ಭೂಷದಿ
ತರಣಿ ಕೋಟಿಯಂತೆ ಪೊಳೆವ ಶರಧಿನಾಥ ಸ್ತುತಿಯ ಕೇಳಿ
ಮರುಳುಗೊಂಡ ಹರಿಯು ವಕ್ಷಸ್ಥಳದೊಳಿಟ್ಟು ಸಾಕುತಿಹನು ೧

ಸರಗಿ ಪದಕವೊ ಕೊರಳೊಳಗೆ ನಲಿವ ಜರ ವಸನವೊ
ಕಾಂಚನಾದಿ ಕಾಂಚಿ ಸರಸ ಮಧ್ಯದಿ ಪರಮ ಖುಷಿಯ ಕೂಡಿ
ಮಿಥಿಲಪುರದ ರಾಜ ಜನಕಸುತೆಯ ಕರವ ಪಿಡಿದನು
ಹರನ ಧನುವ ಮುರಿದು ಸರಯೂನಲ್ಲಿ ಸುಖಿಪ ೨

ಮಂದಗಮನಿಯೋನಿ ಅಹೇಂದ್ರವಾದ ಮಂದಶಯನಿಯೊ
ವಿದರ್ಭರಾಜನಂದ ತನುಜೆಯೋ ಸಭಕ್ತರಿಗೆ ಬಂಧಕ ಮುನಿಯೊ
ದ್ವಂದ್ವ ಭಾಗದೊಳಗೆ ರಾಜವೃಂದ ನಿಂತು ಕಾಯುತಿರಲು
ಇಂದಿರೇಶನ ಪಾಣಿಪಿಡಿದು ಸುಂದರಾಂಗಿ ಮದುವೆಯಾದ ೩

## ೧೦೪

ಕಂಡೆನು ಹರಿಸತಿಯ ಸುರಚಿರದುಂಡ ಕಂಕಣ ಕೈಯ್ಯಾ
ಮಂದಾರ ಮಲ್ಲಿಗೆಯ ಹೆರಳಲಿ ದಂಡೆ ಮುಡಿದ ಪರಿಯ ಪ

ಪೈಜಣಯಿಟ್ಟಿಹಳು ಗಳದಿ ಕಟ್ಟಾಣಿಯ ಕಟ್ಟಿಹಳು
ಹಾಟಕ ಹಾರಗಳು ನೋಳ್ಪರ ನೋಟಕೆ ಹಬ್ಬಗಳು ೧

ಕಾಲಕಡಗ ರುಳಿಯು ಕಲಕಲ ಹೇಮ ಪೈಜಣ ಧ್ವನಿಯು
ಮೇಲೆ ಕಂಚುಕ ಸಿರಿಯು ಪುತ್ಥಳಿ ಮಾಲೆ ತೂಗುವ ಕಟಿಯು ೨

ಸರಸಿಜನುವ ಮುಖಿಯು ನಾಶಿಕ್ಷರಳು ಮುತ್ತಿನ ಗೊನೆಯು
ಹರಳು ಓಲೆಯ ಪ್ರಭೆಯು ಕರ್ಣದಿ ಕುರುಡು ದ್ರಾಕ್ಷಾಲತೆಯು ೩

ಸುಂದರಿ ಶುಭಗಾತ್ರೆ ಸುಖಮಯ ಸಿಂಧೂರ ಪಟಾಕಾ ಮಾತ್ರೆ
ಮುಂದೆ ಫಲದ ಪಾತ್ರೆ ಇಟ್ಟಳು ಬಂದು ಸರಸ ನೇರಿ ೪

ನಂದಬಾಲನ ಮಡದಿ ಸ್ವಪ್ನದಿ ಬಂದು ನಿಂತಳು ಭರದಿ
ಆನಂದವಾಯ್ತು ಮನದಿ ಕಂಡೆನು ಇಂದಿರೇಶನ ದಯದಿ ೫

## ೧೦೫

ಕಣ್ಣಿಲಿ ನೋಡಿದೆನೆ ಕಾಮಿನಿಮಣಿ ಪ

ಕಣ್ಣಿಲಿ ನೋಡಿದೆ ಘನ್ನ ಪುಸ್ತಕ ನವ
ವರ್ಣಭಾಷಿತ ಹರಿವನ್ನಿತೆ ಸೌಭಾಗ್ಯ ಅ.ಪ.

ಅರದಳ ಕಾಡಿಗೆಯು ಅರಿಶಿಣ ಕುಂಕುಮ
ಸರಸ ಪಂಕ್ತಿಯೆಂಬೊ ಹೇಮ ಸರಿಗಿ ಕಠ್ಾಣಿಯ ೧

ಅಕ್ಷರವೆಂಬುವ ನಕ್ಷತ್ರಮಾಲೆಯು
ವಕ್ಷದೊಳರ್ಥಿಲಿ ಅಂಬುಜಾಕ್ಷಿಯೇ ಲಕ್ಷ್ಮೀ ೨

ವಿಷಯನಳಿದು ಕೃಷ್ಣನೊಶಳಾಗುತ ಲಕ್ಷ್ಮೀ
ವಿಭಸಾರ್ಚನ ಮುಖ ಬಿಸುಜಾಕ್ಷಿ ತೋರ್ವಳು ೩

ಮನಕನಂಬುವ ದಿವ್ಯ ವಸನಭೂಷಿತ ಪತ್ರ
ವಸತಿಯಂತಿರುವ ಗೋಪಿ ಶಿಶುವ ಪೂಜಿಪಳು ೪

ಶ್ರೀಶನ ಗುಣಗಳ ಭಾಷಿಸಿ ವದನದಿ
ಪೋಷಜನಕೆ ಇಂದಿರೇಶನ ತೋರ್ಪಳು ೫

## ೧೦೬

ಕೇಳಿಪೇಳಮ್ಮ ನಮ್ಮಮ್ಮ ಲಕುಮೀ ಪ

ಕೇಳಿವೇಳೆ ಹರಿಯಲಿ ಪೋಗಿ ಬಹಳ ಸೋಕಿನವ ಗೋಪಿ
ಬಾಲೀಯರಿಗೆ ಮೆಚ್ಚಿ ಬಹು ಜಾಲವ ಮಾಡಿದ ಕೃಷ್ಣನ ಅ.ಪ.

ಪ್ರಳಯ ಕಾಲದಲ್ಲಿ ಆಲದೆಲೆ ಮೇಲೆ ಮಲಗಿಪ್ಪನು
ಒಲುಮಿಗಳ ಒಲುಮಿಕಾಂತ ಲಲನೆ ನೀನು ಕಮಲಾದೇವಿ ೧

ನಿತ್ಯಮುಕ್ತೆ ನಿತ್ಯತೃಪ್ತೆ ನಿತ್ಯಾವಿಯೋಗಿನಿ ಹರಿಗೆ
ಭೃತ್ಯನಲ್ಲೆ ನಾನು ಸ್ವಲ್ಪ ಚಿತ್ತವಿಟ್ಟು ನೋಡೆ ತಾಯಿ ೨

ನಿನ್ನ ಹೊರತು ಆತನನ್ನು ತೋರುವರ ಕಾಣೆನಮ್ಮ
ಸನ್ನುತಾಂಗಿ ಸಾರಸಾಕ್ಷಿ ಎನ್ನೊಳು ಕರುಣವ ಮಾಡೇ ೩

ಎಲ್ಲ ದಿವಿಜರಲ್ಲಿ ಪೋಗೆ ಬಲುಬಗೆ ಪೇಳಿಕೊಂಡೆ
ಫುಲ್ಲನಾಭನಲ್ಲಿ ಒಂದು ಸೊಲ್ಲನಾಡೋ ಶಕ್ತಿಯಿಲ್ಲ ೪

ವಾರಿಜಾಕ್ಷಿ ನಿನ್ನ ಪಾದ ಬಾಲ್ಯದಿಂದ ಸೇರಿದ್ದಕ್ಕೆ
ನೀರಜಾಕ್ಷನನ್ನು ತೋರೆ ಭಾರಿ ಫಲವಾಯಿತೆಂಬೆ ೫

ನಿಮ್ಮ ಮಾತು ಮೀರ ಶೂರ ನಮ್ಮ ಮಾರಜನಕ ಕೃಷ್ಣ
ಅಮರ ತರುವ ಕಿತ್ತಿ ನಿಮ್ಮ ಮನೆಯೊಳ ಹಚ್ಚಿದನಂತೆ ೬

ಸುಂದರಿ ಸೌಭಾಗ್ಯವಂತೆ ಮಂದಿರದೋಳಿಪ್ಪನನ್ನು
ಇಂದಿರೇಶನನ್ನು ತೋರೆ ನಂದ ಬಾಲ ಮಹಿಳೆ ಅಂಬಾ ೭

## ೧೦೭

ತೆರೆ ಬಾಗಿಲವ ಸುಗುಣೆ ಸುಂದರಿ ಮುಗಿವೆ ಕರವನು
ನಗಧರನ ಚರಣಕಮಲಯುಗಳ ನೋಳ್ಪೆನು ಪ

ಪೇಳಿದವರು ಯಾರು ನಿನಗೆ ಕೀಲಿ ಹಾಕಲು
ಶೀಲಲಾಮನೊಬ್ಬನಾಜ್ಞೆ ಕೇಳಿ ನಡೆವಳು ೧

ಹರಿಯು ಎಷ್ಟು ಸಾರೆ ನಿನಗೆ ತೆರೆಯ ಕೀಲಿಯೆ
ಕರೆದು ಪೇಳಿದಾನೆ ಮಾತು ಸಿರಿಯೇ ಮರೆತೆಯಾ ೨

ಬಾರೋ ಎಂದು ನೀನೆ ಎಷ್ಟು ಸಾರಿ ಕರೆದೆಯಾ
ನಾರಿಮಣಿಯೆ ಬಂದರ್ಹೀಗೆ ತೋರ್ಪೆ ರೀತಿಯಾ ೩

ಇಂದು ಹರಿಯ ದ್ವಾರದಲ್ಲಿ ಬಂದು ನಿಂತಿಹೆ
ಮಂದಗಮನೆ ಕೀಲಿನೀನು ಬಂಧ ಮಾಳ್ಪರೆ ೪

ಇಷ್ಟು ನೋಡಿ ಇಂದಿರೇಶನ ಭೆಟ್ಟಿ ಭರದಲಿ
ಕೃಷ್ಣೆ ಬಂದು ತೆರೆಯೆ ಕೀಲಿ ದೃಷ್ಟಿಯಾಗಲು ೫

## ೧೦೮

ಥರವೆ ಪೋಗೋದು ನೀನು ಕರವೀರಪುರಕೆ ಹೀಗೆ ಪ

ಲೋಲ ಲೋಚನೆ ಕೇಳೆ ಆಲದೆಲೆಯ ಮ್ಯಾಲೆ
ಲೋಲಾಡುತ ಸುಕಲ್ಪದಿ ಮರೆತೀಗ ಅ.ಪ.

ಮಂದಜಾಕ್ಷಿಯೆ ನಿನ್ನ ಮಂದಹಾಸಕೆ ಮೆಚ್ಚಿ
ಸುಂದರ ವೈಕುಂಠ ಮಂದಿರ ಕಟ್ಟಿಸಿದ ೧

ಹಿಂದೆ ಒಂದು ಮುನಿ ತಂದ ಕುಸುಮವನ್ನು ದಯ–
ದಿಂದಲೆ ಮುಡಿಸಿದ ಇಂದಿರೇಶನ ಬಿಟ್ಟು ೨

## ೧೦೯

ನಂಬಿದೆ ನಮ್ಮಮ್ಮನ ನಂಬಿದೆ ಪ

ನಂಬಿದೆ ನಮ್ಮಮ್ಮನಂಬುಜಾಸನ ವಾಯು
ಶಂಭು ಮುಖಮರ ಕದಂಬ ಕರರ್ಚಳ ನಂಬಿದೆ ಅ.ಪ.

ಕರವೀರದೊಳಗಿರುತಿಹಳು ರವಿ ಕಿರಣ ಕಾಂಚನ
ಪೀತ ನಿಧಿತಳು ಸುರತರುಣಿ ಸಂಘಾತ ಸೇವಿತಳು ಆಹಾ

ಹರಿಯ ವಕ್ಷದಿ ಕೂತು ಕರುಣ ಕಟಾಕ್ಷದಿ
ಪರಿವಾರ ಜನಕೆಲ್ಲ ಸುರಿವಳು ಸುಖವನ್ನು ೧

ಕರದಿ ಕಂಕಣ ತೋಡೆ ಬಳೆಯು ನಾಗಮುರಿಗೆ ವಂಕಿಯು
ಶೋಭ ಸಿರಿಯು ಪಾದಾಭರಣದ ಕಲಕಲಧ್ವನಿಯು ಆಹಾ
ಕರಣದಿ ವಾಲಿ ಕಂಠದಿ ಸರ ಸುರಗಿಯು
ಭರಮ ಮೇಖಳ ಕಾಂತಿ ಹರವಿಲಿ ಬೆಳಗೋದು ೨

ಮುಖವನೋಡಲು ಸೋಮಬಿಂಬ ದಿವ್ಯ
ಚಿಕುರಮ ಭ್ರಮರದಂಬ
ನಾಸ ಮುಖದಿ ಮಣಿಯು ರವಿಬಿಂಬ ಆಹಾ
ವಿಕಸಿತ ಸುಮಮಾಲೆ ವಿಕಸರ ಫಣಿವೇಣಿ
ಚಕಚಕಿತಾಭರಣಳಕಳಂಕ ಚಲಿವಿಯ ೩

ನವನಿಧಿನಾಥನ ಮಗಳು ಸರ್ವಭುವನಾಧಿ
ಪತಿಯ ಸುಪ್ರಿಯಳು ಅನು–
ಪವನ ಮುಖಾಮರ ಸ್ವಭವನದಾಯಕಳಾತ್ಮ
ಕವನ ಮಾಡುವ ಕವಿ ಭುವನದೊಳಿರುವಳ ೪

ದೇಶಕಾಲಗಳಿಂದಸಮಳು ಹರಿಗಾಸುಗುಣಗಳಿಂದಾಸಮಳು
ಸುಖರಾಶಿ ಸೌಂದರ್ಯ ಸೌಭಗಳು ಆಹಾ
ವಾಸುದೇವನ ಭಕ್ತಿರಾಶೆ ಪೂರೈಸುತಿಂದಿ–
ರೇಶನು ಚ್ಚಾಂಗದಿ ತಾ ಸುಖಿಸುವಳೆಂಬ ೫

## ೧೧೦

## ಮಹಾಲಕ್ಷ್ಮೀ ಅಷ್ಟಕಂ

ಪಾಹಿ ಮಂಗಳದೇವಿ ರುಕ್ಮಿಣಿ ಪಾಹಿ ಪಂಕಜ ಮಾಲಿನಿ
ಪಾಹಿಮಾಂ ಕರವೀರವಾಸಿನಿ ಪಾಹಿ ರಾಘವ ಕಾಮಿನಿ ಪ

ಚಂದ್ರಮಂಡಲ ಹಾಸ ಸನ್ಮುಖಿ ಮಂದಹಾಸ ಸುಶೋಭಿತೆ
ಸಿಂಧುರೇಂದ್ರ ಕರಾಮೃತೌಘ ಸುಗಂಧ ಬಿಂದು ನಿಷೇಚಿತೆ
ಕುಂದರೋಜ್ವಲ ಇಂದ್ರನೀಲ ಮಣೀಂದ್ರಹಾರ ವಿಲಾಸಿತೇ
ಬಂಧ್ರಿರಾಜಸುತೇವ ಸೂನುಮನಾದಿ ಬಂಧ ವಿವರ್ಜಿತೇ ೧

ಕುಂತಲಾವಳಿ ಸೋಭಿಸನ್ಮುಖಿ ಕಾಂತೆ ತೋಷಿತೆ ಮಾಧವೆ
ಶಾಂತ ಭಕ್ತೆ ಉಪಾಸೆ ತೋರು ಕೃತಾಂತ ದುರ್ಭರ ವೈಭವೇ
ಕಂತು ಮೋತರನಂತಶಾಯಿ ಸದಾಂತ ಪಾಣಿ ಸರೋರುಹೇ
ಸಂತತಂ ಹೃದಮೇವ ಸಾಂಬ ಸುಶಾಂತಿ ಕಾಂತಿ ಸಹೋದ್ಭವೆ ೨

ನಾರದಾಮರ ಮೌನಿದತ್ತ ಸುಪಾರಿಜಾತ ಸುಮಾಲಿಕೇ
ಸೂರ್ಯ ಸೋಮ ಸಮಾನ ಕಾಂಚನ ಭೂರಿಭೂಷಣ ಮಸ್ತಕೇ
ಹಾರಮೌಕ್ತಿಕ ಹೇಮಭೂಷಣ ಚಾರು ಚಂಪಕ ನಾಸಿಕೆ
ಸಾರಸಾಕ್ಷಿ ಸಮೀರ ಪೂರ್ವಕ ಸುರಾಳಿ ಮೌಳಿಗ ಹಸ್ತತೇ ೩

ತಪ್ತಕಾಂಚನ ನೂಪುರೋಜ್ವಲ ರಕ್ತಪಾಲ ಸರೋರಹೆ
ಚಿತ್ರಪೇಟ ಪಟೋಲ್ಲ ಸತ್ಕಟೆ ರತ್ನ ಕಾಂಚಿ ಗುಣೋದ್ಭವೇ
ನಿತ್ಯತೃಪ್ತ ನಿರಂಜನ್ಯೆಸುರ ಮೃತ್ಯುಮೋಹನ ವಿಗ್ರಹೆ
ತತ್‌ಕೃಪೈವಪು ಮೃತ್ಯುಸಾಧನ ಸಪ್ತ ಮೋಡಿಹ ವಿದ್ಮಹೆ ೪

ಅಂಬಜಾವಕ ಲಕ್ಷ್ಮೀ ಮೇಷ ಕದಂಬಿನೀನಿಲಯಸ್ಥಿತೆ
ಕಂಬುಕಂಜರ ತಾರಿಬೇಟ ಕರಾಂಬು ಸಂಭವ ಸೇವಿತೆ
ಶಂಭರಾರಿ ಸುತಾಂಘ್ರಿಪಂಕಜೆ ಬಿಂಬರಾಹಿ ಭೂಸುತೆ
ಸಾಂಬಹೀಂಬ ನಿಹಾ ಸುದರ್ಶಯ ಜಂಜವೈರಿನಿ ಸೇವಿತೆ ೫

ಇಂದಿರೆ ಹರಿ ಮತ್ಸ ಮಯೂರೇಂದ್ರ ತಲ್ಪ ಸುಶಾಯಿನಂ
ಸಿಂಧುಮಂದಿರ ಸಾರಸಾಕ್ಷನು ಮಂದ ಸೌಭಗ ಶಾಲನಂ
ವಂದ್ಯ ಮಾನ ವಿದೇಂದ್ರ ದೈವತ ವೃಂದ ವೈಭವದಾಯಿನಂ
ಸುಂದರಾಂಗಿಣಿ – ನಿವೇದಗೇಹ ಭವಾಂಧಿ ಪೋಪ
ನೀ ಶೋರ್ಪಣಂ ೬

ಜೀವವರ್ಗ ಹೃದಾಲಯ ಸ್ಥಿತ ಭೂವರಾಹಸಹಾನನೇ
ಪಾವನೀತಾಹೇ ವಸೇದ್ರುಮ ಹಾನು ಭಾವ ಶಿಖಾಮಣಿ
ಹಾವಭಾವ ವಿಲಾಸಿನಾಕಿ ಸುವಾಸಿನಿನುತ ಸದ್ಗುಣಿ
ಸೇವಕೇಯ ವಿಭಾವಿತಾಖಿಲ ಭಾವಕಾಯದ ಶಿಕ್ಷಣಿ ೭

ಇಂದಿರೇಶ ಸತೀಂದುಮೌಳಿ ಕರಾರವಿಂದ ನಿಷೇವಣೇ
ಚಂದ್ರಮಾರುತರೇಂದು ಸ್ಯಂದವವೀಂದ್ರ ಪೂರ್ವಸು ವಾಹನೇ
ಅಂಧಕೂಪ ಸಮಾನ ದುರ್ಭವ ಬಂಧ ಸೇಘನೀ ಪೋಷಿಣಿ
ನಂದನಂದನ ಮಾಸುದರ್ಶಯ ಬಂಧುರಾಮೃತ ಭಾಷಿಣಿ ೮

## ೧೧೧

ಬಾರೆ ನಮ್ಮನಿತನಕ ಭಾಗ್ಯದ
ದೇವಿ ಬಾರೆ ನಮ್ಮನಿತನಕ ಪ

ಬಾರೆ ನಮ್ಮನಿತನಕ ಬಹಳ ಕರುಣದಿಂದ
ಜೋಡಿಸಿ ಕರಗಳ ಎರಗುವೆ ಚರಣಕೆ ಅ.ಪ.

ಹರಡಿ ಕಂಕಣ ದುಂಡು ಕರದಲ್ಲಿ ಹೊಳೆಯುತ
ಸರಗಿ ಸರವು ಚಂದ್ರಹಾರಗಳಲೆಯುತ ೧

ಜರದ ಪೀತಾಂಬರ ನಿರಿಗೆಗಳೆಲೆಯುತ
ತರಳನ ಮ್ಯಾಲೆ ತಾಯಿ ಕರುಣವಿಟ್ಟು ಬೇಗನೆ ೨

ಮಂದಗಮನೆ ನಿನಗೆ ವಂದಿಸಿ ಬೇಡುವೆ
ಇಂದಿರೇಶನ ಕೂಡ ಇಂದು ನಮ್ಮನಿತನಕ ೩

## ೧೧೨

ಬಾರೆ ವೆಂಕಟರಮಣಿ ಶ್ರೀದೇವಿ ನೀ ಬಾರೆ ವೆಂಕಟರಮಣಿ ಪ

ಬಾರೆ ವೆಂಕಟರಮಣಿ ನಾರಾಯಣಿ ಕೇಳು
ಚಾರು ವದನೆ ಉಪಹಾರ ಕಾಲಕ್ಕೆ ನಿತ್ಯ ಅ.ಪ.

ಏನು ಪುಣ್ಯವೆ ನಂದು ಪಾರಾಯಣ
ನೀನು ಕೇಳುವಿ ಬಂದು
ಹೀನ ಮಾನವನಿಗೆ ನೀನು ಬರುವಿ ಎಂಬೊ
ಜ್ಞಾನವಿಲ್ಲದೆ ಉಚ್ಚ ಸ್ಥಾನದೊಳಗೆ ಬಾರೆ ೧

ಸ್ವಪ್ನದೊಳಗೆ ಬರುವಿ ಶ್ರೀದೇವಿ ನೀ
ಕ್ಷಿಪ್ರದಿಂದಲಿ ಪೋಗುವಿ
ಸರ್ಪಶಯನ ನಮ್ಮಪ್ಪ ಗೋಕುಲ ಬಾಲ
ಅಪ್ಪಿಕೊಳ್ಳುವ ಸುಖ ಒಪ್ಪಿಸಬೇಕಮ್ಮ ೨

ಮಂಗಳಾಂಗಿಯೇ ನಿನ್ನ ನೋಡದೆ ಬಲು
ಭಂಗಪಡುವೆನಮ್ಮ
ಗಂಗಜನಕ ಸಿರಿ ರಂಗನಂಕದಿ ಕೂತು
ಭೃಂಗಕುಂತಳೆ ಹೃದಯಂಗಳದೊಳಗಾಡೆ ೩

ಎಲ್ಲ ದೇವತೆಗಳನೆ ತಪಾದಿಯೆ
ಪುಲ್ಲ ವಾರಿಜನಯನೆ
ಗೊಲ್ಲ ಬಾಲನಪಾದ ಪಲ್ಲವ ನೋಡದೆ
ನಿಲ್ಲಲೊಲ್ಲದು ಮನಸೊಲ್ಲು ಲಾಲಿಸೆ ತಾಯೆ ೪

ಇಂದಿರೇಶನ ರಾಣಿ ಎನ್ನಯ ಮನೋ-
ಮಂದಿರದೊಳು ಬಾ ನೀ
ನಂದಗೋಕುಲ ಬಾಲಾನಿಂದು ಕರದೊಳೆತ್ತಿ
ತಂದು ತೋರಿಸೆ ಅರವಿಂದನಿಲಯೆ ಲಕ್ಷ್ಮಿ ೫

## ೧೧೩

ಭೃಗುವಾರ ಬರಲಿಬೇಕು ಭಾರ್ಗವಿ ದೇವಿ
ಭೃಗುವಾರ ಬರಲಿಬೇಕು ಪ

ಭೃಗುವಾರ ಬರಲಿಬೇಕ್ಹಗಲು ಪಾಯಸವುಂಡು
ನಗುತ ರಾತ್ರಿಲಿ ತಾಂಬೂಲಗಳ ಮೆಲ್ಲುವುದಕ್ಕೆ ಅ.ಪ.

ನೂಪುರ ಮುಖ ಭೂಷನೀ ಪದ ಕುಣಿಸುತ್ತ
ಶ್ರೀಪತಿ ಸಹ ಸುಖಾಲಾಪಗಳಾಡುತ ೧

ಕಂಕಣ ಮುಖರತ್ನಾಲಂಕಾರಗಳನಿಟ್ಟು
ಕಿಂಕರರಿಗೆ ಮುಖಾಲಂಕಾರ ತೋರುತ ೨

ಶಂಕರ ಮುಖ್ಯ ಸುರಪುಂಖ ಮಧ್ಯದಿ ಶ್ರೀಮ–
ದ್ವೇಂಕಟೇಶನ ದಿವ್ಯ ಟೊಂಕಾದೊಳಗೆ ಕೂತು ೩

ಪಕ್ಷಿವಾಹನ ದಿವ್ಯ ವಕ್ಷಸ್ಥಳಾಶ್ರಿತೆ
ಲಕ್ಷ್ಮೀಲೀಲಾಮೃತ ಲಕ್ಷ್ಮೀ ಕೇಳುವುದಕ್ಕೆ ೪

ಇಂದಿರೇಶನ ಮೃದು ಸುಂದರೋತ್ಸಂಗದಿ
ಪೊಂದಿ ಭಕ್ತರ ಪೂಜಾನಂದ ಭುಂಜಿಪುದಕ್ಕೆ ೫

## ೧೧೪

ಯಾರೆ ಹುಡುಗಿ ನೀನು ಬಂದವಳಿಲ್ಲಿ
ಯಾರೆ ಹುಡುಗಿ ನೀನು ಪ

ಯಾರೆ ಹುಡುಗಿ ನೀನು ಮೂರು ಬಾರಿಲಿ ಬಂದಿ
ನೀರಜಾಂಬಕ ಕರವೀರದವಳೆ ನೀ ೧

ಏನು ಕಾರಣ ಬಂದಿ ಕೈಯೊಳು
ವೇಣು ಪಿಡಿದು ನಿಂದಿ
ಕಾನನದೊಳು ವೇಣುವನೂದಲು
ಆನನ ತೋರಿಸು ಮಾನಿನಿ ಮಣಿಯೆ ೨

ಏನು ಪೇಳಿದನಮ್ಮಾ ಅಚ್ಯುತ
ಪ್ರಾಣದೇವನು ನಿಮ್ಮಾ
ಏನು ಸೂಚಿಸಲೆಂದು ನೀನು ಪೇಳಿದರೀಗ
ನಾನು ಶೋಧಿಸುವೆನೆ ದೀನರುದ್ಧಾರಳೇ ೩

ಇಂದುಮುಖಿಯೆ ನೀನು ಸುಮ್ಮನೆ
ನಿಂದ ಕಾರಣವೇನು
ಇಂದಿರೇಶನ ಸಖಿ ಒಂದು ಮಾತಾಡದೆ ನಿನ–
ಗೊಂದಿಸುವ ಕರದಿಂದ ಮಹಾಕಳೆ ೪

## ೧೧೫

ಶರಣು ಶರಣಮ್ಮಾ ಶರಣು ತವ ಜಾನಕಿಯೆ ರುಕ್ಮಿಣಿ
ಶರಣು ಸತ್ಯಾಭಾಮಿನಿ ಶರಣು ಲಷ್ಮ್ಯಾಂಭ್ರಣಿಯೇ ಪದ್ಮಿನಿ
ಶರಣು ಶರಧಿ ಸುಖಾತ್ಮಜೆ ಪ

ಶರಣು ತವ ಚರಣಾರವಿಂದಕೆ ಶರಣು ಸುರನುತ ಜಂಘಕೇ
ಶರಣು ಕರಿಕರಭೋರು ಯುಗಳಕೆ ಶರಣು ಸುಟೊಂಕಕೆ ೧

ಶರಣು ಬಹು ಗಂಭೀರನಾಭಿಗೆ ಶರಣು ಸುಸ್ತನ ಕಂಠಗೆ
ಶರಣು ಕರ ಕಣ್ಣು ಮೂಗು ಭ್ರೂಲತೆ ಕರಣಾಭರಣಕೆ ೨

ಶರಣು ಸಾಲಕ ಬಿಂಬ ಫಾಲಕೆ ಶರಣು ಕುಸುಮಿತ ವೇಣಿಗೆ
ಶರಣು ಮಾಧವನಂಕ ಬಿಂಬದಿ ಮೆರೆವ ಸುಖ ಮುತ್ತೈದಿಗೆ ೩

ನಿತ್ಯಮುಕ್ತಳೆ ದೇಶ ಕಾಲ ಸ್ವಭರ್ತೃಸುಮಜಿತೆ ಭಕ್ತಪೋಷಣೆ
ಕೃತ್ಯ ಕರುಣಾ ಸಾರಸಾಂಡ ಸುಪಾಸ್ತ ಸಂಸಿತಳೆ ನೀ ೪

ಬಲ್ಲವಳು ಮೊದಲ್ಪಿಡಿದು ನೀನತಿ ಸೊಲ್ಲು
ಪೇಳುವೆ ಸ್ನೇಹದಿಂದಲಿ
ಪುಲ್ಲನಾಭನ ಪರಿಚಿಸೀ ಈಗವನಲ್ಲಿ ನೀ ಪೇಳೆ ೫

ದೇವಶರ್ಮನು ನಿನ್ನ ಚರಣಾಧ್ಯಾನದಲಿ ಸನ್ನುತಿಸಿ ಕರುಣ
ತೋಯಜಾಕ್ಷನ ಕಂಡು ಸುಖಿಸಿದುಪಾಯವ ಬಲ್ಲವನು ೬

ಸುಂದರಾಂಗಿಯೆ ಸಾರಸಾಕ್ಷಿಯೆ ಮಂದಹಾಸಿನಿ ಮಾರಮೋಹಿನಿ
ಇಂದಿರೇಶನ ಮಾನಿನಿಯೆ ತವಕದಿಂದ ನಿಂತಿಹೆನು ೭

## ೧೧೬

ಶುಕ್ಕುರವಾರದಿ ಭಕ್ತಿಲಿ ಭಜಿಸುವೆ ಲಕ್ಕುಮಿ ದೇವಿಯನು
ರುಕ್ಮಾಭರಣ ವಿಲಕ್ಷಣ ಶೋಭಿಪ ಸುಲಕ್ಷಣ ಮೂರ್ತಿಯನು
ರಕ್ಕಸರಿಪು ಬಲಪಕ್ಕದಿ ಕೂತಿಹ ರುಕ್ಮಿಣಿ ದೇವಿಯನು ಪ

ಸಂತತ ಭಜಿಸುವ ಸಂತರ ಹತ್ತಿರ ನಿಂತು ರಕ್ಷಿಸುತಿಹಳು
ಶಾಂತಳು ಸದ್ಗುಣವಂತಳು ಕಮಲಾಕಾಂತನ
ಸುಪ್ರಿಯಳೂ ಕರವೀರ
ಪ್ರಾಂತ್ಯದೊಳಿರುತಿಹಳು ಹೃತ್ಕಮಲಂಚಳ ಸಂಸ್ಥಿತಳು ೧

ಸೀತೆಯ ತ್ರಿಜಗನ್ಮಾತೆಯ ಕ್ಷೀರದಿ ಜಾತೆಯು ಪರಮಾ ಶ್ರೀ
ಧಾತೆಯು ಮಾಧವ ಭೂಮಿಯ ಮಂಗಳ
ಮೂರ್ತಿಯು ಸುಖರಾಶಿ ೨

ಆಸ್ಯಾಂಬುಜತನು ಹಾಸಸುಕುಂತಳೆ ಭೂಷಿತ ಬಿಂಬೋಷ್ಠೀ
ಕೂಸಿಗೆ ಕೊಡು ಇಂದಿರೇಶನ
ಸಹಜಗದೀಶಳೆ ತವ ಭೆಟ್ಟಿ ೩

ಸಗರನಾತ್ಮಜರಿಗೆ ಮೋಕ್ಷವ ಕೊಟ್ಟೆ ನರಶಿರವನು ಮೆಟ್ಟಿ
ಸುಗುಣ ತದ್ಭಸ್ಮವನೆ ನೀ ಮುಟ್ಟಿ ಅಗಣಿತ ಮಹಿಮನ
ಸುಗುಣದೊಳಾಡುವ ಮಿಗೆ ಹರುಷವ ಕೊಡು
ನಗೆಮುಖದವಳೇ ೪

ಸಂದರವದನೆ ಸಿಂಧುರಗಮನೆ ಕುಂದದ ಅಸುರರನೆ
ಮಂದರಮಾಲಾ ಭೂಷಿತವೇಣಿ ಇಂದಿರೇಶನ ಪಾದ
ದ್ವಂದ್ವತೋರಿಸು ನಿನಗೊಂದಿಸುವೆನು
ಶರದಿಂದು ಸುಮನಸೆ ೫

## ೧೧೭

ಹೊಸಗಣ್ಣು ಎನಗೆ ಹಚ್ಚಲಿಬೇಕು ಜಗದಂಬಾ
ವಸುದೇವ ಸುತನ ಕಾಂಬುವೆನು ಪ

ಘಸಣಿಯಾಗುವೆ ಭವ ವಿಷಯ ವಾರುಧಿಯೊಳಗೆ
ಶಶಿಮುಖಿಯೆ ಕರುಣದಿ ಕಾಯೆ ಅ.ಪ.

ಪರರ ಅನ್ನವನುಂಡು ಪರರ ಧನವನು ಕಂಡು
ಪರಿ ಪರಿಯ ಕ್ಲೇಶಗಳನುಂಡು
ವರಲಕ್ಷ್ಮೀ ನಿನ್ನ ಚಾರು ಚರಣಗಳ ಮೊರೆ ಹೊಕ್ಕೆ
ಕರುಣದಿ ಕಣ್ಣೆತ್ತಿ ನೋಡೆ ೧

ಮಂದಹಾಸವೇ ಭವಸಿಂಧುವಿನೊಳಗಿಟ್ಟು
ಚಂದವೇ ಎನ್ನ ನೋಡುವುದು
ಕಂದನಂದದಿ ಬಾಲ್ಯದಿಂದ ಸೇರಿದೆ ನಿನ್ನ
ಮಂದರಧರನ ತೋರಮ್ಮ ೨

ಅಂದಚಂದಗಳೊಲ್ಲೆ ಬಂಧು ಬಳಗ ಒಲ್ಲೆ
ಬಂಧನಕೆಲ್ಲ ಇವು ಕಾರಣವು

ಇಂದಿರೇಶನ ಪಾದದ್ವಂದ್ವವ ತೋರಿ ಹೃ
ನ್ಮಂದಿರದೊಳು ಬಂದು ಬೇಗ ೩

## ೧೧೮

### ಆರತಿಪದ

ಆರುತಿಯ ಮಾಡುವೆನೆ ಮಾರಜನನಿಯೆ ಲಕ್ಷ್ಮೀ ಪ

ಭಂಗಾರದ ತಾಟಿನೊಳು ಶೃಂಗಾರದಾರುತಿ ಪಿಡಿದು
ರಂಗನಂಗನೀಯ ಲಕ್ಷ್ಮೀ ಮಂಗಳ ಪದವಪಾಡಿ ೧

ಮುತ್ತಿನಾರತಿ ನಿನಗೆ ಎತ್ತಿನಿಂತೆನೆ ತಾಯಿ
ಭಕ್ತಹೃದಯೆ ಇತ್ತಕಡೆ ನೋಡೆ ದೇವಿ ೨

ಇಂದಿರೇಶನ ರಾಣಿ ಸುಂದರ ಸರೋಜವದನೆ
ಇಂದುರಂಗ ರಾಮಕೃಷ್ಣರನ್ನು ತೋರಿಸಮ್ಮಾ ರಾಮೆ ೩

## ೧೧೯

ಜಯಮಂಗಳಂ ನಿತ್ಯ ಶುಭಮಂಗಳಮಂ ಪ

ಧರೆಯೊಳು ನಿನ್ನಂಥಾ ತರುಣಿ ಮಣಿಯಳಾ ಕಾಣೆ
ಹರಿಯ ವಕ್ಷಸ್ಥಳದಿ ಇರುವೆ ನೀನು
ಕರವೆತ್ತಿ ಮುಗಿಯುವೆನು ಸಿರಿಯೆ ತವ ಸೌಭಾಗ್ಯ
ಎರಡು ಕಣ್ಣಿಗೆ ತೋರೆ ವರಮಹಾಲಕ್ಷ್ಮಿ ೧

ಜರದ ಪೀತಾಂಬರವು ಚರಣದೊಳಗಲಿಯುತಲಿ
ಸಿರಿವಂತೆ ಮೂರು ಹೆಜ್ಜೆ ಬರುವಳಾಗಿ
ಸೆರಗೊಡ್ಡಿ ಬೇಡುವೇನು ಹೆರಳಿನಲಿ ಮುಡಿದಿರುವ
ಮರುಗು ಮಲ್ಲಿಗೆ ಚಂಪಕ ಸರಗಳನ್ನು ನೀಡೆ ೨

ಇಂದುಮುಖಿ ನಿನ್ನಗಾರ್ತಿಯ ತಂದು ನಿಂದಿಹೆ ನಿಜ
ಸುಂದರಾ ಮೃದು ಕೀರ್ತಿ ಪಾಡುತಿಹೆನೆ
ಚಂದ್ರಶೇಖರ ಸುರರಿಂದ ವಂದಿತ ಚರಣ
ಇಂದಿರೇಶನ ಸಹ ಬಂದಿಲ್ಲೆ ತೋರಿಸುಮುಖಿ ೩

## ಊ. ದೇವತಾಸ್ತುತಿ

### ೧೨೦

### ಬ್ರಹ್ಮದೇವರು

ಕರುಣಿಸೊ ಕೋಮಲಾಂಗನೆ
ನಾರಾಯಣಸುತನೆ ಕರುಣಿಸೊ ಪ

ಕರುಣಿಸು ಎನ್ನನು ಸುರಸೇವಿತ ಪಾದ
ಪರಮೇಷ್ಠಿಯ ನಿನ್ನ ಶರಣು ಬಂದಿಹೆನು ಅ.ಪ.

ವಾಣಿರಮಣ ನಿನ್ನ ಗಾನ ಮಾಡುವೆ ಸಿರಿ
ಮಾನಿನಿ ಅರಸನ ಧ್ಯಾನದೊಳಿರಿಸೊ ೧

ಶಿವಜನಕನೆ ನಿನ್ನ ಕವನ ಮಾಡುವ ಹೃದ್-
ಭವನದೊಳಗೆ ಮಾಧವನ ತೋರಿಸೊ ೨

ಇಂದಿರೇಶನ ಮನವಿಂದು ಬೋಧಿಸಿ ಭವ
ಬಂಧನ ಬಿಡಿಸಿ ಶರ ವೃಂದಾಸನ ಗುರು ೩

### ೧೨೧

ವಾಣಿನಾಥ ನಿನ್ನ ಮಹಿಮೆ
ಕ್ಷೋಣಿಯೊಳಗೆ ಪೊಗಳುವೆನು ಪ

ಶ್ರೀನಿವಾಸನಮಲ ಮುಖವಾ
ಮಾನಸಾದಿ ತೋರಿಸೀಗ ಅ.ಪ.

ಹರಿಯ ನಾಭಿ ಕಮಲದಲ್ಲಿ
ಧರಿಸಿ ತನುವ ತಪತಪೆಂದು
ಎರಡುವರ್ಣ ಕೇಳಿ ಚರಿಸೆ
ಪರಮಪುರುಷನನ್ನು ಕಂಡೆ ೧

ಸಣ್ಣಬಾಲ ನಾಮ ಹರಿಯ
ತಿನ್ನಬೇಡ ನಿನಗೆ ಬಹಳ
ಅನ್ನಮಾಡಿಕೊಡುವೆನೆಂದು
ಧನ್ಯ ಜಗವ ನಿರ್ಮಿಸಿದೆಯಾ ೨

ಒಂದು ಕಾಲದಲ್ಲಿ ಹರಿಗೆ
ನಿಂದ್ಯ ಕರ್ಮ ಮಾಡದಲೆ
ಇಂದಿರೇಶ ನಿನ್ನ ಮನದಿ
ಪೊಂದಿ ಭಜಿಪೆ ಪಾವನಾತ್ಮಾ ೩

## ೧೨೨

### ವಾಯುದೇವರು

ಅಂಜುವೆನು ನಿನಗಂಜನೆಯ ತನಯ
ಪ್ರಭಂಜನನ ಸುತ ಅಂಜುವೆನು ಪ

ವಾರಿಧಿಯನು ಹಾರಿ ಸೀತೆಗೆ ಚಾರು ಮುದ್ರೆಯನು
ತೋರಿ ಲಂಕೆಯ ಸೂರೆ ಮಾಡಿದೆ ಘೋರ
ರಾಕ್ಷಸಘಾತಗೊಳಿಸಿದಿ ೧

ಮಾರಮಣಪದ ಸಾರಸಾವನು ಭೂರಿ ಸೇವಿಸಿದೆ
ನಾರಿ ಕಾಡಿದ ಕ್ರೂರರಡಹನು ಹಾರ
ಮಾಡಿದಿ ಶೂರ ಭೀಮನೆ ೨

ನಂದ ತೀರ್ಥನೆ ಬಂದು ದುರ್ಜನದುಂದು ನಿಲ್ಲಿಸುತಾ
ಇಂದಿರೇಶ ವಿದೇಂದ್ರದ್ವೈವತ ವಂದ್ಯನೆಂದು
ನಿಬಂಧ ಮಾಡಿದಿ ೩

## ೧೨೩

ಕೇಳು ಮಗುವೆ ನಾನೆಂಬಿ ಮಾತನು
ತಾಳು ತವಕದೊಳೆನ್ನ ಗುರುತನು ೧

ಅಮರರುಸುರಿದಾ ಅರ್ಥಕೇಳಿದ್ಯಾ
ಕಮಲಜನಿಗವತಾರವಿಲ್ಲದಾ
ಕ್ರಮವಿ ನೋಡಲು ಕಾರ್ಯ ನಿನ್ನೊಳೂ
ಭ್ರಮಿಸಿ ಬರುವದು ಭಾರವೇನಿದು ೨

ಎಂದು ತ್ರಿಯುಗನೂ ಮಂದಹಾಸಾದಿಂ-
ದೆಂದು ನುಡಿಯನೂ ಕೇಳಿ ಪವನನು
ಇಂದಿರೇಶನೆ ನಿನ್ನಾಜ್ಞೆಮೀರಲೇ
ದೆಂದು ಶಕ್ತನಲೆಂದು ಮಣಿದನೂ ೩

## ೧೨೪

ನೀ ಬಾರದಿರೆ ಬಾರನು ಶ್ರೀ ನರಹರಿ ಪ

ನೀ ಬಾರದಿರೆ ಬಾರ ನೀರಜಾಕ್ಷನು ಹರಿ
ನಾನು ನಂಬಿದೆ ನಿಮ್ಮ ನೀವು ಪಾಲಿಸಬೇಕು ಅ.ಪ.

ನೀನು ಆತನ ಕಾಯ್ದಿ ತಾನು ಆತನ ಕಾಯ್ದ
ನೀನು ಬಿಡಲು ಬಿಟ್ಟ ಭಾನುಸುತನ ಕೃಷ್ಣ ೧

ನಿಮ್ಮ ಮಾತುಗಳನ್ನು ಒಮ್ಮೆ ಮೀರನು ಹರಿ
ನಮ್ಮ ಬಿಡುವುದ್ಯಾಕೊ ಬ್ರಹ್ಮ ಪದಾರ್ಹನೆ ೨

ಇಂದು ನಾಳೆನ್ನದೆ ಆನಂದತೀರ್ಥರೆ ನಮ-
ಗಿಂದು ತೋರಿಸು ಹರಿಯ ಇಂದಿರೇಶನ ಪ್ರೀಯ ೩

## ೧೨೫

ಬಾರೋ ನಮ್ಮನಿಯೊಳಗೆ ಭಾರತಿಪತಿ ಪ

ಬಾರೋ ನಮ್ಮನಿಗೀಗ ನೀರಜಾಕ್ಷನು ನಿನ್ನ
ಸೇರಿದ ಜನರೊಳು ಭಾಳ ಬಹಳೇ ಪ್ರೀತಿಯ ಮಾಳ್ಪ ಅ.ಪ.

ಹರಿಯ ಮಂಟಪದೊಳು ಸರಸಿಜಾಕ್ಷನ ಮುಂದೆ
ಇರಿಸಿ ನಿನ್ನನು ನಿತ್ಯಾ ಸ್ಮರಿಸಿ ಪೂಜಿಪೆ ಸ್ವಾಮಿ ೧

ನಿನ್ನ ಸೇರಿದ ಕಪಿಯನ್ನು ಪೊರೆದ ಹರಿ
ನಿನ್ನ ಸೇರದ ವಾಲಿಯನ್ನು ಘಾತಿಸಿದಾ ೨

ನಂತ ತೀರ್ಥರೆ ದಯದಿಂದ ನಮ್ಮೊಳು ಭವ-
ಬಂಧನ ಬಿಡಿಸೆಂದು ಇಂದಿರೇಶಗೆ ಪೇಳು ೩

## ೧೨೬

ಬಾರೋ ಹೃದಯ ಸದನಾ ಮುಖ್ಯ ಪ್ರಾಣ ಪ

ಬಾರೋ ಹೃದಯದೊಳು ವಾರಿಜಾಸನ ಪದ
ಏರುವಾತನೆ ದಿವ್ಯ ಕಾರುಣ್ಯ ಸಾಗರ ಅ.ಪ.

ಹರಿಭಕ್ತರೊಳು ನೀನು ಹಿರಿಯನೆಂಬುವ ವಾರ್ತೆ
ಪರಿಪರಿ ಕೇಳುತ ಶರಣು ಬಂದೆನೊ ನಿನ್ನ ೧

ಮಂದಗಮನೆ ಕೊಟ್ಟ ಇಂದ್ರಮಾಣಿಕ ಮಾಲೆ
ಕಂಧರದೊಳಗಿಟ್ಟ ಇಂದ್ರಶಯನ ಪ್ರೀಯಾ ೨

ಕಾಳಿ ರಮಣ ಧರ್ಮನಾಳೆ ಎನಲು ಧನ–
ನೀಲ ಮಾಣಿಕ್ಯ ಭೂಷಲೋಲ ಭೂಸುರಗಿತ್ತೆ ೩

ಮಾಧವನಾಜ್ಞದಿ ಮೇದಿನಿಯೊಳು ಬಂದು
ಬಾದರಾಯಣ ಮತ ಸಾಧನೆ ಮಾಡಿದ ೪

ಇಂದಿರೇಶನ ಪಾದ ಮುಂದೆ ಸೇವಿಸಿ ನಿತ್ಯಾ
ನಂದತೀರ್ಥರೇ ನೀವು ಸಂದೇಹವಿಲ್ಲದೆ ೫

## ೧೨೭

### ಹನುಮ ಭೀಮ ಮಧ್ವ

ಭಾವಿ ಬ್ರಹ್ಮ ಭಾರತೀಶ ಪಾಹಿಮಾಂ
ಸದಾ ಬೇಡಿಕೊಂಬೆ ನಿನ್ನ ನಾನು ಭೂರಿ ಬೋಧರ ಪ

ಹನುಮ ಭೀಮ ಮಧ್ವನೆ ಲಂಕಾವನದಿ ಚರಿಸಿದಿ
ವನಿತೆ ಚೋರನ ಪುರವ ದಹಿಸಿ ಜಲಧಿ ದಾಟಿದಿ ೧

ಕುರುಕುಲದಿ ಹುಟ್ಟಿ ದುಷ್ಟ ಕುರುಗಳಳುಹಿದಿ
ದುರುಳ ಕೀಚಕನ್ನ ತರಿದು ತರುಣಿನುಳುಹಿದಿ ೨

ಆನಂದತೀರ್ಥರಾಗಿ ವಾದವೃಂದ ಜಯಿಸಿದಿ
ಇಂದಿರೇಶನ ತೋರಿಸಿಂದು ಕರುಣದಿಂದಲಿ ೩

## ೧೨೮

ಮಂಗಳ ಮಣಿಮಲ ಲಂಘಿತಾಂಗಳ ಕಪಿ
ಸಾಂಗ ವಂದಿತ ಭೂಷಿತಾಂಗ ಮಾರುತಿಗೆ ಪ

ವ್ಯಾಳ್ಯದಂದದಿ ಪುಚ್ಛಮ್ಯಾಲೆ ತೂಗುತಲೆಂಕಿ
ಲೆಂಕಿರಾಮಗ ಸೀತಾಲಂಕನಿತ್ತವಗೆ ೧

ಹೂಂಕರಿಸುತ ಬಾಲ ಬೆಂಕಿಯಿಂದಲ್ಲೆ ಸುಟ್ಟ
ಏಳುಚಿರಿಪ ಸಣ್ಣ ಬಾಲ ಹನುಮನಿಗೆ ೨

ದಾಶರಥಿಯ ಮುಂದೆ ವಾಸಮಾಡುತ ಕೆಂಪು
ರುಷ ಬಾಡದಿ ಸಮ ಘೋಷನಿತ್ತವಗೆ
ಇಂದಿರೇಶನರ್ಚಿಪಗೆ ದ್ರೌಪದೀಶ ವಂದಿತಗೆ ೩

## ೧೨೯

ಹರಿಯ ತೋರೋ ಎನಗೆ ಬೇಗ
ಗುರುವರೇಣ್ಯ ಮಧ್ವ ಮುನಿಯೇ ಪ

ತ್ರೇತೆಯಲಿ ದಶರಥನ ಪುತ್ರನನ್ನು ಒಲಿಸಿದೆಯೊ
ಪ್ರೀತಿಯಿಂದ ರಾಮ ನಿನಗೆ ಶಾತಕುಂಭ ದ್ವಾರನಿತ್ತಾ ೧

ಜರೆಯ ಸುತನ ಸೀಳಿ ರಾಜರ ಸೆರೆಯ ಬಿಡಿಸಿದಿ ನೀ ಕಣ್ಣಿನ
ಪರದೆ ತೆಗೆದು ಎನಗೆ ಗೋಕುಲ ಮುರಳಿ ಬಾಲನ ಮುಖವ
ತೋರಿಸೊ ೨

ವ್ಯಾಸ ಮತವ ತಿಳಿದು ಸೂತ್ರ ಭಾಷ್ಯಗಳನೆ ರಚಿಸಿ ಅನ್ಯ
ಭಾಷೆಗಳನೆ ದೂಷಿಸಿ ಇಂದಿರೇಶನನ್ನು ಸ್ಥಾಪಿಸಿದೆಯೊ ೩

## ೧೩೦

### ಅವತಾರತ್ರಯದ ಮಂಗಳಪದಗಳು

ಜೋ ಜೋ ಜೋ ಜೋ ಜೋ ಮುಖ್ಯಪ್ರಾಣ
ಜೋ ಜೋ ರಾಮರ ಕಾರ್ಯಧುರೀಣಾ
ಜೋ ಜೋ ಕುರುಪತಿ ತನುಜ ಸಂಹರಣಾ
ಜೋ ಜೋ ವರ್ಣಿತ ಶಾಸ್ತ್ರ ಪುರಾಣ ಜೋ ಜೋ ಪ

ಜೋ ಜೋ ರಾಮರ ಪಾದ ನೋಡುವನೇ
ಜೋ ಜೋ ಸಂತತ ಸೇವೆ ಮಾಡುವನೇ
ಜೋ ಜೋ ಬ್ರಹ್ಮಪದವೇರಿ ಕೂಡುವನೇ ಜೋ ಜೋ ೧

ಜೋ ಜೋ ದ್ರೌಪದಿ ಪತಿಯಾದವಗೆ
ಜೋ ಜೋ ಕೀಚಕ ಹಾವಳಿ ನೀಗಿದವಗೆ
ಜೋ ಜೋ ಗಜಪುರ ಅರಸನಾದವಗೆ
ಜೋ ಜೋ ಎಂದು ಪಾಡುವೆ ಮಲಗೋ
ಬಾಲ ಹನುಮಯ್ಯ ಜೋ ಜೋ ೨

ಜೋ ಜೋ ಮುನಿಯಾಗಿ ಕುಮತವ ಜಯಿಸೋ
ಜೋ ಜೋ ಬದರೀಲಿ ವ್ಯಾಸನ ನಮಿಸೋ
ಜೋ ಜೋ ಇಂದಿರೇಶನ ಮತವ ನಿಲ್ಲಿಸೋ
ಜೋ ಜೋ ಸಾಧುಗಳಿಗೆ ಮುಕ್ತಿಯ ಕೊಡಿಸೊ ಜೋ ಜೋ ೩

## ೧೩೧

## ಭೀಮ

ಲಾಲಿ ಭಾರತ ಕುಲಾಂಬುಧಿ ಸೋಮ ಗುಣನೆ ಲಾಲಿ ಪ

ಲಾಲಿ ಯಾದವ ಪದಾಂಭೋಜ ಮಧುಕರನೆ
ಲಾಲಿ ಮುನಿವರತನಯ ಸುತನ ಗೆಲಿದವನೆ
ಲಾಲಿ ಕರೆವೆನು ಬಾರೋ ಮಧ್ವ ಮುನಿವರನೆ ಲಾಲಿ ಅ.ಪ.

ಲಾಲಿ ಕಾಲ್ಗಡಲರುಳಿ ಕುಣಿತ ನಿಜಚರಣಾ
ಲಾಲಿ ಮಧ್ಯದೊಳುಟ್ಟ ಕನಕಮಯ ವಸನಾ
ಲಾಲಿ ಕೊರಳೊಳಗಿಟ್ಟ ಹಾರಗಳ ಸದನಾ
ಲಾಲಿ ಕಿವಿಯೊಳು ಹೇಮಕುಂಡಲಾಭರಣಾ ಲಾಲಿ ೧

ಲಾಲಿ ಕರಯುಗ ಶೋಭಿತ ಕಂಕಣಾಭರಣಾ
ಲಾಲಿ ಲೋಕವ ಮೋಹಿಸುವ ಮಂದಹಾಸನಾ

ಲಾಲಿ ತರುಣಿರೂಪ ಶೃಂಗಾರ ಸದನಾ
ಲಾಲಿ ತಾಂಬೂಲರಸಭಾಸ ನಿಜವದನಾ ಲಾಲಿ ೨

ಲಾಲಿ ನರ್ತನಾ ಕೃತಾಲಯ ಚರಣಗಮನಾ
ಲಾಲಿ ನಿಜ ಕಾಮಿನಿ ಸಂಕಟ ಹರಣಾ
ಲಾಲಿ ಕೀಚಕ
ಲಾಲಿ ಇಂದಿರೇಶ ಮಾಧವನ ತೋರಿದನ ಲಾಲಿ ೩

## ೧೩೨

ಮಂಗಳ ಮಾರುತಿ ನಂದನಿಗೆ
ಮಂಗಳ ಭಾರತಿ ಸುಂದರಗೆ ಪ

ಮಂಗಳ ಮಾಧವನನು ದಿನ ಪಾಡುವಾ
ನಂದತೀರ್ಥ ಸುರವಂದ್ಯನಿಗೆ ಅ.ಪ.

ತರುಣಿ ರೂಪದಿ ಮೋಹಿಸುತ
ಗರಡಿ ಮನೆಯೊಳು ಬಾರೆನುತ
ದುರುಳನ ಮುಂದಲೆಗುರುಳನು ಪಿಡಿದು
ಧರೆಯೊಳು ಕೆಡಹಿದಿ ನೀ ತ್ವರಿತಾ ೧

ಎಲ್ಲರು ಬಂದರು ಕೀಚಕರು
ಘಲ್ಲಾಕ್ಷಿಯ ಚಿತಿಕ್ಹಾಕಿದರು
ವಲ್ಲಭೆ ಚೀರುವ ಕೇಳುತ
ಕ್ಷುಲ್ಲಕರ ಹೆಡೆ ಖಂಡಿಸಿ ನೂರಾರು ೨

ಸೈಂಧವ ವೇಷದಿಯನು ಪಿಡಿಯೆ
ಸುಂದರಿ ನಿನ್ನಗೆ ಅಲ್ವರಿಯೆ
ತಂದು ಅವನ ಅವಳಿಂದ ವಧಿಸಿದೆ
ಇಂದಿರೇಶನ ಪ್ರಿಯ ಸುರದೊರೆಯೆ ೩

## ೧೩೩

### ಸರಸ್ವತಿ

ಬ್ರಹ್ಮನರಸಿ ವಾಣೀ ನಿನ್ನ ಸ್ಮರಿಸೆ ವೇದ
ಮರ್ಮ ತಿಳಿಸಿ ಪರಬ್ರಹ್ಮನ ತೋರಿಸೆ ಪ

ವೀಣೆ ಕರದಿ ಪಿಡಿದು ಆನನ ತೂಗುತ
ಶ್ರೀನಿವಾಸನ ಗುಣಗಾನ ಮಾಡುವಿಯೆ ೧

ಸುಂದರ ಮಣಿ ಭೂಷ ವೃಂದ ಶೋಭಿತ ಕರ
ಇಂದುವದನೆ ಮಯೂರೇಂದ್ರ ವಾಹನಳೆ ೨

ಈಸು ಪುಸ್ತಕದೊಳು ವಾಸಮಾಡುತ
ಇಂದಿರೇಶನ ಸೊಸೆ ಭಕ್ತರಾಶಿಗೆ ಪೊಳೆಯೆ ೩

## ೧೩೪

ವೀಣಾ ಪುಸ್ತಕ ಶೋಭಿತ ಪಾಣೀ ಕಮಲೆ ಬ್ರಹ್ಮ
ಮಾನಿನಿಮಣಿ ಮಮ ಮಾನಸೆ ಬಾಬಾ ಪ

ವೇದಾಭಿಮಾನಿನಿ ಮಾಧವನ ಗುಣಗಣ
ಬೋಧಿನಿ ಸಂತತ ಮೋದ ಭರಿತಳೆ ೧

ಸಮವಿಷಮ ಉಪಾಸೆ ಸಮನಿಷ ಮಂಗಳೆ
ಕಮಲಾಸನನ ಸರ್ವಸಮ ಹಂಸಾರ್ಚಿತಳೆ ೨

ಸುಂದರ ಸರಸ್ವತಿ ಮಿಂಚಿನಂದದಿ ಹೃದಯದಿ ಗೋಪಿ
ನಂದನದ ತೋರೆ ಇಂದಿರೇಶಜಗತ್ಪ್ರಿಯೆ ೩

## ೧೩೫

ನೋಡು ನೋಡಮ್ಮ ಭಾರತಿದೇವಿ ಪ

ನೋಡಿ ನೋಡಮ್ಮ ಜೋಡುಕರಗಳ
ಜೋಡಿಸಿ ಎದುರಿಲಿ ಮೂಢನು ನಿಂತಿಹೆ ಅ.ಪ.

ಕಾಳಿ ದ್ರೌಪದಿ ನೀಲಲೋಹಿತೆ
ಬಾಲೇ ಮಂಗಳೇ ಶೀಲೆ ಸುಂದರಿ ೧

ಇಂದ್ರಸತಿ ಮುಖ ಸುಂದರಿಯರು
ಬಂದು ಸೇವಿಸೆ ಪೊಂದಿಪುಟ್ಟಿದೆ ೨

ವಾಸುದೇವನ ನೀ ಸ್ಮರಿಸೆ ವಸ್ತ್ರ
ರಾಶಿ ಪಡೆದೆ ಇಂದಿರೇಶನ ಸುಪ್ರಿಯೆ ೩

## ೧೩೬

### ಶೇಷದೇವರು

ಸ್ಮರಿಸುವೆ ಹರ ವಟತರುಣ ಮೂಲದಿ ಮೃಗ
ಚರ್ಮತಳದಿ ಕೂತು ಹರಿಯ ಭಜಿಪೆನೆ ಪ

ನಾಲ್ಕು ರೂಪಗಳನ್ನು ಸ್ವೀಕರಿಸುತ ದಕ್ಷ
ಆ ಕಥಾರಂಭದಿ ಕೂತು ಕೇಳಿದನೇ ೧

ವ್ಯಾಸ ತನಯ ಶುಕ ಕೂಸು ದ್ರೋಣನು ದೂ-
ರ್ವಾಸ ಮುನಿಪ ಜೈಗೀಷವತಾರಾ ೨

ಈಸು ಕರುಣಕೆನ್ನ ಏಸು ಜನ್ಮದ ಪುಣ್ಯ
ಶೇಷ ಒದಗೆ ಇಂದಿರೇಶನ ಶಯ್ಯಾ ೩

## ೧೩೭

### ರುದ್ರದೇವರು

ಶಿವನೆ ನಾ ನಿನ್ನ ಕರೆಯುವೆ ಬಾರೊ ಪ

ಗಿರಿಜಾಮನೋಹರನೆ ಶಂಕರನೆ ಅ.ಪ.

ತರುಣಿಮಣಿಯು ವಾಮತೊಡೆಯಲೊಪ್ಪುವಳು
ತರಳರಿಬ್ಬರು ಬಲ ತೊಡೆಯಲೊಪ್ಪುವರು
ಸುರಸರಿತೆಯು ಜಟೋತ್ಪರಿ ಶೋಭಿಪಳು
ಗರಳಕಂಠದಿ ನೀಲ ಹರಳಿನಂತ್ಹೊಳೆವುದು ೧

ಬಾಲಮುನಿಯು ತನ್ನ ಕೇಳಿ ಮೃತಿಯನು
ನೀಲ ಲೋಹಿತಾ ನಿನ್ನ ಸೇವೆಯ ಮಾಡಿದನು
ಕಾಲನ ಜೈಸುತ ಬಹಳ ಆಯುಷ್ಯವಿತ್ತ
ವ್ಯಾಳಚಲಾಂತಕ ಶ್ರೀಶೈಲದಿ ನಿಂತೆ ೨

ಮಂದರುಗ್ಮಿಯು ತಪದಿಂದ ಒಲಿಸಲು
ಬಂದು ಶಾಪವ ನೀಡಿ ತಂದಿ ಕ್ಷಿತಿಯೊಳು
ಇಂದಿರೇಶನ ದ್ವೇಷ ಎಂದು ಮಾಡುವಿ ಶಾಪ
ಅಂದೇ ಬರುವದು ಮಂದಿರಕೋ ಇತಿ ೩

## ೧೩೮

ಗಿರಿವರ ತನಯೆ ಮುರರಿಪು ಸಿರಿಯೆ ಪ

ಶರಣು ಬಂದವರನ್ನು ಮರೆವುದು ಥರವೆ ಅ.ಪ.

ತುಟಿಯಲಿ ಸೌಭಾಗ್ಯ ಹಣದಿ ಗೆಲಿಯೆ ಸದಾ
ಪಠಿಸಿ ಭುಂಜಿಸಿದೆಯೇ ೧

ಯಕ್ಷ ಪೋಗಲು ಅವಸಾಕ್ಷಿ ಬರಲು ಸಹ
ಈಕ್ಷಿಸಿ ಹರಿಯ ಸ್ತುತಿಸಿ ಶಿಕ್ಷೆ ನೀಡಿದೆಯೇ ೨

ಆ ಸುಮುಖಿಗೆ ಹರ ಭೂಷಿತ ಶ್ರುತಿ ಸ್ಮೃತಿ
ರಾಶಿ ಗ್ರಂಥವ ಪೇಳಿ ನೀ ಸುಖಿಸಿದೆಯೇ ಇಂದಿರೇಶನ
ಸೊಸೆಯೇ ೩

## ೧೩೯

ಪಾಹಿ ಪಾರ್ವತಿ ನಿನ್ನ ಪಾದವ ಪೊಂದಿಹೆ
ಪ್ರೇಮದಿಂದಲಿ ಹರಿಯ ಪೂಜೆ ಮಾಡಿಸೆ ಪ

ಶಿವನ ರಾಣಿ ಎನ್ನ ಭುವನ ಮಧ್ಯದಲಿ
ಪವನ ಶಾಸ್ತ್ರವು ನಿತ್ಯ ಶ್ರವಣ ಮಾಡಿಸೆ ೧

ಹರನ ತೊಡೆಯೊಳು ಪೊಳೆವ ಸರಸಿಜಾಕ್ಷಿಯೆ
ಹರಿಯ ಬೋಧವ ಕೇಳಿ ಹಟವಗೆಲಿದೆಯೆ ೨

ಸರ್ವಮಂಗಳೆ ನಿನ್ನ ಶರಣು ಬಂದಿಹೆ ನಾನು
ಹರಿಯ ಗುಣಗಳ ವಾಣಿಯಲ್ಲಿರಿಸು ಕರುಣದಲಿ ೩

ಹರಿಯ ಶಾಸ್ತ್ರದ ಸ್ಮರಣೆ ಮನದಿ ನಿಲ್ಲಿಸು
ಮರವು ಕೊಡದಲೆ ಹರಿಚರಣ ತೋರಿಸು ೪

ಬಂದ ಭಕ್ತರ ಬಿಡುವುದಿಂದುಚಿತವೆ
ಇಂದಿರೇಶನ ಮನದಿ ತಂದು ತೋರಿಸೆ ೫

## ೧೪೦

### ನಾರದ

ಇಲ್ಲೆ ಬಂದಿಹ ಮುನಿ ಇಲ್ಲೇ ಬಂದಿಹಾ
ಎಲ್ಲ ಲೋಕ ತಿರುಗಿ ಇಲ್ಲೆ ಬಂದಿಹಾ ಪ

ಫುಲ್ಲನಾಭನ ಭಕ್ತರಲ್ಲಿ ಮಾಣಿಕ್ಯವೇ ಅ.ಪ.

ಕರದಿ ವೀಣೆಯನ್ನು ಧರಿಸಿ ಶಿಷ್ಯರಿಂದ
ಸುರಮುನಿಯು ಕೇಳಿ ಭರದಿ ಜಾಗರಕ್ಕೆ ೧

ಹರಿಯ ದಿನದಿ ನಿನ್ನ ಚರಿತಾಮೃತವ ಪಾಡೆ
ಹರಿಯ ನಿಲಯದಿ ಗಾನ ಭರದಿ ಮಾಡುತಲೆ ೨

ನಂದ ಬಾಲಕನ ತಂದುತೋರುವನೇ
ಇಂದು ನಿನ್ನ ತುತಿಪೆ ಇಂದಿರೇಶ ದಾಸಾ ೩

## ೧೪೧

ಕುಣಿಸೋ ನಾರದಾ ಎನ್ನ ಕುಣಿಸೋ ನಾರದಾ ಪ

ಕುಣಿಸೋ ಎನ್ನ ಕಾಲಿಲಿಂದ ಕಣಕಣೆಂಭೊ ಗೆಜ್ಜೆಕಟ್ಟಿ ಅ.ಪ.

ಕುಣಿದು ಕುಣಿದು ಕಾಲಿನಿಂದ ವನಜನಾಭನ ಅಮಲ ಮಹಿಮೆ
ನೆನೆದು ನೆನೆದು ಮನದಿ ಮೋದ ವನವ ಚರಿಸುವಂತೆ
ಮಾಡೋ ೧

ವದನದಲ್ಲಿ ಹರಿಯ ಸ್ಮರಣೆ ಮುದದಿ ಪಾಡುತಾಲೆ ಕಥೆಯ
ಗದಗದಾನೆ ರೋಮ ಉಬ್ಬಿ ಒದಗುವಂತೆ ಭಾಷ್ಪ ಮಾಡೋ ೨

ಏಸು ಲೇಸು ವಿಷಯಗಳಲಿ ವಾಸಮಾಡದಂಥ ಇಂದಿರೇಶ
ಸುಕಧಾರ್ಥಸಾರ ಲೇಶ ಬಂದು ಸತತ ಮಾಡೋ ೩

## ೧೪೨

ನಾರದಾ ಬಾ ಮುನಿಜಾತಾ ಹೇ ನಾಥಾ
ಮಿತ್ರನಂದದಿ ಸದಾ ಧಾತ್ರೀಲಿ ಚರಿಸುವಿ
ಭಕ್ತಜನಕೆ ಸುಖದಾತಾ ಹೇ ನಾಥಾ
ಈ ತನುವಿಲಿ ಗೋಪಿ ಪೋತನ ಕಾಣದೆ

ಮಾತು ಮರೆತೆಂಧೀತ ಭೀತಾ ಹೇ ನಾಥಾ
ಭಾಷೆ ಕೇಳುತ ನಿಮ್ಮೊಲ್ ಆಶೆ ಪುಟ್ಟಿಹ
ಇಂದಿರೇಶನ ಸಹ ಸುಖಗೀತಾ ಹೇ ನಾಥಾ

## ೧೪೩

ನಾರದಾನೆ ಕಂಡೆ ನಿನ್ನ ಮೂರು ತಂತೀಯಾ
ಚಾರು ವೀಣೆ ಪಿಡಿದು ಪಾಡುವ ಭೂರಿ ಮಹಿಮೆಯಾ ಪ

ಕಾಲ ಮೇಲೆ ಕಾಲ ಹದಡ
ಮೇಲೆ ವೀಣೆಯ ಶಾಲನ್ನೊದ್ದು ಹರಿಯ
ಗಾಯ ಲೀಲೆ ಬಾ ಹೊದೊ ೧

ಕರೆದ ಕ್ಷಣಕೆ ಬರುವಿ ಎನ್ನೊಳು
ಕರುಣವೇನಿದು ಗುರುತು ತೋರದಂತೆ
ಎನ್ನ ಬಳಿಗೆ ಬರುವುದೋ ೨

ನಿನ್ನ ನಂಬಿದೆನ್ನ ಭಾಷೆಯನ್ನು ಲಾಲಿಸೋ
ಇನ್ನು ಇಂದಿರೇಶ ವದನವನ್ನು ತೋರಿಸೋ ೩

## ೧೪೪

ನಾರದ ಮುನಿಯೇ ಎನ್ನೊಳು ನಮ್ಮ
ನೀರಜಾಕ್ಷನ ಮುಖವನು ತೋರೋ ಪ

ಧ್ರುವತಾಯಿ ಮಾತಿಗೆ ನೊಂದಾನು ತನ್ನ
ಭವನದಾಸೆಯ ಬಿಟ್ಟು ಬಂದಾನು
ಶ್ರವಣ ಮಾಡುತ ಮಂತ್ರ ಅಂದಾನು ಹರಿ
ನವನವ ಮಹಿಮೆಯ ತಿಳಿದಾನು ೧

ಮಧುವನದೊಳು ತಪಮಾಡಿದ ಹೃದಯದೊಳು
ಮಧುಸೂದನ ಮುಖನೋಡಿದಾ

ಮುದದಿಂದ ಹರಿಯನ್ನು ಸ್ತುತಿಸಿದಾ ಮುಕ್ತ
ಸದನ ಶ್ರೀ ಹರಿಪುರ ಸೇರಿದಾ ೨

ವರ ಪ್ರಹ್ಲಾದಗೆ ಗರ್ಭದಿ ಕೊಟ್ಟ
ಸುರಮುನಿ ನಿನ್ನುಪದೇಶದಿ
ಹರಿಯನು ಭಜಿಸಿದ ಧೈರ್ಯದಿ ಶಾಲೆ
ತರುಳರಿಗೆಲ್ಲ ಹೇಳಿದ ಬೋಧಿ ೩

ಶ್ರೇಷ್ಠ ನಿನ್ನುಪದೇಶ ಕೇಳುತ ಹೀಗೆ
ಎಷ್ಟೋ ಜನರು ಹರಿ ಕಾಣುತ
ಮೆಟ್ಟಿದರು ಹರಿಪುರ ಸುಖಿಸುತ ಎನ–
ಗಷ್ಟುಪದೇಶ ಮಾಡೆಲೋ ತಾತ ೪

ಸುಂದರ ವೀಣೆಯ ಕರದೊಳು ಪಿಡಿದು
ಇಂದಿರೇಶನ ಭಕ್ತ ಸಭೆಯೊಳು
ನಂದ ಬಾಲನ ಕಥೆ ಜಗದೊಳು ಪೇಳಿ
ವಂದಾರು ಕವಿ ಕರುಣಾಳು ೫

## ೧೪೫

ಬಾರೋ ಮೋರೆಯ ತೋರೋ
ನಾರದ ಅಗಾಧ ಬೋಧ ಪ

ಶ್ರೀನಿವಾಸನ ನಾಮ ಲೀಲೆಯ
ಸಾನುರಾಗದಿ ವಾಣಿಜಾಣೆ
ಸೂನೂನ ಪಾಪವ ಹಾನಿಯ ಮಾಡುತ ೧

ಹತ್ತು ನಾಲ್ಕು ಸುತ್ತದೇಶದಿ
ಚಿತ್ರ ಚರಿತನ ವೃತ್ತಿ ನಿತ್ಯದಿ
ವಿಸ್ತರಿಸಿ ಹೇಳುತ ಚಿತ್ತದಿ ಸುಖಿಸುವಿ ೨

ಇಂದಿರೇಶನ ತಂದು ತೋರುವಿ
ಎಂದು ನಿನ್ನನು ಪೊಂದಿ ಬಂದೆ
ನಂದನ ಕಂದನ ಬಂದೀಗ ತೋರಿಸು ೩

### ೧೪೬

### ಗಂಗಾನದಿ

ಬಾರೆ ಬಾರಮ್ಮ ಜಾಹ್ನವೀದೇವಿ
ಹರಿಭಕುತರ ಕಾಯಿ ಪ

ಬಾರೆ ಬಾರೆ ಪುರವೈರಿ ಸಿರಸ್ಥಿತೆ
ಮೂರು ಲೋಕಗಳ ವಾರಣ ಮಾಡುವಿ ಅ.ಪ.

ಮಾರಜನಕ ಚರಣೋದ್ಭವಿತೆ ನೀರಜ ಶುಭವಸ್ತ್ರೆ
ಸಾರಸಾಯತ ಸುಂದರ ನೇತ್ರೇ
ಚಾರು ಸುರಗಿ ಮುತ್ತಿನ್ಹಾರ ಕುಂಡಲನೊಸ–
ಲ್ಹೀರ ಮಸ್ತಕವಿದು ಸಾರಸಭೂಷೆ ೧

ಹರಿಯಾ ಸ್ನಾನೋದಕದಲಿ ನೀನಿರುವಿ
ವರ ವೀಳ್ಯದಲಿರುವಿ
ಹರಿಯಾ ತರುಣಿಯನೆ ನೀ ಪಡೆದಿರುವಿ ೨

## ೫. ದೇವತಾ ತಾರತಮ್ಯ

### ೧೪೭

### ದೇವ – ದೇವತಾ ತಾರತಮ್ಯ

ಹರಿಯೇ ಸರ್ವೋತ್ತಮನು ತರುವಾಯ ಸಿರಿದೇವಿ
ಸರಸಿಜಾಸನ ವಾಯು ಸರಸ್ವತಿ ಭಾರತಿಯು

ಗರುಡ ಶೇಷನು ಶಿವನು ಹರಿ ಆರು ತರುಣಿಯರು
ಗಿರಿಜೆ ವಾರುಣಿ ಸತಿ ಸ್ವರ್ಗಾಧಿಪತಿ ಕಾಮ
ಮರುತ ಪ್ರಾಣಾಹ್ವಯನು ಗುರು ಶಚಿ ಮನುದಕ್ಷ
ಸ್ಮರನ ಸುತ ರತಿ ಪ್ರವಹಸುರಮಾನಾದು
ಯಮ ವರುಣ ನಾರದ ಭೃಗು ನುಹರ ನೇತ್ರದಕ್ಷಸತಿ
ಸರಸಿಜಾಸನ ಸುತರು ತರಣಿಸುತಗಾಧಿಜನು
ನಿರರುತಿ ಪ್ರಾವಹಿ ಮಿತ್ರಗುರುಸತಿಯು
ಗಣನಾಥ ಸ್ವರ ವೈದ್ಯ ವಾಯುಜನು ಹರನಸರು ಶತಖಳರು
ಕರ್ಮಜರು ಬಲಿಮುಖರು ಸರಿ ಎನಿಪ ಮನುಮುಖರು
ಸುರಗಂಗೆ ಸಂಜ್ಞೋಷೆ ಪರ್ಜನ್ಯ ಸೋಮಯಮ ತರುಣಿಯರು
ಕೂರ್ಮದಿ ಸುರರು ಸ್ವಾಹಾದೇವಿ ವರ ಬುಧನು ಅಶ್ವಿನೀ ಸತಿ
ತರಣಿಸುತ ಪುಷ್ಕರನು ಸುರರು ಅಜಾನಜರು
(ಸುರಸೇವೆ ಮಾಡುವರು)
ಹರಿಯ ಹೃದಯಕಾಂಬುವರು ಚಿರ ಪಿತೃಗಳವರು ದೇವರ
ಗಾಯಕ ಗಣವು
ನರ ಗಾಯಕರು ಭೂಮಿಧರರು ನರಸೋತ್ತಮರು
ಚಿರ ಜೀವ ಸ್ಥಿರ ಜೀವ ಸರ್ವಜೀವಿಗಳಿಂದ ಪರಮಸೇವೆಯಕೊಂಡು
ಪುರುಷಾರ್ಥಗಳ ನೀವ ಹರಿಯ ನುತಿಸುವೆ ನಿನ್ನಾ ಕರುಣದಲಿ
ನೋಡೆನ್ನ ವರ ಇಂದಿರೇಶ

ಜತೆ : ತಾರತಮ್ಯಾದಿ ನುತಿ ಸಾರುವ ಜನರಿಗೆ ಮಾರಮಣ ಇಂದಿರೇಶ
ತೋರುವನು

## ೧೪೮

ಕೋಲು ಕೋಲೆನ್ನ ಕೋಲು ಮುತ್ತಿನ ಕೋಲು
ಕೋಲಲೆನ್ನ ಕೋಲು ಪ

ಅಜಭವ ಸುತ ಪಾದಾ ನೀಡುವಿ ಸುಜನರಿಗತಿ ಮೋದಾ
ವಿಜಯಸಾರಥಿ ನಿನ್ನ ಹೃದಯದಿ ತೋರಿಸು ಭಜಿಸುವೆ
ಸುಖಬೋಧಾ ೧

ಇಂದಿರೆ ಬಾರಮ್ಮಾ ಭಜಕರವೃಂದವ ನೋಡಮ್ಮಾ
ಸುಂದರ ಹರಿಯನು ತಂದು ತೋರಿಸು
ಮನೋಮಂದಿರದೊಳು ನಮ್ಮಾ ೨

ಸರಸಿಜವಿಷ್ಟರನೇ ನಿನ್ನನು ಭಜಿಸುತಿ ಹರಪಿತನೆ
ಕರುಣದಿ ತೋರಿಸು ಹರಿಯನು ಬೇಗದಿ
ಪುರುಷೋತ್ತಮ ಸುತನೇ ३

ಭಾರತಿಪತಿ ದೇವಾ ಮಾಡಿಸು ವಾರಿಜಾಕ್ಷನಸೇವಾ
ಸೇರಿ ಮನದಿ ಹರಿ ಕಾರುಣತೋರು ಪೂರಿಸು ಎನ ಭಾವಾ ೪

ಅಜನ ಮೋಹದ ರಾಣಿ ನಿನ್ನನು (ಭಜಿಸುವೆ) ಫಣಿವೇಣಿ
ಭುಜಗಶಯನ ಪದ ತೋರಿಸು ಮನದೊಳು ಸುಜನ
ಕಾಮಿತದಾನಿ ೫

ಭಾರತಿ ಕರುಣದಲಿ ಹರಿಯನು ತೋರಿಸು ಹೃದಯದಲಿ
ವಾರಿಜಾಕ್ಷಿಯೆ ನಿನ್ನ ಸೇರಿದೆ ಎನ್ನನು ಸೇರಿಸು ಮಾರ್ಗದಲಿ ೬

ಮಾಧವ ವಾಹಕನೇ ಶಿಬಿರದಖಾದಿರ ಮುಖದವನೇ
ಸಾಧಿಸಿ ಸುಧೆಯನು ಮೋದದಿ ತಾಯಿಯ ಖೇದವ
ಕಳೆದವನೇ ೭

ವಿಷ್ಣುನ ಹಾಸಿಗೆಯೇ ಪ್ರಲಂಬನ ಮುಷ್ಟಿಲಕಾದಿದಿಯೇ
ಅಷ್ಟು ಜಗವ ಫಣಿಲಿಟ್ಟು ಮರೆವ ಸುರ ಶ್ರೇಷ್ಠ ವಾರುಣಿ
ದೊರೆಯೇ ೮

ಚಂದ್ರಶೇಖರ ಹರನೇ ಜಡಿಯೊಳು ಮಂದಾಕಿನಿಧರನೇ
ತಂದು ಹರಿಯ ಮನಮಂದಿರದೊಳು ತೋರಿಂದು
ತ್ರಿಯಂಬಕನೇ ೯

ಆರು ಸ್ತ್ರೀಯರೇ ನಿಮ್ಮಾ ಸ್ಮರಿಸುವೆ ಸಾರಸಾಕ್ಷನ ಪ್ರೇಮಾ
ನಾರೇರೆ ಕೃಷ್ಣನ ಮೋರೆಯ ತೋರಿಸಿ ಸಾರುವೆ ಇದ ಕಾಮಾ ೧೦

ಗರುಡನ ಕಾಮಿನಿಯೇ ಶ್ರೀ ಹರಿ ಪುರದಲಿ ನಿಂತಿದಿಯೇ
ಹರಿಯಲಿ ಎನ ಮನ ಪರಿಶೋಧಿಸುವುದು ಕರುಣದಿಂದಲಿ
ತಾಯ ೧೧

ಶೇಷ ಮನೋಹರಳೇ ಕಮಲಾವೇಶದಿ ಮೆರೆಯುವಳೇ
ಕೇಶವನಂಘ್ರಿಯ ತೋರಿಸು ಹರ್ಷಿತಕೇಶಯತನ ಪ್ರಿಯಳೇ ೧೨

ನಂದಿವಾಹನ ಮಹಿಳೇ ಸುರವರಗಂದು ಬೋಧಿಸಿದವಳೇ
ನಂದಬಾಲನ ಮುಖ ತಂದು ತೋರಿಸು ಶಶಿ ಮಂದಹಾಸನ
ಮುಖಳೇ ೧೩

ಜಂಭನಗೆಲಿದವನೇ ಅಮರಕದಂಬವ ಪಾಲಿಪನೇ
ಅಂಬುಧಿ ಶಯನನ ತೋರಿಸು ಮನದೊಳು
ದಂಭೋಲಿಯಕರನೇ ೧೪

ಮಾರನ ರತಿಪತಿಯೇ ಮನದೊಳು ಸೇರಿಸು ಹರಿಕಥೆಯೇ
ವಾರಿಜವದನೇರ ಮೋಹವ ಕೊಡದಿರು ಧೀರ
ನಿನ್ನನು ಮರೆಯೇ ೧೫

ಪ್ರಾಣ ಮರುದ್ಗನೇ ದೇಹದಿ ಪ್ರಾಣನಿಯಾಮಕನೇ
ನೀನು ಅಹಂಕೃತಿ ಕೊಡದಿರೆ ಶ್ರೀ ಹರಿ ಧ್ಯಾನದಿ ತೋರುವನೆ ೧೬

ಆದಿ ಮನುವೆ ಹರಿಯಾ ಚರಣವ ಬೋಧಿಸು ನೀನರಿಯಾ
ಮಾಧವ ರಾಮನು ಮಗನು ನಿನಗೆ ಕಲ್ಕಿ ಆದನು ನಿನತನಯಾ ೧೭

ತಾರಕವೇಶ್ವರನೇ ಕೃಷ್ಣನ ತೋರಿಸು ಉದ್ಧವನೇ
ಮಾರಹರನ ಪಿತ ಬದರಿಯೊಳಗೆ ಮುನಿವಾರಕೆ ಬೋಧಿಪನೆ ೧೮

ಸುರಪತಿ ವರಸತಿಯೇ ಎನ್ನೊಳು ಕರುಣಿಸು ಹರಿಮತಿಯೇ
ಹರಿವರ ಕುರುವರ ತಣಿಸಿ ನಮಿಪೆ ನಿನ್ನ ಪರಮ ಚಿತ್ರಾಂಗದಿಯೇ ೧೯

ಹರನೇ ಮಾರನೆ ದಕ್ಷಯಜ್ಞಧ್ವಿ ಪರಮಸಾಧಿತದೀಕ್ಷ
ಸರಸಿಜ ಭವಸುತ ಹರಿಯ ತೋರಿಸು ಮುರಹರಕೃತತನುರಕ್ಷಾ ೨೦

ಮಾರಸುತನೆ ನಿನ್ನ ನಂಬಿದೆ ತೋರಿಸು ಹರಿಯನ್ನಾ
ನಾರಿ ಭಷಿಯು ನಿನ್ನ ಭೂರಿ ಸುಖಿಸದಲೇ
ಸೇರಿ ಸ್ವಪ್ನದಿ ಧನ್ಯಾ ೨೧

ರತಿಯು ಎನ್ನನು ಕಾಯೆ ಶ್ರೀಹರಿಗತಿಮೋಹನ ಸೊಸೆಯೇ
ಪತಿಯುತ ಸಾಗಿರೆ ರಕ್ಷಿಸಿ ಮನುಗಳ ತತಿಗಳ
ನೀಡಿಸಿದೆ ಯೋಗಿ ೨೨

ಅರಳಿಯನೇರಿದನೇ ತಾಪಗಳ್ಹರಣವ ಮಾಡುವನೇ
ಕರುಣದಿ ತೋರಿಸು ಹರನ ಪದದ್ವಯ ಕರದಿ ಅಂಕುಶಧರನೇ ೨೩

ಇರುವಿ ಹರನ ಶಿರದಿ ಕುಲದೊಳು ಹರಿಯನು ನೀ ಪಡದೀ
ವರ ರೋಹಿಣಿ ಪತಿ ಸ್ಮರಿಸುವೆ ನಿನ್ನನು ಹರಿವರ ಸುತನಾಗಿ ೨೪

ಹರಿಯ ಕರುಣಿಲಿ ಪುಟ್ಟಿ ಕಪಿವರ ಕರದಿ ಸೇತುವೆ ಕಟ್ಟಿ
ಸರಸದಿ ಸೀತೆಯ ಅರಸಗರ್ಪಿಸಿ ನೀ ಪರಮ ಹರುಷ ಪಟ್ಟು ೨೫

ದಕ್ಷಿಣ ದಿಕ್ ಸ್ಥಿತನೇ ಪಾಪಿಗಳೀಕ್ಷಿಸಿ ಶಾಸಕನೇ
ಪಕ್ಷಿವಾಹನಪ್ರಿಯ ತೋರಿಸು ಹರಿಯ ನಿರೀಕ್ಷಿಸು ಭಕ್ತರನೇ ೨೬

ಶತರೂಪಾದೇವಿ ಸ್ವಯಂಭುವಿಗತಿ ಪ್ರಿಯಳಾಗಿರುವೀ
ಕ್ಷಿತಿಯೊಳು ಪ್ರಿಯರಿಗತಿಶಯಳೆನಿಸಿದಾ ಸತತ ಸುಖವನೀವೀ ೨೭

ವರುಣ ಜಲಾಧಿಪನೇ ಶ್ರೀ ಹರಿಯ ತರುಣಿಯ ಪಡೆದವನೇ
ಕರದೊಳು ಪಾಶವ ಧರಿಸಿದ ಶಂತನು ಸುರವರ ಪಾರ್ಷವನೇ ೨೮

ನಾರದ ಮುನಿ ನಿನ್ನಾ ಕಂಡವ ಸೇರುವ ಹರಿಯನ್ನಾ
ಸಾರುವೆ ಸಾಕ್ಷಿಯ ಧ್ರುವ ಪ್ರಲ್ಹಾದರ ತೋರಿಸು ಪರತರನೇ ೨೯

ದಕ್ಷನ ವರಸತಿಯೆ ಗಿರಿಜೆಯ ಕುಕ್ಷಿಲಿ ಜನಿಸಿದೆಯೇ
ಪಕ್ಷಿವಾಹನ ಪದವೀಕ್ಷಿಸಿ ಯಜ್ಞದಿ ದೀಕ್ಷಿತೆ ನುತಿಸಿದಿದೇ ೩೦

ಮೇಷವ ಸೇರಿದನೇ ಶ್ರೀಹರಿ ಕುಕ್ಷಿಲೆ ಜನಿಸಿದನೇ
ವಾಸುದೇವನ ಪದ ತೋರಿಸು ಬೇಗನುಪಾಸಕರಿಗೆ ಮುಖಿನೇ ೩೧

ಚ್ಯವನ ಮುನಿಯ ಪಿತನೇ ಶ್ರೀಹರಿ ಭುವನದಿ ಪೋದವನೇ
ದಿವಿಜ ಕುಲೋತ್ತಮ ದೇವನು ಹರಿಯಂದು ಭುವನದಿ
ಪೇಳಿದನೇ ೩೨

ಸರಸಿಜಸಖ ಸುತನೇ ಏಳನೆ ಅರಸಾಗಿರುತಿಹನೇ
ಶರಧಿಯೊಳಗ ಮತ್ಸ್ಯನರಿತು ಕೂಡಿಸಿ ಹರಿವರಗಳ ಪಡೆದವನೆ ೩೩

ಗಾಧಿರಾಜನ ತನಯಾ ರಾಮಗೆ ಬೋಧಿಸಿ ಮನುತತಿಯಾ
ಬಾಧಿಸೆ ಖಳರನು ರಾಮಗೆ ತೋರಿದಿ ಮೋದದಿ ಜಾನಕೆಯಾ ೩೪

ಅತ್ರಿ ಮೊದಲುಮಾಡಿ ಬ್ರಹ್ಮನ ಪುತ್ರರೆಲ್ಲರು ಕೂಡಿ
ಚಿತ್ತದೊಳಗೆ ಹರಿ ಪುತ್ಥಳಿ ತೋರಿಸಿ ಭೃತ್ಯಗೆ ದಯಮಾಡೀ ೩೫

ಪ್ರವಹ ವಾಯುನ ಮಡದಿ ಕೊಡು ಸಿರಿ ಧವನ ಮತಿಯ ದೃಢದಿ
ಪವನ ಪಿತನ ಮನೋಭವನದಿ ತೋರಿಸು ಸ್ತವನ
ಮಾಡುವ ಭರದಿ ೩೬

ಮಿತ್ರನಾಮಕ ಸೂರ್ಯ ರುಕ್ಮಿಣಿ ಪುತ್ರಿಯಾದಳು ಹರಿಯಾ
ಪತ್ನಿಯಾ ಗಂಡ ನಿನ್ನ ಪುತ್ರನ ಗೆಲಿದಳು ಪತ್ರ ಬಂದು
ಅರಿಯಾ ೩೭

ಸುರಗುರು ಮಾನಿನಿಯೇ ಚಂದ್ರನ ಕರದೊಳು ಸೇರಿದೆಯೇ
ವರ ಬುಧನ್ಹುಟ್ಟನು ಗುರುವಿನ ಸೇರಿದಿ ಪರಮ ಪತಿವ್ರತೆಯೇ ೩೮

ಗಜಮುಖ ಗಣಪತಿಯೇ ನಿನ್ನಾ ಭಜಿಸುವೆ ಹರಿಕಥೆಯೇ
ಭಜನೆಯ ಮಾಡುವವರ ಮಕೊಡು ಭುಜಗವಿದೇನರಿಯೇ ೩೯

ವಾಯುಸುತನೇ ಎನ್ನಾ ಭವದೊಳು ಮಾಯವ ತೆಗಿ ಇನ್ನಾ
ಕಾಯಜ ಪಿತ ನಿನ್ನಾ ಸೈನ್ಯದಿ ಸಾಕಿದ ಕಾಯುವ ಧರಣಿಯನ್ನಾ ೪೦

ಸುರರಿಗೆ ನಾಮಯವಾ ಮಾಡುವ ಸ್ಮರಿಪೆ ನಿಮ್ಮಯ ವಿಭವಾ
ಸೊರಗಿದ ಸಂಸ್ಕೃತಿಗರುವ ಪೋಗುವಾ ಸ್ಮರಿಸಿರಿ ಔಷಧವಾ ೪೧

ಅಲ್ಕಾಪುರಿನಾಥ ತ್ರಿಯಂಬಕನೊಲಿಸಿದ ಹರಿಯು
ತಾ ಸಲಿಲ ಜನಯನನು ರತಿಪತಿ ಜನಕನ ಪಥವ ತೋರಿಸಿ ೪೨

ಕರ್ಮಜ ದಿವಿಜರರೇ ತತ್ಸಮ ಸುಮ್ಮನಸೋತ್ತುಮರೇ
ಶರ್ಮ ಚಿದಾತ್ಮನ ತೋರಿರಿ ಸಂಸ್ಕೃತಿ ಷರ್ಮವಾಗೋದು
ದೊರೆ ೪೩

ಸುರಗಣ ಸೇವಿತಳೇ ಪುರರಿಪು ಶಿರದೊಳು ಕೂತಿಹಳೇ
ಗಿರಿಸಮ ಪಾಪಗಳಳಿಸಿ ಪಾಲಿಸು ಹರಿಯ ಮೋಹದ ಮಗಳೇ ೪೪

ವಾರಿಪ ಚಕ್ರವನು ತಿರುಗಿಸಿ ಧಾರುಣಿಯೊಳು ನೀನು
ಭೂರಿ ಸುಖವನು ನೀಡಿ ಹರಿಯನು ಎನ್ನೊಳು
ತೋರದಿರುವದೇನು ೪೫

ಸೂರ್ಯನ ಮೋಹಿಪಳೇ ಅಶ್ವಿನಿ ಕುಮಾರರ ಪಡೆದಿಹಳೇ
ನಾರಿ ಶಿರೋಮಣಿ ತೋರಿಸು ಹರಿಯನು ಸಾರಸ ಕರ
ಯುಗಳೇ ೪೬

ಬಾಣನುದರ ಜಾತೆ ಸ್ವಪ್ನದಿ ಕಾಣುತ ಮನಸೋತೆ
ಪಾಣಿಯ ಸೇರಿದಿ ನೀನನಿರುದ್ಧನ ಧ್ಯಾನಿಸುವಿನಮಾತೆ ೪೭

ಸೋಮನ ಸುಂದರಿಯೇ ಎನ್ನೊಳು ಪ್ರೇಮದಿ ನೀನುಡಿಯೇ
ವಾಮನ ಪಿತನನು ತೋರಿಸು ರೋಹಿಣಿ ಹೇಮ ಸುಂದರ
ಲತಿಯೇ ೪೮

ಮಹಿಷವಾಹನ ಪ್ರಿಯಳೇ ಮಾರುತ ಮಹಿಳೆಯ ಸೇವಿಪಳೇ
ಮಹಿಸುರನೊಳು ದಿವ್ಯ ಮಾತನಾಡಿದಿ ಹರಿ ಮಹಿಮೆಗಳನು
ಪೇಳೇ ೪೯

ಕೂರ್ಮ ಮೊದಲು ಸುರರೇ ಪ್ರಸಿದ್ಧಿಗೆ ಬಾರದ ಪದದವರೇ
ನಾರದ ಕೇಳಿದ ನಿಮ್ಮ ಮಹಿಮೆಯನು ನಾರಾಯಣ ಪ್ರಿಯರೇ ೫೦

ಕೃಷ್ಣವರ್ತ್ಮನೆ ಸತಿಯೇ ನಿನ್ನನು ತುಷ್ಟಿಸುವುದನರಿಯೇ
ಕೃಷ್ಣನ ಮನದೊಳು ತೋರಿಸು ಎನ್ನಯ ಇಷ್ಟ ಮಂದಿರ
ಸಿರಿಯೇ ೫೧

ಸ್ವಾಹೂದಕಗತನೇ ಪಾರ್ಥಕೆ ಮೋಡಕ ಕೊಡುವ ಸುತನೇ
ವ್ಯೂಹದಿ ಮಾಡಿದಿ ಹಾದಿಯ ಕುರುಗಳ ಬಾಧಿಸಿ ಗೆಲಿದವನೇ ೫೨

ಸುರವೈದ್ಯರ ತರುಣೀ ಹರಿಯೊಳಗರಹು ಎನ್ನನು ಕರುಣೀ
ವರಲಕ್ಷ್ಮಿಸಿರಿಯಲಿ ಪರರತಿ ಕಾಳಿದಿ ಧರಿಸುವಿ ಹರಿ ಸ್ಮರಣೀ ೫೩

ಶಿಷ್ಟರ ಪಾಲಿಪನೇ ಹರಿರಿಪು ದುಷ್ಟರ ಕಾಡುವನೇ
ಅಷ್ಟಮ ಜನ್ಮದೊಳಿದ್ದರು ಇರು ಹರಿ ದೃಷ್ಟಿಯ ಕೊಡು
ಸಖನೇ ೫೪

ಕರ್ಮವ ಪಾಲಿಪನೇ ಶ್ರೀಹರಿ ಧರ್ಮವ ನಡಿಸುವನೇ
ನಮ್ಮ ಕರ್ಮಗಳೆಲ್ಲ ಬ್ರಹ್ಮಗರ್ಪಿಸಿ ಮೋಕ್ಷ ಶರ್ಮವ
ನೀಡುವನೇ ೫೫

ಅಜಾನುಜ ಸುರರೇ ದಿವಿಜರ ಪೂಜೆಯ ಮಾಡುವರೇ
ವಾಜಿಮುಖನ ಪದ ನೋಡುವ ಸೌಖ್ಯಕೆ ಭಾಜನ
ಮಾಡುವರೇ ೫೬

ಹೃದಯದಿ ಶ್ರೀಹರಿಯ ನೋಡುತ ಪದುಮಾಕ್ಷನ ಚರ್ಯಾ
ವದಗಿಸಿ ಭಕ್ತರ ಹೃದಯ ತೋಷಿಸುವದು ಸದಮಲ
ಋಷಿವರ್ಯಾ ೫೭

ಪಿತರುಗಳನು ನಮಿಪೆ ನಮಗತಿಹಿತಕರರೆಂದೆನಿಪೆ
ಸತತ ಹಿರಿಯ ಪದ ಪಥವನು ತೋರಿಸಲತಿಶಯ ನಾ
ನುತಿಪೆ ೫೮

ಸುರಗಾಯಕರೆನ್ನಾ ಕಿವಿಯೊಳು ಹರಿಯ ಮಹಿಮೆಯನ್ನಾ
ಪರಿಪರಿ ಪೇಳುತ ಮರಸಿ ವಿಷಯಂಗಳ ಹರಿಯ
ತೋರುವದಿನ್ನಾ ೫೯

ಮಾನುಷ ಗಾಯಕರೇ ಶ್ರೀಹರಿ ಮಾನಸವಲಿಸುವದೇ
ಏನಾದರು ಹರಿಧ್ಯಾನ ಮರಿಯದಂತೆ ಗಾನವ ಮಾಡುವರೇ ೬೦

ಭೂಪತಿಗಳೆ ನಿಮ್ಮಾ ನಂಬಿದ ಈಪರಿಯಲಿ ತಮ್ಮಾ
ಶ್ರೀಪತಿ ಪೂಜೆಗೆ ಈಪ್ಸಿತ ಧನವನು ಕಾಪಾಡಿರಿ ನಮ್ಮಾ ೬೧

ಮಾನುಷ ಸೋತ್ತುಮರೇ ಕರ್ಮದ ಮಾನವ ಪೊತ್ತವರೇ
ಧ್ಯಾನಿಸಿ ಮನದೊಳು ಹರಿಯನು ಮೋಕ್ಷದ
ಸ್ಥಾನವನೇರುವರೇ ೬೨

ಜಂಗಮ ಜೀವಿಗಳೇ ಹರಿಚರಣಂಗಳ ಸ್ಮರಿಸುತಲೇ
ಲಿಂಗವು ಪೋಗಲು ಭುಂಜಿಪ ನೀವು ಸುಖಂಗಳ
ಮೋಕ್ಷದಲೆ ೬೩

ಸ್ಥಾವರ ಪ್ರಾಣಿಗಳು ಹರಿಯನು ಭಾವಿಸಿ ಚಿತ್ತದಲೇ
ಪಾವನಪಿತ ನಿಮ್ಮ ಕಾವನು ಸಂತತ ದೇವನು ಮರಿಯದಲೇ ೬೪

ಇಷ್ಟು ಜೀವಿಗಳನ್ನಾ ನಂದನ ಪುಟ್ಟ ಬಾಲನ ಘನ್ನಾ
ಸೃಷ್ಟಿಸಿ ಪಾಲಿಸಿ ಮೋಕ್ಷದಿ ಸಂತತ ವಿಷ್ಟಕೊಡುವ ಧನ್ಯಾ ೬೫

ತಾರತಮ್ಯದಿ ಸುರರ ತುತಿಸುವ ಮಾರುತ ಮತದವರ
ಮೀರದೆ ಶ್ರೀಹರಿ ತೋರಿಸಿ ತನ್ನನು ನೀಡುವ ಸುಖಪೂರಾ ೬೬

ಸಂತತ ಈ ತುತಿಯಾ ಪಠಿಸುವ ಸಂತರ ಸುರಗೇಯಾ
ಅಂತರಂಗದಿ ತನ್ನ ತೋರಿಸಿ ಕಾವನು ಭಕ್ತಜನಪ್ರಿಯನು ೬೭

ನಿತ್ಯದಿ ಪಠಿಸುವನು ಬೇಡಲು ಪುತ್ರರ ನೀಡುವನು
ವಿತ್ತವ ನೀಡುವ ಮರ್ತ್ಯ ಮೃಗೇಂದ್ರನು ಭಕ್ತಜನಪ್ರಿಯನು ೬೮

ಇಂದುರೇಶನು ಎನ್ನಾ ಮಾನಸ ಮಂದಿರದೊಳು ತನ್ನಾ
ನಿಂದು ಈ ತುತಿಯನುನಂದದಿ ನುಡಿಸಿದನೆಂದು ನುಡಿದೆ
ಮುನ್ನಾ ೬೯

## ೩ಋ. ಗುರುನಮನ

### ೧೪೯

### ಶ್ರೀ ಜಯತೀರ್ಥರು

ಮಂಗಳಂ ಜಯ ಮಂಗಳಂ ಪ

ಸಾರವೇಷದಿ ನದಿ ಪೊಕ್ಕವಗೆ
ನೀರನು ಮುಖದಲಿ ಕುಡಿದವಗೆ
ತೋರಿ ಅಕ್ಷೋಭ್ಯರು ಕರಿಸಲು ತ್ವತ್ಪದ
ವಾರಿಜಯುಗಕೆ ನಮಿಸಿದವಗೆ ೧

ಚಾರು ಸನ್ಯಾಸವ ಕೊಂಡವಗೆ ಆ–
ಗಾರಕೆ ಪುನರಪಿ ಬಂದವಗೆ
ನಾರಿಮಣಿಗೆ ವಹ್ನಿ ಸರ್ಪನಾಕೃತಿ ತೋರಿ
ಭೂರಿವಾದಿಗಳು ಗೆದ್ದವಗೆ ೨

ಎಷ್ಟೋ ಗ್ರಂಥಗಳ ನಿರ್ಮಿಸಿದವಗೆ
ಮುಷ್ಟಿಮಣಿ ಸೇತು ಬಂಧಕಗೆ

ಇಷ್ಟು ಸ್ತುತಿಗೆ ಮೆಚ್ಚಿದ ಇಂದಿರೇಶನ
ತನ್ನಾ ಮನದಲಿ ಸೃಷ್ಟಿಸುತ ನಿಲ್ಲಿಸಿದವಗೆ ೩

## ೧೫೦

### ಶ್ರೀ ವಾದಿರಾಜರು

ಚೌಪದನ ಚೌಪದನ ಜನರೆಲ್ಲ ಕೇಳಿ ಚೌಸಷ್ಟ
ವಿದ್ಯಕ ಇದು ಗರ್ಭಸ್ಥಾನ ತಿಳಿದಿರಲಿ ಪ

ವಂದಿಸುವೆ ಇಂದಿರಾರಾಧ್ಯ ನಿನ್ನಡಿಗೆ
ಬಂದ ವಿಘ್ನವ ತರಿದು ವೇದಾರ್ಥ ನುಡಿಗಳಿಗೆ
ಛಂದಾಗಿ ಪೇಳುವ ಸುಜ್ಞಾನ ಕೊಡುಯೆನಗೆ
ತಂದೆ ತಾಯಿ ಗುರು ಬಂಧು ನೀನೆ ನಿಶ್ಚಯ ತಿಳ್ಕೋ ಹಾಗೆ ೧

ಎನ್ನುವವ ಗುಣಕೆ ಮಿತಿಯಿಲ್ಲ ಎಣಿಸದಿರು ಸ್ವಾಮಿ
ಅನ್ಯಾಯ ಅಪರಾಧ ಅತಿಶಯ ಮಾಡಿದೆನೆ ಪ್ರೇಮಿ
ಎನ್ನ ಬಿಟ್ಟು ಕಡಿಗೆ ಕೇಳಿಬಂದೆ ನಿನ್ನ ಮಹಿಮಿ
ನಿನ್ನ ಪೊಗಳುವ ಬುದ್ಧಿ ಪ್ರೇರಿಸೊ ಬೃಂದಾವನಂತರ್ಯಾಮಿ ೨

ಮಂದಮತಿ ನಾನು ಛೆಂದಾಗಿ ಬೋಧಾಗೊ
ಹಾಗೆ ವೇದ ವೃಂದಾರ್ಥ ದೃಷ್ಟಿಯನೆ ಕರೆಯೋ
ಮುಂದಣ ವಾಯು ನೀನೆ
ಅಂಬೊ ಹಾಗೆ ಯತಿ ಶಿರೋಮಣಿ ಎನ್ನ ೩

ಎತ್ತಿ ಮುದ್ದಾಡಿ ಅಮ್ನಾರ್ಥ ಕೇಳೆಂದ
ಕರುಣ ದೃಷ್ಟಿಯಲಿ ನೋಡಿ ಸುತ್ತ
ಭೂವಲಯದೊಳಿಲ್ಲದೆ ಸ್ತೋತ್ರ ದಯಮಾಡಿ
ಇತ್ತ ಎನ ಕೈವಳಗ ಉತ್ತಮೋತ್ತಮ ವಂದ್ಯೆ ಭಯಕರ ನೀಡಿ ೪

ವಂದನೆಯ ಮಾಡಿದೆನಿವರ ಪದದ್ವಂದ್ವಗಳಿಗೆ ಎನ್ನ
ತಂದೆ ತಾಯಿ ವಾದಿರಾಜನೆಂಬುವೆನು ನುಡಿನುಡಿಗೆ
ಇಂದಿರೇಶನ ಮಹಿಮೆ ತಿಳಿಸೊ ನೀ ಯನಗೆ
ಬಂದ ಭಯಗಳ ಕಳಿದು ವಿಘ್ನಬಾರದ ಹಾಗೆ ೫

## ೧೫೧

### ಶ್ರೀ ವಾದಿರಾಜರು

ವಾದಿರಾಜಗುರು ದಯಮಾಡೊ ಎನ್ನಾ, ಪಾದಾನತನನ್ನಾ
ವಾದಿಸಂಘವನು ಭೇದಿಸಿದ್ಯೊ ಘನ್ನಾ ಹಯವದನನ್ನಾ
ಮೋದದಿಂದ ಹೃದಿ ನೋಡಿದೆಯೊ ರನ್ನಾ
ಸಾಧುಸಂಗವನು ಪರಿಪಾಲಿಸಿನ್ನಾ ಋಜುಗಣ ಮೋಹನ್ನ ೧

ಕೃಷ್ಣದರ್ಶನಕೆ ತುಷ್ಟಿಸಿ ನೀ ಬಂದು ಮಾರ್ಗದಲಿ ನಿಂದು
ದುಷ್ಟ ದೈತ್ಯನುವಾದಕ ಬರಲಿಂದು
ಇಟ್ಟಿಯಾ ಆನಂದ ಭಟ್ಟರಲ್ಲಿ ಭಾರರಸ ಕರುಣಾಪೂರ ೨

ಶ್ರೇಷ್ಠ ನಿನ್ನಯ ದೃಷ್ಟಿಯ ರಸದಿಂದಾ ವಾದಿಯ ಕರದಿಂದಾ
ಕೊಟ್ಟ ಪತ್ರವನು ತಿರುಗಿಸಲಾನಂದಾ ಭಟ್ಟರಿಗೆ ನೀ
ಕೊಟ್ಟಿಯೊ ಪರಿರಂಭಾ ಮಾಡದಲೆ ವಿಲಂಬಾ ೩

ನೀಡಿದ ಪತ್ರದ ನೋಡುತ ಬಹು ಚರಿತಾ ಆನಂದವ
ಬಿಡುತಾ ಬೇಡಿರಿ ವರಗಳ ನೀಡುವೆ ನಾನೆನುತಾ
ನೀಡಿದ್ಯೊ ಮನ ಸಮಗಾಡನೆ ಸುತಗೀತಾ ನಿಮಗಾಗಲೆನುತಾ ೪

ತಂದೆ ನಿನ್ನ ದಯದಿಂದಲಿ ವಂಶಾ ಬೆಳೆದಿತೊ ಸುಯಶಾ
ಇಂದು ನೋಡೊ ಹತಬಂಧನ ಭವಪಾಶಾ
ಕಂದ ನಾನು ನಿನಗಿ ಇಂದಿರೇಶ ದಾಸಾ ಋಜುಗಣದೊಳಗೀಶಾ ೫

## ೧೫೨

### ಶ್ರೀ ವಿದ್ಯಾಧೀಶರು

ದಯಮಾಡೋ ಗುರುವೇ ವಿದ್ಯಾಧೀಶ ಪ

ದಯಮಾಡೋ ಗುರುವೆ ಸುದಯಪೂರ್ಣ ಹೃದಯಾನೆ
ದಮಿಸಿ ಅವಿದ್ಯಾ ಮಾಧವದಾಸ ಪ್ರೀಯಾನೆ ಅ.ಪ.

ನಿನ್ನ ಹೊರತು ನನಗನ್ಯ ಗತಿಯಿಲ್ಲ ಧನ್ಯ
ನಿನ್ನಯ ಕುಲ ಮುನ್ನ ಉದ್ಧರಿಸಯ್ಯಾ ೧

ಯಾತಕೆನಗೆ ಚಿಂತೆ ತಾಪ ನಿನಗೆ ಇಲ್ಲಾ
ಪೋತಗೆಲ್ಲರು ಬೋಧಾ ಯೋತಿ ಸಿಕ್ಕುವುದುಂಟೆ ೨

ಹಾಕಿದ ಬೀಜವಾ ಬೀಕಲ ಮಾಡೋರೆ
ತೋಕನಲ್ಲೆ ಕೃಪ ಯಾಕೆ ಮಾಡವಲ್ಲಿ ೩

ಇದ್ದು ಸಾರ್ಥಕ ಅನವದ್ಯ ಕುಲದಿ ಪುಟ್ಟಿ
ವಿದ್ಯಾರಹಿತನಾಗಿ ಹದ್ದಿನಂದದಿ ನಾನು ೪

ನಿಂದಿಸುವರೊ ನಿನ್ನ ವಂದಿತ ಕುಲವನ್ನು
ಮುಂದೆ ಮಾರ್ಗವ ಪೇಳಿಂದಿರೇಶನ ಪ್ರೀಯಾ ೫

## ೧೫೩

### ಶ್ರೀ ರಾಘವೇಂದ್ರರು

ಗುರುರಾಜರೆ ಎನ್ನ ಪರಿಪಾಲಿಸುವುದು ಬಿಟ್ಟು
ವರ ಮಂತ್ರಾಲಯದೊಳು ಇರುವುದುಚಿತವೇನೊ ಪ

ಬಡವ ಭಕ್ತ ಕಷ್ಟಕಲೊಳಿರಿಸಿ ತುಂಗಾ
ದಡದಿ ನಿಂತೆನ್ನ ಕೈಪಿಡಿಯದೆ ಪೋಗುವರೇನೊ ೧

ಕಡು ಸೇವಕನೊಳಿಂಥ ಕಡುಕೋಪವ್ಯಾತಕೆ
ನಡೆ ನುಡಿ ಎನ್ನ ತಪ್ಪು ಪಿಡಿದು ಪೋಗುವರೇನೊ ೨

ಎಂದಿಗಾದರು ನಿನ್ನ ಪೊಂದಿದವನಲ್ಲೋ
ಮುಂದೇನುಗತಿ ಪೇಳೊ ಇಂದಿರೇಶನ ಪ್ರಿಯ ೩

## ೧೫೪

ರಾಘವೇಂದ್ರ ರಾಯರೆಂಬೋ ಮಹಾ
ಯೋಗಿವರರ ನೋಡ್ಯೆ ಪ

ಭಾಗವತರು ಶಿರಬಾಗಿ ಕರೆಯಲತಿ
ವೇಗದಿ ರಥದೊಳು ಸಾಗಿಬರುವ ಶ್ರೀ ಅ.ಪ.

ಮಿನಗುವ ಘನವಾಹನಗಳ ರಥ ಶೃಂಗರವೋ ಕರದೊಳು
ಕನಕಛಡಿ ಕೊಡಿಗಳನುಪಮ ಭಾರವೊ
ಅನಿಳ ನಿಗಮದಿ ನಿಪುಣ ಸುಜನರ ಪರವಾರವೋ ಪರಸ್ಪರ
ಪಣದ ವೇದ ಘೋಷಣ ಸುಸ್ವರ ಗಂಭೀರವೋ
ಘನ ಗುಣ ಗಣಮಣಿ ಮುನಿರಾಯನ ಮನ
ದಣಿಯ ಪಾಡಿ ಕುಣಿಕುಣಿದಾಡಿ ಶಿರವ
ಮಣಿಸುವರೋ ಗುಣವೆಣಿಸುವರೋ ದ–
ಕ್ಷಿಣದಿಂ ತೆರಳಿ ವರುಣನ ಬೀದಿಯೊಳು ೧

ಧರಣಿ ಸುರವರನಿಕರ ಕುಮುದೋದಯ ಚಂದ್ರನ ಮದ (ನ) ದು–
ರ್ಧರ ದ್ವಿರದನ ತೆರಸಿ ಮೆರೆದ ಅಪ್ರತಿಮ ಮುನೀಂದ್ರನ
ಸರಸ ಸುಧಾ ಪರಿಮಳ ಬೆರೆದ ಸುಗುಣಸಾಂದ್ರನ ಧರೆಯೊಳು
ಸಿರಿ ವಿಜಯೀಂದ್ರರ ಕುವರನೆನಿಪ ಸುಧೀಂದ್ರನ
ಸರಸಿಜ ಸಂಭವ ಶರಣ್ಯ ಸುಂ–
ದರ ನಿಜಾಂಘ್ರಿ ಭಜಕರ ಭಾಗ್ಯೋದಯ

ಸುರರ ಸುರಭಿಗೆ ಸಮರೆಂದು ಸಾರಿ ಡಂ
ಗುರ ಹೊಯಿಸುತ್ತ ಉತ್ತರ ಬೀದಿಯೊಳು ೨

ಹಲವು ಬಗೆಯ ವೆಗ್ಗಳ ವಾದ್ಯಗಳ ಸುವಾದ್ಯವೋ ಆರುತಿಯ
ಬೆಳಗುವವರು ಹಗಲ ದೀಪಗಳಗಾಧವೋ
ಇಳೆಯೊಳು ಜನುಮ ಸಫಲವೆಂಬುವರ ವಿನೋದವೋ ಹಾಸ್ಯದ
ಲಲಿನೆಯರಡಿ ಘಿಲಘಿಲಕೆಂಬುವ ನಟನ ಭೇದವೋ
ಭಳಿರೆ ಭಳಿರೆ ಭಜಿಸುವರ ಭಕುತಿ
ಬಲಿಗೊಲಿದ ಇಂದಿರೇಶನ ಕರದರ
ಗಿಳಿಯೊ ನಳಿಯೊ ನಳಿನಾಂಘ್ರಿಯುಗದಿ
ನಲಿಯುತ ಸುರರಾಜನ ಬೀದಿಯೊಳು ೩

## ೧೫೫

ಯೋಗಿವರ್ಯ ಶಿರಬಾಗಿ ನಮಿಸುವೆನು ಶ್ರೀ ರಾಘವೇಂದ್ರನೆ ಪ

ಹೇಳಿದ ವಚನವ ಕೇಳಿ ಮನದಲಿ ಬಹಳ ಸುಖಿಸುತಲಿ
ಕಾಲಕಾಲಕೆ ಶ್ರೀ ಲಲಾಮನ ಲೀಲೆ ಪಾಡುತ ವ್ಯಾಳೆ ನೋಡುವಿ ೧

ಸತ್ಯವಾಣಿಯು ಮಿಥ್ಯವಾಗದು ಮತ್ತೆ ಲೋಕದೊಳು
ಚಿತ್ತದೊಳು ಅನಿತ್ಯ ಚಿಂತಿಸಿ ವೃತ್ತಿ ಕೃಷ್ಣನೊಳು ಇತ್ತು ಪಾಡುವಿ ೨

ಎಲ್ಲ ಬಿಟ್ಟವ ಸುಳ್ಳನಾಡೊದು ಎಲ್ಲಿ ಕಾಣಿಸದು
ಫುಲ್ಲನಾಭನ ಭಕ್ತನಲ್ಲಿ ಹೇಳಿದ ಸುಳ್ಳು ಕಾದುಕೋ ೩

ಆಶೆ ತೋರಿಸಿ ನಿರಾಶೆ ಮಾಡುವುದು ದಾಸ ಜನರೊಳಗೆ
ಈಶ ನಿಜ ಬಹು ತೋಷವೆಂಬುದು ಭಾಷಿಸದೆ
ಯತಿವೇಷ ದಿವಿಜನೆ ೪

ಶಕ್ತಿವಚನವ ಕೃತ್ಯಮಾಡಲು ಶಕ್ತನಾರದನು ಒತ್ತಿ ಪೇಳಿದ
ಹತ್ತರಾತನ ಭೃತ್ಯರಾಶಯ ಪೂರ್ತಿಮಾಡಿಸು ೫

ನೀನೇ ಬಾಂಧವ ನೀನೇ ದೈವತ ನೀನೇ ಗುರುಪಿತನು
ನಾನು ನಂಬಿದೆ ಮೌನಿ ತೋರಿಸು ವೇಣು ಬಾಲಕನ ಜವ ೬

ಒಂದೆ ಮನದಲಿ ನಿಂತು ನಿನ್ನ ಪದದ್ವಂದ್ವ ಭಜಿಸುವೆನು
ಇಂದಿರೇಶನ ಮುಂದೆ ಗುರುವರ ಇಂದು ಎನ್ನೊಳು
ನಿಂದು ಪ್ರಾರ್ಥಿಸು ೭

## ೧೫೬

ಮಂಗಳಂ ಜಯ ಮಂಗಳಂ ಪ

ಕೂರ್ಮಾಸನದೊಳಗೆ ಕೂತವಗೆ
ನಾರದ ಮುಖವನು ನೋಡುವಗೆ
ನಾರಸಿಂಹನ ಪಾದವಾರಿಜವನು ನಿಜ
ಚಾರು ಶರೀರದೊಳಿಟ್ಟಾರಾಧಿಪಗೆ ೧

ದಂಡ ಕಮಂಡಲ ಭೂಷಿತಗೆ
ಹಿಂಡು ಶಿಷ್ಯರ ಮಧ್ಯ ಕುಳಿತು ಜಯೇಶ್ವರ ಆ-
ಖಂಡಬೋಧರ ಶಾಸ್ತ್ರ ಪೇಳುವಗೆ ೨

ಮಂದಗಮನೆ ಪದ ಕೇಳಿದವಗೆ
ತಂದ ಮಂತ್ರಾಕ್ಷತೆ ಕೊಟ್ಟವಗೆ
ಇಂದಿರೇಶನ ಪದ ಪಾಡುವರನೆ ಕಂಡು
ಬಂದು ಮೋದಿಪ ಯತಿರಾಯಗೆ ೩

## ೧೫೭

ರಾಘವೇಂದ್ರ ಗುಣಸಾಗರ ನೋಡೆನ್ನ
ಹರಿಯ ತೋರಿನ್ನ ಪ

ಮಂತ್ರಾಲಯದೊಳು ಮಂದಿರ ಮಾಡಿರುವಿ
ಮನೆಮನೆಯಲ್ಲಿರುವಿ

ಸಂತತಿ ಸಂಪತ್ತುಗಳನು ನೀ ಕೊಡುವಿ
ಸಂತರ ರಕ್ಷಿಸುವಿ
ತಂತ್ರ ದೀಪಿಕೆಯೆಂಬೊ ಗ್ರಂಥವ
ರಚಿಸಿರುವಿ ಸೂತ್ರಾರ್ಥಗಳರುಹಿ ೧

ಎಷ್ಟೋ ಗ್ರಂಥಗಳ ವ್ಯಾಖ್ಯಾನವ ಮಾಡಿ
ದೇವಾರ್ಥವ ನೋಡಿ
ಕೆಟ್ಟವಾದಿಗಳ ವಾದದಿ ಜಯಮಾಡಿ
ಸೂರಿಗಳನು ಕೂಡಿ
ಕುಷ್ಠಮದಾದಿ ರೋಗಗಳನು ಹರಿ ಬೇಡಿ
ಕಳೆಯುವ ಗುರುಮೇಧಿ ೨

ಒಂದು ಚರಿತೆಯ ಪೇಳಲು ನಾನರಿಯೆ
ಇರುವೆನು ಈ ಪರಿಯೆ
ನಂದಬಾಲನ ಪ್ರಿಯ ನೀ ಎನಗೊಲಿಯೆ
ದುರಿತಾಬ್ಧಿಗೆ ಸರಿಯೇ
ಇಂದಿರೇಶನ ಪದ ಸಂದರುಶನ ದೊರೆಯೆ
ನಿನ್ನಯ ನಾ ಮರೆಯೆ ೩

## ೧೫೮

ರಾಘವೇಂದ್ರ ಗುರು ನಮೋ ನಮೋ ಯೋಗಿ
ಜನೇಡಿತ ನಮೋ ನಮೋ ಪ

ವಾದಿಜಯಪ್ರದ ನಮೋ ಸಾಧುಜವಾವ ನಮೋ ನಮೋ
ಶ್ರೀಧರ ಬೋಧಕ ನಮೋ ಅಗಾಧತವ ಮಹಿಮ ನಮೋ ೧

ಎಷ್ಟು ದಿನವಾಯಿತು ನಮೋ ಶ್ರೀ ಕೃಷ್ಣನ ಕಾಣದೆ ನಮೋ
ಭೆಟ್ಟಿಯ ಮಾಡಿಸು ನಮೋ ವಿಷ್ಣು ದಾಸರೇಣ್ಯನೆ ನಮೋ ೨

ತುಷ್ಟ ಮುಖಾಯ ನಮೋ ಶಿಷ್ಯರು ಸೇವಿಸೆ ನಮೋ
ದೃಷ್ಟಿಲಿ ಕಳೆಯುವಿ ನಮೋ ಸರ್ವೇಷ್ಟವರಪ್ರದ ನಮೋ ೩

ಚೂತರಸದಿ ಹರಿ ನಮೋ ಪೋತನು ಬೀಳಲು ನಮೋ
ಆ ತನು ತ್ಯಜಿಸಿದ ನಮೋ ಜೀವಾತು ನೀನಾದೆ ನಮೋ ೪

ವರಜಯತೀರ್ಥರ ನಮೋ ಸುರಸ ಸುಗ್ರಂಥಕೆ ನಮೋ
ಪರಿಮಳ ಟೀಕೆಯ ನಮೋ ವಿರಚಿಸಿ ರಾಜಿಪೆ ನಮೋ ೫

ರತುನಮಾಲಿಯ ನಮೋ ಹುತವಹಗಿತ್ತೆಯೋ ನಮೋ
ಅತಿಶಯ ಪ್ರಾರ್ಥಿಸೆ ನಮೋ ಪ್ರಥಮ ತೆಗೆದುಕೊಟ್ಟೆ ನಮೋ ೬

ನಾರದ ಶಿಷ್ಯನೆ ನಮೋ ನಾರಸಿಂಹಾರ್ಚಕ ನಮೋ
ಸೇರಿ ಭಜಿಸಿ ನಿಮ್ಮ ನಮೋ ಎನ್ನ ಚಾರುದೃಷ್ಟಿಲಿ
ನೋಡು ನಮೋ ೭

ನಾಕವತಾರನೆ ನಮೋ ಲೋಕನಾಥಾಶ್ರಯ ನಮೋ
ಕಾಕು ದರ್ಮತ ಹರ ನಮೋ ಶ್ರೀಕರ ಸೇವಕ ನಮೋ ೮

ವೃಂದಾವನದಲಿ ನಮೋ ನಮೋ ಭಕ್ತ ವೃಂದರಲಿಂದು ನೀ ನಮೋ
ಬಂದು ಮಾತಾಡುವಿ ನಮೋ ಇಂದಿರೇಶನ ಪ್ರಿಯ
ನಮೋ ನಮೋ ೯

## ೧೫೯

ಆರುತಿ ಮಾಡುವೆ ನಾ ಪ್ರಲ್ಹಾದಗೆ ಪ

ಆರುತಿ ಮಾಡುವೆ ಧಾರುಣಿಯೊಳು ರಘು
ವರನರ್ಚಿಪ ಯತಿವರ ವಂದಿಪಗೆ ಅ.ಪ.

ಸಾಲಿಯೊಳಗೆ ಕೂತು ಬಾಲಕರಿಗೆ ಹರಿ
ಲೀಲೆ ಪೇಳಿದ ಭಕ್ತ ಲೋಲನಾದವಗೆ ೧

ಐದನೇ ವರುಷದಿ ಕಾದು ತಂದೆಯ ಕೂಡ
ಶ್ರೀಧರ ನರಹರಿ ಪಾದ ಕಂಡವಗೆ ೨

ಬಂದು ಭೂಮಿಲಿ ರಾಘವೇಂದ್ರ ನಾಮದಿ ಪೂಜಿ
ಸಿಂದಿರೇಶ ಪುಟ್ಟ ಬೃಂದಾವನದಿ ಕೂತ ೩

## ೧೬೦

*ಮುನಿಯ ನೋಡಿದಿರಾ ಮಾನವರಾ ಪ

ಮಾಡಿರಿ ಪೂಜೆಯನು ನೀಡಿರಿ ಭಿಕ್ಷವನು
ರೂಢಿಯೊಳಗೆ ಇವ ಗೂಢ ದೇವಾಂಶನು ೧

ಬೆಳಗಿರಿ ಆರುತಿಯ ಸುಲಲಿತ ಕೀರುತಿಯ
ಇಳೆಯೊಳು ಪಾಡಿರಿ ಚೆಲುವ ಸನ್ಯಾಸಿಯ ೨

ಶ್ರೀಶನ ತೋರುವನು ದೋಷವ ಕಳೆಯುವನು
ದಾಸ ಜನರಿಗೆ ಇಂದಿರೇಶ ಸುಪ್ರೀಯನು ೩

## ೧೬೧

ಬಂದನೊ ಸುಜನರ ಸಂದಣಿಯೊಳಗತಿ
ಸುಂದರ ರಥವೇರಿ ಗುರುವರ ಬಂದನೊ ಪ

ಬಂದಿ ಜನರು ಮುದದಿಂದ ಬಹುಪರಾ
ಕೆಂದು ನುಡಿಯಲಾನಂದ ಬೀರುತ ಬಂದನೊ ಅ.ಪ.

ಕ್ಷಿತಿ ಸುರಪತಿ ಶುಭಮತಿ ಬಲ್ಮತದವರೊ
ಯತಿ ಪರರತಿಶಯ ದಶಮತಿ ಸಂ–

---

* ಈ ಮುನಿಯಾರೆಂದು ತಿಳಿಯದು.

ಸ್ಕೃತ ಭಾಷಣದವರೊ ಭಯಹರಣನೆಂಬೊ ವಾ–
ರುತಿಯ ಕೀರುತಿಯ ಪೂರುತಿಯ ಕೇ–
ಳುತ ಮಹಿಮಾಂಗಣ
ಕಥಿಸುತ ಗ್ರಂಥಿಸುತ ತುತಿಶುತ
ನುತಿಸಿ ಯತಿ ಶಿರೋಮಣಿಗೆ
ರತುನ ಖಚಿತವಾದಾರುತಿಯ ಬೆಳಗಿರೆ ೧

ಶರಣರ ಸುರತರು ವರದ ಶಿಖಾಮಣಿಯೊ
ಮುರಹರ ಚರಣಾಂಬುಜ ವರ ಮಧುಕರ ಸಿರಿ
ಪರಮಹಂಸರ ಧಣಿಯೋ ಕೋವಿದ ಬುಧರೊಳು ಮದ
ಕರಿಯೋ ಶುಭ ಧೊರೆಯೋ ವಾಗ್ಝರಿಯೋ
ಸರಸಾರ್ತಿ ಜನಗಳ ನೆರೆಸುತಾದರಿಸುತಾ
ಬಲು ಸುಖ ಸುರಿಸುತಾ ದರಿದ್ರವ ತರಿದು
ಪೊರೆದೂ ಕರೆದವರಿಗೆ ಕೈ–
ಶರೆಯಾಗುವೆನೆಂಧರುಷದಿ ಗುರುವರ ಬಂದನೊ ೨

ಬಗೆ ಬಗೆ ಮಣಿಗಳು ಬಿಗಿದ ಬಿಳಿಗೋಡಿಗಳೊ ವಾ
ಲಗ ಘೊರ್ಮಿಡೆ ಭಟರುಗಳ ಹೆಗಲ ಮ್ಯಾಲೆ
ಝಗ ಝಗಿಸುವ ಛಡಿಗಳೊ ಕುಣಿಕುಣಿದಾಡುವ
ವರಹಿ ವೇಣಿಗಳೋ ವಾಣಿಗಳು ಶ್ರೀಣಿಗಳು ಶೋಭಿಸೆ
ಸುಜನರು ಕೈ ಮುಗಿವರು ನಗುವರು
ಸಂಭ್ರಮದಿಂದ ಬಿಗಿವರು ದೃಗಾರೋಢನದಿ
ಜಿಗಿದು ಅಘದೂರೊಗೆದ ಜನರೊಳು
ವೆಗ್ಗಳದಲಿಂದಿರೇಶನ ಭಕುತಾಗ್ರಣಿ ಬಂದನೊ ೩

ಇಲ್ಲಿ ವರ್ಣಿತವಾದ ಯತಿಗಳು ಯಾರೆಂದು ತಿಳಿಯದು.

## ೧೬೨

## ಮೊದಲಕಲ್ಲು ಶೇಷದಾಸ ಸ್ತುತಿ

ನೇತ್ರಗಳ ಸಾಫಲ್ಯಮಾಳ್ಪ ಸುಗಾತ್ರರನು ಕಂಡೆ ಪ

ಪಾತ್ರರಾದವರು ದಾಸರ ಕೀರ್ತಿಸಲು ಪಾಪಗಳು ನಿಲ್ಲವೊ ಅ.ಪ.

ವೇದ ಶಾಸ್ತ್ರಗಳ ಪೇಳುತ ಮೋದದಿಂದಿಹರು
ವಾದ ಮಾಡುವರಲ್ಲಿ ಶಮದಮಾದಿ ಗುಣದವರು
ಮೋದ ತೀರ್ಥರ ಮತಾನುಸಾರವ
ಬೋಧಿಸುತ ಪರಮಾನುಗ್ರಹ ಮಾಳ್ಪರ ೧

ವಾಸುದೇವನ ದಾಸರೊಳಗ್ರೇಸರರು ಇವರು
ಶ್ರೀಶನ ಶುಭಗುಣ ಕರ್ಮಂಗಳು ಚಿಂತಿಸುತಲಿಹರು
ಭೂಸುರಾಂಶರಲ್ಲಿದಾವ ಸುರೇಶರೋ
ಶೇಷದಾಸರಾಗಿ ಇಹರು ೨

ತಂದೆ ಶ್ರೀ ನರಸಿಂಹನ ಪದದ್ವಂದ್ವ ಭಜಿಸುವರು
ಬಂದ ಸಜ್ಜನವೃಂದ ಜನಕಾನಂದಗೈಸುವರು
ಇಂದಿರೇಶನ ಒಂದೆ ಮನದಿ ಆ-
ನಂದಬಾಷ್ಪಗಳಿಂದ ಧೇನಿಪರು ೩

## ಎ. ಬಿಡಿ ಹಾಡುಗಳು

## ೧೬೩

## ವಿತ್ತ ವಿಚಾರ

ವಿತ್ತವೇ ಸರ್ವ ಪ್ರಮತ್ತಮರ್ಥದಾ ಪ

ವಿತ್ತವಿಲ್ಲದಿರೆ ಭಿತ್ತಿವರ ಬೊಂಬೆಯಂತೆ ಅ.ಪ.

ವಿತ್ತವಿರಲು ಪ್ರಾಥರುತ್ಥಾಯ ಸ್ನಾನವು
ವಿತ್ತದಿಂದಲಿ ಮಾಗಳಾರ್ಥಿಗಳು
ವಿತ್ತದಿಂದಲಿ ಪತ್ನಿ ಪುತ್ರರು ಸ್ವಾಧೀನಾ
ವಿತ್ತ ಹೀನಾಮೂಲ ವಸ್ತಿ ಮಾಡುವನು ೧

ವಿತ್ತದಿಂದಲಿ ಪುರಾಣೋಕ್ತ ವ್ರತಗಳಗ್ನಿ
ಹೋತ್ರಶ್ವಮೇಧಾನ್ನ ಸತ್ರಗಳು
ವಿತ್ತದಿಂದಲಿ ಮಧ್ಯಾನ್ಹೊತ್ತಿಲೀ ಬಹುಜನಾ
ತಿಥ್ಯವು ಹರಿಪೂಜೆ ನರ್ತನಾ ತತಿಗಳು ೨

ವಿತ್ತದೊಳಗೆ ಹರಿಪತ್ನಿಯೂ ಕುಣಿಯುವಳು
ವಿತ್ತದಿಂದಲಿ ಮಹಾಪತ್ತು ನಾಶಾ
ವಿತ್ತದಿಂದಲಿ ಸುವಿರಕ್ತಿ ಭಕ್ತಿ ಜ್ಞಪ್ತಿ
ವಿತ್ತಮಿಂದಿರೇಶ ನೊಕ್ತ ತೋರಿಸುವನು ೩

## ೧೬೪

## ಆತ್ಮವೃತ್ತ

ವಾಸುದೇವ ವಾಸುದೇವ ವಾಸುದೇವ ಎಂದು ಸತತ
ಮಾನ್ಯದಲ್ಲಿ ಹರಿಯ ನಾಮ ದ್ಯೋತಿಸುವರ ಸ್ಮರಿಸುವೇನು ಪ

ಸೀತಾರಾಮಚಾರ್ಯ ಹೇಳಿದ ಮಾತುಗಳನು ಕೇಳಿ ಬಹಳ
ಪ್ರೀತಿಯಿಂದಲವರ ಮಹಿಮ ಪೋತನಾನು ಪಾಡುವೇನು ೧

ನರಹರಿಯ ಸಂನಿಧೀಲಿ ತರುಳರಾಮ ಪೇಳಿದಂಥ
ಸರಸ ಪದಗಳನ್ನೆ ಬಹಳ ಹರುಷದಿಂದ ಕೇಳಿಹಾರು ೨

ಇಂದಿರೇಶ ಕೃಷ್ಣನಿಲ್ಲೆ ಬಂದು ಪದಕ್ಕೆ ಯದುರೆ ನಾಥ
ಮುಂದೆ ವಾರ್ಧಕಾದಿಯಂತೆಂದು ಭಾವ ಪೇಳಿಹಾರು ೩

ಇಷ್ಟು ದಿವಸ ರಾಮನಂಘ್ರಿ ನಿಷ್ಠನಾಗುತೀಗ ನೃಹರಿ
ಪುಟ್ಟಪಾದ ನಮಿಪಾ ಮುಂದೆ ಕೃಷ್ಣನಂಘ್ರಿ ಭಜಿಸುವಾನು ೪

ಇಂದಿರೇಶ ಕೃಷ್ಣನನ್ನು ಹಿಂದೆಯೆಂದು ಮುದ್ರಿಕಿಲ್ಲಾ
ಇಂದೆ ಬಂದಿಹುದು ಇದು ಅನಾದಿಯೆಂದು ಪೇಳಿಹಾರು ೫

## ೧೬೫

ಮಧ್ವೇಶಾರ್ಪಣ ಮಧ್ವೇಶಾರ್ಪಣ ಮಧ್ವೇಶಾರ್ಪಣಮಸ್ತು
ಶುದ್ಧ ಶ್ರುತಿ ಪದ್ಧತಿ ನಡೆಸುವೆ ಮಧ್ವೇಶಾರ್ಪಣಮಸ್ತು ೧

ವಂದಿಸುವೆನು ಗೋವಿಂದನ ಚರಣಕೆ ಮಧ್ವೇಶಾರ್ಪಣಮಸ್ತು
ನಿಂದು ಕರಂಗಳ ವಂದಿಸಿ ಪ್ರಾರ್ಥನೆ ಮಧ್ವೇಶಾರ್ಪಣಮಸ್ತು ೨

ಅಂಬುಜನಾಭನ ನಿತಂಬಿನಿ ಕಮಲಕೆ ಮಧ್ವೇಶಾರ್ಪಣ ಮತ್ತು
ಡಿಂಗರಿಗನು ನಾಜಗದಂಟೆಯ ಪ್ರಾರ್ಥನೆ ಮಧ್ವೇಶಾರ್ಪಣ
ಮಸ್ತು ೩

ಸಂಧ್ಯಾದೇವಿಗೆ ವಂದಿಸುತಿರುವೆನು ಮಧ್ವೇಶಾರ್ಪಣಮಸ್ತು
ಒಂದಿನ ಬಿಡದೆ ತ್ರಿಕಾಲದಿ ಮಧ್ವೇಶಾರ್ಪಣಮಸ್ತು ೪

ಚಾಮರ ಹಾಕುವೆ ಶ್ರೀಮನೋಹರಗೆ ಮಧ್ವೇಶಾರ್ಪಣಮಸ್ತು
ಕೋಮಲ ಶಯನದಿ ಮಲಗಿಸುವೆನು ಮಧ್ವೇಶಾರ್ಪಣಮಸ್ತು ೫

ಕೃಷ್ಣನ ಮಲಗಿಸಿ ತೊಟ್ಟಿಲ ತೂಗುವೆ ಮಧ್ವೇಶಾರ್ಪಣಮಸ್ತು
ಬಿಟ್ಟು ಅಭಿಮತ ಘಟ್ಟಿಸಿ ಪಾಡುವೆ ಮಧ್ವೇಶಾರ್ಪಣಮಸ್ತು ೬

ಶ್ರೀಪತಿ ತೊಟ್ಟಿಲ ಈ ಪರಿ ತೂಗುವೆ ಮಧ್ವೇಶಾರ್ಪಣಮಸ್ತು
ಗುರು ಪುಷ್ಕರ ಮುನಿ ಸುರದ್ವಾರದಿ ಮಧ್ವೇಶಾರ್ಪಣಮಸ್ತು ೭

ಕರ್ಮವು ಸಿರಿಯಿಂದು ಹರಿಗರ್ಪಿಸುವೆ ಮಧ್ವೇಶಾರ್ಪಣಮಸ್ತು
ದಾಸರ ಚರಣಕೆ ಶಿರಬಾಗುವೆ ನಾ ಮಧ್ವೇಶಾರ್ಪಣಮಸ್ತು ೮

ದಾಸರ ಕೃತಿ ಇಂದಿರೇಶಗರ್ಪಿಸುವೆ ಮಧ್ವೇಶಾರ್ಪಣಮಸ್ತು
ಮಧ್ವೇಶಾರ್ಪಣ ಮಧ್ವೇಶಾರ್ಪಣ ಮಧ್ವೇಶಾರ್ಪಣಮಸ್ತು ೯

## ೨. ಶ್ರೀ 'ಗುರು ಇಂದಿರೇಶರು'

### ೧೬೬

### ಅವತಾರತ್ರಯ

ಚರಣ ಸೇವಕರನ್ನು ಪೊರೆದ ಪ್ರಾಣೇಶನ್ನ
ಹರುಷಾದಿ ವಂದಿಸಿ ವರಬೇಡಿರೈ ಪ

ಕರುಣ ಸಾಗರ ಕಲ್ಪತರು ಭಕ್ತ ಕುಮುದ ಚಂ
ದಿರನೆನಿಸುತಭೀಷ್ಟ ಸುರಿಸುವ ನೋಡಿರೈ ಅ.ಪ.

ಪದುಮನಾಭನ ದಿವ್ಯ ಪದಶೇವಕನು ಪೋಗಿ
ಉದಧಿ ಲಂಘಿಸಿ ಲಂಕಾ ಸದನದೊಳು
ಬೆಡಗಿದ ಒಡಲನೋಳ್ಪುದುಗಿ ರೂಪದ
ಚಂದ್ರವದನೀಯಾ ರಾಜಿಪ ಕಂದರದನೀಯಾ
ವಲ್ಲಭನೊಕ್ಷ ಸದನೀಯಾ
ವನದೊಳಗೆ ನೋಡುತ ಚದರೆ ಸುಂದರಿ ಸುದತಿ ಜಾನಕಿಯಾ
ಪದಕೆರಗಿ ಪೇಳಿದ ಮುದದಿ ರಾಮನ
ಹೃದಯ ವಾರುತಿಯಾ
ಮುದ್ರಿಕೆಯ ಸಲಿಸುತ ವದಗಿದಸುರತ ಒಡೆದ ಕೀರುತಿಯಾ
ಪಿಡಿಯಲ್ಕೆ ಕ್ಷಣದೊಳು ಕದನಕಂಠಕನೆನಿಪ
ರಾವಣನೆದುರಿಸಿ ಗರ್ವ ಶಿಕ್ಷಿಸಲು
ಪುಚ್ಛದಲಿ ಪಟ್ಟಣ ಸುಟ್ಟು ದಹಿಸಿದ
ಸದಯಕಾಮನ ಕಾರ್ಯ ಪೂರ್ತಿಯಾ ೧

ಮದನಜನಕನ ಸಂದರುಶನಗೋಸುಗ
ನೆರೆ ದ್ವಾಪರಡೊಳಗವತರಿಸಿದನೂ
ವರ ಧರ್ಮಜನ ಸಹೋದರನೆಂದೆನಿಸಿ ಗದ ಧರಿಸಿದಾ

ಕೃಷ್ಣನೊಳ್ ಭಾವ ಬೆರಿಸಿದಾ
ಮೋಹಿನಿಯ ವೇಷದಿ ದುರುಳ ಕೀಚಕನೊರಿಸಿ ಸುಖ ಸುರಿದ
ಗಾಂಧಾರಿತನಯನ ಧುರದಿ ತೊಡೆಗಳ ತರಿದು ಬೊಬ್ಬಿರಿದಾ
ಕಡುಕೋಪದಿಂದಲಿ ಜರಿಯ ಸುತನಾ ಭರದಿ ಮದ ಮುರಿದಾ
ಕರಿವರದ ಕರುಣಾಕರನ ವಲಿಸಿದಾ
ಪರಮಮಂಗಳ ಚರಿತ ಸದ್ಗುಣಭರಿತ
ಭವಭಯ ಹರಣ ಸಂನುತ ಚರಣ ಕಮಲವ
ಧರೆಯೊಳಗೆ ಪರಿಪರಿ ಮೆರೆದಾ ೨

ಮರಳಿ ಭೂಸುರನು ಮಂದಿರದೊಳು ಜನಿಸಿತಾ
ಗುರು ಮಧ್ವಮುನಿಯೆಂದು ಕರೆಸೀದನು
ವರವೇದವ್ಯಾಸರಾ ಕರುಣಪಡೆದು ದೇಶ ಸಂಚರಿಸಿದಾ
ನಿಂದಕರ ಧಿಕ್ಕರಿಸಿದಾ ಸೇವಕರನುದ್ಧರಿಸಿದಾ
ಗ್ರಂಥಗಳ ರಚಿಸಿ ಭರದಿ ಕಲಿ ಸಂಕರನೋಳ್ವಾದಿಸಿದಾ
ಗುರು ಇಂದಿರೇಶನೆ ಧರೆಗೆ ಪಿತನೆಂದರುಹಿ ಸಾಧಿಸಿದಾ
ಕರಕಂಜಜಾತದಿ ಕರಕೆ ಶಾಸ್ತ್ರದರಿವ ಬೋಧಿಸಿದಾ
ನವರತ್ನ ಭಾಸಿತ ಕರಣಕುಂಡಲ
ಮಕುಟ ಸಕಲಾಭರಣ ಭೂಷಿತ
ಸುಮನಸೋತ್ತುಮ ಮುನಿಪ ಮಾನಂದಾತ್ಮ
ಬುಜಗುಣದರಸೆ ಘನಸುಂದರ ಸುಖಪ್ರದ ೩

## ೧೬೭

## ರಾಘವೇಂದ್ರರು

ಸುಂದರ ಗುರು ರಾಘವೇಂದ್ರರೆಂತೆಂಬುವೋ ಕ
ರ್ಮಂದಿಗಳರಸನೆ ವಂದಿಸುವೆ ಪ

ಬಂಧ ಭಕ್ತರ ಅಘವೃಂದ ಕಳೆವೊ ಗುಣ
ಸಾಂದ್ರ ಸನ್ನುತ ಮಹಿಮರೆಂದು ನಾ ಬೇಡುವೆ ಅ.ಪ.

ಪರಮ ಕರುಣೀ ನಿಜ ಚರಣ ಸೇವಕರನ್ನು ಉ
ದ್ಧರಿಸುತಲನುದಿನ ಪೊರೆವನೆಂದೂ
ಕರವ ಪಿಡಿದು ತ್ವರ ಪರಿಪರಿಯಲಿ ನಿನ್ನಾತ
ಪೊರೆಯುವೆ ಕೈ ಪಿಡಿಯೆಂದು ಕರೆಯುವೆ
ಧರೆಯೊಳಗೆ ನಿಮ್ಮಯ ಸರಿ ಧ್ವರೆಗಳ ಕಾಣೆ ಮ–
ದ್ಗುರುವೆ ಯನ್ನಂಥ ಪಾಮರ ನರನ ಕಾಯೋದು ನಿಮಗಾಶ್ಚರ್ಯವೇ
ವರಯೋಗಿವರ್ಯನೆ ನಿರುತ ಬೃಂದಾವನದಿ ರಾಜಿಪೊ
ಮೆರೆವ ಮಂಗಳ ಚರಣ ತವಪದ
ಸ್ಮರಿಪೆ ಸಂತತ ನೀಡು ತ್ವರಿತದಿ
ಹರುಷದಲಿ ನಿರ್ಜರರ ತರುವೆ ೧

ಘೋರಾ ದುರಿತವೆಂಬೊ ವಾರುಧಿಯೊಳಗೀಸಲಾರೆನೋ
ದಯ ಬಾರದೇನೋ
ಪೋರನೆನ್ನದಲೆ ತಾತ್ಸಾರ ಮಾಡದಲೆ ದಡ ಸೇರಿಸೊ
ಬಿನ್ನಪವ ವಿಚಾರಿಸೊ ಮನ್ನಿಸಿ ಮಾರ್ಗ ತೋರಿಸೊ
ನಿನ್ನೊಳು ನಿರಂತರ ಪಾದ ಭಕ್ತಿಯ ದಾರಿಯನೆ ಹಿಡಿಸೊ
ಕುರು ಪಾಪ ಸಂಚಯ ಕ್ರೂರ ಕುಜನರ ಕುಠಾರದಿಂದುಳಿಸೊ
ಮನ್ಮಥದಭೀಷ್ಟೆಯ ಚಾರು ಸಲಿಸುವ ಭೂರಿ ಕಿಟೀತಜ
ಧೀರ ನಿನ್ನನು ಸಾರಿದವರನು ಪಾರುಗಾಣಿಪನೆಂದು ಡಂಗುರ
ಸಾರುತಲಿದೆಯದು ವೀರಸಲಿಸೊ ೨

ಏಸೇಸು ಜನ್ಮದಿ ಕ್ಲೇಶವನನುಭವಿಸಿ
ಘಾಸಿ ಮಾಡೆನೊ ಮನದಾಶೆಯಿಂದಾ
ಹೇಸಿ ವಿಷಯಂಗಳು ಲೇಸುತಿಳಿದು ಮರೆ
ಮೋಸಾದಿ ದುಷ್ಟರ ಸಹವಾಸದಿ ಸೇರಿದೆ
ಮಂದಹಾಸಾದಿ ಸಂತೈಸು ರವಿ ಸಂಕಾಶಜನ
ಹೃದೋಷ ಸಾಗರದಿ
ಕಾಷಾಯವಸನ ಭೂಷಿತಾಂಗ ವ್ಯಾಸಮುನಿ ಭರದೀ
ಗಜರಾಮಪುರದೀಶ ಮುಖರಿಗೆ ತೋಷ ನೀ ಗರದಿ

ಈ ಸಮಯ ಸ್ತುತಿಸುವೆನು
ಶ್ರೀ ಸಮೀರ ಮತಾಬ್ಧಿ ಚಂದಿರ
ಈಶಗೆದುರ ರತೀಶ ಸನ್ನುತ
ಶ್ರೀಶ ಗುರು ಇಂದಿರೇಶನಂಘ್ರಿಗೆ
ದಾಸ್ಯ ಭಾವ ರಹಸ್ಯ ತೋರಿದೆ ೩

## ೧೬೮

ಪಟುತರಂಗನೆ ಕರಪುಟದಿ ನಮಿಸುವೆನು
ಘಟಿಕಾಚಲನಿಲಯಾ
ಕಟಕಟನೆ ಪಲ್ಗಡಿಯುತಸುರರ
ಕಟಹತರಿದಾರ್ಭಟದಿ ಭಕುತರ
ಪಟಲ ಪಾಲಿಪ ರಘುವರಪ್ರಿಯ
ಭಟನೆನಿಪ ಮರ್ಕಟ ಕುಲೋತ್ತಮ
ಗುರು ಕುಲೋತ್ತಮನೆ ಭೂಸುರರ ಜಠರದೊಳು
ಮರಳಿ ನೀನವತರಿಸೀ
ಹರಿವಿರೋಧಿಗಳನ್ನು ಮುರಿಯೆ ಸನ್ಯಾಸ ತಾಳಿ
ಪರಮ ಗುರುಗಳೆನಿಸೀ
ಗುರು ಇಂದಿರೇಶನೆ ಪರನೆಂದರುಹಿನಿಂದು
ವರ ಮಾಯಿಗಳ ಜಯಿಸೀ ಧಿಕ್ಕರಿಸೀ
ಧರಣಿಯೊಳು ಸುಗುಣೇಂದ್ರಯತಿಗಳ
ಕರದಿ ಪೂಜಿತ ಮೂಲರಾಮರ
ದರುಶನದಿ ಸುಖ ಸುರಿಸಿ ಸರ್ವರ
ಧರೆಯೋಳ್ ಪಾಮರ ನರರ ಪಾಲಿಪೆ
.......................
.......................

## ೩. ಗೋಪತಿವಿಠಲ

### ೧೬೯

### ವಾಯುದೇವರು

ಎರಡೂ ಕೈ ಮುಗಿದೂ ಬೇಡುವನ್ಯಾರೇ ಪೇಳಮ್ಮಯ್ಯ ಪ

ಸುರನರರ ಖಳರ ಪರಿಪರಿ ಕರ್ಮವ ಹರಿಗೊಪ್ಪಿಸುವ
ಮರುತ ಕಾಣಮ್ಮ ಅ.ಪ.

ಕರವ ಬಲಕೆತ್ತೆ ನಿಂತಹನ್ಯಾರೇ ಪೇಳಮ್ಮಯ್ಯಾ
ಭರದಿಂದ ಚರಣಗಳೂರಿದನ್ಯಾರೇ ಪೇಳಮ್ಮಯ್ಯಾ
ದುರುಳ ಜನರ ಮೆಟ್ಟಿ ಶರಣರಿಗಭಯವ
ಕರೆದು ಕೊಡುವ ಬಹು ಕರುಣಿ ಕಾಣಮ್ಮ ೧

ಬಿಂಕಾದಿ ಮುಖವಾ ತಿರುಹಿದನ್ಯಾರೇ ಪೇಳಕ್ಕಯ್ಯ
ಟೊಂಕಾದಿ ಎಡಗೈಯಿಟ್ಟಿಹನ್ಯಾರೇ ಪೇಳಕ್ಕಯ್ಯ
ಕಿಂಕರರಡಿ ಬರೆ ಅಂಕದೊಳೆತ್ತುವ
ಡೊಂಕನಾದ ನಿಷ್ಕಳಂಕ ಕಾಣಮ್ಮ ೨

ಚೆಲುವ ಸರ್ವಾಂಗಲಕ್ಷಣನ್ಯಾರೇ ಪೇಳಮ್ಮಯ್ಯ
ಹಲವೂ ಫಲಗಳನೂ ನೀಡುವನ್ಯಾರೇ ಪೇಳಮ್ಮಯ್ಯ
ಸುಲಭಗೋಪತಿವಿಠಲನ ಪ್ರಿಯಕ
ದರುಂಡಲಗಿ ಪುರಿ ಧೊರೆ ಇವನಮ್ಮ ೩

## ೧೭೦

### ರುದ್ರದೇವರು

ಪಾಲಿಸೊ ಪಾರ್ವತಿ ರಮಣಾ ನಿನ್ನ
ಪಾಲಿಗೆ ಬಂದೆನೊ ಪಾಲಿಸೆನ್ನದೆ ಪ

ವೇದವೇದಾಂತ ಪುರಾಣಗಳೆಲ್ಲ
ನೀದಯಾಳುವೆಂದು ಪೊಗಳುತಿರೆ
ಹಾದಿಬೀದಿ ದೇವತೆಗಳಿಗೆರಗಿ ನಾ
ಖೇದಬಟ್ಟು ನಿನ್ನ ಮೊರೆ ಹೊಕ್ಕೆ ಮಹದೇವ ೧

ತುಂಗಾ ಕುಮದ್ವತಿ ಸಂಗಮೇಶ್ವರ ನಿನ್ನ
ಕಂಗಳಿಂದಲಿ ನೋಡೂ ಕರುಣದಿಂದ
ಕಂಗೆಟ್ಟು ಕಳವಳಿಸುತಿರೆ ನೀ ನೋಡಿ
ಭಂಗಪಡಿಸಿದರೇನು ಭಾಗ್ಯವು ಬರುವದು ೨

ಆಪತ್ತು ಕಳೆದು ಸಂಪತ್ತು ನೀಡಿ ನಿನ್ನ
ರೂಪವ ತೋರಿಸೋ ತ್ವರಿತದಲಿ
ಗೋಪತಿಕೃಷ್ಣವಿಠಲನೆಲ್ಲ ಲೋಕವ
ವ್ಯಾಪಿಸಿರಲು ಸಂದೇಹ ವ್ಯಾತಕಯ್ಯಾ ೩

## ೧೭೧

### ವಾದಿರಾಜರು

ವಾದಿರಾಜ ಗುರುರಾಜರ ಕೊಂಡಾಡಿ ಜನಿಪ ಸುಖವನು ಬೇಡ ಪ

ಸೋದೆ ಸ್ಥಳದಲಿ ನಿಂತು ಮೆರೆವನಯ್ಯ
ಹಯವದನನ ಪ್ರಿಯ ಅ.ಪ.

ಮೋದತೀರ್ಥ ಮತವಾರಿಧಿ ಪೂರ್ಣಚಂದ್ರ ಸದ್ಗುಣ ಸಾಂದ್ರಾ
ಮೇದಿನಿಯೊಳಗಿಹ ತೀರ್ಥ ಕ್ಷೇತ್ರವ ಚರಿಸಿ ಸಂತರನುದ್ಧರಿಸಿ
ಸಾದರದಲಿ ಹರಿಮಹಿಮೆಯ ಕೊಂಡಾಡಿ ಪ್ರಬಂಧವನು ಮಾಡಿ
ವಾದಿಗಳೆಂಬುವ ಗಜಕುಲ ಹರ್ಯಕ್ಷನಾಗಿಹ ಹರಿದೀಕ್ಷಾ ೧

ಎರಡೀರರುವತ್ತು ವಿದ್ಯಾಪೂರ್ಣನೆನಿಸೀ ದೂಷಕರನು ಜಯಿಸಿ
ಬಿರುದುಗಳನಪಹರಿಸಿದ ಯತಿವರ್ಯ ಹರಕಾರ್ಯ ಧುರ್ಯ
ವರಭೈಷ್ಮಿಶನ ವಿಜಯದ ಕಾವ್ಯವನು ಬಹುಪರಿ ಮಹಿಮೆಯನು
ವಿರಚಿಸಿ ಕವಿಕುಲ ಮಾನ್ಯನೆನಿಸಿಕೊಂಡ ಹರಿದಾಸ ಪ್ರಚಂಡಾ ೨

ಭೂತ ಬ್ರಹ್ಮರಾಕ್ಷಸ ಬಂದಿವರೊಳು ವಾದಿಸಿ ಮಾರ್ಗದೊಳು
ಸೋತು ಆಜ್ಞಾಧಾರಕರಾಗಿರುತಿಹರು ಅನುದಿನ ಸೇವಕರು
ಭೂತಳದ ಜನರು ಬೇಡಿದ ಇಷ್ಟಾರ್ಥ ಕೊಡುವಂಥ ಸಮರ್ಥ
ಧಾರುಣಿಪತಿ ಗೋಪತಿವಿಠಲ ನಿನ್ನೊಶನಾಗಿಹನಲ್ಲ ೩

## ೧೭೨

### ಶ್ರೀ ರಾಘವೇಂದ್ರರು

ಯೋಗಿ ಕುಲವರ ಮಕುಟ ಗುರು ಶ್ರೀ
ರಾಘವೇಂದ್ರನ ಭಜಿಸಿರೋ ಪ

ಮೋದತೀರ್ಥ ಪಯೋಧಿ ಚಂದಿರ
ಸಾಧುಜನ ಸತ್ಕುಮುದಕೇ
ಐದು ಆನನವಾಗಿಹನು ದು
ರ್ವಾದಿ ಗಜಸಮುದಾಯರೇ ೧

ದೂಷಿಸುವ ಜನರುಗಳ ಗರ್ವ ಅ
ಶೇಷ ಪರಿಹಾರಗೈಸುವಾ ೨

ದಿನಪನಂದದಿ ಕಾಂತಿಬೃಂದಾ
ಬನದೊಳಿದ್ದು ಪ್ರಕಾಶವಾ
ಅಣುಗರಿಗೆ ಸಂತೃಪ್ತಿ ಸುಖವನು
ಅನವರತ ಪೂರೈಸುವಾ ೩

ವ್ಯಾಕ್ತರಾಗಿಹ ಅಖಿಳರಿಗೆ ಫಲ
ಪ್ರಾಪ್ತಿಗೋಸುಗ ಚರಿಸುವಾ ೪

ಆಪ್ತರಿಲ್ಲದೆ ಈತನೇಯೆನ
ಗಾಪ್ತನನುದಿನವಾಗುವಾ ೫

ಕೋಲ ತನಯೆಯ ತೀರದಲಿ ಹೊ–
ನ್ನಾಳಿಯಲಿ ವಿಹರಿಸುವಾ
ಶೀಲ ಗೋಪತಿವಿಠಲನ ಕೃಪೆ
ಗಾಲಯನು ಯೆಂದೆನಿಸುವಾ ೬

## ೧೭೩

ರಾಘವೇಂದ್ರ ತೀರ್ಥ ಬೋಧಿಸು
ಭಾಗವತ ಗತಾರ್ಥ
ರಾಘವ ಪದಾಂಬುಜ ಲಬ್ದಾರ್ಥ ಸ
ರಾಗದಿ ಪಾಲಿಸು ನಿಜ ಪುರುಷಾರ್ಥ ಪ

ತುಂಗಾತಟವಾಸ ರಾಘವ
ಸಿಂಗನ ನಿಜದಾಸ
ಪಂಗು ಬಧಿರ ಮುಖ್ಯಾಂಗ ಹೀನರನ
ಪಾಂಗ ನೋಟದಿ ಶುಭಾಂಗರ ಮಾಡಿ ೧

ಪಾದೋದಕ ಸೇವಾರತರಿಗ
ಗಾಧ ಫಲಗಳೀವ

ಬೂದಿ ಮುಖದ ದುರ್ವಾದಿಗಳೋಡಿಸಿ
ಸಾಧು ಜನರಿಗಾಲ್ಹಾದ ಬಡಿಸುತಿಹ ೨

ಭುಜಗಧರಾಧಿಪನಾ ವೊಲಿಸಿದ
ಸುಜನ ಶಿರೋಮಣಿಯೇ
ನಿಜ ಪದ ಯುಗಳವ ಭಜಿಸುವ ಜನರಿಗೆ
(ವಿಜಯದ ನೆನಿಸುವ ದ್ವಿಜಕುಲನಂದನ)
ವಿಜಯದ ಗೋಪತಿ ವಿಠಲ ನಂದನ ೩

# ೪. ರಮಾಪತಿವಿಠಲರು

## ೧೭೪

### ಅವತಾರತ್ರಯ (೧)

ಕರುಣದೆನ್ನನು ಕಾಯಬೇಕಯ್ಯಾ ಕದರೂರ ರಾಯ
ಕರುಣದೆನ್ನನು ಕಾಯಬೇಕ್ಕೆ
ಹರಸುರಾದಿಗಳಿಂದ ವಂದ್ಯನೇ
ದುರಿಥ ಪರಿಹರಿಸಿಹ ಪರಕೆ ನೀ-
ನ್ನರುಷದಲಿ ಸಾಧನ ಮಾಡಿ ಪ

ಅಂಜನಿಯ ಗರ್ಭದಲ್ಲಿ ಜನಿಸಿದೆಯೊ ಶ್ರೀರಾಮನಂಘ್ರಿ
ಕಂಜದಲ್ಲಿಹ ಭ್ರಮರನೆನಿಸಿಯಾ
ಅಂಜದಂಬುಧಿಯ ದಾಟಿ ಸೀತೆಯ -
ನಂಜಿಸುವ ರಾವಣನ ಬಲಗಳ
ಭಂಜಿಸಿದಿ ಧರೆಯೊಳಗೆ ತೇಜಃ
ಪುಂಜನಾಗಿಹ ಪ್ರಭುವೆ ಎನ್ನನು ೧

ಕುಂತಿ ಉದರದಿ ಜನಿಸಿದೆಯೊ ರಾಯಾ ಶ್ರೀ -
ಕಾಂತಿ ರಮಣನ ಅಂತರಂಗದಿ ಅರ್ಚಿಸುತವ್ಯೆಯಾ
ಅಂತ ತೋರದೆ ಅಖಿಳ ಕುರುಬಲ
ಅಂತಕನಿಗೊಪ್ಪಿಸಿದಿ ಜಗದಾ -
ದ್ಯಂತ ಸುಜನರಿಗಿತ್ತಿ ಸಂತಸ
ಸಂತತೆನ್ನನು ಬಿಡದೆ ಪವನನೆ ೨

ಮಧ್ಯಗೇಹನಲ್ಲಿ ಪುಟ್ಟಿದೆಯೊ ಸಚ್ಛಾಸ್ತ್ರ ಪಠಿಸಿ ಆ -
ಪದ್ಧ ಮತದವರನ್ನು ಕುಟ್ಟಿದಿಯೊ

ಉದ್ಧವನುತ ರಮಾಪತಿ ವಿಠ್ಠಲನ
ಸದ್ಯ ಮನದಲಿ ತೋರಿ ಕೊಟ್ಟೆ –
ನ್ನುದ್ಧರಿಸಿ ಭವಕಡಲ ದಾಟಿಸೊ
ಮಧ್ವಮುನಿ ಸಜ್ಜನತ್ರಸಿದ್ಧನೆ ೩

## ೧೭೫

### ಶ್ರೀ ಮಧ್ವಾಚಾರ್ಯರು

ಮಧ್ವೇಶಾರ್ಪಣಮಸ್ತು ಮಹಾಪ್ರಭು ಮಧ್ವೇಶಾರ್ಪಣಮಸ್ತು ಪ

ಎದ್ದು ಕೂತು ಮಲಗೆದ್ದು ಮಾಡುವ ಕರ್ಮ
ಮಧ್ವೇಶಾರ್ಪಣಮಸ್ತು ಅ.ಪ.

ಹುಟ್ಟಿದಾರಭ್ಯದಿ ಅಷ್ಟು ಮಾಡಿದ ಕರ್ಮ ಮಧ್ವೇಶಾರ್ಪಣಮಸ್ತು
ದುಷ್ಟರಾಡುತಿಹ ಕೆಟ್ಟ ನುಡಿಗಳು ಮಧ್ವೇಶಾರ್ಪಣಮಸ್ತು
ಮೆಟ್ಟಿ ಹೆಜ್ಜೆ ಇಟ್ಟದಾಡುವುದು ಮಧ್ವೇಶಾರ್ಪಣಮಸ್ತು
ಶಿಟ್ಟಿಲಿ ಜನರಿಗೆ ನಿಷ್ಠುರಾಡುವುದು ಮಧ್ವೇಶಾರ್ಪಣಮಸ್ತು ೧

ಬಾಲೇರ ಕೂಡಿ ವಿಲಾಸದ ಮಾತುಗಳು ಮಧ್ವೇಶಾರ್ಪಣಮಸ್ತು
ಕಾಲಕಾಲದಿ ನಾಲಿಗೆ ರುಚಿಸುವುದು ಮಧ್ವೇಶಾರ್ಪಣಮಸ್ತು
ಬಾಲಕರುಗಳನು ಲಾಲನೆ ಮಾಳ್ಪದು ಮಧ್ವೇಶಾರ್ಪಣಮಸ್ತು
ಶ್ರೀ ಲಕುಮಿಪತಿಯ ಓಲಗ ಮಾಳ್ಪದು ಮಧ್ವೇಶಾರ್ಪಣಮಸ್ತು

ನಾಸಿಕದಿಂದಲಿ ಶ್ವಾಸ ಬಿಡುವುದು ಮಧ್ವೇಶಾರ್ಪಣಮಸ್ತು
ಲೇಸು ದೋರಿ ಬಹು ತೋಷಪಡುವುದು ಮಧ್ವೇಶಾರ್ಪಣಮಸ್ತು
ಬ್ಯಾಸರದಿಂದಲಿ ಕ್ಲೇಶ ಬಡುವುದು ಮಧ್ವೇಶಾರ್ಪಣಮಸ್ತು
ಹೇಸಿಕೆ ವಿಷಯಗಳಾಶೆ ಮಾಡುವುದು ಮಧ್ವೇಶಾರ್ಪಣಮಸ್ತು ೩

ಬಗೆ ಬಗೆ ವಸ್ತ್ರಗಳಗಲದೆ ಹೊದಿವುದು ಮಧ್ವೇಶಾರ್ಪಣಮಸ್ತು
ಝುಗ ಝುಗಿಸುವ ಹೊಸ ನಗಗಳನಿಡುವುದು ಮಧ್ವೇಶಾರ್ಪಣಮಸ್ತು

ಸೊಗಸಿಂದುತ್ತರಗಳ ಸೇವಿಸುವುದು ಮದ್ವೇಶಾರ್ಪಣಮಸ್ತು
ಹಗಲಿರುಳಲಿ ಮಾಳ್ಪಗಣಿತ ಕರ್ಮವು ಮದ್ವೇಶಾರ್ಪಣಮಸ್ತು ೪

ರಮಣಿಯರಿಂದಲಿ ರಮಣ ಮಾಡುವುದು ಮದ್ವೇಶಾರ್ಪಣಮಸ್ತು
ಕ್ರಮದಿಂ ದಶೇಂದ್ರಿಯ ಕರ್ಮಗಳೆಲ್ಲವು ಮದ್ವೇಶಾರ್ಪಣಮಸ್ತು
ಭ್ರಮಿಸಿ ಗುರುಗಳ ಮನ ಸ್ತೋಷಿಸುವುದು ಮದ್ವೇಶಾರ್ಪಣಮಸ್ತು
ರಮಾಪತಿ ವಿಠಲನ ಮನದಿ ಧ್ಯಾನಿಸುವುದು
ಮದ್ವೇಶಾರ್ಪಣಮಸ್ತು ೫

## ೧೭೬

### ಶ್ರೀ ವಾದಿರಾಜರು

ಕರುಣದಿ ನೋಡೋ ಮದ್ಗುರುವರ ವಾದಿರಾಜ
ನಂಬಿದ ಭಕ್ತರ ಸುರತರುವೇ ಪ

ಪರಿಪರಿ ಭವಸಾಗರದಲಿ ಮುಳುಗುವ
ತರಳನ ಮರೆವುದು ಥರವೇ ಅ.ಪ.

ವಾಗೀಶಮುನಿ ಕರಪದ್ಮಸಂಜಾತ ಹೇ
ಭಾಗವತಾಗ್ರಣಿ ಭರದಿ
ಆಗಮ ನಿಗಮ ವಿನುತ ಹಯವದನನ
ಬೇಗ ಒಲಿಸಿದೆ ನೀ ಮುದದಿ
ಯೋಗ ಜಿತಾಸನನಾಗಿರುವನೆ ತಲೆ
ಬಾಗುವೆ ಭಯವಳಿ ತ್ವರಿತ ೧

ವಾದದೊಳ್ ವಾದಿಗಳನೆ ಗೆದ್ದು ಗುರುಮತ
ಸಾಧಿಸಿದೆಯೊ ಬಲವಂತ
ಸಾಧು ಸೇವಿತ ನಿನ್ನ ಪಾದವ ನಂಬಿದೆ ಭವ
ಬಾಧೆ ಕಳೆಯೋ ಮಹಂತ

ಕ್ರೋಧ ರಹಿತ ಪಂಚಭೇಧ ಸುಜ್ಞಾನವ
ಬೋಧಿಸುವ ದಯವಂತ ೨

ಅತಿ ವಿಮಲನೆ ನಿನ್ನ ಸ್ತುತಿಸಲರಿಯೆ ನಾನು
ಮತಿವಂತನೆ ಮಹಾದಾತಾ
ಸತತ ಬೇಡುವೆನು ಶ್ರೀಪತಿ ಭಜನೆಗೆ ಮನ
ಜಿತವಾಗಿ ಇರಲಯ್ಯ ತಾತ
ಕ್ಷಿತಿಯೊಳು ಕಂಡ ದುರ್ಮತಿಗಳ ಬಿಡಿಸೋ
ದತಿ ಅಧಿಕವೇನೋ ಅನಾಥನಾಥ
ಪತಿತ ಪಾವನ ರಮಾಪತಿ ವಿಠಲನ ನಿ
ರುತ ನೋಳ್ಪ ಲಾತವ್ಯಬ್ಯಾತ ೩

## ೧೭೭

### ಶ್ರೀ ರಾಘವೇಂದ್ರರು (೪)

ಈತನೆ ಶ್ರೀ ಪ್ರಲ್ಹಾದನು ಆಹ್ಲಾದಕರನು ಪ

ಈತನೆ ಪ್ರಲ್ಹಾದ ಜಗನ್ಮಾತಾಲಕುಮಿಪತಿಯ ಗುಣವ
ಭೂತಳದಲ್ಲಿ ತೋರಿ ಬಹು ನಿರ್ಭಿತಿಯಿಂದ
ಮೆರೆದ ಗುರು ಅ.ಪ.

ದುಷ್ಟ ಹಿರಣ್ಯಕ ಬಹುವಿಧದಲ್ಲಿ ನಿಷ್ಕರುಣಿಯಾಗೆ
ಕಷ್ಟ ಬಡಿಸೆ ಸುತಗೆ ಜವದಲಿ
ಸೃಷ್ಟಿಗೊಡೆಯ ಸ್ತಂಭದಿಂದ ದೃಷ್ಟನಾಗಿ ಅಸುರನಂದನ
ಶ್ರೇಷ್ಠ ನಖದಿಂ ಬಗೆಯ ನಿಷ್ಠೆಯಿಂದ ನಮಿಸಿದ ಗುರು ೧

ಶೂರ ಬಾಲ್ಹೀಕನೆನಿಸಿದ ಬ್ರಹ್ಮಣಮುನಿ ಪಾ
ದಾರವಿಂದ ದಯದಿ ಭಜಿಸಿದ
ಘೋರ ಮಾಯಾವಾದಿಗಳನು ವಿದಾರಣ ಮಾಡಿ ಸುಧಾ
ಸಾರಪಾನ ಮಾಡಿ ವಿಭುದಚಾರು ಚಂದ್ರಿಕಾ ರಚಿಸಿದ ಗುರು ೨

ಸಿಂಧುಶಯನ ಶ್ರೀ ರಮಾಪತಿ ವಿಠ್ಠಲನ ಭಕುತಿ
ಯಿಂದ ಭಜಿಪ ರಾಘವೇಂದ್ರಯತಿ
ಎಂದೆನಿಸುತ ಮಂತ್ರನಿಲಯ ಮಂದಿರವನು ಮಾಡಿ ಭಕುತ
ವೃಂದದ ಪುರುಷಾರ್ಥಗಳನು ತಂದು
ಕೊಡುವ ಕಲ್ಪದ್ರುಮನು ೩

## ೧೭೮

### ಶ್ರೀ ರಾಘವೇಂದ್ರರು (೫)

ಗುರುರಾಯಾ ಗುರುರಾಯಾ ಪ

ದುರಿತ ಕಳೆಯೊ ದಯಾಸಾಂದ್ರ ರಾಘವೇಂದ್ರ ಅ.ಪ.

ನಮಿಸುವೆ ನಿನ್ನಡಿಗಮಿತ ವಿಧದಿ
ಮಮ ಶ್ರಮವ ಕಳೆಯೊ ಹೇ ವಿಮಲಸುತೇಜ ೧

ಆರ್ತಜನರ ಇಷ್ಟಾರ್ಥಗಳನೆಲ್ಲ
ಪೂರ್ತಿಸಿ ಪೊರೆದು ಕೃತಾರ್ಥವ ಮಾಡುವಿ ೨

ಪವನನ ವರಮತ ಕ್ರವರನೆನಿಸಿ
ಶ್ರೀವರನರ್ಚಿಸುತಿಪ್ಪ ಕವಿಕುಲಗೇಯ ೩

ಸರ್ವತ್ರದಿ ಹರಿ ಇರುವುದು ನೋಡಿ ಭೂ
ಪೂರ್ವ ದೇವತೆಗಳ ಗರ್ವಹರನೆ ಮದ್ಗುರುರಾಯ ೪

ನೀನೆ ಗತಿಯೊ ಹೇ ದೀನವತ್ಸಲನೆ
ಜ್ಞಾನವನ್ನೆಕೊಡು ನಾನೆಂಬುದು ಕಳೆ ೫

ಪತಿತನು ನಾ ನಿಮ್ಮತಿಶಯಗುಣಗಳ
ತುತಿಸಬಲ್ಲೆನೆ ಯತಿಕುಲವರ್ಯಾ ೬

ಮಾರುತಿ ವರದ ರಮಾಪತಿ ವಿಠಲನ
ತಾರತಮ್ಯ ತಿಳಿಸ್ಯಾರಾಧನೆ ಕೊಡು ೭

## ೧೭೯

## ಕಾಖಂಡಕಿ ಪ್ರಸನ್ನ ವೆಂಕಟದಾಸರು

ಸಿರಿವಿರಿಂಚಿ ಭವೇಂದ್ರಾದಿ ಸುರರಿಂದ ರ್ಚಿತನಾದ ಸಿರಿ ಪ್ರಸನ್ನ
ವೆಂಕಟನ್ನ
ನಿರುತ ಸ್ಮರಿಪ ಕಾಖಂಡಿಕಿ ವೆಂಕಪ್ಪನವರ ಚರಣವನೆ ನೆನೆವನೆ
ಧನ್ಯಾಮಾನ್ಯ ಪ

ಮರುತ ಮತಾಬ್ಧಿ ಮರಕತ ಭೂಸುರಜನ್ಮ ಧರನಾಗಿ
ಭೂಮಿಯೊಳುದಿಸಲು
ತರುಳತ್ವ ಕಳೆದು ತರುಣತನ ಬರಲಿನ್ನು ಅರಿವ ಕಾಣದೆ ಇರುತಿರಲು
ಹರಿನಾಮಾವಳಿಗಳು ಬರೆದು ಓದುವ ಭಾಗ್ಯ ಅರಿವೆನೆಂದರೆ
ಬಾರದಿರಲು
ತೊರೆದು ಮನೆಯವರ ಗಿರಿಯಾತ್ರೆ ಮಾಳ್ಪರನನುಸರಿಸಿ ತೆರಳಿ
ಬರುತಿರಲು ೧

ಹಸನಾಗಿ ಕಪಿಲ ತೀರ್ಥದಲಿ ಮಜ್ಜನಗೈದು ಶಶಿಧರನ ಅಡಿಗಳಿಗೆರಗಿ
ಎಸೆವ ಪರ್ವತಾರೋಹಣವ ಮಾಡಿ ಸ್ವಾಮಿ ಪುಷ್ಕರಣಿ ತೀರ್ಥದಲಿ
ಮುಳುಗಿ
ಬಿಸಜದಾಳಾಕ್ಷ ವರಾಹ ಮೂರ್ತಿಯನೆ ಕಂಡಾಲಸವ ಮಾಡದಲೆ
ಚೆನ್ನಾಗಿ
ಋಷಕೇತು ಜನಕನ ಪುಟ್ಟಿಸಿದ ಕಾರಣವೇನು ಉಸಿರೆಂದು ಚರಣಕ್ಕೆ
ಬಾಗಿ ೨

ವಂದಿಸಿದ ಕ್ಷಣ ಸ್ವಪ್ನದಿ ಪ್ರಸನ್ನವೆಂಕಟನೆಂದು ಬರೆಯೆ ನಾಲಿಗೆಲಿ
ನಂದದಿಂದೆಚ್ಚೆತ್ತು ಜ್ಞಾನವುದಿಸೆ ಮುಕುಂದನ ಕಂಡು ಎದೆಯಲಿ

ಚಂದ ಚಂದದಿ ಪೊಗಳುತ್ತ ಕಂಗಳಿಂದಾ ನಂದಬಾಷ್ಪ ಸುರಿಸುತಲಿ
ಇಂದು ಧನ್ಯನಾದೆನೆಂದು ತೋಷಾಬ್ಧಿಯ ಹೊಂದಿ ಹರಿಯಾಜ್ಞೆಯಲಿ
ತೆರಳಿ ೩

ಹಿತದಿ ಮಾತಿಗೆ ಬಂದಚ್ಯುತನ ನಾಮಾವಳಿ ಅತಿಶಯ ಭಕುತಿ
ಪೂರ್ವಕದಿ
ಸತತ ಅನೇಕ ಗ್ರಂಥಗಳು ದಶಮಸ್ಕಂಧ ಭಾಗವತ ಪೂರ್ವಾರ್ಧ
ಕನ್ನಡದಿ
ಮತಿಪೂರ್ವಕ ರಚಿಸುತಾನಂದವು ತುಳುಕು ತಿಹುದು ಕವಿತೆಯಲಿ
ನುತಿಸಿ ದುರ್ಮತ ನಿರಾಕರಿಸಿ ಬಾಳಿ ಬಲು ಕುಲ ತತಿ ಶುದ್ಧ
ಮಾಳ್ಪರು ಹರಿಪುರವಹೊಂದಿ ೪

ಕಲಿಕಾಲದಿ ನರಹರಿ ನಾಮ ಸ್ಮರಣೆಯು ಮುಖದಿಂದ ಬರುವುದು
ಅತ್ಯಸಾಧ್ಯ
ಲಲಿತಕವನದಿ ತುತಿಸೆ ರಮಾಪತಿವಿಠಲನು ಒಲಿವನು ಇದು ಸತ್ಯ
ಹಲವು ಮಾತೇಕಿವರು ಸುರರೇ ಸರಿ ನರರಲ್ಲ ಇದು ಸಿದ್ಧವೇ ಸಿದ್ಧ
ಛಲದಿ ಮನುಜನೆಂಬಧಮನು ಹರಿಯಾಜ್ಞೆಯಲಿ ಬಲು ಬಲು
ನರಕದೊಳು ಬೀಳುವುದುರಾದ್ಧ ೫

## ೫. ಸಿರಿಗೋವಿಂದವಿಠಲ

### ೧೮೦

#### ಶ್ರೀ ಗಣಪತಿ ಸ್ತೋತ್ರ

ನಿರ್ವಿಘ್ನ ನೀಡೋ ನಭದೀಶಾ ಪ

ಗಜಮುಖ ಅಗಜ ಅಂಗಜ ಮೃದ್ಭವ
ಗಜವರದನ ನಿಜ ದಾಸ ೧

ನಾಕಪ ವಂದ್ಯ ಪಿನಾಕಿಧರನುತ
ಏಕದಂತ ಧ್ರಿತ ಪಾಶಾ ೨

ಶಿರಿಗೋವಿಂದ ವಿಠಲನ ದಾಸರಿಗೆ
ಶಿರಿದ ನಿಖಿಳ ಭಯನಾಶ ೩

### ೧೮೧

#### ಶ್ರೀಹರಿಯ ಸ್ತೋತ್ರ

ಬಾಯೆಂದು ಕರೆವೆನೊ ದೇವ ನಿನ್ನ
ಮಾಯಿ ವೈರಿ ಮಧ್ವರಾಯರ ಪ್ರೀಯನೆ ಪ

ರಾಮ ನಿರಾಮಯ ಮಾಮನೋಹರ ಶೌರಿ
ಸೋಮಧರಾರ್ಚಿತ ಸಾಮನುತಾ ಭೂಮಿಜ
ಲೋಲಬಾರೊ ಸಾಮಜ ಪಾಲ ಬಾರೊ
ಕಾಮಿತ ಶೀಲ ಬಾರೊ ತಾಮಸ ಕಾಲ ಪ್ರೇಮದಿ ೧

ಬಿಸಿದಾಭಾಸ್ವಸನ ಮಾನಸಗೆ ಅಸುರ ವೈರಿ
ಕುಸುಮಶರ ಪಿತ ಸುಮನಸ ವಂದಿತಾ
ಅಸಮ ಶೂರ ಬಾರೊ ವಸುಧಿಧರ ಬಾರೊ
ವ್ಯಸನಹರ ಬಾರೊ ಅಸುರ ವೈರಿ ಕುಶಲದಿ ೨

ನಂದನ ಕಂದನೆ ಇಂದಿರೆ ಮಂದಿರ
ಸುಂದರ ಶಿರಿ ಗೋವಿಂದ ವಿಠಲ
ಮಂದರಧರ ಬಾರೋ ಚಂದಿರಮೊಗ ಬಾರೊ
ಛಂದದ ದೈವ ಬಾರೊ ಇಂದಿನ ಎನ್ನ ಮನಸಿಗೆ ೩

## ೧೮೨

## ಲಕ್ಷ್ಮೀದೇವಿ

ನೀನನ್ನ ಹೇಳಬಾರದೇನೆ ತಾಯಿ
ನಿನನ್ನ ವಾನರ ವಂದಿತ ಶ್ರೀನಿವಾಸಗೆ ಬುದ್ಧಿ ಪ

ಶ್ರೀನಿಧಿಪರನೆಂದು ನಂಬಿ ಬಂದ ಬಡ
ಪ್ರಾಣಿಯ ಪೊರೆಯಂದು ಜಾನಕಿ ದೇವಿಯೇ ೧

ಮೊರೆ ಹೊಕ್ಕವರ ಕರ ಪಿಡಿವನೆಂಬೊ ಘನಾ
ಬರದು ಉಳಿಸಿಕೊ ಎಂದ್ವರುಷದಿ ಸಿರಿದೇವಿ ೨

ಉರಗಶಾಯಿ ಶಿರಿಗೋವಿಂದ ವಿಠಲ ತುರುಗಗ್ರೀವ
ನರಹರಿಗೆ ತ್ವರಿತದಲ್ಲಿ ೩

# ೧೮೩

## ವಾಯು ದೇವರು

ಮುದದಿ ಪಾಲಿಸೊ ಮುದತೀರಥ ರಾಯಾ
ಸದ್ಬುಧ ಜನ ಗೇಯಾ ಪ

ಪದುಮನಾಭ ಪದ ಪದುಮ ಮುದುಪ ಸದಯಾ
ಸದಮಲ ಶುಭ ಕಾಯಾ ಅ.ಪ.

ವದಗಿರಾಮ ಕಾರ್ಯದಿ ನೀ ಮನಸಿಟ್ಟೆ
ಲಂಕಾಪುರ ಮೆಟ್ಟಿ
ಹೆದರದೆ ದಿತಿಜರನೆಲ್ಲ ಕೊಂದು ಬಿಟ್ಟೆ
ಪುಚ್ಚದಿಪುರ ಸುಟ್ಟ
ಕದನದಿ ಭೀಮವೃಕೋದರ ಜಗಜಟ್ಟಿ
ಸಂನ್ಯಾಸ ತೊಟ್ಟಿ ೧

ಸೀತಾ ಶೋಕ ವಿನಾಶನ ಮಹಂತಾ
ಮಹಬಲಿ ಹನುಮಂತ
ದಾತಜ ವಾರಿಜ ಜಾತನಾಗುವಂತಾ
ಖ್ಯಾತಿಯುಳ್ಳವಂಥಾ
ಕೋತಿರೂಪಿ ಧರ್ಮಾನುಜ ಜಯವಂತ
ಯತಿನಾಥನೆ ಶಾಂತಾ ೨

ಶಿರಿಗೋವಿಂದ ವಿಠಲನ ಪ್ರೀತಿ ಕಂದಾ
ಭೀಮನೆ ಆನಂದಾ
ಗರಿದು ಮುರಿದು ಪರಮತವನೆ
ಆನಂದಾ ಮುನಿ ರೂಪದಲಿಂದ ಶಿರಿರಾಮನ
ಸುತರ ಪ್ರೀಯ ಭರದಿಂದಾ
ಬದರಿಗೆ ನಡೆ ತಂದಾ ೩

## ೧೮೪

### ಶ್ರೀ ಸತ್ಯಜ್ಞಾನರು

ನಮನ ಅನುದಿನದಿ ಅನುಮಾನಿಸದೇ ನೀ ಪ

ನೆನೆ ಮನವೆ ಶ್ರೀ ಸತ್ಯಜ್ಞಾನರ ಅನಘಹೃದ್ವನಜದಲಿ
ಘನ ದಿನ ಮಣಿಯ ವೊಳ್ ಮಿನುಗುವನ
ಗುಣಗಣ ತನು ಮರೆದು ಕುಣಿ ಕುಣಿದು ಹರುಷದಿ ಅ.ಪ

ಜ್ಞಾನಾತ್ಮ ಪರನೆಂದು ಮಿಕ್ಕಾದದಿತಿಯರು ಊನರು ಹರಿಗೆಯ
ಚೇತನರು ಅವಾನಧಿರು ಅಹುದೆಂದು
ವಿಸ್ತರಿಸಿ ಪೇಳಿದ ದಿನ ಪಾಲಕದೇವ ಶ್ರೀ
ಪವಮಾನ ಮತ ಅಂಬುಧಿಯೊಳನುದಿನ
ಮಿಾನ ನೆನಿಸಿದ ನಮ್ಮ ಸತ್ಯಜ್ಞಾನತೀರ್ಥರ ಮಾನದಂಘ್ರಿಯ ೧

ಕಮಲಾಪ್ತ ಗಧಿಕನಾದ ತೇಜದಲಿ ಪೊಳೆಯುವ
ಕಮಲಾಪತಿಯ ಸುಪಾದಾ ಅತಿ ವಿಮಲತನ

## ೧೮೫

### ಶ್ರೀ ಸತ್ಯಧ್ಯಾನರು

ನಿತ್ಯದಿತಿಜರು ಕಲಿಗೆ ದೂರುತಿಹರೋ
ಸತ್ಯಧ್ಯಾನರ ಕಾಟ ತಾಳಲರೆವೊಯಂದು ಪ

ನೀಕಲಿಸಿದಾಟವನು ತಾ ಕಳೆದು ಜನರ ಅಘನೂಕಿ
ಜಗಸತ್ಯ ಶ್ರೀಹರಿಯು ಪರನು

ಶ್ರೀ ಕಮಲಭವರೆಲ್ಲ ದಾಸರೆಂದರು ಪಲು
ತಾ ಕಲ್ಪಿಸಿದ ಪಾಠಶಾಲೆ ಸಭೆಗಳನೆಂದು ೧

ಭೂಸೂರರಿಗನ್ನ ಧನ ಭೂಷಣಗಳಿತ್ತು
ಅಭ್ಯಾಸಗೈಸಿದ ಸಕಲ ವೇದಶಾಸ್ತ್ರ
ವೀಸುವಿದ ಯತ್ನಗಳು ನಾ ಮಾಡಿದರು ಜಯ
ಲೇಸುಕಾಣದೆ ನಿನ್ನ ಬಳಿಗೆ ಬಂದೆವು ಎಂದು ೨

ಇಂತು ತಾಮಾಡಿದನು ಪಿಂತಿನಾಶ್ರಮದಿ
ಈಗಂತು ನಮ್ಮವರಾದ ವದುಮತ್ಸರಾ
ಕಂತು ಕೋಪಾದಿಗಳಿಗಂತಕನು ಯನಿಸಿ
ಮುನಿ ಸಂತತಿಪನಾಗಿರುವದೆಂತು ನೋಳ್ಪೆವು ಎಂದು ೩

ತಾಪಸೋತ್ತಮ ಸತ್ಯಧ್ಯಾನದಿಂ ಭೂತಳದಿ
ಪಾಪ ಸರಿದಿತು ಪುಣ್ಯವೆಗ್ಗಳಿಸಿತು
ಲೇಪಿಸದು ಖತಿಜನಕ ಇವರ ದಯದಿಂದೆಮ್ಮ
ವ್ಯಾಪಾರ ಧರೆಯೊಳಗೆ ಭೂಪ ಇನ್ಯಾಕೆಂದು ೪

ನಿರುತ ಸಿರಿಗೋವಿಂದ ವಿಠಲನ್ನ ಸೇವಿಸುತಾ
ಪರ ಹಿಂಸೆ ಧನ ಯುವತಿ ದ್ಯೂತ ತೊರದಾ
ವರ ಯತಿಯ ಮೋಹಿಸುವ ಶಕ್ತಿ ತನಗಿಲ್ಲೆಂದು
ಅರುಹಿದನು ಭೃತ್ಯರಿಗೆ ಕಲಿ ಮನನೊಂದು ೫

## ೧೮೬

### ಸಿರಿಗೋವಿಂದ

### ಶ್ರೀ ಪುರಂದರದಾಸರ ಸ್ತೋತ್ರ

ಇದೇ ಪೇಳಿ ಪೋದರು ವಿಧುವದನೆ
ನಮ್ಮ ಬುಧನುತ ಪದದ ನಾರದರು ಈ ಜಗದಿ ಬಂದು ಪ

ಸಿರಿ ಅರಸನೆ ಈ ಧರೆಯೊಳಗುತ್ತಮ
ಮರುತ ದೇವರೆ ಜಗದ್ಗುರುಗಳೆಂದು
ತರತಮ ಪಂಚಭೇದ ಜ್ಞಾನ ಶೀಲನೆ
ಸುರಲೋಕವಾಸಿ ಶ್ರೀಹರಿ ಪ್ರೇಮ ಪಾತ್ರನೆಂಬೊದೆ ಪೇಳಿ ೧

ಜರದೂರ ನರಹರಿ ಧರೆಯೊಳು ವ್ಯಾಪಿಸಿ
ಇರಲು ತ್ರಿಗುಣ ಕಾರ್ಯವಾಹವೆನ್ನುತಾ
ಪರತಂತ್ರ ಜೀವವೆಂದರಿದು ಪಾಪ ಪುಣ್ಯ
ಸರಸಿಜನಾಭನಿಗರ್ಪಿಸಿರೆಲೋಯಂದು ೨

ಶಿರಿಗೋವಿಂದ ವಿಠಲ ವಿಶ್ವವ್ಯಾಪಕ
ಗಿರುವವು ಎರಡು ಪ್ರತಿಮೆ ಜಗದಿ
ಚರ ಅಚರಗಳನ್ನು ಅರಿತು ಮಾನಸದಲ್ಲಿ
ಹರಿ ಪೂಜೆ ಮಾಡಿ ಸೇರಿರಿ ವೈಕುಂಠವೆಂಬೊದೆ
ಪೇಳಿ ಪೋದರು ೩

## ೧೮೭

### ಶ್ರೀ ಗುರು ರಘುಪತಿ

ಏನೇನು ಭಯವಿಲ್ಲ ನಮಗೆ
ಪವಮಾನ ಸೇವಕ ಗುರು ರಘುಪತಿಯ ದಯವಿರೆ ಪ

ಜೋಡು ಕರ್ಮದಿ ಬಿದ್ದು ಕೇಡು ಲಾಭಕೆ ಸಿಲ್ಕಿ
ಮಾಡಿದ್ದೆ ಮಾಡುತ ಮೂಢನಾಗಿ
ರೂಢಿವಳಗೆ ತಿರಿಗ್ಯಾಡುವ ಅಜ್ಞಾನಿ
ಕೋಡಗನ್ನ ಸಿಂಹ ಮಾಡಿದ ಗುರುವಿರೆ ೧

ಆವಾನು ದಯಮಾಡೆ ದೇವನು ವಲಿವನು
ಅವನ ನಂಬಲು ದೇವಗಣಾ

ಕಾವಲಿಗಳಾಗಿ ಕಾವದು ಅಂತ
ಕೋವಿಂದಾಗ್ರಣಿ ಗುರು ರಘುಪತಿ ದಯವಿರೆ ೨

ಕರವೆಂಬೊ ಲೇಖನ ದ್ವಾರದಿಂದ ನಮ್ಮ
ಶಿರಿ ಗೋವಿಂದ ವಿಠಲ
ರಾಯನಾ ಕರಸಿ ಸುಹೃತ್ಸುಖ ಬೆರಸಿ ಪರಸ್ಪರ ಕರವಿಡಿದು
ತಿರುಗುವ ಗುರು ಕೃಪೆ ನೆರಳಿರೆ ೩

# ೬. ಶ್ರೀ ರಾಜಗೋಪಾಲದಾಸರು

## ೧೮೮

### ಶ್ರೀ ರಾಘವೇಂದ್ರರು

ಈ ಪದಾರಾಧಾನಾ, ಪಾವನ
ಮಹಾ ಪಾವೇಭ ಸಂಚಾನನಾ ಪ

ತಾಪತ್ರಯ ಹರ, ರಾಘವೇಂದ್ರರ ಬಹುಪದ
ವ್ಯಾಪಾರನಾ, ಅನುದಿನಾ ಅ.ಪ.

ಕ್ಷಣಲವ ಬಿಡಲೊಂದಿಪೆ, ದುರಿತ ಬೆಟ್ಟ
ತೃಣ ಮಾಡಿ ಹಾರಿಸುವಾ
ಅಣು ರೇಣು ಮುಂತಾದ ತೃಣಪ ರಕ್ಷಿಪಗಿಡು
ತೃಣ ಪರಿಹಾರವಿದೆ, ನಾಘಾದೆ ೧

ಅಂಧ ಬದಿರ ಮೂಕರು ಸೇವಿಸುತ
ನಂದಾಗಳೇರುವರು
ವೃಂದಾವನ ಸೇವೆ, ಗೈದು ವಂದಿಸಿ ದಿವ್ಯ
ಕಂದನ್ನೆತ್ತಾಡಿಸಿರೋ, ಜೋ ಎನ್ನಿರೊ ೨

ಕುಷ್ಠ ಭಗೇಂದ್ರಕ್ಷಯಾ, ಬಾಲಗ್ರಹ
ದುಷ್ಟ ಪಿಶಾಚಭಯ
ಕಷ್ಟ ಓಡಿಸಿ ದಯ ದಯದೃಷ್ಟಿಯಿಂದ ನಿಖಿ–
ಳಾಷ್ಠ ವಿಟ್ಟು ಕರೆವಾ, ತಾ ಮೆರೆವಾ ೩

ಆರಾಧಿಸುತಲಿ ಬಂದ, ನವಲಗುಂದ
ಸಾರಸಿಂದಾರ್ಯರಿಂದ
ಕ್ಷೀರ ಸೇಚನ ಮೂವತ್ತಾರು ವರುಷ
ಗುರುವಾರ ಮೃಷ್ಟಾನ್ನದಿಂದ, ಆನಂದ ೪

ಬಹಳ ಗುಣಗಳ ನೋಡಿ, ಒಲಿದು ಒಲಿದು ಮಂತ್ರಾ
ಲಯದೊಳು ನಿಂತು
ಶೀಲ ಸಂಪತ್ತಿಗೆ ಒಲಿದಿಹ ರಾಜ
ಗೋಪಾಲ ಭಕ್ತರ ಜಯಾ ಆಶ್ಚರ್ಯ ೫

## ಶ್ರೀ ರಸ್ತು

## ೧೮೯

### ದಶಾವತಾರ

ನೀರೊಳಗೆ ನಿಂತು ನಡುಗಿ ನಾರುವಂಗೆ ಗಂಬೂರಿ
ಕಸ್ತೂರಿ ಲೇಪನದ ಮದುವೆ
ಭಾರ ನಿನ್ನಲಿ ಪೊಳಲು ಕಲ್ಲು ಕೈ ಮುಸುಡಿದಂಗೆ
ಧೀರ ಶೇಷನ ಶಯನದ ಮದವೋ
ಮೋರೆಯಲ್ಲಿ ಯಲ್ಲಾ ಕೆದರಿ ಬೇರು ಮೆಲುವನಿಗೆ
ಸಾರಷಡ್ರಸನ್ನ ಭೋಜನದ ಮದವೋ
ಕರುಳ ವನಮಾಲೆ ಹಾಕಿದವಂಗೆ ಹಾರಪದಕ ಹಾಕಿದ ಮದವೋ
ಮೂರಡಿಯ ಭೂದಾನ ಬೇಡಿದವನಿಗೆ ಸಾರಿದವಂಗಭೀಷ್ಟಗಳ
ಪೂರೈಪ ಮದವೋ
ಧರಣಿ ವಿಪ್ರರಿಗಿತ್ತು ಕುಳಿಪುದಕೆ ಸ್ಥಳವಿಲ್ಲವಗೆ ಭುವನ
ಕೀಳುವ ಮದವೋ
ಊರ ಬಿಟ್ಟು ವನ ಚರಿಸುವಂಗೆ ಮೂರು ಧಾಮದ
ಮನೆಯ ಭೋಗದ ಮದವೋ
ಪುರನಾರಿಯ ಬಯಸಿ ಕೊಂಬುವಂಗೆ ವಾರಿಜಭವ ಸುರರ
ವಂದ್ಯಾನೆ ಮದವೋ

ಘೋರ ತುರಗವನೇರಿ ಹಾರಿಸ್ಯಾಡುವಂಗೆ ವೀರಸಿಂಹಾಸನದಲ್ಲಿ
ಕುಳಿತ ಮದವೋ
ಮೂರು ದಿನ ಅರಸುತನ ಸ್ಥಿರವೆಂದು ನೆಚ್ಚಿ ಸಾರಿದವನ್ನ
ಮರೆವದುಚಿತವೆ
ಬಾರದೆ ತಪ್ಪದು ಹಿಂದಿನ ಭವಣೆ ನಿನಗೆ ದೂರ ವಿಚಾರಿಸಿ
ನೋಡೊ ಕರುಣಾ ನಿಧಿ
ಶ್ರೀರಂಗ ರಾಜಗೋಪಾಲ ವಿಠಲ ನಿನ್ನ ಪಾರಿದವರ ಪೊರೆದು
ಕೀರ್ತಿಪಡಿಯೊ

## ೧೯೦

### ಭೀಮಸೇನನ ಸ್ತ್ರೀವೇಷ

ಭೀಮನು ಸರ್ವಜನಾ ಮೋಹಿಸುವಂಥ
ಕಾಮಿನಿ ರೂಪವ ತೊಟ್ಟನು ಪ

ಸೋಮ ಸಮಾನನ ತಾಮರಸಾಂಬಕ
ಹೇಮಾಂಬರ ಕಂಠೀಮಣಿ ಗಣ ಸು –
ತ್ರಾಮ ಕಾಮಿನಿಯಾ ಮೋಹಿಪ ಅಬಿ –
ರಾಮರೂಪ ನಿಸ್ಸೀಮ ಬಲಾಢ್ಯ ಅ.ಪ.

ಬಟಕುಚಪಟ ಕರಪುಟದಿಂದ ಹಿಗ್ಗಿಸಿ ತೀಡುತ ಅಂ–
ಗುಟ ತುದಿಲೆಳೆದೆಳೆದುಟ ರಕ್ತಿಮೆಯನು ನೋಡುತ
ಕುಟಿಲಾಳಕನ್ಯಾವರಿಸುತ ಪಟುಮಾತಾಡುತ
ವಿಟರಿಗೆ ಸ್ಮರಸಂಕಟವನು ಹೃದಯದಲೂಡುತ
ಪುಟ್ಟಚಂಡ ಹಾರಿಸಿ ನಟನೆ ಮಾಡುವಾ –
ರ್ಭಟಕಂಜಿಹ ವಿಟಪಟಲ ಹಾಂಗಿರಲದು
ವಟುರಿದ್ದರು ಯತಿ ಮಠಮಂದಿರ ಲಂ –
ಪಟವ ಬಿಟ್ಟ ಮಿಟಿಮಿಟಿ ನೋಡುವರೋ ೧

ಕರಿಕಲಭಗಮನ ಸೊರಗಿದ ಕಟಿಕಂಠೀರವು
ವಿಕಲ ನಯನಜತ ಎರಳೆಗಳ್ ಮನೆಯನು ಸೇರವು
ಸರಸ ಸ್ವರದಿಂದ ಪರಿಭ್ರಮಿಸಿತು ಕಲಕಿರವು
ಸುರನರವರ ಸುಂದರಿಯರ ಚಲುವಿಕೆ ಮಾರವು
ಹೆರಳ್ ಬಂಗಾರವು ಮಲ್ಲಿಗೆ ಸರಗೀ ಸರ
ಹರಳ್ ಕಂಕಣ ಬಳೆ ಸರಳ್ ಬೆರಳುಂಗುರ
ಅರಳ್ ಮಲ್ಲಿಗೆ ಸರ ಕೊರಳ್ ಗಂಧವ ಕಂಡು
ಮರುಳ್ಗೊರಡ ಜನ ಹಗಲಿರುಳು ಧೇನಿಪರೊ ೨

ಮೃಗಮದತಿಲಕವು ಮುಗುಳ್ ನಗೆಮೊಗ ಬಿಂಬಾಧರ
ಖಗಯುಗದಂದದಿ ಝುಗಝುಗಿಸುತಿಹ ಪಯೋಧರ
ಅಘಹರ ರಾಜಗೋಪಗ ಸಖ ಪಾರ್ಥ ಸಹೋದರ
ಬಗೆ ಬಗೆಯಲಿ ಮನದಗ ಅಘಹರನ ಕೃತಾದರ
ಮುಗುಳ್ ಮಲ್ಲಿಗೆ ಸರ ತೆಗೆತೆಗೆದ್ದಾಕುತ
ಸೊಗಸು ಸುಗುಣರೂಪ ತಗುಬುಗಿಲೆನುತಿರೆ
ಜಗದ ಜನರ ಮನ ಭುಗಿಭುಗಿಲೆನುತಿರೆ
ಬಗೆ ಬಗೆಯಲಿ ಒಂದ್ದಗಲ್ಯುಗವಾಗೆ ೩

# ೭. ತಂದೆವರದಗೋಪಾಲವಿಠಲರು

## ಅ. ಗಣೇಶ ಸ್ತುತಿ

### ೧೯೧

ಕರಿಮುಖನೇ ನಮಿಸುವೆ ಕರೆಕರೆ ಪಡಿಸದೆ
ಕರಪಿಡಿದು ಸಲಹೊ ಪ

ಕೋಮಲಾಂಗನೆ ನಿನ್ನ ಕೋಮಲ
ಚರಣಕೆರಗಿ ಬಿನ್ನೈಸುವೆ ಅ.ಪ.

ಕಾಮನುಜನೇ ಎನ್ನ ಕಾಮರೂಪದಿಂದ ಕಡೆಹಾಯಿಸು ೧

ಕಾಮಗೆದ್ದ ನಿಷ್ಕಾಮತನದಿಂದ ಕಾಮನಯ್ಯನ ಜಪಿಸುವ ೨

ಕಾಮಹರನ ಸಖ ತಂದೆವರದಗೋಪಾಲವಿಠ್ಠಲನ ತೋರಿಸು
ಎಂದು ೩

### ೧೯೨

ಕಾಮನುಜ ಸುರಸೋಮ ಶತ್ರು
ವಿನಾಯಕ ಪರಿಪಾಲಿಸೊ ಪ

ಕಾಮ ಇಲ್ಲದ ಕಾಲ ಎನಗೊಂದು
ಕ್ಷಾರಿ ಕರಿಮುಖ ತೋರಿದಿ ನೀ ಅ.ಪ.

ಎಂದಿಗೂ ನಿನ್ನ ದ್ವಂದ್ವ ನಂಬಿದ ಕಂದನೆಂದು
ಮುಂದೆ ಕರೆದು ಚಂದದಿಂದಲಿ ಬಿಂಬ ಬಿಂಬದೊಳಗಿಹ
ಬಿಂಬ ಮೂರುತಿ ಪಾದ ಹೊಂದಿಸಿ ೧

ಭಾಸದಿಂದಲಿ ವಿಷ ಧರಿಸಿ ಆ–
ಭಾಸತನದಲಿ ದಾಸನೆನಿಸಿ ಕಾಸು
ಕಾಸಿಗೆ ಮೋಸಹೋಗಿ ವಿಶೇಷ ಮಮಕರ ಪಾಶ ಕ್ಷಳಿಸಿದೆ ೨

ಚಂದ್ರ ಧರಿಸುತ ಛಂದದಿಂದಲಿ ನಿನ್ನ
ಸುಂದರ ಚಾರು ಚರಣವ ಬಂದು ತೋರಿ ಇಂದು ಪೊರೆಯೋ
ಕಂಬುಕಂಧರ ಶಾಮಸುಂದರ ತಾತನೆನಿಸುವ
ತಂದೆವರದಗೋಪಾಲವಿಠಲನ ಪ್ರೇಮ ಪಾತ್ರನೆ ೩

## ೧೯೩

ಗುಣಿಸುವೆ ಗಣನಾಥಾ ಪ

ಗುಣಗಣ ಚರಿತನೆ ಗುಣದೊಳು
ಮೊದಲಿಗನೆಂದು ಸಾರಿ ಸಾರಿ ನಿನ್ನ ಅ.ಪ.

ಎಂದಿಗು ನಿನ್ನ ಪದದ್ವಂದ್ವ ನಂಬಿದ
ಕಂದನ ಮಾತ ಲಾಲಿಸೊ
ಇಂದುವರಿಯ ಎನ್ನ ಮಂದಿರದೊಳು ಬಂದು
ತಂದೆ ಕರುಣದಿ ಪಾಲಿಸೊ ೧

ಮಾರ ತಾಪಕೆ ಶಿಲುಕಿ ಮಾರಿ
ಮೋರೆಯ ನೋಡಿ ಮರುಳಾದೆನೊ
ಮಾರನನುಜನೆ ಎನ್ನ ಗಾರುಮಾಡದೆ
ಪೊರೆಯೊ ನಿನ್ನ ಪಾದಕೆರಗಿದೆನಯ್ಯ ೨

ಉಜ್ಜಿ ಕೂಪವ ನೋಡಿ ಮೆಚ್ಚಿ ಬಲುಪರಿ
ಹುಚ್ಚನಾದೆನೊ ದೇವಾ
ಇಚ್ಛೆ ಪೂರೈಸೊ ನಮ್ಮ
ಸ್ವಚ್ಛ ತಂದೆವರದಗೋಪಾಲವಿಠಲನರ್ಚಕ ೩

## ೧೯೪

ವಂದಿಪೆ ನಿನಗೆ ಗಣನಾಥ
ಮೊದಲೊಂದಿಪೆ ನಿನಗೆ ಗಣನಾಥ ಪ

ಬಂದ ವಿಘ್ನ ಕಳೆ ಗಣನಾಥ ಅ.ಪ.

ಸಿಂಧುರವದನರವಿಂದ ನಯನ ಘನ
ಸುಂದರ ಸತಿಯರ ಮಂದಿರ ನಿಲಯನೆ ೧

ಹೂಡಿದ ಆಟಕೆ ಮಾಡಿದ ಯೋಚನೆ
ಕಡೆಗಾಣಿಸು ಘಟ್ಟಿಕಾಣಿಕೆ ಕೊಡುವೆ ೨

ಮಂಗಳಾಂಗ ಮಹಮಾದಗಮನಿಯಳ
ತಂದು ತೋರೋ ತಂದೆವರದಗೋಪಾಲವಿಠ್ಠಲಪ್ರಿಯ ೩

# ಆ. ಶ್ರೀಹರಿಯ ಸ್ತುತಿ

## ೧೯೫

ಅಂಗಾರವನೆ ನೀಡು ಯನ್ನಂತರಂಗದ ಧೊರಿಯೇ ಪ

ಅಮಂಗಳಗಳ ನೀಡುವ್ಹೋ ಪರಮನೀಚ ಅಂಗನಿಯಳಿಗೆ ಅ.ಪ.

ಮಂಗಳಾತ್ಮಜ ನಿನ್ನ ಅನುಗಾಲ ಕಂಗಳಿಂದಲಿ ನೋಡಿ
ಸುಖಿಸುವ್ಹೋಡಿಂಗನಾ ಭಂಗಪಡಿಸುತಿಹಳಿ ೧

ಪರಮ ಅದ್ಭುತ ಮೂಗುತಿಯೆ ನಿನ್ನ ಅದ್ಭುತ-
ಚರಿಯವ ತೋರು ಭೂತನಾಥಾ ೨

ಭಕ್ತವತ್ಸಲನೆಂಬ ಬಿರುದು ಬೇಕಾದರೆ ನಂಬಿದ
ಭಕುತರನು ಪಾಲಿಸಿ ಬಿರುದು ಪಡಿಯೋ ೩

ಶಕುತಿ ಇಲ್ಲದ ಕಾರಣದಿ ವಿಷಕೂಪದೊಳು ಬಿದ್ದು
ಘನ ಪಾಪಕೊಳಗಾದೆನೋ ವಿಷಕಂಠನೇ ೪

ಹಂಸರೂಢನಾದ ದಾಸ ನಿನ್ನ ದಾಸರನು ಕ್ಲೇಶಪಡಿಸುವರ
ಧ್ವಂಸಗೈಯೋ ತಂದೆವರದಗೋಪಾಲನಭಜಕಾ ೫

## ೧೯೬

ಇದೇ ಸಮಯವು ನೋಡು ಸಖನೇ
ರತಿ ಕ್ರೀಡೆಗೆ ಶುಭಕಾಲ ಪ

ರತಿಪತಿಪಿತ ನಿನ್ನತಿಶಯ ಹಿತವಾಗುವ
ಸುಖಸವಿಯದ ಮ್ಯಾಲೆ ಸಖಿಯರ ಬಾಳೇ ಅ.ಪ.

ಮದನನಯ್ಯನೇ ಮುದದಿ ಬಂದು
ಮದನ ಕದನವ ಮಾಡಿ ಎಮ್ಮೊಳು
ಮಧು ರಸಾಯನ ಸಾರ ಸುರಿಸೋ ಸರಸಿಜಾಕ್ಷಾ ೧

ಜಾಣೆ ನೀಯೆನ್ನ ಪ್ರಾಣದಾಣೆಯೆ
ಗೇಣು ವಳಗಡೆ ಜೀವದೊಳಗಿದ್ದು
ಪೂರ್ಣಸುಖವಿತ್ತು ಪಾರುಗಾಣಿಪೆ ಪ್ರಾಣಕಾಂತೆಯೆ ೨

ಎಂತು ಪೇಳಲಿ ನಿನ್ನ ಮಹಿಮೆಯ
ಪ್ರಾಂತಗಾಣದೆ ಶ್ರಾಂತರಾಗುವರ್ಕೈ
ಹನುಮಂತ ಮೊದಲಾದ್ಯನಂತ ಗುಣಿಗಳು
ದಿಗ್ಭ್ರಾಂತರಾದರು ತಂದೆವರದಗೋಪಾಲಕಂತುಪಿತ ೩

## ೧೯೭

### ಉಗಾಭೋಗಗಳು

ಕರಿವರದಾನೆ ಕೇಳು ಕರಿಕರಿಯನ್ನು ಪಡಿಸುತಿಹ
ದಾನವರ ಉಪಟಳ ಬಿಡಿಸೆನ್ನ ನಿನ್ನ ದಾಸರೊಳಗೆ ಇಟ್ಟು

ಧ್ಯಾನಿಸುವಂತೆ ಮಾಡೊ ಜನುಮ ಜನುಮಕ್ಕೆ
ಇದನೆ ಬೇಡುವೆನಯ್ಯ ಮಾರನಯ್ಯನೆ ಕೇಳು
ಮುದದಿಂದಲೇ ಎನ್ನ ಬಿನ್ನಪವನ್ನು
ಋಜು ಪುಂಗವ ಪ್ರೀಯ
ತಂದೆವರದಗೋಪಾಲವಿಠಲರೇಯಾ
ಬಿನ್ನೈಸಿದಕ್ಕೆ ಪಾಲಿಪೆನೆಂದು ನಂಬಿದೆ

ಕಾಳಗ ಮಾಡಿಕೊಂಡು ಕೇಳದೆ ತೆರಳುವೊ
ಖೂಳರನ್ನು ಕಾವಳನಿತ್ತು ಪರಿಹಾಸ ಬೇಕಯ್ಯ
ಜಾಲಮೋಹದಿ ಬಿಗಿದು ಮೇಲೆ ಅಪ್ಪಳಿಸಬೇಕಯ್ಯ
ತೆರಳುವಂತೆ ಮಾಡೊ ಕಾಲಿಗೆ ಬಿದ್ದು ಬೇಡುವೆ
ಕೃಪಾಳು ಕಾಳಿರಮಣನ ಪ್ರೀಯಾ
ಕಾಳಿಮರ್ದನ ತಂದೆವರದಗೋಪಾಲವಿಠಲರೇಯಾ
ಆಲಿಕೆಯನ್ನು ಕೇಳಿದರೆ ಬಿರುದುಗಳ್ಯಾ

## ೧೯೮

ಚದುರೇ ವೃಂದಾವನದೊಳು ನಿಂತಿಹನ್ಯಾರೇ ಪೇಳಮ್ಮಯ್ಯಾ ಪ

ಸತ್ ಸಖಿಯರಿಗುಣಿಸುವ ಜಾರಚೋರ ಶ್ರೀಕೃಷ್ಣ ಕಾಣಮ್ಮಾ ಅ.ಪ.

ನೀರೇ ನೋಡೋಣು ಬನ್ನಿರಿ ಎಂದು
ಈ ಬಾಲೇರು ಗೋಪಾಲನ ಗಾನಕೆ ಬಂದು
ಬೆದರುತ ಮನದೊಳು ಮದನಾಟಕೆ ನಿಂದೂ
ಮೋರೆಯ ತಿರುವುತ ಅಂದು
ಮಾರನಯ್ಯ ತವ ಚಾರುಧರಾಮೃತ
ಸೂರೆಗೈಯ್ಯೋ ಸದ್ಧೀರಿಯರೊ ನಾವು ೧

ಬಾಲೆ ನಿನ್ನಾಳುವ ದಾರಿ ಬ್ಯಾರಿಲ್ಲಾ
ಕಾಲಬಂದೊದಗದು ಕೇಳೆನ್ನ ಸೊಲ್ಲ
ಮತ್ತಾವದೊ ತಂಗಾಳಿ ಬೀಸುವ ವ್ಯಾಳೆ ಬಂತಲ್ಲಾ
ಮೋಹಿಸಿ ಬಂದೆವೊ ನಲ್ಲಾ

ಫುಲ್ಲಲೋಚನ ಮೃದು ಮಲ್ಲಿಗೆ ಮುಡಿಸಿ
ಮೆಲ್ಲಗೆ ಮರ್ದಿಸು ಮೃದು ಚಲ್ವಯರುಹರೆ ೨

ಸಿಂಧೂ ರಾಜಕುಮಾರಿಯ ರಮಣ
ಶರದಿಂದೂ ಮಂಡಲ ಮುಟ್ಟುತಲಿದೆ ಧ್ವನಿ ಹಸನಾ
ಶಂಭೂರ ಶತ್ರಾದಿಗಳುಗರೆವರು ಪೂಮಳಿ ನಾನಾ
ಗಣಶಿರಿಸುತ ಮರುಳಾಗಿ ಪೂ ಬಾಣಾನಾಟವ
ನೋಡುತ ನಾರಿಯ ತ್ಯಜಿಸದೆ
ಪರನಾರಿಯ ರೂಪದಿಂದ್ರಮಿಪ ಮುರಾರೇ ೩

ವಾಣೀ ಕರಧೃತ ವೀಣಾಪಾಣೀ
ಷಣ್ಮಹಿಷೆರು ಸಹ ಸಮ ಶಿವರಾಣೀ
ಬಂದಿಹರು ಶಚಿ ಶಾಮಲಾ ಸೋಮನರಮಣಿ
ಮತ್ತೆ ಬಂದಿಹರು ಸುರನದಿ ಸ್ಮರಸುತ ರಾಣಿ
ನಾಟ್ಯವನಾಡುತ ನವನವ ಪಾಡುತ
ದಿದ್ಧಿದ್ಧಿಮಿಕಿಟ ತಾಂ ತಾಳದಿ ನಲಿಯುತ ೪

ಶಶಿಸೂರ್ಯನೆಳಸನ್ನಿಭ ಪ್ರಖನಕರಾ
ಸರಸೀಜಾದಳ ನುತ ಭಾವಿ ಸಮೀರಾ
ಷಟ್ ಶತ ಬಂದು ವಿಂಶತಿಹಂ ಸಾಖ್ಯ ಮಂತ್ರ ಸಹಸ್ತಾದಿಂದ
ಸೇವಿಪ ಮಧ್ವಮಧೀಶನ ಲೀಲೆಯನೆನಿಪರ ಬಂದು
ತೋರುವಾತ ತಂದೆವರದಗೋಪಾಲವಿಠಲನು ೫

## ೧೯೯

ದೀನಜನ ಮಂದಾರನೇ ಪ

ಮಂದಭಾಗ್ಯವ ಕೂಡ ಮಂದಹಾಸವೇ ಅ.ಪ.

ಸರ್ವತ್ರದಲಿ ನೀನಿದ್ದು ಸಲಹುವಿ–
ಸ್ಮೃತಿ ಕೊಡುವುದುಚಿತವೇ ೧

ಪಾಪದೊಳು ಶಿಲ್ಕಿಸಿ ಮಹಾಪಾಪಿ ಎಂದೆನಿಸಿ
ವಳಹೊರಗೆ ಪರಿಪೂರ್ಣನಾಗಿ ೨

ಮಂದರನು ಪೊರೆವದಕೆ ಸಂಧಿಕಾಲವು ಬಂದೊದಗಿದೆ
ತಂದೆವರದಗೋಪಾಲವಿಠ್ಠಲನ ಪ್ರೀಯಾ ೩

## ೨೦೦

ದೂರ ಮಾಡುವರೇ ರಂಗಯ್ಯ ರಂಗಾ ಪ

ದೂರ ಮಾಡುವರೇನೊ ಶಿಖರಪುರದ ಧೊರಿಯೆ
ಶ್ರೀ ಶ್ರೀನಿವಾಸ ದಯಾಶರಧಿ ಅ.ಪ.

ದಾಸ ಜನರು ಕ್ಲೇಶ ಪಡುತ ಬಾಯಿ ಬಿಡಲು ಕಂಡು
ದುಷ್ಟ ಜನರು ನೋಡಿ ಕಷ್ಟಬಿಡಿಸುತಿರಲು ಕಂಡು ೧

ಏಸು ಜನ್ಮದ ಕರ್ಮ ಬಂದು ಒದಗಿತೋ ದೇವ
ಈಸು ಬವಣೆಬಟ್ಟು ಬಿಡುತಿರಲು ಕಂಡು ೨

ದಾಸಜನರ ದೋಷವೆಣಿಸಬಹುದೆ ರಂಗ ಈಶನೆನಿಸಿಕೊಂಡು
ಮನ್ನಿಸಿ ಕೇಳೋ ಎನ್ನ ಬಿನ್ನಪ ಫಣಿಶಯನ
ತಂದೆವರದಗೋಪಾಲವಿಠಲ ೫

## ೨೦೧

ನಗುವರಲ್ಲೋ ಕೃಷ್ಣಾ ನಿನ್ನಾಸಕೆ ನೋಡಿ ಪ

ಸುತನಾ ಸತಿಯರು ಸಹಿಸದೆ ವಿರಸವಾಗುತಿರೆ
ಸುಮ್ಮನಿಪ್ಪುದು ನೋಡಿ ಅ.ಪ.

ಕಂದ ನಾನಲ್ಲವೇ ನಿನ್ನ ರಾಜಾ ಹಿಂದೆ ಮುಂದೆ
ಬಲು ನಿಂದಿಪರೈ ಭೋಜಾ

ಇಂದು ಮುಂದು ಎಂದೆಂದಿಗೂ ನಂಬಿದ ನರನಾ
ಪಾಲಿಸದಿಪ್ಪುದು ಕಂಡು ೧

ಸಹಿಸಲಾರೆ ಸಹಿಸಲಾರೆ ಈ ತಾಪವ ಸಹಿಸಲಾರೆನೋ
ಘನತಾಪಕೆ ಒಳಮಾಡಿ ಕ್ಲೇಶಪಡಿಸೋದಕೆ ೨

ಆರು ಕಾಯ್ವರಿಲ್ಲೋ ಗುರುರಾಜ ನಿನ್ನೊರತು ಪೇಳೋ
ಪುರುಷ ಸೂಕ್ತನುತ ತಂದೆವರದಗೋಪಾಲವಿಠ್ಠಲನ ಪ್ರೀಯಾ

## ೨೦೨

ನಿನಗೆ ಅಂಜುವಳಲ್ಲೋ ಮುರಾರೆ ಮಧುರಿಪು ಪ

ಮಲ್ಲರ ಗೆಲಿದಿಹ ಗೊಲ್ಲ ಗೋಪಾಲ ಬಾ ಪರಿಪಾಲಿಸು ಅ.ಪ.

ಪುಲ್ಲಲೋಚನೇರಾ ಗಲ್ಲವ ಪಿಡಿ ಅಂಜುವಳಲ್ಲೊ
ಖುಲ್ಲ ಮಾನವ ಮಡುಹಿದ ಮಲ್ಲನ ಕಂಡು
ಅಂಜುವಳೆ ರಂಗ ನಾ ಅಂಜುವಳೇ ೧

ಥಂಡ ಥಂಡದಾ ಬಲು ಭಂಡ ಮಾತಾಡುವ
ಪುಂಡನಿಗೆ ನಾ ಅಂಜುವಳೇ
ಪುಂಡ ಜರಾಸಂಧನಿಗಂಜಿ ನಗೇಂದ್ರನ
ಭಂಡಿ ಪೊಡೆದ ಈ ಭಂಡನಿಗೇ ರಂಗಾ ನಾ ಅಂಜುವೆನೇ ೨

ಹಿಂಡು ಜೀವರಾ ನಾ ಅಂಬುಜದೊಳಿಟ್ಟು ಸಲಹುವ
ತೊಂಬನಿಗೆ ನಾ ಅಂಜುವಳೇ
ಪುಂಡ ಖಳರ ಚಂಡಾಡುವ
ತಂದೆವರದಗೋಪಾಲವಿಠ್ಠಲ ರಂಗಾ ೩

## ೨೦೩

ಬಾರೆ ಸಖಿ ಪೋಗೋಣ ಬಾಯೆದ್ದು
ಪೋಗೋಣ ಬಾ ಪ

ಶೆಳೆಯ ಬ್ಯಾಡ ಸೀರೆನುಡುವೆ ಕರವಬಿಡೊ
ಕೈಯ್ಯ ಮುಗಿವೆ ಪ್ರಾಣ ಪ್ರೀಯಾ ಅ.ಪ.

ಚಪಲಮುಖಿಯೆ ಚಪಲವಾಗಿದೆ ನಿಲ್ಲದೆ ಹೋಗೋಣ ಪ್ರಿಯ
ಚಾಪಲ್ಯರಹಿತ ಪೂರ್ಣ ಚಲ್ವ ನಿಲ್ಲೋ ನಿಲ್ಲೋ ನಿಲ್ಲದೇ ಪ್ರಿಯಾ ೧

ಮದನ ಬಾಣಕೆ ಬೆದರಿ ಬಂದೆ ಕುದುರೆನೇರಿ ಬೇಗ
ಮದನನಯ್ಯ ಬದರಿವಾಸಿ ಪದರಬಿಡೊ ಪ್ರಿಯಾ ೨

ದುಂಡುಮುಖಿಯೆ ಗುಂಡುಕುಚವ ಕಂಡು ಮನವ ನಿಲ್ಲದು ಬೇಗ
ಕೋದಂಡಪಾಣಿ ತಂದೆವರದಗೋಪಾಲವಿಠ್ಠಲದಂಡ ಪುರುಷ ೩

## ೨೦೪

ಬಿನ್ನೈಪೆ ನಿನಗಾನು ಭಕ್ತ ಬಂಧೋ ಪ

ಘೋರ ದುರಿತಗಳು ಬಂದು ಬಹು ಬಾಧಿಸುವುದುಚಿತವೇ ಅ.ಪ.

ಏಸು ಕಾಲಾದವು ಬಾಧೆ ಬಿಡುತಿಹಳು ಬಲ್ಯಲ್ಲಾ
ಶ್ವಾಸ ಮಂತ್ರದಿ ದಾಶಿಯಳ ಕ್ಲೇಶವಳಿಯೊ ಪ್ರಭುವೆ ೧

ಭುವನ ಭಿಕ್ಷುಕಧಾರಿ ಪ್ರತ್ಯಕ್ಷನೀನಿರಲಾಗಿ
ಮಾತೃಭಿಕ್ಷವ ನೀಡೋ ಸುಖದ ಕ್ಷಾರಿ ತಲೆಬಾಗಿ ೨

ಇನ್ನಿಲ್ಲ ಇನ್ನಿಲ್ಲ ನಿನ್ಹೊರತು ಕರುಣ ಮಾಳ್ಪರು ಬಲ್ಯಲ್ಲಾ
ಇದು ನಿನಗೆ ತರವಲ್ಲ ಸೊಲ್ಲು ಲಾಲಿಸಬೇಕು
ತಂದೆವರದಗೋಪಾಲವಿಠ್ಠಲನ ಪ್ರೀಯಾ ೩

## ೨೦೫

ಮುರಲೀಯನೂದುವ ಮುರಹರನ್ಯಾರೇ ಪೇಳಮ್ಮಯ್ಯಾ ಪ

ಮಾರನ ಕುಶಲವ ಮೋದದಿ ಬೀರುತ
ಮನಮೋಹಗೊಳಿಪ ಮಾರನಯ್ಯ ಕಾಣೆ ಅ.ಪ.

ಸುಂದರೀ ಸಖಿ ಸುಕುಮಾರಿ ಇಂದೀನ ವೈಭವ ಭಾರಿ
ನಂದಾವೃಜನದೊಳಗಿಹ ನಾರೀ
ವೃಂದಗಳೆಲ್ಲಾ ಪರಿಪರಿ ಸೇರಿ ನಂದನ ಸುತನಾ ಕಂದನ
ಬಾಧೆಯ ತಾಳದೆ ತನ್ನೊಳು ಪೊಗಳುವ ಘನಶೌರಿ ೧

ಮದನಾ ಜನಕನು ಮೌನದಿ ನಿಂತಾ
ಮಾನಿನಿಯರು ಮಾಡುವ ಚಿಂತಾ
ಮನವಾತುರಗೊಳಿಪುದು ಶ್ರೀಕಾಂತಾ
ಮಾವನರಿಪು ಸುಧೆನುಣಿಸು ಬಾ ಪ್ರಾಣಕಾಂತಾ
ಮಾನರಹಿತಳಾಗಿ ಗಾನ ಮಾಡುವೆ
ಘನ ಪ್ರಾಣಮಳಹೋ ಶ್ರೀಕೃಷ್ಣನೆಂದು ೨

ಅಂಗದೊಸನವ ತೂರುತ ಮಂದಾಮಾರುತ ಪಡಿಸುವ ಮುಕುಂದಾ
ಭಂಗಬಡಲಾರೆವು ಶ್ರೀಗೋವಿಂದಾ
ಮದಮುರಿ ಮದಕುಲ ನಂದಾ
ತುಂಗಮಹಿಮ ತಾ ಬಂದು ಪೊರೆದ
ತಂದೆವರದಗೋಪಾಲವಿಠಲನ ಸಖಿ ೩

## ೨೦೬

ಸ್ಮರಿಸುವೊ ಜನರಿಗೆ ಸಲಹುವ ದೊರೆಗಳಿನ್ನುಂಟೇ
ವೆಂಕಟೇಶಾ ಪ

ಕರುಣಾನಿಧಿ ಮಹಾಮಹಿಮ ನೀನೆಂದು ನಾ ನಂಬಿದೆ
ವೆಂಕಟೇಶಾ ಅ.ಪ.

ಬರಿದು ದಂಡಿಸಿ ನಿನ್ನ ಪದ ಹೊಂದುವ ಬಗೆ ತೋರೋ
ವೆಂಕಟೇಶಾ
ಬಾಧೆಯ ತಾಳದೆ ಹಾದಿಯ ತಪ್ಪಿದೆ ವೆಂಕಟೇಶಾ ೧

ಮಾರಿ ಮುಸುಕಿ ಎನ್ನ ಗಾರು ಮಾಡದೆ ವೆಂಕಟೇಶಾ
ಘೋರ ಜಾರದ ವಾರಿಧಿಯಲಿ ನಾ ಮುಳುಗಿದೆ ವೆಂಕಟೇಶಾ ೨

ಪಾರುಗಾಣದೆ ನಿನ್ನ ಮರೆಹೊಕ್ಕೆನೋ ವೆಂಕಟೇಶಾ
ನಾನಾಗಿ ನಿನ್ನ ಗಣ್ಯತಗರಿಯೊ ವೆಂಕಟೇಶಾ ೩

ಚೋರರ ಬಾಧೆಗೆ ಚೀರಿ ಚೀರುತಲಿಹೆನೊ ವೆಂಕಟೇಶಾ
ದೂರ ನೋಡದಿರು ದಾಸರ ದೂತ ವೆಂಕಟೇಶಾ ೪

ಹತ್ತು ಒಂಬತ್ತು ವತ್ಸರದಿಂದ ಕುಂಭಿಯೊಳಿದ್ದೆ ವೆಂಕಟೇಶಾ
ಇನ್ನೆಂತು ಪೊಗಳಲಿ ನಿನ್ನ ಕರುಣವು ಬಾರದೆ ವೆಂಕಟೇಶಾ ೫

ಕುಂಕುಮ ಅಂಕಿತ ಪದಪಂಕಜ ಶೋಭಿತ ವೆಂಕಟೇಶಾ
ಕಂದನೆಂದು ಪೊರೆಯದಿರೆ ಬಿರಿದುಂಟೆ ವೆಂಕಟೇಶಾ ೬

ಜ್ಞಾನದಿ ನಿನ್ನ ಧ್ಯಾನಿಪಲೊಲ್ಲೆ ವೆಂಕಟೇಶಾ
ತೇಜ ತಂದೆವರದಗೋಪಾಲವಿಠಲ ವೆಂಕಟೇಶಾ ೭

## ಇ. ದೇವತಾ ಸ್ತುತಿ

## ೨೦೭

### ವಾಯುದೇವರು

ಇನ್ನಾದರೂ ಸುಮುಖನಾಗೊ ಧ್ವರಿಯೇ ಪ

ಪರಿ ಪರಿ ವಿಧದಿಂದ ನೊಂದು ಕರಮುಗಿದು
ಬಾಯ್ತ್ಯರದು ಕೂಗಿ ಕರಿವೆ ಸದ್ಗುರುರಾಜನೆಂದು ಅ.ಪ.

ಪಾದ ನಂಬಿದ ಭಕ್ತರಿಗಾನಂದಗರಿವೆನೆಂಬ ಬಿರುದಾಂಕಿತನಾಗಿ
ಸದ್ವೃಂದದೊಳಗಿಪ್ಪೆ ರಾಜಾ
ಚಾರು ಗುರು ಬೃಂದಾವನಾರ್ಯರ ಪೊರೆದ ಮಂದಾಕಿನಿಧರ
ಧವಳಾಖ್ಯವಾಸಾ ಭೋಜಾ ೧

ಭುವನದೊಳು ಸರಿಗಾಣೆ ನಿನಗಿನ್ನು
ಪರಮಾಪ್ತ ಶಿರೋಮಣಿಗಳೊಳು
ಸರ್ಜಿಸಿದ ಕಾರಣ ವಜ್ರಲೇಪನ ಮಾಡಿ
ಊರ್ಜಿಸುವತ್ಯರ ಮಾಡು ಎನ್ನಾ ೨

ಪರಮ ಪಾಮರನು ನಾನಯ್ಯ ಪವಮಾನರಾಯಾ
ಪಾರುಗಾಣದೆ ಶರಧಿಯೊಳು ಮುಳುಗುವ್ಯನೋ
ಕರವಿಡಿದು ತಡಿಗೆತ್ತಿ ಕಾಪಾಡು
ತಂದೆವರದಗೋಪಾಲವಿಠಲನ ಮರಿಯೇ ೩

## ೨೦೮

(ಸುಳಾದಿ)

ಏಸೇಸು ಬಗೆಯಿಂದ ಬಹುವಿಧವಾಗಿ ಕರಮುಗಿದು
ಬಾಯ್ತೆರೆದು ಬಿನ್ನೈಸಿದರು ಕರುಣಪುಟ್ಟದ ಮ್ಯಾಲೆ
ನಿನ್ನನೆ ವಾಲೈಸುವುದ್ಯಾಕೊ ಸಹಿಸಲಾರೆನೊ ದೇವಾ
ಶತ್ರುಗಳ ವಾಕ್ ಶಸ್ತ್ರದೊಳಗೆನ್ನ ಬಿಗಿದು
ಕ್ಲೇಶಬಿಡಿಸಿ ಪರಿಹಾಸ ಮಾಡುತ ನೋಡುತಿಪ್ಪೋದು ಏನು ಸುಖವೊ
ಮನವ್ಯಲ್ಲಾ ಬ್ಯಂದು ಬ್ಯಂದು ಕಂದಿ ಕುಂದಿ ನೊಂದೆನಯ್ಯಾ
ಅಂಜನಿ ದೇವಿಯ ಕಂದ ಬಂಧನ ಬಿಡಿಸಿ ನಿನ್ನ ದ್ವಂದ್ವವ ಪೊಂದಿದ
ಕಂದನೆಂದು ಸಲಹೊ ತಂದೆವರದಗೋಪಾಲವಿಠಲನ
ಪ್ರೀಯಾ ೧

ಕಾಮನಯ್ಯನ ದೂತಾ ಕಾಮನ ಪೂರೈಸು ಕಾಮಿನಿ ಸಂಬಂಧಿತರು
ಬಾಧಿಸುತಿಪ್ಪ ಬಾಧೆಯನಿಂ ಸಹಿಸಲಾರದೆ ನಿನ್ನ ಪಾದಕೆ ನಮಿಸಿ
ಬಿನ್ನೈಪೆ
ಭವಪಾಶಾದಿ ಸುತ್ತಿ ಭೋಗ ಪಡಿಸೋದು ಭಾಗ್ಯವೆ ನಿನಗೆ
ಭಾಗವತರ ಗುಣಮಣಿಯೆ ಭಾರವ ಹರಿಸಿ ಪೊರೆಯೋ
ಭಾರತ ರಣದೊಳು ಬಲಭರಿತನಾಗಿ ಭೀಕರರಾಗಿ ಭೇಜಕನೆ
ಮತ್ತೆ ಬಕ ಕೀಚಕ ಮೊದಲಾದವರ ಹೀಚಿ ಬಿಸಾಡಿದ ಮಹಾಭಯಂಕರ
ಭೋಗಿಶಯನನ ಕಿಂಕರ ಮದಗಜ ವೈರಿಯೆ ಭಂಡ ದುರ್ಯೋಧನನ
ಶಿರ ಭೂಮಂಡಲದೊಳು ಚಂಡನಾಡಿದ ಉದ್ದಂಡ ಲಂಡ
ಪಾಷಂಡಿಯ
ಮಿಂಡನೆನಿಸಿದೆ ಗಂಡುಗಲಿ ಪ್ರಚಂಡಾ ತಂದೆವರದಗೋಪಾಲವಿಠ್ಠಲನ
ತೊಂಡಾ ೨

ನಿನ್ನ ಮಹಿಮೆಗೆ ಅನಂತ ನಮೋ ನಮೋ
ನಿನ್ನ ಕ್ರಿಯಕೆ ಅನಂತ ನಮೋ ನಮೋ
ನಿನ್ನ ರೂಪಕೆ ಅನಂತ ನಮೋ ನಮೋ
ನೀನೇವೇ ಘನ ಮುಖ್ಯ ಪ್ರತಿಬಿಂಬಾ ಹರಿಗೆ ಪ್ರಥಮಾಂಗಾ
ದ್ವಿತೀಯ ಈಶಾ ಘನ ತರುಣಿ ಜಗದಿ ನಿನ್ನ ಪೋಲುವರಿನ್ನಿಲ್ಲಾ
ಸುರಾಸುರ ಗಣದೊಳು ಪೂರ್ಣತ್ವದಿ ಸರ್ವ ವಿಷಯದಿಂದ
ಹರ ಮುಖ್ಯ ದಿವಿಜರಿಗೆ ಪ್ರಾಣವನಿತ್ತು ಸಲಹುವ ಆಧಾರ ಮೂರುತಿ
ಆರು ಬಲ್ಲವರಿಲ್ಲಾ ಅನಂತ ಕಲ್ಪಸ್ಥಮುಕ್ತ ವಾಗ್ಯಾಣ್ಯಾದಿಗಳು
ನಿನ್ನ ಸದ್ಗುಣ ಶರಧಿಯಲಿ ಮುಣುಗಿ ಮುಣುಗಿ ತೇಲುತ
ಪ್ರಾಂತ್ಯಗಾಣದೆ ಬಹು ಶ್ರಾಂತರಾಗಿಹರಯ್ಯ ದಿಗ್ಭಾಂತರಾದರು
ದಿಗಂಬರನಾದ ಶಂಭು
ಮೊದಲಾದ ವೃಂದ ವಂದ್ಯಾ ಸಿಂಧು ಶಯನ ಅರವಿಂದನಾಭಾ
ತಂದೆವರದಗೋಪಾಲವಿಠಲನ ಕಂದಾ ೩

ಜೀವೇಶಾ ಜೀವಾಕಾರಾ ಜೀವಾಧಾರಾ ಜೀವ ನಿವೃತ್ತಕ ಜೀವ ಪ್ರವೃತ್ತಕ
ಜೀವಾಂತರ್ಬವ್ಯಾಪ್ತಾ ರಾಜೀವ ಪೀಠದ ಯೋಗ್ಯಾ ಪೂರ್ಣ ಲಕ್ಷಣ
ಶುಭಕಾಯಾ
ಸುಂದರ ಭಾರತಿ ಮೋಹಿಪ ಜಗಜ್ಜನಕಾ ಜಡೆಧರನೊಡೆಯನೆ
ನುಡಿಯಲಾಲಿಸಿ ಬಿಡದೆ ಪಾಲಿಸಯ್ಯ
ದೃಢದಿ ನಿನ್ನಡಿಗಳ ನಂಬಿದೆ ಯಡಬಿಡದೆ ಮಹಾ ಮಡುವಿನೊಳಗೆ
ಕೈಯ ಬಿಡದಿರೊ ಖೋಡಿ ದೈತ್ಯರು ಬಂದು ಬಾಧಿಸುತಿಹರ್‍ಯೆ
ಕಾಡಿನೊಳಗೆ ಮಧ್ಯೆ ಘನ ಗಿರಿವಾಸ
ಮೂಲ ಮೂರುತಿ ತಂದೆವರದಗೋಪಾಲವಿಠಲನ ದಾಸಾ ೪

ಮೂರು ರೂಪಧಾರಿ ಮಹಾವೀರ ಪ್ರತಾಪ ಶೂರ ಸದ್ಗುಣ ರತ್ನಾಕರ
ಮೂರು ಲೋಕದಿ ವ್ಯಾಪ್ತಾ ಹೊರಗೆ ಮೂರುಕೋಟಿ ರೂಪ ಧರಿಸಿ
ಘನೋದಕ ಆಡೆದಿಪ್ಪ ಮೂರು ಬಗೆ ಜೀವರೊಳು
ಮೂರೇಳು ಸಾವಿರದಾರು ನೂರು ಜಪ ಬ್ಯಾರೆ ಬ್ಯಾರೆ ಮಾಡಿ
ಮಡದಿಯೊಡನೆ ನಾಗದ್ವಯದೊಳಗಿದ್ದು
ಅಧೋ ಊರ್ಧ್ವಶ್ವಾಸ ಬಿಡಿಸಿ ಜೀವರ ಪೊರೆವೆ ಶ್ರೀಹರಿಗೆ ಅರ್ಪಿಸಿ
ಮೂರು ವಿಧ ಫಲ
ಅವರವರ ಯೋಗ್ಯತಾನುಸಾರ ಕೊಟ್ಟು ಪಾರುಗಾಣಿಪ
ಮಹಾಕರುಣಾ ಶರಧಿ
ಮೂರು ಹತ್ತು ಎರಡು ಲಕ್ಷಣ ಮೂರುತಿ
ಮೂಲ ಮುವ್ವತ್ತೇಳು ಗ್ರಂಥ ರತ್ನಗಳ ಪೋಣಿಸಿ
ಹಾರವ ಮಾಡಿ ಶ್ರೀಹರಿಗೆ ಅರ್ಪಿಸುವ ನಿನ್ನ ಕರುಣಕ್ಕೆ
ಯೆಣೆಗಾಣೆ ಯೆಣೆಗಾಣೆ ಪೊರೆವರ ನಾ ಕಾಣೆ ನಿನ್ನಾಣೆ
ತಂದೆವರದಗೋಪಾಲವಿಠಲನ ಘನ ಪ್ರೇಮಾ ೫

ಜತೆ : ಘನ ಸಂಸಾರದ ಮೋಹಾ ಮಡುವಿನೊಳಗೆ ಶಿಲ್ಕಿ
ಬಾಯ್ ಬಿಡುವೆ ತಂದೆವರದಗೋಪಾಲವಿಠಲನ ತೋರೋ ೬

## ೨೦೯

ಘಟನೆಯನು ಮಾಡಿಸೈ ಘಟೋತ್ಕಚ ಜನಕಾ ಪ

ಘಟದೊಳಗೆ ಸುಧೆಯಿಟ್ಟು ಮದ್ಯವೆಂತೆಂದು ಪೇಳಿದರೆ
ಮದ್ವದೂತರು ಒಡಂಬಡುವರೇ ಮಧ್ಯಮಾಧಮರಿಗಿದು
ಅಲ್ಲದೇ ೧

ಪರಮ ಪುರುಷನೆ ಕೇಳು ಪರಮತದ ಮತಿಯ ಕೆಡಿಸು
ನಿನ್ನ ಪ್ರೇಮಾಖ್ಯ ಕರುಣಕವಚ ತೊಡಿಸು ಜನುಮ ಜನುಮಕ್ಕೆ ಇದೇ
ಬೇಡಿಸು ೨

ಕಾಯನೇ ನಾನೆಂಬಂಥ ಅಜ್ಞಾನ ಪಟು ಬಿಡಿಸೊ
ಸುಜ್ಞಾನವಿತ್ತು ಸಲಹೊ ತಂದೆವರದಗೋಪಾಲವಿಠ್ಠಲನಪ್ರೀಯಾ ೩

## ೨೧೦

(ಸುಳಾದಿ)

ಘನ ದಯಾನಿಧಿಯಾದ ಪವಮಾನರಾಯನೆ
ನಿನ್ನ ನಖ ಶಿಖ ಪರಿಪೂರ್ಣ ರೂಪಕೆ ನಮೋ ನಮೋ ಯೆಂದು
ಸಾರಿಸಾರಿಗೆ ಇನ್ನು ಶಿರವ ಬಾಗಿ ಬೇಡುವೆನಯ್ಯ
ಸಾಕು ಸಾಕು ನಿನ್ನ ಸಲಹುವೆನೆಂಬಂಥಾ ವಾಕ್ಯ
ಯಮ್ಮ ಪಿರಿಯಾರು ಪೇಳುತಿರ್ಪ ವಾರ್ತಾ ಕೇಳಿ
ನಿನ್ನ ಪಾದ ಪದುಮಕೆ ನಮಿಸಿದೆನಲ್ಲದೆ ಮತ್ತೊಂದು ನಾ ಕಾಣೆ
ಕಂಣು ಮುಚ್ಚಿ ಕಾಡಿನೊಳಗೆ ನೂಕಿ ನಗುವೋದುಚಿತವೇ
ನಾಗಶಯನ ತಂದೆವರದಗೋಪಾಲವಿಠ್ಠಲ ರಾಯನ ಪ್ರೀಯಾ ೧

ರೋಗ ಸಾಗರದೊಳಗೆನ್ನ ರಾಗದಿಂದ ಕಟ್ಟಿ
ಅನುರಾಗವ ತೋರುತ ಪಾರುಗಾಣಿಪನೆಂದು

ಅಣುಗನ ಸಹ ಬಂದು ಪೇಳಿದ ರಾಗವು
ಪೋಗುವ ಕಾರಣ ತಿಳಿಯದೆ ಅಘರಾಶಿಗಳ ಬಹುದಾದಡೆ
ಮೊದಲಿಗ ದೈವನೆ ತಿಳಿಯದೆ ಪೋಯಿತೆ ಘನಗಿರಿರಾಜಾ
ಮನಸಿಗೆ ತಾರದೆ ತಾಪತ್ರಯ ಹರಿಸೊ
ವೇಗದಿ ಬಂದು ತಂದೆವರದಗೋಪಾಲವಿಠಲನಾಣೆ ೨

ಧೀರ ದಾಶರಥಿ ದೂತಾನೆನಿಸಿ ದೂತರ ಕೂಡ ಈ
ಥರ ಮಾಡೋದು ನಿನಗೊಪ್ಪದಯ್ಯಾ ದೂತನೆಂದು ಕರೆಸಿಗೊಂಬೆ
ಖ್ಯಾತವಾದ ಸಪ್ತ ದ್ವಿಲೋಕದಲ್ಲಿ ಪಾತಕರರಿಯೆಂದು
ಅಂದೆ ಸ್ಥಿರವಾದ ಮೇಲೆ ಪಾದವ ಸ್ಮರಿಸಿದ ಮಾತ್ರಕೆ ಪರಿಹಾರವಲ್ಲವೆ
ಪರಿಪರೀತೋಷಾ ವರಷಾವಳಿ ದಾನ ಧರಣಿ ಧಾರಿ ಪ್ರಿಯಾ ಗುರುರಾಜ
ದೂತನೆಂದು ತೋರೋ
ತಂದೆವರದಗೋಪಾಲವಿಠಲನ ತೋರ್ಪಾ ೩

ಪ್ರಾಣರಾಜನೆ ಸರ್ವಪ್ರಾಣಗಳೊಳು ನಿನ್ನ
ಪ್ರಾಣರಾಜನ ಪಾದ ಪಂಕಜದಳದಿ
ಪ್ರಾಣಾದಿ ಪಂಚ ಮುಖ್ಯ ಪ್ರಾಣಾರೂಪದಿಂದಿದ್ದು
ಪ್ರಾಣಿ ಸಹನಾಗಿ ಪ್ರಣವಾದಿ ಸಪ್ತಕೋಟಿ ಮಹಾಮಂತ್ರ ಜಾಪಕ ಬೃಹತಿ
ನಾಮಕ ಪ್ರಾಣಿಗಳ ಸಲಹಲೋಸುಗವಲ್ಲಾದೆ
ಬೇರೆ ಮತ್ತೊಂದು ಲಾಭಾ ಬಯಸುವಿ ನೀನಲ್ಲಾದ ಕಾರಣದಿಂದ
ಅನಿಮಿತ್ಯುಪಕಾರಿ
ಆಪದ್ಬಾಂಧವನೆಂದು ಪೊಗಳಿಸಿಕೊಂಬೆ ನಿಗಮಗಳಿಂದ
ಮಗನಣುಗನ ಮೊರೆಲಾಲಿಸಿದವಗೊ ಮದನ ಜನಕ
ತಂದೆವರದಗೋಪಾಲವಿಠ್ಠಲನ ಮೋದಾ ೪

ಹರಗೆ ಬಿಂಬನಾಗಿ ಶ್ರೀಹರಿಗೆ ಬಿಂಬಾನೆನಿಸಿ
ಪಶುಪತಿಗೆ ಪೋಷಕನಾಗಿ ಪಶುಪಾಲನೆ ದಾಸನೆನಿಸಿ
ಮಹಾಮಹಿಮೆ ತೋರುತ ಮುಕ್ಕಣ್ಣನೊಡಗೂಡಿ
ಕದನವ ಮಾಡಿ ಮಡದಿಯಾ ಮುಡಿಯಳದ

ಮದಡನ ಕೆಡಹಿ ಬಿಡದೆ ಅವನ ಮಡುಹಿ
ಖಡ್ಗದಿ ತೊಡಿಯ ರಕ್ತವ ಕುಡಿದಂತೆ ಜಗಕೆ ತೋರಿದ ಧೀರಾ
ಮಾಗಾರಿ ಮೊದಲಾದ ದಿವಿಜಾರು ನಿನ್ನ ಪೋರರಾಗಿ
ಸಾರಿ ಸಾರಿ ತಮ್ಮ ತಮ್ಮ ಸಾರಸುಖವ ಸುರಿವೋ ನಿತ್ಯಾ
ಅವರವರ ಪರಿವಾರದೊಳಗಿಪ್ಪ ದಾರಿದ್ರ್ಯ ದಾಸನು ನಾನಯ್ಯ
ಸುಖದಾಯ ಶುಕನಯ್ಯ ವೇದವ್ಯಾಸ
ತಂದೆವರದಗೋಪಾಲವಿಠಲನ ಪ್ರೀಯಾ ೫

ಜತೆ : ಪ್ರಾಣರಾಜನೆ ಮುಖ್ಯ ಪ್ರಾಣಿಗಳ ಸಲಹೋ ಘನಗಿರಿರಾಜಾ
ತಂದೆವರದಗೋಪಾಲವಿಠ್ಠಲನ ಭೋಜಾ ಸುತೇಜಾ ೬

## ೨೧೧

ಜ್ಞಾನವನೆ ಕೊಟ್ಟು ಸಲಹೊ ಶ್ರೀ ಪ್ರಾಣರಾಯಾ ಪ

ವಿಜ್ಞಾನ ಮಸ್ತಕ ಘನ ಗಿರೀಶಗೆ ರಾಜನೇ ಅ.ಪ.

ಅಂದು ಅಂಜನೆ ಕಂದನೆನಿಸಿ ರಘುಕುಲೇಂದ್ರನ ನಾಮದುಂಗುರ
ಇಂದುಮುಖಿಯಳಿಗಿತ್ತು ಖಳನಂದನನ ಮಡುಹಿದ ಧೀರ
ವಿಜ್ಞಾನ ೧

ಭವಭಯಕೆ ನಿರ್ಭೀಕರಾನೆನಿಸಿ ಭಾನುಸುತನಾಶ್ರಯಿಸಿದವ
ಭೇದವಿಲ್ಲದೆ ಬಹುಬಾಧೆ ಬಿಡಿಸಿ ಭೂಭಾರನಿಳುಹಿದೇ ಭಾವಿ ಬ್ರಹ್ಮ
ಸುಜ್ಞಾನ ೨

ದಾಸರೆಲ್ಲರೂ ಮಹಿಮ ದಾಸರಾಗುತಿರೆ ಸಮಯ ಸೂಸುತ ಶಶಿಯಂತೆ
ವಸುಧಿಗಿಳಿದು ಪೋಷಿಸಿದೆ
ತಂದೆವರದಗೋಪಾಲವಿಠಲನ ದಾಸಾ ೩

## ೨೧೨

ನಿಂತ ಕಾರಣ ಪೇಳು ಹಣುಮಂತರಾಯಾ ಪ

ಶಾಂತನಾಗಿ ವಿಶ್ರಾಂತಿಯಗೋಸುಗ
ಕಂತುಪಿತನ ಮಹಮಂತ್ರವ ಜಪಿಸುತ ಅ.ಪ.

ದಾಶರಥಿಯ ದೂತಾ ದಶಮುಖಪುರವಸ್ವಾಹೇಶಗೆ ದಾತಾ
ಗುರುತು ಕೊಟ್ಟು ದಾತನ ಎದುರಿಗೆ ಬಂದು ೧

ಶಂಖ ಕುಲದಲಿ ಜನಿಸಿ ನಿಃಶಂಖದಿ ಖಳರನು ವರಿಸಿ
ಶಂಕರಾದಿನುತ ಪದ ಶಂಬಧರನ ಕಾಜಲ್ಕದಿ ಸ್ಮರಿಸುತ ೨

ಮೂರನೇ ರೂಪವ ಧರಿಸಿ ಧರೆಯೊಳು ಬಂದು ಅವತರಿಸಿ
ಬೋಧಿಸಿ ಮಾರ್ಗವ ತೋರಿಸಿ ತಂದೆವರದಗೋಪಾಲವಿಠ್ಠಲನ
ಸೇವಿಸಿ ೩

## ೨೧೩

ಬಾಲೆಯಾದಾನು ಬಲಭೀಮ ಪ

ಬಾಲೇಂದು ಮುಖ ಸೋಲಿಪ ವದನದಿಂದೊಪ್ಪುತ ಅ.ಪ.

ಖುಲ್ಲ ಕೀಚಕ ತಾ ಚಲ್ವಗೆ ಮರುಳಾಗಿ
ಸೊಲ್ಲು ಸೊಲ್ಲಿಗೆ ಬಲು ಕಳವಳಿಸುವನಾ
ತರುಣಿ ದ್ರೌಪದಿ ತಾ ತಾಳದೆ ತನ್ನೊಳು ತಿಳುಪಿದಳು ಪತಿಯೊಡನೆ
ಕೇಳಿದ ಮಾತ್ರದಿ ಸೀಳುವೆನೆನುತಲಿ ಕೋಪದಿಂದೊಮ್ಮೆಗೆ ೧

ಶೇಷ ಮುಖ್ಯ ಶಶಿ ಶೇಖರ ಸನ್ನುತ
ಶಶಿಮುಖಿಯೆಂಬೋದು ಸರಿಯಾ–

ಶ್ವಾಸನ ಸತಿಯಳ ಸರಸಾಟ ಸಹಿಸದೆ
ಮೀಸೆಯ ತಿರುವುತ ಸಾರಿ ಸರಿ ಯಾರೆನ್ನುತ
ಸತಿಯಾಗಿರು ಸುಖಸತಿಯಳ ಮಾಡಿ
ನಿನ್ನಾಳುವೆನೆಂಬೋದು ಕೇಳಿ ಭರದಿ ೨

ಸುಮಶರ ಶೋಷಕೆ ಹಿಮಕರ ವ್ಯಾಪಿಸಿ ಹರುಷವಗೊಳುತಾ
ಸರಸಿಜಮುಖಿಯೆಂದು ಸರಸರ ಸಾಗಲು
ಶಿರದೊಳು ಚರಣವ ಸೇರಿಸಿದಾ ಶಾಮರೂಪ
ತಂದೆವರದಗೋಪಾಲವಿಠ್ಠಲನ ಸ್ಮರಿಸುತ ೩

## ೨೧೪

ವಾತವನು ಪರಿಹರಿಸೊ ವಾತನೊಡಿಯಾ ಪ

ಈ ಪರಿ ಬಾಧೆಬಡುವುದುಚಿತವೇ ರಂಗಾ ಅ.ಪ.

ನಿನ್ನ ದಾಸನೊ ದೇವಾ ಸಾಕು
ಸಾಕು ಈ ಬವಣೆ ಬಿಡಿಸಿನ್ನು ೧

ಅನ್ಯನನು ಇವನಲ್ಲ ನಿನ್ನವನು ಕೇಳೋ
ಶಿರಿನಲ್ಲಾ ಲಾಲಿಸೊ ಎನ್ನ ಸೊಲ್ಲಾ ೨

ವಾತಪದ ಯೋಗ್ಯನ ದೂತನಂತೆಂದು ಬಿನ್ನೈಪೆ
ತಾತ ತಂದೆವರದಗೋಪಾಲವಿಠಲಾ ೩

## ೨೧೫

(ಸರಸ್ವತಿ)

ಸುಂದರೆ ಸುಗುಣಮಂದಿರೆ ನಿನ್ನ ಚರಣ ಚಂದಿರೆ
ನಂಬಿದ ಶರಣಗಮನ ಸಿಂಧುರೆ ಅರವಿಂದನಯನ ಗಂಭೀರೆ

ಅದ್ಭುತ ಮಹಿಮ ಶಂಕರೆ ಸುರಸೋಮ ಸಂತವಹರೆ
ಪಂಕಜಪಾಣಿಧಾರೆ ಜಪಮಣಿ ಪುಸ್ತಕವಿರೆ
ವೀಣಾಯುತ ಸಾರೆ ಸಾರುತ ವದನದಿ ಬಾರೆ
ಬಂದು ಕರುಣಾವ ಬೀರೆ ಬೀರುತ ಮೊಗ ತೋರೆ
ತೋರುತ ತಂದೆವರದಗೋಪಾಲವಿಠಲನಯನಿಸೆರೆಂತರೆ ೧

ಗಹನ ಮಹಿಮಳೆ ಘನ ಸದನ ಸರಳೆ
ನಿನ್ನ ಕಾಣುವ ಶರಣಳೆ ಯಂದ್ಯನಿಸು ಮನಬಾಗಿ ಬೇಡುವೆ
ಸಾಧನವಾಗುವಂತೆ ವೈರಿಗಳುಪಟಳವ ಬಿಡಿಸೆ
ತಾಯಿ ನಿನ್ನ ಪಾವನ ಪದುಮ ಪಾದನುಗ್ರಹದಿಂದ
ಜಲಧಿಯೊಳಗಿಪ್ಪ ಜೀವಿಗಳಂತೆ ತಂಪಿನೊಳಿಪ್ಪೆ ಮಂತ್ರವಾಹನನ ರಾಣಿ
ರಂಗಾ ತಂದೆವರದಗೋಪಾಲವಿಠಲನ ಮಂತ್ರವ ಬೋಧಿಸೆ ೨

ಆವ ಜನುಮದ ಪುಣ್ಯ ಪ್ರಭಾವವೋ ಕಾಣೆ
ನಿನ್ನ ಪಾದಾಶ್ರಯಿಸಿದ ಕಾರುಣ್ಯನಿಧಿಯ ಪರಮ ಹರುಷವಾಯ್ತು
ಸಾರಥಿ ಸತಿ ಶಚಿ ಶಾಮಲ ಮಿಕ್ಕಿದವರ ಪೊರೆದಂತೆ ಪೊರೆಯಬೇಕು
ಪರಶುಧಾರಿ ತಂದೆವರದಗೋಪಾಲವಿಠಲನ ತೋರೇ ೩

ಸಾರಮತದ ವಿಚಾರವನ್ನು ತಾರತಮ್ಯಗನುಸಾರವಾಗಿ ಅರುಪು
ಸರಸಿಜಮುಖಿಯೆ ನಿನ್ನ ಸರಸಿಜ ನಖ ಶಿಖ ಪರ್ಯಂತಾ
ನಿಲವೋ ಹೃತ್ಸರಸಿಜದೊಳಗೆ ಪೊಳದು ನರಹರಿ ರೂಪಧಾರಿ
ತಂದೆವರದಗೋಪಾಲವಿಠಲನ ಪ್ರೀಯೆ ೪

ಮಂಗಳಾಂಗಿ ಮಹಾ ತುಂಗ ಮಹಿಮ ತುರಂಗ ವದನ
ಚತುರಂಗ ಧರನ ಸರ್ವಂತರಂಗದೊಳು
ತಂತುಬಿಡದೆ ಮಹಂತನೊಡಗೂಡಿ ಶಿರಿಕಂಠನುತ
ತಂದೆವರದಗೋಪಾಲವಿಠಲನ ಪಠಿಸುವಳೆ ೫

ಜತೆ : ಮಾತೆ ನಿನ್ನ ಪಾದ ಕಂಡಮ್ಯಾಲೆ ಪಾತಕವೆಲ್ಲಿಹದೆ
ತಂದೆವರದಗೋಪಾಲವಿಠಲನ ದಯದಿಂದ ೬

## ೨೧೬

ಸರಿಯಾರು ನಿನಗೆ ಸರಸಿಜಾಮುಖಿ ಪ

ಕರಮುಗಿವೆನು ಗಾರುಮಾಡದೆ ಎನ್ನ
ಪೊರೆಯಬೇಕಿನ್ನು ಧರೆಯೊಳಗೆ ಅ.ಪ.

ಕರೆಕರೆಬಡುತಿಹ ಪೋರನ ಅಂಕೆಗಳನು
ಅರಿತು ವಿಚಾರಿಸದಿಪ್ಪುದು ಥರವೇ ೧

ಸುತನಾಗೀಪರಿ ಪರರನು ಸ್ತುತಿಸುತ ಮೆರೆವುದು
ಸರಿಯಾ ಮ್ಯಾಲ್ ಧರಿಯಾ ೨

ಆರಿಂದರಿಯದೆ ನಾನರಿಗಳ ಬೆರದೆ
ಮೆರೆಯದೆ ತಂದೆವರದಗೋಪಾಲವಿಠ್ಠಲನ ತೋರು
ಶ್ರೀಶಾರದಾದೇವಿ ೩

## ೨೧೭

ಭಾರತಿ

ಬುದ್ಧಿಯನು ತಿದ್ದಮ್ಮ ಮಧ್ವರಮಣಿ ಪ

ಸದ್ದು ಇಲ್ಲದೆ ಶಿದ್ಧಿಯನು ಕೊಟ್ಟು
ಉದ್ಧರಿಸು ಮಾತೇ ಅ.ಪ.

ಯೇನು ಅರಿಯದಾ ಕಂದ
ನಿನ್ನನು ನಂಬಿದ ಕಾರಣದಿ ೧

ಪರಮ ಕರುಣಾಸಿಂಧುಯಂದು
ನೀನೆ ಗತಿಯೆಂದು ಬಂದೆ ೨

ಸಫಲ ಮಾಡಲೇಬೇಕು ಬಯಕೆಯನು
ತಂದೆವರದಗೋಪಾಲವಿಠಲನ ಪ್ರೀಯ ೩

## ೨೧೮

ರುದ್ರ ದೇವರು

ಅಂಗಾರವನೆ ನೀಡು ಯನ್ನಂತರಂಗದ ಧೊರಿಯೇ ಪ

ಅಮಂಗಳಗಳ ನೀಡುವೊ ಪರಮನೀಚ ಅಂಗನೆಯಳಿಗೆ ಅ.ಪ.

ಮಂಗಳಾತ್ಮಜ ನಿನ್ನ ಅನುಗಾಲ ಕಂಗಳಿಂದಲಿ ನೋಡೆ
ಸುಖಿಸುವೋಡಿಂಗನಾ ಭಂಗಪಡಿಸುತಿಹಳಿಗೆ ೧

ಪರಮ ಅದ್ಭುತ ಮೂರುತಿಯೆ ನಿನ್ನ ಅದ್ಭುತ
ಚರಿಯವ ತೋರು ಭೂತನಾಥಾ ೨

ಭಕ್ತವತ್ಸಲನೆಂಬ ಬಿರುದು ಬೇಕಾದರೆ ನಂಬಿದ
ಭಕುತರನು ಪಾಲಿಸಿ ಬಿರುದು ಪಡಿಯೊ ೩

ಶಕುತಿಯಿಲ್ಲದ ಕಾರಣದಿ ವಿಷಕೂಪದೊಳು ಬಿದ್ದು
ಘನಪಾಪಕೊಳಗಾದೆನೊ ವಿಷಕಂಠನೇ ೪

ಹಂಸರೂಢನಾದ ದಾಸ ನಿನ್ನ ದಾಸರನು ಕ್ಲೇಶಪಡಿಸುವರ
ಧ್ವಂಸಗೈಯೊ ತಂದೆವರದಗೋಪಾಲನ ಭಜಕಾ ೫

## ೨೧೯

ಒಂದು ಕೈಯಲಿ ಖಡ್ಗ ಮತ್ತೊಂದು ಕೈಯಲಿ ಖೇಟ
ಒಂದೊಂದೆರಡನೇ ಕೈಯಲ್ಲಿ ಡಮರು ಶೂಲಾ
ನಾಲ್ಕು ಕೈಯಲಿ ಶಂಖ ಚಕ್ರಗದಾಬ್ಜ ಧರಿಸಿ
ನೊಸಲ ನಯನ ಯುಕ್ತ ಶಂಖಸುತನ ವೈರಿಯ
ಆಯುಧದಿಂದ ವಧಿಸಿ ಬಂದು ಮುಂದೆ ಕುಣಿವಾ

ಗರುಡವಾಹನ ತಂದೆವರದಗೋಪಾಲವಿಠಲರೇಯಾನ
ಪಾದ ನಂಬಿದವರಿಗೆ ಗರುಡಾಯುಧ ಜಗದೊಳು

## ೨೨೦

## ರುದ್ರದೇವರ

(ಸುಳಾದಿ)

ಕಮಲ ಲೋಚನೆ ನಿನ್ನ ವಿಮಲ ಮೂರುತಿಯಾ ನೋಡಿ
ಮರುಳಾದನೋ ದೇವಾ ಹೃತ್ಕಮಲದೊಳಗಿಪ್ಪ ರೂಪದ
ಚತುರ್ದ್ವಾರವ ಸೇರೋ ತನಕ ಕರವಾ ಮುಗಿದು ಬಿನ್ನೈಪೆ
ತ್ರಿಗುಣಾತ್ಮಕ ತ್ರಿಕಾಲವ್ಯಾಪ್ತಾ ಅತ್ಯಪ್ತಾ ಮನದೊಳು ವ್ಯಾಪಕನಲ್ಲದೆ
ಬೊಮ್ಮಾಂಡಾಂತರ ವ್ಯಾಪ್ತಾ ಅಲ್ಲಿಗಿಲ್ಲಿ ದ್ವಾರಾದಿಂದ ಬಂದು
ಪೋಗಿ ಪೋಗಿ ಬಂದು ಕಾರ್ಯಾ ಸಿದ್ಧಿಸಿವ್ರೋ ಮಹಾಕರುಣಿ
ಕಮಲಮುಖಿಯ ಲೋಚನದೊಳು ವಾಮನಿ ಭಾಮಿನಿ
ನಾಮಧಾರಿ ರುದ್ರನಾಮಕನ ಹರಿ ತಂದೆವರದಗೋಪಾಲವಿಠ್ಠಲನ
ಮೋಹಕೆ ವಳಗಾದ ಪರಮಪುರುಷನೇ ೧

ಮಾತನಾಡಿ ಪೋದಾತದುಳಿಯಶಳದು
ಮನದೊಳಗೆ ತೋರಾಲು ಪೇಳಿದೆ
ಸ್ವಪ್ನಾದಿ ಪೋಗಿ ಅರುಹಾಲು ಸುಲಭದಿಂದ
ಸರ್ವಸಿದ್ಧಿಸುಪಾದು ಸ್ವಪ್ನಾಭಿಮಾನಿನಿಯಾಮಕತೈಜಸ ತತ್ವಕ್ಕೆ ಮುಖ್ಯ
ಸ್ವಾದಿ ಪುರವಾಸಿ ತಂದೆವರದಗೋಪಾಲವಿಠ್ಠಲ ಪ್ರೀಯಾ ೨

ಸ್ವಾಮಿಯಾದ ಕಾರಣದಿ ಶಿರವಾಗಿ ಬೇಡಿಕೊಂಡುದಕೆ
ಅಭಯವನಿತ್ತು ಕರವಾ ನೀಡಿದಂತೆ ಮಾಡಿ
ಪೊಡವಿಯೊಳಗೆ ಬರದು ಪಡಿಯಾದಿರೆ ಕಡೆಗಾಣದು
ತಡಿಗೆ ನೋಡಿದಾರೊ ನೀನೇ ಗತಿ ಗಡಿಯೊಳಗೆ ವಂದು
ವಡವೆನಿಟ್ಟು ಮೋಹಪಡಿಸೀದಂತೆ ಮೋಹಪಡಿಸಿ ದಣಿಸುವರೇ

ಅತ್ಯುತ್ತಮ ಮೋಹಕ ವಸ್ತುವಾದ ಸುಂದರ ಮೂರುತಿ ಚೆಲ್ವ
ತಂದೆವರದಗೋಪಾಲವಿಠ್ಠಲನ ತೋರೋ ೩

ಸಾರಿಸಾರಿಗೆ ಬಂದೂ ಬಿನ್ನೈಸಿದೆ ನಿನ್ನ ಪಾದಕ್ಕೆ ಒಂದು ತೋರಲಿಲ್ಲಾ
ಕಂದೀ ಕುಂದೀ ಕಳೆಗುಂದೀವೆಂದು ಬೆಂಡಾದೆ ಬಂಧನದಲ್ಲಿ ಇದ್ದು
ನಂದ ಬಡುವೋದುಚಿತವೇ ಇಂದು ಮುಂದು ಎಂದೆಂದಿಗೂ
ನೀನೇ ಗತಿಯೆಂದು ನಂಬಿದೆ
ಗರುಡಗಮನ ತಂದೆವರದಗೋಪಾಲವಿಠ್ಠಲರೇಯಾನ ತಂದು
ತೋರೋ ೪

ಕಾಮಹರನೇ ಕೇಳು ಕಾಮಿನಿಯಳಾ ತಂದು
ನೇಮದಿಂದಲಿ ನಿಂದು ಕೆಳೆದರೆ ಪರಿಮಳ
ಪಸರುವಂತೆವಾಗುವೋದಯ್ಯಾ
ತಂದೆವರದಗೋಪಾಲವಿಠ್ಠಲ ಬರುವಂತೆ ಮಾಡೋ ೫

ಜತೆ : ಮನದಿಂದಾ ಮನಕೆ ಬಂದೂ ಕಾರ್ಯವ ಮಾಡೋ
ತಂದೆವರದಗೋಪಾಲವಿಠ್ಠಲನ ಪ್ರೀಯಾ ೬

## ೨೨೧

ನಿಶಿಕಾಂತನು ತೆರಳಿದ ಸುಸೀಲ ಪುರದಿಂದ ಪುರಕೆ ಪ

ಶಿವಸ್ಮರಣೆಯ ಮಾಡುತ ಸದಾಶಿವ ಪತಿ ಪಿತನ ಪದಸನ್ನಿಧಿಗೆ ಅ.ಪ.

ಮಂಗಳಾಂಗ ಮಹ ಮಂಗಳ ಮಹಿಮನು
ಮಂಗಳಾಂಗ ಕೊಂಡು ಮಂಗಳವರವನು
ಮಂಗಳವಾರದಿಗರೆಯುತ
ಮಂಗಳ ಪುರವನು ಬಿಟ್ಟು ಮಂದಗಮನದಿಂದ ೧

ರಘುಕುಲ ಯತಿವರ ಪಾದದ್ವಯ
ರಾಗದಿಂದಲಿ ಸರನದಿ ಪತಿಪುರ
ವರದಾತಟ ಅನುರಾಗದಿ ಹರಣವ
ತ್ಯಜಿಶ್ಯಕ್ಷಹರ ಫಲಶರಣರಿಗೀವುತ ೨

ಸುಮನಸರೆಲ್ಲರು ಸುಮಮಳೆಗರೆಯುವ
ಸಮಯ ಕುಸುಮರ ರಥವೇರಿ ಸೋಮಧರನ ಪದ
ಸುಮ್ಮನದಲಿ ಅರ್ಚಿಸುತಲಿ ಸುಸ್ವರ ಮ್ಯಾಳಂಗಳಿಂದಲಿ
ಸೋಮವಾರದಿ ತಂದೆವರದಗೋಪಾಲವಿಠಲನ ಸೇವೆಗೆ ೩

## ೨೨೨

ಪಾಲಿಸೆನ್ನ ಪಾಲಿಸೋ ಎನ್ನಾ ಪ

ಪಾಲಿಸೆನ್ನ ಗುರು ಫಾಲನಯನಾ
ಸುರಪಾಲನ ಪಿತ ಶ್ರೀ ಪಾರ್ವತಿರಮಣ ಅ.ಪ.

ಲಿಂಗವೇರಿ ಸುರರಂಗದಿ ಚರಿಸುವ
ಶಿರಿರಂಗನ ಪದ ಪವನನ ಭೃಂಗಾ ೧

ಕಾಲನಾಮಕ ಕವಿ ಕಾಳಿ ವಿನುತ
ಪರರಾಳಿಯ ಪ್ರಿಯಬಾಲಾ ೨

ನವಿಲನೇರಿ ಬರುತಿಪ್ಪನ ಪಿತ
ತಂದೆವರದಗೋಪಾಲವಿಠಲನ ಆಪ್ತಾ ೩

## ೨೨೩

ಮೃತ್ಯುವಿನ ಪರಿಹರಿಸೊ ಮೃತ್ಯುಂಜಯನೆ ಪ

ಜಯ ಜಯಾ ಜಯವೆಂಬೊ ಅಸ್ತ್ರಗಳನಿತ್ತು ಪಾಲಿಸಿದಿ ಅ.ಪ.

ಪರೀಪರಿಯಿಂದ ಪರಿಜನರು
ಬಾಧಿಸಲು ಪರಿಹಾಸ ಮಾಡುವುದುಚಿತವೇ ನಿನಗೆ ೧

ಶರಣರಾ ಸುರಧೇನು ತವ ಶರಣೆಯಳ
ವ್ರಣವ ಪರಿಹರಿಸೊ ರಣವಾಸಿಯೇ ೨

ಸಾಸಿರಾ ಮಾತಿನೊಳು ಇದೇ ಸಾರವಾದದ್ದು
ಸತೀ ದೇವೀರಮಣ ಸುಖ ಸುರಿಸೋ
ತಂದೆವರದಗೋಪಾಲವಿಠಲನ ಸಖ ೩

## ೨೨೪

ಶೂಲವನು ಪರಿಹರಿಸೊ ತ್ರಿಶೂಲಧಾರಿ ಪ

ಬಹುವಿಧದಿಂದ ಬಾಧೆಬಡುತಿಹ ಅಂಗನೆಯಳ ಶಿರ ಅ.ಪ.

ಎರಡು ವಾಶ್ಯ ವತ್ಸರದಿ ಬಹುಕ್ಲೇಶಪಡುತಿರುವಳೋ ೧

ಏಸೇಸು ದಿನವಾದರೂ ಪರರಿಗೊಶವಾಗದಯ್ಯ ನಿನ್ನೊರತು ೨

ಇದು ಮಾತ್ರ ಪರಿಹರಿಸೊ ನಿನ್ನುಪಕಾರ ಮರಿಯೆ
ತಂದೆವರದಗೋಪಾಲವಿಠಲನ ಮರಿಯೇ ೩

## ೨೨೫

ಸಂಗವಿತ್ತು ಸಲಹೋ ರಾಯಾ ಸುಖ ಸಂಗಿಗಳಾ ಪ

ಸದಾಶಿವ ಶರಣರ ಕರುಣ ಕವಚ ತೊಡಿಸಿ ಜೀಯಾ ಅ.ಪ.

ನೀಲಕಂಧರಧರ ರುಂಡಮಾಲೆ ಕುಂಡಾಲ ಚರ್ಮ ಪೆತ್ತವನ
ಪ್ರೀಯಾ
ಮುಗಿದೆನೋ ಕರಮುಗಿದು ಕಳೆಯೊ ತಾಪತ್ರಯ ೧

ಮದ್ದು ಹಾಕಿ ಮಣಿಸೋ ಮತ್ತೆ ಮಧ್ವಪಾಲನ ಪಾಲಿಸೋ ತವ
ಶುದ್ಧಮತದೊಳಗಾಡಿಸೋ ಗುರುಮಧ್ವರಾಜ ತವದಾಸನೆನಿಸೊ ೨

ಶತ ಪತ್ರಾರಿಯ ಥಂಪನ ಸುತನೋ ಮತ್ತೆ ಶತ್ರಾನುಜನೆನಿಸುವನೊ
ಪಾಶುಧರಿಪಾಗ್ರಜನೊ ಮತ್ತೆ ಪಶುವೇರುವನ ತಂದೆವರದಗೋಪಾಲ
ವಿಠ್ಠಲನ ಭಜಿಸುವನೋ ೩

## ೨೨೬

ಮಂಗಳೆನ್ನಿರೆ ಉಮಾ ಮನೋಹರಗೆ
ದಿವಾಂಗನೆಯರು ಬಂದು ಬೇಗನೆ ಪ

ಛಂದದಾರುತಿ ತಂದು ಬೆಳಗಿರೆ
ಇಂದುಧರಸುತ ಮಂದಜಾಸನಗೆ ಅ.ಪ.

ಮೋದಬಡುತಲಿ ಮೋದಪುರ ನಿವಾಸ ಜನರಭಿಲಾಷೆ ಸಲಿಸುವ
ಚಾರುನವಕುಶ ತೀರನದಿ ಧರ ಧೀರ ಸುಗುಣ ಸುಶಾಸ್ತ್ರ ಪೇಳ್ವ
ಸುತನಾರ್ಯರಿಗೆ ಬಂದು ಬೇಗನೆ ೧

ದೋಷದೂರ ವಿಶೇಷ ಮಹಿಮನು
ದಾಸ ಜನರಿಗೆ ತೋಷಗರೆಯುತ
ಶೇಷಗಿರಿಯೊಳು ವಾಸಮಾಡಿದವೀರಗಮನ
ಸುರೇಶ ಸನ್ನುತ ಬ್ರಹ್ಮೇಶ
ತಂದೆವರದಗೋಪಾಲವಿಠ್ಠಲನ ದಾಸನೆನಿಪಗೆ ಬಂದು ಬೇಗನೆ ೨

## ೨೨೭

### ಪಾರ್ವತಿ

ಕರೆದರೆ ಬರಬಾರದೆ ಹರಿದಾಸರು ಪ

ಕರವೀರ ನಿವಾಶಿಯಾ ಸುತನ ಕಿರಿಯ ಸ್ವಸಿ ಬಾಯ್ತೆರೆದು ಅ.ಪ.

ಸತಿ ಬರೋತನಕ ಪತಿಯ ಸೇವಿಸಿದ ಕಾಲಕು
ಬರೋ ಯೋಚನೆ ಕಾಣೆ ಸರಸಾದಿ
ಬರುವಂತಾದರು ಕರಮುಗಿದು ೧

ಏಸೇಸು ಕಲ್ಪಕ್ಕು ದಾಸ ನಾನಲ್ಲವೇ
ಪರಿಹಾಸ ಮಾಡಿ ಎನ್ನಾ ನಗುವರೇ
ಕಾಸುಕಾಸಿಗೆ ಮೋಸಗೊಳಿಪದೇನೇ
ಆಶಾ ತೋರಿಸಿ ಪರಮೀಸಲು ಮಾಡೋದು ೨

ದಕ್ಷನ ಸುತೆ ನೀನು ಪರ ದಾಕ್ಷಿಣ್ಯವಿಲ್ಲದೆ ನೀನು
ಘನ ನಿಟಲಾಕ್ಷನ ಸತಿ ನೀನು
ವರ ಪಕ್ಷಿವಾಹನ ತಂದೆ–
ವರದಗೋಪಾಲವಿಠ್ಠಲನ ಪ್ರೀಯೇ ೩

## ೨೨೮

ಚಿಂತೆಯನು ಪರಿಹರಿಸು ಚಂದ್ರವದನೇ ಪ

ಚಂದ್ರಶೇಖರನಾಣೆ ಬಹುವಿಧದಿ ನೊಂದು ಭ್ರಾಂತನಾದೆ
ತಾಯಿ ಅ.ಪ.

ಹೆಣ್ಣಿಗೋಸುಗ ಪೋಗಿ ಹೆಣ್ಣಿನಾಶೆಯ ಮಾಡಿ ಮಣ್ಣುಪಾಲಾದೆನೇ
ಬಣ್ಣಕ್ಕೆ ಮರುಳಾಗಿ ಬಾಣಕ್ಕೆ ಗುರಿಯಾಗಿ
ಕಣ್ಣುಕಾಣದೆ ಕೂಪದೊಳು ಬಿದ್ದೆ
ಅನ್ನಪೂರ್ಣೆಯೆ ನಿನ್ನ ಚರಣವನು
ನಂಬಿದ ಶರಣನ ಪಾಲಿಸು ತಾಯಿ ೧

ಮನನಿಲ್ಲದೆ ಮತ್ತೆ ಮನಬಂದತ್ತೈರ ತಿರುಗಿ ಮನ್ಮಥನ
ಬಯಸಿದೆ ಮಾನಹಾನಿಯಾಗಿ ಹೀನನಾದೆನು ನಾನು
ಮನ್ಮಥನ ತಾಯೆ
ಪ್ರಾಣ ಪೋಗೋದು ಲೇಸು ಪ್ರಾಣಿಗಳ ಮಧ್ಯದಿ
ಮನೋಮಾನಿನೀ ೨

ಮತ್ತಗಜದ ಪಿತ್ತ ಹೆಚ್ಚಾಗಿ ಹುಚ್ಚುಚ್ಚು ಬೊಗಳುವೆನು ಹುಚ್ಚನಂತೆ
ಇಚ್ಛೆ ಪೂರ್ಣವ ಮಾಡಿ ಮಚ್ಛೋದರಿ
ಮತ್ಸ್ಯ ಮೂರುತಿ ತಂದೆವರದಗೋಪಾಲವಿಠ್ಠಲನ
ಅಚ್ಚಸುಖ ಶರಧಿಯೊಳಿಪ್ಪ ಮೀನಾಕ್ಷಿಯೇ ೩

## ೨೨೯

ನಿಂದಾಳೋ ಸತಿ ಸರಸದಿ ಶಾಲೆಯೊಳು ಬಂದು ಪ

ಪಿತನಿಂದಲಿ ಪತಿನಿಂದ್ಯವ ಕೇಳಿದನೆಂದು ಬಂದು ಅ.ಪ.

ಘುಡು ಘುಡಿಸುತ ಶಿಡಿಲಬ್ಬರದಂದದಿ ಕುಂಡದ ಧಡಿಗೆ
ಬಿಡುಬಿಡುತಲಿ ಕಣ್ಣೀರಿಡುತಲಿ ಕೆಂಡದಿ ಧುಮುಕಲು
ಜಡೆಧರ ಕೇಳಿದಾಕ್ಷಣ ಜಡೆ ಅಪ್ಪಳಿಸಲು ಮೇದಿನಿಗೆ
ಸಂದುದಿತ ಸದಾಶಿವನೆ ಬಂದು ಭಂಜಿಸಲು ಮತ್ತೆ
ಮೇಲು ಬಂದು ೧

ಮಾವನ ಶಿರವಳಿದಾ ಮತ್ತೆ ಮಾವನಿಂದಲಿ ತುತಿಸಿಕೊಂಡ
ಮಂದಜಾಸನ ಬಂದು ಬಹುಪರಿ ಪೇಳಿದಾ
ಮಂದ ಜನರ ಪೊರೆದಾ ಮಾರನಯ್ಯನಾ ಕರುಣವ ಪಡೆದಾ
ಮತ್ತೆ ಮಾರನ ಮದ ಮುರಿದಾ ಮಾರನ ಬದುಕಿಸಿ
ಮಾರಿಗೆ ವರವಿತ್ತು ನಾರಿಗೆ ತೋರಿಸೆ ಬಂದು ೨

ನಸುನಗುತಲಿ ಬಸವನು ಭೃಗು ಋಷಿಗಳ ಮೀಸೆಗಳ್ಳುದಾ
ಬಸುಮಾದರ ಬಹುಪರಿಯಾಗದ ಬಸುಮಗ್ಯೆದಾಳಳಿದಾ
ಭಾರ್ಯಳ ಮೊರೆಕೇಳಿ ಭಾರವನಿಳುಹಿಪ ಪರಭಾರೆಪುರಕೆ ಪೋದಾ
ಭಾರತೀಶ ಪಿತ ತಂದೆವರದಗೋಪಾಲವಿಠಲನ
ಭಜಿಸುತ ಬಂದು ೩

## ೨೩೦

ಪಾಲಿಸೆನ್ನ ಪಾರ್ವತಿ ರನ್ನಾ ಪ

ಪಾರ್ವತಿ ಪರ್ವತ ರಾಜಕುಮಾರಿಯೆ ಘನ್ನ ಅ.ಪ.

ನೊಸಲನಯನನ ಪ್ರೀತಿಲಿನೊಲಿಸಿದ
ಸತ್ಕುಸುಮ ಬಾಣನ ಪೆತ್ತ
ಬಾಣವದನನ ಸತಿ ಸುಮ್ಮನೆ–
ದೊಳಗಿದ್ದು ಪರಿಪಾಲಿಸೆ ಬೊಮ್ಮನ ಸೊಸಿಯೆ ೧

ಅಂಬುಜೋದ್ಭವನ ಪ್ರತಿಬಿಂಬನ ರಾಣಿಯೊ
ದಿಗಂಬರನುಟ್ಟು ಚಲಿಸುವ ಸತಿ
ಶಂಬರಾರಿನುತ ಗಂಭೀರ ಕರುಣೆಗಳರಸನ ಸತಿ
ಅಂಬಕೇಶನ ಜನನಿ ಜಗದಂಬೆ ಭವಾನಿಯೆ ೨

ಕಲುಶಕಂಠ ಮಹಾದೇವ ಶಿವಾ
ಶುಂಠರಿಗೊಲಿವ ಶಿವಾ ವಿಕುಂಠರೆನಿಸುವ
ದಾಸರಿಗೆ ಶಿವ ವೈಕುಂಠಸಮ ಶಿಖರ ಶಿವಾ
ಪುರದೊಳಗಿಪ್ಪ ಶಿವಾ ಶಕಟಮರ್ದನ ತಂದೆವರದ (ಶಿವಾ)
ಗೋಪಾಲವಿಠಲನ ಪಾದ ಶಿವಾ ಆರ್ಭಟಿಸುತ ಪಠಿಸುವನ ಸತಿ ೩

## ೨೩೧

### (ಪಾರ್ವತಿ)

ಬಾರಮ್ಮ ಬಾ ಬಾ ಬೊಮ್ಮನ ಮಗನಾಂಗೀ ಪ

ತೋರೆ ತೋರೆ ತವ ಕರುಣಾಪಾಂಗೀ ಅ.ಪ.

ಮನವೆಲ್ಲಾ ತಿರುತಿರುಗಿದೆ ಮದನಾಂಗೀ
ಮಾವನ ಮಗನಿಗೆ ಪೇಳೆ ಶುಭಾಂಗೀ

ಮನೋಹಾರನ ತಾಪವ ಹರಿಸು ಕೃಪಾಂಗೀ ಮಧ್ವದಯಾಂಗೀ
ಮದಪಿತ ಪತಿಯ ಮೋಹಿತಳಾಗಿ
ಮರೆಪೊಕ್ಕುದು ಪದೋಪದಿಗೆ ಸ್ಮರಿಸುತ ಬೇಗಾ ೧

ಗತಿಯಾರು ಪೇಳಮ್ಮಾ ನಿನ್ಹೊರತು ಮತ್ತೊಬ್ಬನ ನಾ ಕಾಣೆನಮ್ಮಾ
ಬೊಮ್ಮನ ಮಗನಿಹನಮ್ಮಾ ಮದುವ್ಯಾದೆಯಮ್ಮಾ
ಮದುವಿಯ ಮಾಡಿಕೊಂಡು ಮರುಳುಮಾಡಿ ನಿನ್ನ
ಕರಪುಟದೊಳಗಿಟ್ಟು ಬಾಯ್ಬಾಯ್ಬಿಡಿಸಲು ೨

ಯಷ್ಟೆಂದು ಪೇಳಲಮ್ಮಾ ಇನ್ನೆಷ್ಟೆಂತು ತುತಿಸಾವೆಮ್ಮ
ಕಷ್ಟಪಡಲಾರೆ ನಮ್ಮಾ ಬಲು ಭ್ರಷ್ಟನಾದೆನಮ್ಮಾ
ಇಷ್ಟನ ಕರಪುಟ ಜೇಷ್ಠ ಸುರರ ಗೆಲಿದ
ಗುರುಕೃಷ್ಣವಂದಿತ ತಂದೆವರದಗೋಪಾಲವಿಠಲನ ಪಠಿಸುವ ೩

## ಈ. ಯತಿವರ್ಯ ನಮನ

### ೨೩೨

### ಗುರು ಪರಂಪರೆ

ಮಧ್ವರಾಯರಿಗೆ ನಮೋ ನಮೋ ಗುರು ಮಧ್ವಸಂತತಿಗೆ
ನಮೋ ನಮೋ ಪ

ಸಂತತ ಶುಭವಾದೆನುತ ದಾಸಜನರಿಗೇಕ ಚಿತ್ತದಿಂದ
ವಂದಿಸಿ ಬೇಡುವೆ ಅ.ಪ.

ಕುಸುಮನಾಭರ ಸಮ ನಾಲ್ವರುಯೆಂದೆನಿಪ
ಹಸನಾದ ಗುರುಗಳ ಸ್ಮರಿಸುತಾ
ನ್ಯಾಯಸುಧಾಕಾರರಿಗೆ ನಮೋ ನಮೋ ೧

ರಘುಕುಲನಂದನ ಸುಬ್ರಮಣ್ಯತೀರ್ಥ ಕರದಿ ಪಾಲಿತಗೆ
ಬಿಡದೆ ಬೋಧಿಸಿದ ತಲೆಗೆ ನಮೋ ನಮೋ ೨

ರಘೋತ್ತುಮಾಖ್ಯರ ಕಾರುಣ್ಯಪರೆಂದೆನಿಪರಿಗೆ
ಸೂರಿತಾರೇಶ ಜಾತ ವಿಜೇಂದ್ರತನಯನೆನಿಪ
ಶ್ರೀ ಸುಧೀಂದ್ರ ಪೋಷಿತ ಸದ್ಗುರು ರಾಘವೇಂದ್ರತಾತಗೆ
ನಮೋ ನಮೋ ೩

ಗುರುಪುರಂದರ ದಾಸರ ಸುಜಾತರ್ಗೆ ನಮೋ
ವೈಕುಂಠದಾಸರಿಗೆ ನಮೋ ನಮೋ ಚನ್ನ ಚಿಕ್ಕ
ಬದರಿನಿಲಯನ್ನ ಕಂಡರ್ಗೆ ಕರುಣಾಪಾತ್ರರುಯೆನಿಪ
ವರದಗುರುಗೋಪಾಲ ಸು ಜಗನ್ನಾಥರಾಯರಿಗೆ
ನಮೋ ನಮೋ ೪

ತತ್ವಮಸಿ ವ್ಯಾಸ ಶ್ರೀಧರ ಶ್ರೀಗುರು ಶ್ರೀಪತಿ ಪ್ರಾಣೇಶ
ಗುರು ವಿಜಯ ರಾಮಚಂದ್ರದಾಸರಿಗೆ ನಮೋ ನಮೋ
ಬಾದರಾಯಣಗುರು ವೆಂಕಟ ಶ್ರೀನಿವಾಸ ಜಯಜಯೇಶ
ತಂದೆವರದಗೋಪಾಲವಿಠಲನ ದಾಸರಿಗೆ ನಮೋ ನಮೋ ೫

## ೨೩೩

ಭಕ್ತಿಯಿಂದ ಭಜಿಸೋಣಧ್ವರಿಯ
ನಮ್ಮ ಮುಕ್ತಿಪಥವ ನೀಡುವ ಕೃಷ್ಣವರ್ಯ ಪ

ಭಕ್ತಿ ಮುಕ್ತಿ ಸಹ ಯೋಜಿಸಿ ಅಶಕ್ತವ ಕಳೆದು
ಸಶಕ್ತರ ಮಾಡುವ ಶಕ್ತಿವಂತನವ ಅ.ಪ.

ಆರು ಮೂರು ದಾರಿ ತ್ಯಜಿಸುತ ಮತ್ತೆ ಮೂರೆರಡರ ಕೂಡಿ
ಮೂರು ಮೂರು ಮೂರ್ತಿ ಮೂರು ಸ್ಥಾನದಿ ಮೂರೂ ಕಾಲದಿ
ಮೂರು ಜನರು ಸೇರಿ ೧

ಮಧ್ವಶಾಸ್ತ್ರದೊಳಗೆ ಮುಳುಗಿ ಮತ್ತೆ ಶ್ರೀ ಮಧ್ವಪುರಕೆ ಪೋಗಿ
ಮದ್ ಹೃದ್ವನಜದೊಳಗೆ ಯೋಗೀ ಮಧ್ವ ಮುನೀಶರ
ಪಾದಕೆ ಬಾಗಿ ೨

ವಲಿದು ಬಂದ ಯೋಗಿ ವ್ಯಾಸದಾಸನೆಂದೆನಿಪ ವೇದವ್ಯಾಸ
ಮಧ್ವ ಭೀಮಪನ ಗಿರೀಶಾ ತಂದೆವರದಗೋಪಾಲವಿಠಲೇಶಾ ೩

## ೨೩೪

## ಶ್ರೀ ಮಧ್ವಾಚಾರ್ಯರು

ಸ್ಮರಿಸು ಸಂತತ ಗುರುಗಳಾ ಬಿಡದೆ ಅನುದಿನಾ ಪ

ವಾತ ಭೀಮನ ಒಡೆಯ ವೇದವ್ಯಾಸಯುತ ಸಾರಂಗಧರನ
ಆ ಪ್ರೇಮದಿಂದಲಿ ಭಜಿಪೆನಡಿಗಳ ಬಿಡದೆ ಅ.ಪ.

ಮಂತ್ರಜಾಸನ ಸುತನ ವಚನ ಕೊಂಡು ಧರೆಯೊಳು ಬಂದು
ಭಜಿಸುತ ಪೊಂದಿಪವರ ವೃಂದ ಹರಿಸಿ
ಸುಗುಣ ಸುವೃಂದಗಳಿಗೆ ಬಂಧುಪರ
ಗೋವಿಂದನೆಂಬುದ ಬೋಧಿಸಿದನ ೧

ಮಂಗಳಾಂಗನ ಕೊಂಡು ತುಂಗಕುಲ ತೀರ್ಥರ
ಶರದೀ ಬಂದೂ ಭೂಮಿಯೊಳು ಅನಂಗಪಿತನ ಒಲಿಸಿ
ರಂಗರಾಜನ ದೂತನಿಂದಾ ವಿದ್ಯವಾ ಕೊಂಡು ಬಂದು
ಪರಮಾದರದಿ ವ್ಯಾಸತ್ರಯಯುತ ಸುಧೆಯನಗರದನಂಘ್ರಿಯಾ ೨

ರಘುಕುಲಾ ಜಲಧೀಗೆ ಜಲಜವ್ವೈರಿಯಂತೊಪ್ಪುವಾ
ಮಾರನಯ್ಯ ಶಿರಿ ಪರಶು ಪಾಣೀ ಯಾತ
ಜಡೆಧಾರ ತುರೀಯನಾಶ್ರಯಿಸೀ ಬಾಣರೂಪವಾ ಬಿಡದೆ
ಬಾಣವಾ ಗುರಿ ಮಾಡಿ
ಬಾಣವರದನ ಸರಿಯೆಂದೆನಿಸಿ ಬಾಣ ಭೇದವನೆ ಬೋಧಿಸಿ
ಬೋಧತೀರ್ಥರ ಮತಾಧಿಪನ ತಂದೆವರದಗೋಪಾಲವಿಠಲನ
ಭಜಕಾ ೩

## ೨೩೫

### ಶ್ರೀ ಜಯತೀರ್ಥರು

ಜಯತು ಜಯತು ಜಯರಾಯಾ ಶುಭ ಜಯತು ಶುಕಪ್ರೀಯಾ
ಕಾಯಯ್ಯ ಕವಿಗೇಯ ಮಹರಾಯಾ ಪ

ಜಗದೀಶ ಸಖನಾಗಿ ಶಸ್ತ್ರಾಸ್ತ್ರವನೆ ಕೈಗೊಂಡು
ಜಯಶೀಲನೆಂದೆನಿಸಿ ಜಗದೊಳಗೆ ಮೆರೆದೆ
ಜಯ ಭೀಮರಾಯನು ಈ ಮೇದಿನೀ ಸ್ಥಳಕ್ಕೆ ಬರಲು
ಅಸಮ ಪಶು ಎಂದೆನಿಸಿ ಸೇವಿಸಿದಿ ನಿತ್ಯಾ ಸತ್ಯಾ ೧

ಸರ್ವೇಶ ಗುಣ ಮಣಿ ಸರ್ವಜ್ಞರಾಯರು
ವಿರಚಿಸಿದ ಗ್ರಂಥಗಳನಿರೇ ಸಜ್ಜನರಿಗೆ
ಸುಜ್ಞಾನವನು ತೋರಿ ಸುಜ್ಞಾನಿಗಳ
ವಾಗ್ಬಾಣದಿಂದರಿದ್ಯೋ ತರಿದ್ಯೊ ೨

ಶಿರಿದೇವಿ ವರಬಲದಿ ಆಗಮಾದ್ರಿಯ ಮಥಿಸಿ
ಸತ್ಸುಖಾ ತೆಗೆದು ಸಾಧುಗಳಿಗಿತ್ತೇ
ಮಳಾಪುರಿನಿಲಯ ಪವನೇಶ
ತಂದೆವರದಗೋಪಾಲವಿಠ್ಠಲನ ದೂತಾ ಖ್ಯಾತಾ ದಾತಾ ೩

## ೨೩೬

### ಶ್ರೀ ವಾದಿರಾಜರು

ಆವಕಾರಣ ಮೂಗು ತಿರುಹಿದೆಯೋ ಶ್ರೀ ವಾದಿರಾಜೇಂದ್ರ ಪ

ಆವಾವ ಬಗೆಯಿಂದ ನಾ ನೋಡೆ
ನಿನ್ಹೊರತು ಗತಿಕಾಣೆನೊ ನಿನ್ನಾಣೆಗೊ ಅ.ಪ.

ಸತಿಯು ತಾ ತನ್ನ ಪತಿಯ ಕೂಡ ಹಿತವ ಬಯಸಿ
ಪತಿ ಬಂದು ಕರಪಿಡಿದು ಹಿತಿಸುವಾತೆರದಿ ಹಿತಿಸದೇ ಮತ್ತಾವ ೧

ಕ್ಷಿತಿಯೊಳಗೆ ಇನ್ನಾರು ಹಿತವ ಬಯಸುವರಾರು ನಿನ್ನೊರತು ಪೇಳೋ
ಅಸಮ ಕರುಣಾಬ್ಧಿ ಶಿರಿಹಯವದನ ನಿನ್ನಾಧೀನನಾದ ಬಳಿಕ
ಎನ್ನುದಾಶಿಸುವರೇ ೨

ದಾನವಾದರೆ ಸಲಹೊ ಬೇಗ ಇರದಿರೆ ಬ್ಯಾಡೋ ಈಗ
ಶಿರಿ ಅರಸ ನಮ್ಮ ತಂದೆವರದಗೋಪಾಲವಿಠಲನ
ಸಹ ಬಾ ಬಂದ ಕಾಯದೆ ಮತ್ತಾವ ೩

## ೨೩೭

ಕೋಲೋ ಕೋಲೆನ್ನ ಕೋಲೆ ಕೋಲು ಮುತ್ತಿನ ಕೋಲು
ಶ್ರೀ ಗುರು ನಿನ್ನ ಬಲಗೊಂಬೆ ಕೋಲ ಪ

ಕೋಲೂ ಶ್ರೀ ಗುರುನಿನ್ನ ಬಲಗೊಂಬೆ ನಿನ್ನ ಪಾದ
ಏಕಚಿತ್ತಾದಲ್ಲಿ ಬಲಗೊಂಬೆ ಕೋಲ ಅ.ಪ.

ರಂಗರಾಜನ ಪಾದ ಭೃಂಗಾನೆಂದೆಸುತಾ
ಪಂಚರೂಪಾದಿ ಮೆರೆವೋನು ಕೋಲ
ಪಂಚರೂಪಾದಿ ಮೆರೆವೋನು ಭಾವೀ
ಪಂಚಪ್ರಾಣಾನಾ ಬಲಗೊಂಬೆ ಕೋಲ ೧

ಮಂದಜಾಸನ ಪದ ಪೊಂದುವನಾಕಂಡ
ವಾದೀರಾಜಾಖ್ಯನ ಬಲಗೊಂಬೆ ಕೋಲ
ವಾದೀರಾಜಾಖ್ಯನ ಭೂತಾ ಪತಿಯೆಂದು
ಆರ್ಯನ್ನ ಮೊದಲೇ ಬಲಗೊಂಬೆ ಕೋಲ ೨

ಕಂದುಕಂಠನ ಕೊರಳಿಗ್ಹಾರ ಪದಕವ ಹಾಕಿ
ಪರಿಪರಿಯಿಂದ ಮೆರೆಸೋಣ ಕೋಲ

ಪರಿಪರಿಯಿಂದ ಹಾರ ಪದಕವ ಹಾಕಿ
ಧೀರನ್ನ ಮೊದಲೇ ಬಲಗೊಂಬೆ ಕೋಲ ೩

ಕೆಂಡಗಂಣನ ಕಂಡು ರುಂಡ ಹಾರವ ಹಾಕಿ
ಪರಿಪರಿಯಿಂದಾ ಭಜಿಸೋಣ ಕೋಲ
ಪರಿಪರಿಯಿಂದಾ ರುಂಡಹಾರವ ಹಾಕಿ
ಮಂಡೇ ನದೀ ಧರನ ಬಲಗೊಂಬೆ ಕೋಲ ೪

ಅಮರೇಂದ್ರ ಲೋಕದಿ ಶಿವರಾಜ ಧೊರಿಗೆ
ಪರಿಪರಿಯಿಂದ ಸೇವಿಪರು ಕೋಲ
ಪರಿಪರಿಯಿಂದ ಸೇವೆಯಾಗೊಂಬಂಥ
ವಾದಿರಾಜರ ದಾಸ ವಾದಿರಾಜಾಖ್ಯನ ಬಲಗೊಂಬೆ ಕೋಲ ೫

ನಂದಿವಾಹನ ಕಂದ ಪದಕೆ ಬರೊವಂಥ
ಧೀರ ವೃಂದಾವನಾರ್ಯರ ವಂದಿಪೆ ಕೋಲ
ಧೀರ ವೃಂದಾವನಾರ್ಯರ ಚಾರು ಚರಣವ ಬಲಗೊಂಬೆ
ಕೋಲ ೬

ಮೂರು ಮಂದಿ ಮಧ್ಯೆ ಮಾತಾಡುತಿಪ್ಪ
ದಿಟ್ಟತನದಿ ತಂದೆವರದಗೋಪಾಲವಿಠ್ಠಲನ
ದಿಟ್ಟಾತನದಿ ಬಲಗೊಂಬೆ ಕೋಲ ೭

## ೨೩೮

### (ಶ್ರೀ ವಾದಿರಾಜರು)

ದಿಟ್ಟದಿ ನಿನ್ನಯ ಪದಪದ್ಮವನ್ನು
ಮನಮುಟ್ಟಿ ಭಜಿಸುವೆ ಕೃಷ್ಣರಾಯ ಪ

ಸೃಷ್ಟಿ ನಿನ್ನಂಥ ಇಷ್ಟ ಮಿಷ್ಟನ ಕಾಣೆ ಶ್ರೀ ಕೃಷ್ಣರಾಯ ಅ.ಪ

ಇಷ್ಟನು ದುಷ್ಟ ಪಾಪಿಷ್ಠನಾಗುವುದುಚಿತವೇ ಕೃಷ್ಣರಾಯಾ ನಿನ್ನ
ದೃಷ್ಟೀಲಿ ನೋಡೆನ್ನ ಶ್ರೇಷ್ಠ ಶ್ರೀಷ್ಮಿಪನಿಷ್ಟ ಕೃಷ್ಣರಾಯಾ ೧

ಬಾಲನ ವ್ಯಾಕುಲ ಪಲಾಯನಗೈಸಿದೆ ಕೃಷ್ಣರಾಯಾ
ಕಾಲಕಾಲಕೆನ್ನ ಮನಾಲಯದೊಳು ನಿನ್ನ ಪಾಲನ ಪಾಲಿಪನ
ನಿಲ್ಲಿಸಿದೇ ಕೃಷ್ಣರಾಯಾ ೨

ತರಳನು ಮರಳಿ ಖಳರೆ ಕೂಡಿ ಗರಳ ಸೇವಿಸಲು ಕಂಡು
ತ್ಯಜಿಸಿದೆ ಕೃಷ್ಣರಾಯಾ
ತರಳೆಗೆ ನೀ ನಿನ್ನ ಸುಧಿಮಳೆಗರೆಯುತ ಅರಳಿಸೊ ಕೃಷ್ಣರಾಯಾ ೩

ವಡವುಟ್ಟಿದವರಂತೆ ದುಷ್ಟ ಪಾಪಿಷ್ಟ ಬೆನ್ನಟ್ಟುವನೋ ಕೃಷ್ಣರಾಯಾ
ಗುಟ್ಟದಿ ನಿನ್ನಯ ದೃಷ್ಟಿಲಿ ನೋಡಿ ಆ ದುಷ್ಟನ ಸುಟ್ಟು ಹಾಕೊ
ಕೃಷ್ಣರಾಯಾ ೪

ಮಧ್ಯಾನ್ಹ ಸಮಯದಿ ಮಧ್ವದಾಸನ ಭೂಷಿಪ ಶೇಷನ ವೈರಿಯ
ಕೃಷ್ಣರಾಯಾ
ದಾನವ ಗೈದು ದೂತಿಯ ಕರದಿಂದ ದೋಷಿಯೆಂದೆನಿಸಾದೆ
ಸಲಹಿದೊ ಕೃಷ್ಣರಾಯಾ ೫

ಅರಿಯದೆ ಪೋಗಿ ನಾಥಾ ತ್ರಿನಾಮನ ಕೂಡ ಭುಂಜಿಸಿದೆ ಕೃಷ್ಣರಾಯಾ
ಅರಿಯು ನೀನಲ್ಲದೆ ಅನ್ಯರ ನಾಕಾಣೆ ಮೈಗಣ್ಣ ಕೃಷ್ಣರಾಯಾ ೬

ಎನ್ನ ತನುಮನ ಧನಧಾನ್ಯ ಮನೆಯ ಮಕ್ಕಳೆಲ್ಲಾ ನಿನ್ನ
ಚರಣಾಲಯವೋ ಕೃಷ್ಣರಾಯಾ
ನಿನ್ನ ಗುಣಗಣಗಳೆಲ್ಲಾ ಅಗಣಿತವೋ ಅನ್ನಪೂರ್ಣೆಗೆ
ಕೃಷ್ಣರಾಯಾ ೭

ಆದಿ ಅನಾದಿ ಅನೇಕನಾದಿ ಜನುಮದಿ ಎನ್ನಲ್ಲಿದ್ಯೋ ಕೃಷ್ಣರಾಯಾ
ದೇವ ದೇವೇಶ ನೀನೆಂದು ದಯದಿಂದ ತೋರೋ
ಕೃಷ್ಣರಾಯಾ ೮

ಚರಣದ ಚರ್ಮಲ ಚಂದಸುವಸನ ತೋರ್ದ್ಯೋ ಕೃಷ್ಣರಾಯಾ
ಆಲಸ್ಯ ಮಾಡುತ ತಾಳದೆ ನಿನ್ನ ಬಲಿನ ತೋರ್ದ್ಯೋ
ಕೃಷ್ಣರಾಯಾ ೯

ನಾರಂಗಿ ಫಲವನ್ನು ತಿಂದು ನೀ ನವರಸ ಭರಿತದಿ ನಿಂತ್ಯೋ
ಕೃಷ್ಣರಾಯಾ
ನಾರಿಯ ಮನವ ನೀನರಿತು ನಿನ್ನ ಮನವನಿತ್ತೆ ಕೃಷ್ಣರಾಯಾ ೧೦

ಮೂರಾರು ಎರಡೊಂದು ನಿಂದಿಪ ಮತವನ್ನು ಛಂದದಿ
ಖಂಡಿಸಿದೊ ಕೃಷ್ಣರಾಯಾ
ಗಂಗಾದಿ ಕ್ಷೇತ್ರವು ಹಾಗದೇ ಚರಿಸಿ ತುಂಗದಿ ಬಂದು ಮೈಗಂಧ
ತೋರ್ದ್ಯೋ ಕೃಷ್ಣರಾಯಾ ೧೧

ಅಂಗದಿದ್ದುಕೊಂಡು ಪಂಚಭೇದವ ನರುಹಿದೆ ಕೃಷ್ಣರಾಯಾ
ತಾರತಮ್ಯವನಿತ್ತು ನಿರುತದಿ ಸ್ಮರಿಸೆಂದು ತರುಳರಿಗುಪದೇಶಿಸಿದೆ
ಕೃಷ್ಣರಾಯಾ ೧೨

ಅರ್ಥಿಯಿಂದಲಿ ವೇದ ವೇದ್ಯತೀರ್ಥರ ಪ್ರಬಂಧ ತೀರ್ಥವ
ತೋರಿ ನೀ ಕೃತಾರ್ಥನ ಮಾಡಿದೋ ಕೃಷ್ಣರಾಯಾ
ಸತಿಸುತ ಜನನಿ ವಡಗೂಡಿ ವಿರೋಧಿಸೆ ಶಾಪವನಿತ್ತೆ
ಕೃಷ್ಣರಾಯಾ ೧೩

ಸತಿಜಾರನರಿತು ಮನದಲ್ಲಿ ಯೋಚಿಸಿ ಚೋರನಂದದಿ ಜರಿದು ಚರಿಸಿದಿ
ಕೃಷ್ಣರಾಯಾ
ಚರಿಸುತ ಧರೆಯೊಳು ಚೋರ ಜಾರನ ಪೊರೆದೆ ಕೃಷ್ಣರಾಯಾ ೧೪

ಅಂಗದಿ ಅಂಗಿತೊಟ್ಟು ಭಂಗವಿಲ್ಲದೆ ಕೂಡಲಗಿರಿಯಲಿ ಭುಂಜಿಸಿದೆ
ಕೃಷ್ಣರಾಯಾ
ತೀರ್ಥಗಿಂಡಿಯ ಮುಟ್ಟೆಂದು ಅಂಧಕರಾಯನು ಪೇಳಲು
ಮುಟ್ಟಲಂಜದೆ ಗಾಡಿ ಧರಿಸಿದೆ ಕೃಷ್ಣರಾಯಾ ೧೫

ತಂಡುಲವಿಲ್ಲದೆ ಪವಾಡತನದಿ ಕೂತುದ್ದಂಡ ಭೀಮನ ಸ್ಮರಿಸಿದೊ
ಕೃಷ್ಣರಾಯಾ
ತೊಂಡನ ಸತಿಯ ಕೈಗೊಂಡು ಮುಂಡ ಕಂಸಾರಿಯ ಸ್ಮರಿಸಿದೊ
ಕೃಷ್ಣರಾಯಾ ೧೬

ಸ್ವಾದಿ ಕ್ಷೇತ್ರದಿ ಪೋಗಿ ಛತ್ರದಿ ಅರ್ಚಿಸಿಕೊಂಡ್ಯೋ ಕೃಷ್ಣರಾಯಾ
ಮನವನ ಚರಿಸುತ ತಪವನೆಗೈಯುತ ಕಪಿಯನ್ನೇ ಪುಡುಕಿದ್ಯೊ
ಕೃಷ್ಣರಾಯಾ ೧೭

ಚಿಕ್ಕ ಬದಿರಲಿ ಪೋಗಿ ಬಲು ಅಕ್ಕರದಿ ನಿನ್ನ ಪಡೆದನ
ಕಪ್ಪುಗೊರಳನ ರೂಪದಿ ಕಂಡ್ಯೋ ಕೃಷ್ಣರಾಯಾ
ಸ್ವಪ್ನದಿ ಸರ್ವರ ಕಾಣುತ ಸ್ವಪದವಿಯನೇರಿದ್ಯೋ
ಕೃಷ್ಣರಾಯಾ ೧೮

ತಾಮಸ ಜೀವನು ಜವನಂತೆ ಜೂಜಿಸೆ ಜೀವನವರಿಸಿದ್ಯೋ
ಕೃಷ್ಣರಾಯಾ
ಲೇಖವು ಬರೆಯಲು ಲೋಕಾವಧರಿಸಿದ ವಾರುಣೀಶನಂತೆ
ಪೌರುಷ ತೋರಿ ಫಣಿರೋಗ ನಿತ್ಯೋ ಕೃಷ್ಣರಾಯಾ ೧೯

ಎನ್ನ ಜನ್ಮವಾದ ದಿನದಲ್ಲಿ ಜೀವೇಶರಾಯನ ಪೂಜಿಸಿದ್ಯೋ
ಕೃಷ್ಣರಾಯಾ
ಪೂಜಾದಿ ಪೂಜಿಸಿ ಪೂರ್ಣ ಆಯುವಿತ್ತು ಜೀವನುದ್ಧರಿಸಿ
ಜೋಕೆಯೋ ಕೃಷ್ಣರಾಯಾ ೨೦

ಅಕ್ಕನ ಕೈಯಲ್ಲಿ ದಿಕ್ಕಿಲ್ಲದವರಂತೆ ಸಿಕ್ಕು ಸುಖಬಟ್ಯೋ ಕೃಷ್ಣರಾಯಾ
ದಿಟ್ಟದಿ ನಿನ್ನಯ ಗುಟ್ಟು ತಿಳಿಸಿ ಬೆಟ್ಟದೊಡೆಯ
ತಂದೆವರದಗೋಪಾಲವಿಠಲನ
ಪದಪದ್ಮಗಳನ್ನೆ ಮುಟ್ಟಿ ಭಜಿಸುವಂತೆ ದಿಟ್ಟನ ಮಾಡು
ಶ್ರೀ ಗುರು ಕೃಷ್ಣರಾಯಾ ೨೧

## ೨೩೯

ಬಯಕೆಗಳ ಪೂರೈಸು ಭವ ಭೀಮ ಪ

ಭಯಗಳನು ತಡೆದು ಪೊರಿಯೊ ಭಾವಿ ಭಾರತೀಪ್ರೇಮಾ ಅ.ಪ.

ನಿನ್ನವನೆಂತೆಂದು ಮನದಭಿಲಾಷೆಗಳ ಸಲಿಸೋ
ಪರಮ ಕರುಣೀ ದಾನಿ ೧

ಇಂದಿನಾಪರಿಯಂತ ಬಹುವಿಧದಿಂದ ಪ್ರಾರ್ಥಿಸಲು
ಕರುಣ ಬಾರದಾಯಿತೆ ಬಿರುದು ಪೋಯಿತೇ ೨

ಕೀರ್ತಿ ಅಪಕೀರ್ತಿ ಎರಡೂ ನಿನ್ನಾಧೀನವೇ ಸ್ವಾಮಿ
ತಂದೆವರದಗೋಪಾಲವಿಠ್ಠಲನ ದಾಸಾಗ್ರಣಿಯೇ
ಸೌಭಾಗ್ಯನಿಧಿಯೇ ೩

## ೨೪೦

ಬಾರೋ ಮನ್ಮನಕೆ ಭಾವಿ ಭಾರತಿವರನೆ ಪ

ಬಾರೋ ಬಾರೋ ಪರಭಾರೆ ನಿಭವ ಭೀಮನ ಮನದಿಂದ ಅ.ಪ.

ಭೂತೇಶಾದೀನುತ ಭಾವಿ ಭೀಮಾ ಭಯಕುಲ ಸುರಸೋಮಾ
ಭೂಭಾರಾಧರ ಶೇಷನ ಪ್ರೇಮಾ ಸುರಕುಲ ಸುರಕಾಮಾ
ಭೀಮ ಭವ್ಯವೀ ನಾಮ ಪೂಜಿತ ಭಾಮಿನಿಗೆ
ಶುಭಕಾಮಿತಾರ್ಥಗಳಿತ್ತು ಸಲಹಿದೆ
ಯಾಮಯಾಮಕೆ ಸ್ಮರಿಸುವೆನೊ
ಸುರಕಾಮಧೇನು ಸಕಲ ತರುವೇ ೧

ತಡಮಾಡುವುದ್ಯಾತಕೊ ಹಂಸಾ ಬಡಿ ಅಸುರರ ಧ್ವಂಸಾ
ಗಡಿನಾನಲ್ಲವೇ ನಿನ್ನ ಖಾಸಾ ಗರುಡಾದ್ಯರ ತೋಷಾ

ಪೊಡವಿಯೊಳಗೆ ನಿನ್ನ ಪುಡುಕಿದ ನರನಿಗೆ
ಬಿಡಿ ಮಾಡುವರೇ ದಡಸೇರಿಸು ಕಡುಕರುಣಿಯೆ ಬೇಗ ೨

ನಾನಾಲಂಕಾರದ ಚಮರಂಗಾ ಅದರೊಳಗೆ ಶುದ್ಧಾಂಗಾ
ಬಂದು ಕುಣಿಯುವ ಪಾಂಡುರಂಗಾ ಪಾದ್ಸಾಶ್ರಿತ ಭೃಂಗಾ
ಲಿಂಗದಿಂದ ಎನ್ನ ಅಂಗಸಹಿತವಾಗಿ ಅಂಗದೊಳಗೆ ಇಟ್ಟು ರಂಗನ
ಪೂಜಿಪ
ಮಂಗಳಾಂಗ ಶುಭತುಂಗ ಮಹಿಮ ತಂದೆವರದಗೋಪಾಲವಿಠ್ಠಲ
ಪ್ರಿಯ ಬೇಗ ೩

## ೨೪೧

ಭ್ರಮೆಯ ಪುಟ್ಟಿಸಬೇಡ ಭಾವಿ ಭಾರತೀಶಾ ಪ

ಭೂತರಾಜರ ದಾತ ಭವದಿ ಪ್ರಖ್ಯಾತ ಅ.ಪ.

ಕೃತ ಪ್ರತೀಕದಿ ನಿಂದು ನಾಮರೂಪವ ಧರಿಸಿ
ನಿರುತತ್ವದ್ದಾಸರಿಂದ ಪೂಜೆಯಾ ಗೊಂಬೀ
ಮನ ಪಾಶದಿಂ ಬಿಗಿದೆನ್ನ ಮನಶೆಳೆಯುತಿಹರ್‍ಯೆ ಕೃತಿರಮಣನ ಪ್ರೀಯ
ನಿನ್ನ ಕೃತ್ಯಗಳಿಗೆ ನಮೋ ನಮೋ ಎಂಬೆನಲ್ಲದೆ ೧

ಭೂರಮಣ ಭಜಕ ನಿನ್ನ ಭಾಗ್ಯಕ್ಕೆಣೆಯುಂಟೆ
ಭಸ್ಮಧರ ಸುರಪರೆಲ್ಲಾ ಪಾದ ಭಸಮಾಗಿ ಬಿದ್ದಿಹರ್‍ಯೆ
ಅಸ್ಮದಾದಿ ಜೀವರಿಗೆ ಗೋಚರಿಸೋದುಂಟೆ
ಕುಸುಮ ಶರವ್ಯೆರಿ ಪದ ಪಿತನೆ ೨

ಜ್ಞಾನವಿಲ್ಲದೆ ಮಧ್ಯಜ್ಞಾನ ಶರಧಿಯೊಳು ಮುಳುಗಿ ದೂರಾದೆನೋ
ರಾಯಾ
ನಿನ್ನ ವಿಷಯ ವಿರಕ್ತಿ ಅನ್ಯ ವಿಷಯ ಸುಭಕ್ತಿಯಿಂದ ನಿಜಭಕ್ತಿಗಾಣೆನೋ
ಭಕುತಿರಮಣನೇ ನಿನ್ನ ಯುಕುತಿಗಳಿಗಭಿವಂದಿಪೆ
ತಂದೆವರದಗೋಪಾಲವಿಠಲನ ತೋರಿಸೋ ಜೀಯಾ ೩

## ೨೪೨

ಮಂಗಳ ಶ್ರೀ ಸ್ವಾದಿ ನಿಲಯನಿಗೆ ಜಯ
ಮಂಗಳ ಶ್ರೀ ಗುರುವಾದಿಗಳರಸನಿಗೆ ಪ

ಪಂಚ ವೃಂದಾವನದೊಳು ತಾ
ಸಂತೆಯ ನೆರಹಿದ ಭಾವಿ ಪಂಚ ರೂಪಾತ್ಮನಿಗೆ
ಮಿಂಚಿನಂದದಿ ಭಾವಿ ವಿರಿಂಚಿನ ಸಹಿತ
ತನ್ನ ಜನಕನ ರಾಜಿತ ಕವಿ ಮುನಿಗೆ ೧

ಅರ್ಥಿಯಿಂದ ಪ್ರತಿ ತೀರ್ಥ ಪ್ರಬಂಧವ
ಕೀರ್ತಿಸುವವರ ಅಪ್ರತಿ ತೀರ್ಥನಿಗೆ
ಸುತ್ತಮುತ್ತ ಸರ್ವತತ್ವ ಪತಿಗಳಿಗೆ
ತಾ ಉತ್ತರ ಹೇಳುವ ಜೀವೋತ್ತುಮನಿಗೆ ೨

ಕಾಲ ಕಾಲಗಳಿಗೆ ಮಹಕಾಲನಿಯಾಮಕ
ಕಲಿ ಮಾರುತಗೆ ಫಾಲವದನ ತಂದೆ–
ವರದಗೋಪಾಲವಿಠ್ಠಲನ ಆಳು ಕೃಪಾಳುಗೆ ೩

## ೨೪೩

### (ಸುಳಾದಿ)

ಮಧ್ವರಾಜರಂಘ್ರೀ ಮುದದಿಂದ ಭಜಿಸುತ
ಮೇದಿನಿಯೊಳು ಬಂದು ಕಾಮಧೇನುವಿನಂತೆ
ಭಜಕರ ಪಾಲಿಪ ಕಿಂಕರಿಗೆಲ್ಲ ಅಂಕಿತವಿತ್ತು
ಮಂಕುಗಳೋಡಿಸಿ ಪಂಕಜನಾಭನ
ಪಂಕಜದೊಳು ನಿಲ್ಲಿಸುವಾ ಬಿಡದೆ ಓಂಕಾರ ಮೂರುತಿ
ತಂದೆವರದಗೋಪಾಲವಿಠಲನ ತೋರಿದಾ ೧

ಋಜುಗಳ ಸಹಿತಾಗಿ ಪಂಕ್ತಿಯೊಳಗೆ ಕುಳಿತು
ಭರದಿಂದ ಸಾಧಿಸಿ ಋಜುವೆಂಬ ಪೆಸರಿಂದ ಮೆರವು ಕಲಿಶಿ
ಸುರಪಾದಿ ಸುರರೆಲ್ಲ ಶಂಕಿಸೆ ಸರ್ವಜನಪಾಲ ಸುರರಿಗೆ ತಾ
ಘನ್ನ ಜ್ಞಾನವಿತ್ತು ನಿರುತ ಪೂಜೆಗೊಂಬುವ ವಾದಿರಾಜನ ಸ್ವಾದಿಭೋಜ
ವೀರರಾಜನೆ ಹಯವದನನ್ನ ಪೂಜಿಪ
ಯೋಗಿ ಆರ್ಯನ ಬಾಲನೆ ಪ್ರೀಯ
ಭೂರಿ ಕರುಣಿ ತಂದೆವರದಗೋಪಾಲವಿಠ್ಠಲನ್ನ ಭಜಕಾ ೨

ಆರು ಎರಡು ಶಕ ಷಣ್ಣ ವರಿಯ ಮೇಲೆ ಸಂಖ್ಯೆಯುಳ್ಳ
ಲಾತವ್ಯನೆ ಬಂದು ಭೂತಳದೊಳು ಬಲು ಬೆಡಗು ತೋರಿದ
ಶ್ವಾಸ ಜಪ್ಪ ಗುಪ್ತ ಮಹಿಮಾ ಪೂರ್ಣ ತೃಪ್ತ
ತೃಣಾದಿ ಚೇತನ ವ್ಯಾಪ್ತಾ ವಾರಿಜಾಸನೇಶ ವಾಸುದೇವಾನೆ
ಇವನ ಶ್ವಾಸ ಜಪಕೆ ನಿರ್ಮಿಸಿಹನಯ್ಯಾ
ಸ್ವಾದಿಪುರವಾಸಿ ತಂದೆವರದಗೋಪಾಲವಿಠ್ಠಲನ ದಾಸಾ ೩

ಮಮದೈವವೆಂದರೆ ಮಮಕಾರ ಪರಿಹಾರ
ಮಮೇಚ್ಛಯೆಂದವರಿಗೆ ಮೇದಿನೀ ತಾಪ ದೂರ
ಮಮಗುರು ಎಂದವರಿಗೆ ಮುರವೈರಿ ತೋರುವಾ
ಮಹಘೋರ ಅರಣ್ಯನಾಥನೆ ಇವನು
ಸರ್ವಗುಣದಿಂದ ಪೂರ್ಣನೆಂದು
ವರವೇದ ಪೇಳುವದು ಸತ್ಯವಯ್ಯ
ಬೊಮ್ಮವಿಡಿದು ಹರಸುರಪಾದಿಗಳ
ಮನಸಮ್ಮತವಾಗಿರೆ ಇದರೊಳು ಶಂಕಿಸೆ ಶಂಕರಾಭರಣಶಾಯಿ
ತಂದೆವರದಗೋಪಾಲವಿಠ್ಠಲ ಪಾಶದಿ ಸುತ್ತುವ ಬಿಡದೆ ೪

ಸಾರಿಸಾರಿಗೆ ಇನ್ನು ವಾಣಿವಾಗ್ದೇವಿಯರು
ಮಹಗುಣ ಸಾಗರದೊಳು ನಿಂದು
ಸೂಸುವ ಜಲಧಿಯೊಳು ಬಂದು ಸೀಮೆಗಾಣದೇ ನಿಂದೆವೆಂದು
ತೊದಲು ನುಡಿಗಳಿಂದ ಆನಂದ ಅಶ್ರುಭರಿತರಾಗಿ

ಮಮಸ್ವಾಮಿ ಮಹಿಮೆಯಂತುಂಟೆಂದವಗಡಿಸಿ ನಮಿಸುವರ್ಗೆ
ಬಲು ಸಾರವಾದ ಮಾತಿದು ನರರಿಗೆ ಪೇಳಲು ಪರಿಹಾಸ ತೋರುವುದು
ನರಪಶುಗಳಿಗೆಲ್ಲ ಏನಾಹೋದೋ ಭಾನುಮರೆಮಾಡಿ
ಸರ್ವವು ನೋಡಿದಂತೆ ಆಗುವುದು ಪರಿಪರಿಯಿಂದಲಿ ನೋಡೆ
ಇವರ ಬಿಟ್ಟರೆ ಗತಿಯಿಲ್ಲವೊ ಭಾರತ್ಯಾದಿಗಳಿಗೆ ನಿಷ್ಟೆಗೆ
ಅನುಕೂಲವಾದ ತಾಪಸೋತ್ತುಮನಯ್ಯ
ಮುಖ್ಯ ಪ್ರೇರಕನಯ್ಯ ಏನೆಂಬೆ ಇವರ ಕರುಣವಾದರೆ
ಚೇತನಾಂತರ್ಯಾಮಿ ನಿಲ್ಲಿಸಬಹುದು
ಗೇಣು ಮುಂದಕ್ಕೆ ಸಾಗದೆ ಸಾಧನವಾಗದಯ್ಯ
ಸತ್ವಾಭಿಮಾನಿಗಳಯ್ಯಾ ದ್ವಿಗುಣವರ್ಜನು
ತ್ರಿಗುಣ ವ್ಯಾಪಾರಗಳಲ್ಲಿ ಅಜ್ಞಾನ ಮೊದಲಲ್ಲಿ ಯುಗಾದಿಪತಿಯ
ಭೇದಿಪಬಲ್ಲನೋ ಸತಿ ಸಮ್ಮಂಧ ಇವರಿಗಿಲ್ಲ
ಇವರ ವಿಷಯ ದೃಢವಾಗಿ ಮನದಿಂದ ತನ್ನೊಳು ಚಿಂತಿಸದ
ಮನುಜರ
ಆನಂದ ಮಾತ್ರ ಪೋಪವಲ್ಲದೆ ವ್ಯೋಮದೊಳೊಂದೊಂದು
ಕ್ರಿಮಿರಾಶಿಗಳುದುರುವದಯ್ಯ ಅನಂತವಾಗಿ ಪುನಃ ಪುನಃ
ಈ ನುಡಿ ಸಿದ್ಧವಯ್ಯ ಸಿದ್ಧರಿಗೆ ಸಿದ್ಧಿಸುವುದು ಸಾಧ್ಯರಿಗೆ ಸಾಧಿಸದಯ್ಯಾ
ಪ್ರಾಣನಾಮಕ ತಂದೆವರದಗೋಪಾಲವಿಠ್ಠಲನಾಣೆ ೫

ಜತೆ : ವಾದಿರಾಜನೆ ಭಾವಿ ವಾಯುರಾಜನೆಂದರೆ
ಆಪರೀಸೂವ ತಂದೆವರದಗೋಪಾಲವಿಠ್ಠಲಾ

## ೨೪೪

ಸೋದಾಪುರದಲ್ಲಿ ವಾಸಿಪ ಯತಿವರನ್ಯಾರೇ ಪೇಳಮ್ಮಯ್ಯಾ ಪ

ಹರಸುರಪತಿ ಸ್ಮರವರನುತ ನಮ ಸಮೀರ ಸದ್ವಾದಿರಾಜ
ಕಾಣಮಾ ಅ.ಪ.

ಭೂತ ವಿನುತ ಪತಿನಾಥನೆಂದೆನಿಸುವನ್ಯಾರೆ ಪೇಳಮ್ಮಯ್ಯ
ಭೇಶ ಜನಕೆ ಬಲು ಭೀತಿಗೊಳಿಪರಾರೆ ಪೇಳಮ್ಮಯ್ಯ
ಭೇದವಿಲ್ಲದೆ ಭಕ್ತಿ ಭೇದ ಬೋಧಿಪರಾರೆ ಪೇಳಮ್ಮಯ್ಯ
ಭಾನುಕೋಟಿ ತೇಜ ಬೋಧ ಮುನೀಶ್ವರ ಮತಾಂಭೋನಿಧಿಚಂದ್ರ
ಕಾಣಮ್ಮ ೧

ಸತ್ವಾದಿತ್ರಯ ಗುಣಜ ಕರ್ಮರಹಿತರಾರೆ ಪೇಳಮ್ಮಯ್ಯಾ
ಶುದ್ಧ ಸತಿಸ್ವರೂಪದಿಂದ್ರಮಿಸುವರಾರೆ ಪೇಳಮ್ಮಯ್ಯ
ಸಾರ ಶಾಸ್ತ್ರ ಶೃತಿಸಾರವಿನುತ ಖಳಾರಿಯೆಂದೆನಿಸುವರಾರೆ ಪೇಳಮ್ಮಯ್ಯಾ
ರಾಶಿ ಪೂರ್ಣ ಸಪ್ತನಾಮಹರ ನೇತ್ರ ದ್ವಯಾಂಶ
ಸಹಿತರೇ ಪೇಳಮ್ಮಯ್ಯಾ ೨

ಪಂಚಸುವೃಂದಾವನದಲಿ ಮಿಂಚಿಪರಾರೇ ಪೇಳಮ್ಮಯ್ಯ
ಪಂಚಭೇದ ಶೂನ್ಯ ಸದ್ವಂಚಕರಿಂದಿರುತಿಹರಾರೇ ಪೇಳಮ್ಮಯ್ಯ
ಪಂಚಾಸನ ಪರ ವಂಚಕರಿಗೆಯಂದೆನಿಸುವರಾರೇ ಪೇಳಮ್ಮಯ್ಯ
ಪಂಚ ಪಂಚ ತತ್ವ ಪಂಚರೂಪ ತಂದೆವರದಗೋಪಾಲವಿಠಲನ
ಪೂಜಿಪರೇ ೩

## ೨೪೫

ವಾಸುದೇವನ ದಾಸ ವಾಸುಕೀಭರಣನೇ ಭೂಷಾ ಪ

ವಾಸವಾದ್ಯಮರರಿಗೆ ತೋಷವ ಸುರಿಸುವ ಭಾವೀ ಭಾರತೀಶ ಅ.ಪ.

ಬಯಸಬಾರದ ಬಯಕೆಗಳಿಂದ ಬಾಧೆಗೊಳಗಾದೆನೊ
ಬಾಧೆಗಳ ಬಿಡಿಸಿ ಭವದಿ ಭಕ್ತರೊಳು ಕೂಡಿಸೋ ೧

ಕೊಟ್ಟವರ ಸಾಲವನು ಕೊಟ್ಟು ಮುಟ್ಟಿಸದೆ
ದಿಟ್ಟತನದಿ ಬೆಂಬಿಟ್ಟು ಅಗಲದಲಿಟ್ಟು ಕೊಟ್ಟು ತೀರಿಸುವಂತೆ
ಮಾಡೋ ಪ್ರೇಷ್ಠಾ ೨

ಏಸೇಸು ಕಲ್ಪಕ್ಕೂ ದಾಸನೆಂಬುದು ಬಲ್ಯಲ್ಲಾ
ಈಶ ನೀ ಗತಿಯೆಂಬುದು ಚೆನ್ನಾಗಿ ಬಲ್ಲೆ
ಕಾರಣದಿ ಮೊರೆ ಪೊಕ್ಕ ತಂದೆವರದಗೋಪಾಲವಿಠ್ಠಲನ
ಶರಣಾಗ್ರೇಸರಾ ೩

## ೨೪೬

ಹೊಡೀ ನಗಾರಿ ಮೇಲೆ ಕೈಯಾ ಕಡ ಕಡ ಪ

ದೃಢಮತಿಯಲಿ ಕಡು ವಾದಿರಾಜರು ರುಜುಗುಣ
ಪರೆಂದ್ಹೊಡೇ ಅ.ಪ.

ಕಾಮನಯ್ಯನ ನೇಮದಿ ಸ್ಮರಿಸುವ
ಕಾಮರಹಿತ ನಿಷ್ಕಾಮ ಕರೆವರೆಂದ್ಹೊಡೀ ೧

ಅವನಿಯೊಳಗೆ ತಾ ಬಂಧುರ ಕುಲೇಂದ್ರಿನಿ
ಗೊಲಿದವ ನಿಂದ್ಯಂದ್ಯರೆಂದೊಡಿ ೨

ಮೋದ ಮುನಿಯ ಮತ ಮೋದದಿ ಸಾಧಿಪ
ಸದ್ವಾದಿರಾಜ ಗುರು ಮೋದತೀರ್ಥರು ಸಮರೆಂದ್ಹೊಡಿ ೩

ಕಲಿಕುಲಜೈಸಿ ಸತ್ಕವಿಕುಲ ಪೋಷಿಸಿ
ಯತಿಕುಲಭೂಷಿಪ ವರಶುಕ್ಲ ಶೋಣಿತ ಶೂನ್ಯರಿವತೆಂದ್ಹೊಡಿ ೪

ಕಾಮಿನಿಗೋಸುಗ ಪ್ರೇಮದಿ ಕುಸುಮವ
ತಂದಿಟ್ಟತುಳ ಭೀಮನ ಸರಿಸಮರಿವತೆಂದ್ಹೊಡಿ ೫

ಸೀತೆಯಗೋಸುಗ ಸೇತುವೆಗಟ್ಟಿದ
ರಘುನಾಥನ ಪ್ರೀತಿಯ ಘನವಾತನಪದ ಪೊಂದುವರೆಂದ್ಹೊಡಿ ೬

ಇಂದಿರೇಶನ ಪದಮಂದಿರದಲಿ ಭಜಿಸುವ
ನಂದಿವಾಹ ಮುಖವೃಂದ ವಂದ್ಯರೆಂದ್ಹೊಡಿ ೭

ವೃಂದಾವನದೊಳು ಕೂತುಚ್ಛಂದದಿ ದ್ವಿಜರಿಗೆ
ಬೋಧಿಪರಿವರೆಂದ್ಹೊಡಿ ೮

ಕಂತುವಿನಲಿ ತಾನಿಂತು ಜಪಿಸುವ
ತಂದೆವರದಗೋಪಾಲವಿಠಲನ ಪ್ರೀತಿ
ಮಂತ್ರಿಯೆನಿಪವರೆಂದೊಡಿ ೯

## ೨೪೭

### ಭೂತರಾಜರು

ಭಜಿಸಿ ಬದುಕಿರೋ ದಿವ್ಯ ಪಾದಕೆರಗಿರೊ
ಭಕುತಿಯಿತ್ತು ಪೊರೆವೊ ಭೂತರಾಜರೆಂಬರಾ ಪ

ಭಾವ ಶುದ್ಧದಿ ಓದಿ ಗ್ರಂಥಸಾರವಾ
ವಾದಿರಾಜರ ಕೂಡಿ ತಾನು ವ್ಯಾಸ ಮುನಿಯಲಿ ೧

ಅಷ್ಟ ಮಂದಿಯಾ ಅಮೃತವೃಷ್ಟಿಗರೆವರೂ
ಶ್ರೀ ಕೃಷ್ಣಮಹಿಮೆಯ ತಾವು ಕೂಡಿ ಪಾಡೊರೊ ೨

ತಂದೆ ಎಂಬೊದೂ ತಾನು ಒಂದನರಿಯದೆ
ನಿಂದೆ ಮಾಡಿ ತಾನೆ ಬಲುಕುಂದಿಗಳುಕುವಾ ೩

ಶಿಷ್ಟ ಜನರೊಳು ಇವನೇ ಶ್ರೇಷ್ಠವೇನಿದೂ
ಸಿಟ್ಟಿನಿಂದ ಬೈದು ಬಹು ಕಷ್ಟಬಡುವನೊ ೪

ಭಂಡಿ ಮನುಜನೇ ಪ್ರಚಂಡ ತಪಶಿಯೋ
ಕೆಂಡ ತುಳಿದು ವ್ಯರ್ಥ ನೀನು ದಂಡಕಳುಕುವಿ ೫

ಏನು ಪೇಳಲಿ ಇನ್ನೇನು ಹೇಳಲೀ
ಜ್ಞಾನ ಶೂನ್ಯನಂತೆ ಶಿಕ್ಕಿ ನುಡಿಯ ಬ್ಯಾಡೆಲೋ ೬

ಖುಲ್ಲ ಕೇಳೆಲೋ ಎಲೋ ಫಲ್ಲ ತೊಡದಿರೋ
ನಿಗಮವೆಲ್ಲ ಪೇಳಿಸುವಾ ಕಲ್ಲಿನಿಂದಲೇ ೭

ಶರಣು ಪೊಕ್ಕೆನೊ ಸ್ವಾಮಿ ಮರೆಯ ಪೊಕ್ಕೆನೊ
ಕರುಣ ಮಾಡಿರೀ ಕಂಣು ತೆರೆದು ನೋಡಿರೀ ೮

ಭೂತ ಹರಣವಾ ತಾಳೋ ಭೀತಿಗೊಳಿಸುತಾ
ಪಾಪ ಪೋಪುದೂ ಯನ್ನ ಪಾದ ಸೋಂಕಲೂ ೯

ಭೀತಿಗೊಳಿಸುತಾನೇಕ ಭೂತ ಪ್ರೇತಕೇ
ರಾಜನಾಗಿ ನೀನು ಭೂತ ಪ್ರೇತ ಗಣದೊಳು ೧೦

ನಂದಿವಾಹನಾಪದಕೆ ಮುಂದೆ ಬಾಹುವೀ ಯನ್ನ
ಕಂದ ನೀನು ನಾನೇ ಭಾವಿ ಮಂದಜಾಸನಾ ೧೧

ಪಂಚವೃಂದದೀ ಸದ್ವೃಂದ ಪೂಜ್ಯನಾ
ದ್ವಂದ್ವ ಪೊಂದಿ ತಾನು ಸ್ವಾನಂದ ಪಡೆದನೂ ೧೨

ಸ್ವಾದಿನಿಲಯನಾ ಬಲು ಪ್ರೀತಿ ಪಡೆದು ತಾ
ತ್ರಿಶೂಲ ಧರಿಸಿದಾ ಭಾವಿ ಶೂಲ ರಮಣನೂ ೧೩

ಪ್ರಾಣ ಪತಿಯನಾ ರೇಣು ಪಾದ ಫಣಿಯಲೀ
ಪ್ರಾಣಿನಿಡದನಾ ಅವನ ಪ್ರಾಣ ಸೆಳೆವನಾ ೧೪

ಎಂತು ಪೇಳಲೀ ಇವರ ಅಚಿಂತ್ಯಮಹಿಮೆಯಾ
ಶಾಂತಮೂರುತಿ ಶಶಿಕಾಂತ ಕೀರುತೀ ೧೫

ದೂಷಜನರನಾ ಬಲು ಘಾಸಿಗೊಳಿಸಿದಾ
ಶಕ್ತಿದಾಯಕ ತಂದೆವರದಗೋಪಾಲವಿಠಲನು ೧೬

## ೨೪೮

ಭೂತರಾಜನೆ ಕೇಳು ಯನ್ನ ಭಾವಿ ಲಿಖಿತಾವನ್ನು ಸೂಚಿಸು
ಭವದಿ ಬಹು ಭೀತಿಗೊಳಿಪ ಭೌತಿಕ ಜೀವಿಗಳಾ ನೀ
ದೂರಮಾಡಿ ಯನ್ನ ಗಾರುಮಾಡದೆ ಸಲಹಾಬೇಕು
ಕಾರುಣ್ಯ ನಿಧಿಯೇ ನಿನ್ನ ವನಜಪಾದದಲ್ಲಿ
ನವವಿಧಾ ಭಕುತಿ ಕೊಟ್ಟು ನವನಿಧಿ ಚರಣ ಸರೋಜವನ್ನು
ಹೃತ್ಸರಸೀದಾಲ್ಲ ಪೊಳೆವಂತೆ ಮಾಡೊ
ಪಾಪಿ ಜನರ ತಾಪಾ ಸಹಿಸಲಾರೆನೋ ದೇವಾ
ಶ್ವಾಸ ನಿಯಾಮಕ ಪ್ರೀಯಾ ಸ್ವಾದಿ ಪುರವಾಸಿ
ತಂದೆವರದಗೋಪಾಲವಿಠ್ಠಲನ ದೂತಾ ೧

ಪಾಪಿ ಜನರ ಕೂಡಾ ಸ್ನೇಹವ ಮಾಡಿ
ಪಾಪಕೂಪದೊಳಗೆ ಮುಳುಗಿ ಅಪಾರಪಾತಕಕೆ ಒಳಗಾಗಿ
ತಾಪ ಬಡುವ್ಯನೊ ಯನ್ನಾ ಬಾಪನೆ ಮನ್ನೀಸಿ
ಪಾಲಿಪರ ನಾ ಕಾಣೆನೊ ದೇವಾ ಕೈಪಿಡಿದು ಮುಂದಕೆ
ಕರೆದು ಮನ್ನಿಪ ಧೊರಿ ಅಂದರೆ ನೀನಲ್ಲದೆ ಇನ್ನುಂಟೆ
ಬಾಧೆ ಬಿಡಿಸಿ ನಿನ್ನ ದಾಸರ ವ್ಯೂಹದೊಳಿಡು
ದಾಶ್ಯವನಿತ್ತು ದಾತ ಜನಕೆ ತಂದೆವರದ-
ಗೋಪಾಲವಿಠ್ಠಲನ ನಿಲ್ಲಿಸುವಂತೆ ಕೃಪೆ ಮಾಡ್ಯೆ ೨

ಕಷ್ಟದೊಳಿದ್ದವರ ಕಷ್ಟದಿಂದೆತ್ತಿ ಪಾಲಿಸುವಿ-
ತುಷ್ಟಿಯಾದವನ ಉತ್ಕೃಷ್ಟ ಮಾಡುವಿ
ದುಷ್ಟಿಯಾದವನ ಕಷ್ಟದೊಳಿಟ್ಟು ಸುಖಾಪಡಿಸುವಿ
ದೃಷ್ಟಿ ಹೀನರಿಗೆ ದಿವ್ಯ ದೃಷ್ಟಿಯಾ ನೀವಿ
ಯಷ್ಟು ಮಾಡಿದರೇನು ನಿನ್ನ ಪಾದಪದ್ಮವನ್ನು
ಮನಮುಟ್ಟಿ ಭಜಿಸೋ ತನಕಾ
ಸೃಷ್ಟಿಯೊಳಗೆ ಅತಿ ಸ್ಪಷ್ಟವಾದ ಜ್ಞಾನ ಪುಟ್ಟದು

ಕಾಣೋ ನಿರ್ದಿಷ್ಟ ಶಿಖಾಮಣಿ
ತಂದೆವರದಗೋಪಾಲವಿಠಲನ ಆಪ್ತಾ ೩

ದೂಷಿಯಾದವನ ನಿರ್ದೋಷ ಮಾಡುವಿ
ದಾಸನೆಂದವನ ಪೋಷಿಸುವಿ ದೂಷಿಪರ ಘಾಸಿಗೊಳಿಸುವಿ
ಹಂಸವಾಹನ ಪದ ಪೊಂದುವರ ಸಂಶಯಮಾಡದೆ
ಸಮ್ಮೋದವಿತ್ತು ಸಲಹುವಿ
ಶೂಲಧಾರಿಯೆ ನಿನ್ನ ಹಾಸಕೆ ನಮೋ ನಮೋ
ಪಾಶದಿಂದ ಪಾಶಿಸಾದೆ ಸಲಹೋ ಪಾಶುಧರ ಪಾಲಾ
ಪಶುಪತಿಯೋಗ್ಯಾ ಶಿರಹಾರ ಧಾರಿ
ಮೃಗರಾಜ ಸೇವಕ ನದಿಧರಲಾಶಾಮಾನಿಲಯಾ
ತಂದೆವರದಗೋಪಾಲವಿಠ್ಠಲನ ಪ್ರೀಯಾ ೪

ಕಾಮಜನಕನದಿ ಕಾಮಹರನೆ ಪರಿಪೂರ್ಣಕಾಮಾ
ಯನ್ನ ಕಾಮನಾ ವಶಮಾಡಿ ಕಾಮಪಡಿಸುವುದುಚಿತವೇ
ಪರ ಕಾಮಿನೀಯಳ ಕಾಮುಕತನದಿಂದ ಕಾಮಿಸೇ
ಕಾಮಾರಿಗಳೆಲ್ಲ ನೋಡಿ ಕಾಮಿಸುವರ್‍ಯೆ
ಕಾಮನಯ್ಯನಾ ಪ್ರೇಮದಿ ಕಾಂಬುವ
ಯಾಮ ಯಾಮಕೆ ನಿನ್ನ ನಾಮ ಸ್ಮರಿಸುವಂತೆ ಮಾಡು
ಕಾಮವಂದಿತ ತಂದೆವರದಗೋಪಾಲವಿಠ್ಠಲನ ತೋರೋ ೫

ಜತೆ : ಭೀತಿಯಾ ಬಿಡಿಪಾ ದಾತಾನು ನೀನಯ್ಯ
ಭೂತ ವಂದಿತ ತಂದೆವರದಗೋಪಾಲವಿಠಲನ ಭಜಕಾ ೬

## ೨೪೯

ಶತ್ರುಭಯ ಪರಿಹರಿಸೊ ಭೂತರಾಜ ಪ

ಭವಕೆ ಭೀಕರ ಭಾವಿ ಭೀಮನ
ಭಜಿಪ ಭೋಜಾ ಸುತೇಜಾ ಅ.ಪ.

ಒಂದು ಅರಿಯದೆ ಇಂದು ನೀನೆ ನಾನೆಂದು
ಕಮರಿ ಕೂಪದಿ ನೊಂದೆನೊ
ಭಾವಿ ನಂದಿವಾಹನ ಮಂಗಳ ಪ್ರದ ನೀಲಕಂಠಾ ೧

ಇಲ್ಲೆಲ್ಲಿ ಸರ್ವಸ್ಥಳದಲ್ಲಿ ವ್ಯಾಪ್ತವಾಗಿಹ ನಿನ್ನ
ಲೋಲ ಮೂರುತಿಯ ನೆನೆವೆ ಫಾಲನಯನಾ
ಪಾಲಿಗೇ ಪಾಲನೆಂತೆಂದು ಕಾಲಮೀರದೆ
ಚಲಿಸದೆಲೆ ಬಾರೊ ಗರಳಧಾರಿ ೨

ಶ್ರೀಕೃಷ್ಣದಾಸನೆ ನಿನ್ನ ಇಷ್ಟನೆಂತೆಂದು
ಮನಮುಟ್ಟಿ ಭಜಿಸುವೆನೊ ಚಾರುದೇಷ್ಣೆಪಾಲಾ
ದಿಟ್ಟ ಗುರು ಕೃಷ್ಣವಂದಿತ ತಂದೆ-
ವರದಗೋಪಾಲವಿಠ್ಠಲನ ಸಹಜ ಬಂದು ೩

## ೨೫೦

### ರಾಘವೇಂದ್ರರು

ಸ್ವಾಮಿ ಕಾಯೋ ಕರುಣೀ ಪ

ನಮ್ಮ ಗುರು ರಾಘವೇಂದ್ರ ಫಣಿ ಅ.ಪ.

ನಿನ್ನ ಯೋಚಿಪ ಮಾರ್ಗ ನಾನರಿಯೆ ಧೀರಾ
ಯನ್ನ ವಿಚಾರಿಸದೆ ಇರುವುದು ಥರವೇ ೧

ನಿನ್ನ ಪೋಲುವ ಕರುಣಿಗಳೆ ಇಲ್ಲೆಂಬೋರು
ನಿಜವಾದಡೆ ಕರುಣಿಸಿ ಕಾಯೋ ಗುರುವೇ ೨

ನೊಂದೆನಯ್ಯ ಬೆಂದೆನಯ್ಯ ಬಂಧನದೊಳು ಸಿಲ್ಕಿ ಗೋವಿಂದಾ
ತಂದೆವರದಗೋಪಾಲವಿಠ್ಠಲನ ಕಂದಾ ೩

## ೨೫೧

ರೋಗವನು ಪರಿಹರಿಸೊ ಗುರು ರಾಘವೇಂದ್ರಾ ಪ

ಕರಮುಗಿದು ಬಿನ್ನೈಪೆ ಧೀರ ಯೋಗೇಂದ್ರ ಪಾಲಾ ಅ.ಪ.

ಅರಿಯದಾ ತರಳ ತನ್ನ ನಿಜಮತಿಯಿಂದ ದೂಷಿಸಲಿಲ್ಲ
ಪರರ ಮಾತನು ಕೇಳಿ ದೂಷಿಸಿದನಲ್ಲದೇ ೧

ಏನ ಪೇಳಲಿ ಗುರುವೆ ನಿನ್ನ ಸಮಕರುಣೆಗಳು
ಇನ್ನುಂಟೆ ಜಗದೊಳು ಕೇಳಿದ ಕಾರಣದಿ ಬಂದು ಬಿನ್ನೈಸಿದೆ ೨

ಬಾಲಕನು ಪರಿಪರಿಯಿಂದ ಪೀಡಿತನಾಗಿ ಬೆಂಡುಬೆಂಡಾದಾ
ತಂದೆವರದಗೋಪಾಲವಿಠ್ಠಲ ಪ್ರೀಯಾ ೩

## ೨೫೨

### ಶ್ರೀ ಸತ್ಯಬೋಧರು

ಕುರುಡನಿಗೆ ಕರವಿತ್ತು ಕೈಪಿಡಿದು ಕಾಯೋ ಪ

ದೃಢಮತಿಯಿತ್ತು ತವ ಪಾದದಲಿ ಅ.ಪ.

ಗರುಡಾರಿ ಭೂಷಣನ ಚರಣದಡಿಯೊಳಗಿದ್ದು
ಘನ ತಪವ ಗೈವ ಮಹತ ಪರಿಯೊ ೧

ಬೋಧತೀರ್ಥಾರ್ಯರ ಮತಕನುಸರಿಸಿ
ಸದ್ಭಕುತ ಜನಕೆ ಭೇದಗಳ ಬೋಧಿಸುತ
ಸತ್ಯಬೋಧಾಖ್ಯಯದೀ ಧರೆಯೊಳಗಮರವೇ ೨

ಮ್ಲೇಚಪುರದಲಿ ಕುಳಿತು ಸಂಚಿತಾಗಾಮಿಗಳ
ಕೊಂಚಮಾಡುತ ನಿಷ್ಕಿಂಚಿನರ ಪ್ರೀಯಾ

ತಂದೆವರದಗೋಪಾಲವಿಠಲನ
ಮಂಚ ಪದನಿಂದ ಪೋಷಿತನಾದ ಪ್ರಭುವೇ ೩

## ೨೫೩

## ಸತ್ಯ ಪರಾಕ್ರಮರು

ಕೃಷ್ಣಾತೀರದಿ ಕುಳಿತಿಷ್ಟವ ಸಲಿಸುವನ್ಯಾರೇ ಪೇಳಮ್ಮಯ್ಯ ಪ

ಕಷ್ಟರಹಿತ ಸಂತುಷ್ಟರೆನಿಪ ಸತ್ಯೇಷ್ಟತೀರ್ಥ ಕರಜ
ಪರಾಕ್ರಮರೇ ಅ.ಪ.

ಭಾಸುರ ಪದರಜ ಭಾವಿ ಸಮೀರ ಭೂಷಿತನ್ಯಾರೇ ಪೇಳಮ್ಮಯ್ಯಾ
ಭೇದಮತಿಯುತಾ ಸತ್ಯದಿ ಬೋಧಿಪನ್ಯಾರೆ ಪೇಳಮ್ಮಯ್ಯಾ
ಭೇದ ಪೇಳದ ಮತ ದುರ್ಬೋಧವ ಭೇದಿಪನ್ಯಾರೆ ಪೇಳಮ್ಮಯ್ಯ
ಬೋಧ ಮುನಿಯು ಮತ ಶುಭವಾರಿಧಿ ತಾರಕೆ ತಾರೆನೆನಿಪ ಜೀವತಾರ
ಶಶಿಕಾಣಮ್ಮ ೧

ಚಂದ್ರಪೋಲುವ ಮುಖಕಮಲಗಳಿಂದೊಪ್ಪುವನ್ಯಾರೆ ಪೇಳಮ್ಮಯ್ಯ
ಚಂದ್ರನಂತೆ ಶುಭ ತಿಲುಕಾಂಕಿತದಿಂದೊಪ್ಪುವನ್ಯಾರೆ ಪೇಳಮ್ಮಯ್ಯ
ಚಂದ್ರಕಂಠಮಾಲೆ ಕರದಿ ದಂಡವ ಧರಿಸಿಹನ್ಯಾರೆ ಪೇಳಮ್ಮಯ್ಯ
ಚಂದ್ರಚರಣ ನಖಶಿಖ ಪರಿಪೂರ್ಣದಿಂದೊಪ್ಪುವ ಗುರುವರ್ಯ
ಕಾಣಮ್ಮ ೨

ವೃಂದಾವನವರ ಮಂದಿರ ಮಧ್ಯದಿ ರಾಜೀವನ್ಯಾರೇ ಪೇಳಮ್ಮಯ್ಯ
ವೃಂದಾರಕ ವರವೃಂದ ವಿನುತನ್ಯಾರೆ ಪೇಳಮ್ಮಯ್ಯ
ವೃಂದಾವನ ಸುಂದರ ಗುಣಗಳಿಂಥೊಳೆ ಯುವನ್ಯಾರೆ ಪೇಳಮ್ಮಯ್ಯ
ವೃಂದಾವನದೊಳಗಾಶ್ರಿತ ತಂದೆವರದಗೋಪಾಲವಿಠಲನ
ಸೇವಿಪರೇ ೩

## ೨೫೪

## ಸುಶೀಲೇಂದ್ರ ತೀರ್ಥರು

ಮನವೆ ಲಾಲಿಸಿ ಕೇಳು ಬಿನ್ನೈಸುವೆನೊ ನಿನಗೆ ಚೆನ್ನಾಗಿ
ಮನಸಿನೊಳಗೆ ತಿಳಿದುಕೋ ನಿನ್ನಿಂದ ನೀನೇ
ಕನಸಿನೊಳಗೆ ಆದ ವೃತ್ತಾಂತವನು ಆಗದುಯಂತ್ಯಂದು
ವಾದಿ ಜನರ ಪಕ್ಷವಹಿಸಿ ವಾದಿಸುತಿದ್ದೆಯನ್ನೊಡನೆ
ಹಿಂದಿನ ಫಲವನ್ನು ಸ್ವಾನುಭವಕೆ ತಂದುಕೊ
ಸಾಧಿಸಬ್ಯಾಡಾ ಇದರಂತೆ ಸರ್ವವು ಕಾಣೋ ಮುಂದೆ ವರ್ಣಿಪೆ
ಅಂತಷ್ಟು ಗುರುಗಳ ಕರುಣದಿಂದ ಗುರು ಶಿರೋಮಣಿ
ಗುರುರಾಜಾರ್ಚಕನಾದ
ಗುರುರಾಘವೇಂದ್ರರ ದಯಾಪಾತ್ರ ನಾಕನದಿ ಪತಿಪುರದೊಳು
ನಾಕೇಶನೇ ಬಂದು ಸುಶೀಲಾಖ್ಯಸತ್ತೀರ್ಥದಿ ಮೆರೆದು ವರದಾತೀರದಿ
ನಿಂದು
ಶರಧಿಯ ದಾಟಿದ ಬಗೆ ಆದವಾರ್ತಾ ಗೋಚರಿಸಿದ್ದು ಕೇಳಲಿಲ್ಲವೇ
ಗುರುಗುಣವಂತಾ ಮಹಾದಯವಂತಾ ನಲಿದಾಡುತ ಪೊರಟನು
ವೈಕುಂಠಪುರಕೆ
ಈಶಾಧೀಶ ಬ್ರಹ್ಮೇಶಾ ತಂದೆವರದಗೋಪಾಲವಿಠಲರೇಯಾನ
ಬಳಿಗೇ ೧

ಕಾಣೆನೊ ಕಾಣೆನೊ ಇನ್ನಿಂಥ ಗುರುಗಳ ಕಾಣೆ
ಕರುಣಾರಸವನ್ನು ಸೂರೆ ಮಾಡುತ ಚರಣಕಮಲಕ್ಕೆ
ಮೊರೆ ಪೊಕ್ಕವರನ್ನು ಮರೆಯಾದೆ ಸಲಹೋ–
ದ್ಧರಿಗಳ ನಾಕಾಣೆ ಹರಿಣಧರಸುತ ಫಣಿಪನಾವೇಶದಿಂದುದಿಸಿ
ಧರಣಿಯ ಸುರರನ್ನು ಸಲಹುತ ಹರಿಣವಾಹನನಂತೆ ಹರಣವನರ್ಪಿಸಿ
ಪ್ರಾಣೇಶ ತಂದೆವರದಗೋಪಾಲವಿಠ್ಠಲನ್ನು ವಲಿಸಿದಾ ಗುರು
ದಯದಿಂದಾ ೨

ಧನ್ಯನಾದೆ ಬಲು ಧನ್ಯನಾದೆನೊ ಮಾನ್ಯವಂತರು ಬಂದು ಸುಳಿದ
ಕಾರಣ
ಕಾಮಾದಿಗಳ ಕಾಟದಿಂದ ರಹಿತನಾದೆ ನಾಮನಾಮಕೆ ಇವರ
ನಾಮಾವನಾಲಿಸಿ
ತುದಿಯಲಿಪ್ಪ ಬುಧರ ಮನೋಭಿಲಾಷೆ ಪೂರೈಸುವಾ
ಸತ್ಯಭಾಮಾಪ್ರೀಯಾತಂದೆವರದಗೋಪಾಲವಿಠ್ಠಲನ
ನಾಮಾನೆ ನಿಲ್ಲಿಸಿ ಕೊಡುವೋರು ೩

ದಿನದಿನ ಪ್ರತಿದಿನ ಮಾಡುವೋ ವ್ಯಾಪಾರ
ಇವರೊಳಗಿಪ್ಪೆ ಪವನ ಗುರುವರ್ಯಾ
ಪರಮಾದರದಿಂದಲಿ ಸತ್ಕರ್ಮವೇ ಮಾಳ್ಪನು
ಅನುಮಾನ ಸಲ್ಲದು ಆಡಿದ ನುಡಿಸಿದ್ಧ ವರಕೃತಿಬದ್ಧ
ಅಪದ್ಧವೆಂದರೆ ಮದ್ದುಹಾಕಿ ಮಣಿಸುವ
ಮುದ್ದು ಮೊಗದ ರಂಗ ಮಧ್ವವಲ್ಲಭ
ತಂದೆವರದಗೋಪಾಲವಿಠ್ಠಲರೇಯಾ
ಬಂದು ಹೃದ್ಯದಿ ದಿಢಿಮಕ್ಕೆಂದು ಸಲಹಾ ೪

ದುಂದುಭಿ ಭೇರಿ ನಗಾರಿ ತಾಳ ಮ್ಯಾಳಾ ಕಹಳೆ
ನಿಕಿನಾಳೆ ಕಂಸಾಳೆ ಝಾಗಟೆ ಘಂಟೆ ತಮ್ಮಟೆ
ಕೊಂಬು ತಂಬೂರಿ ಢಕ್ಕೆ ನಾನಾ ಶಂಖಾದಿ ಘನ ಘೋಷದಿಂದ
ಶೋಡಷಕಳೆ ಪೂರ್ಣನಾಗಿ ಆಶಾಢ ಶುದ್ಧ ಬಿದಿಗೆಯಾ
ಶ್ಲೇಷ ಶುಭ ಶುಕ್ರೋದಯ ಶಶಿವಾರದಿ
ಶಕಟಮರ್ದನ ತಂದೆವರದಗೋಪಾಲವಿಠ್ಠಲನ ಪುರಕೆ
ಪರಮ ಹರುಷದಿಂದ ತೆರಳಿ ಪೋದರು ೫

ಜತೆ : ಕಾಮಧೇನು ಸುತಲ್ಪ ತರುವೆಂಬೊ ರತುನನಾಮಕ
ಸುಶೀಲೇಂದ್ರ ತೀರ್ಥದಿ ಮಿಂದು ತಂದೆವರದಗೋಪಾಲವಿಠ್ಠಲನ
ದ್ವಂದ್ವವ ಕಂಡೆ ಗುರುದಯದಿಂದಾ

## ೨೫೫

### ಸುತೀರ್ಥರು

ಸಾರಲೆನ್ನಳವಲ್ಲ ಗುಣಶಾಲಿ ಸುರಪ ಸುತೀರ್ಥ ಯತಿವರ ಪ

ತವ ಸಂಚಾರ ಚರಣ ಸಮೀರಯುತ ವಿಸ್ತಾರ ಮಹಿಮೆಯ ಅ.ಪ.

ಇಂದು ದಾರಿಯಲಿಂದ ಬರುತಿರೆ
ಸುಂದರಂದಣವೇರಿ ಯದರಿಗೆ
ಬಂದು ಶರಣರ ಸೇವೆಗೊಂಡು
ಶೃಂಗಾರ ಕವಚವನಿತ್ತು ನವಸುಖ
ಮಾರಮರ್ಮನ ಬಯಸಿ ದ್ಯುತಿವರನಂಘ್ರಿಕಮಲವ ೧

ಧನ್ಯನಾದೆನೊ ನಿನ್ನ ನೋಡಿ ಮಾನ್ಯನಾಗುವೆ ಮೌನಿ ಜನರೊಳು
ಗಾನ ಮಾಡುವೆ ಜ್ಞಾನಗಯ್ಯನ ಧ್ಯಾನ ಮಾಡಭಿಮಾನ ತೊರೆಯುತ
ನಂಬಿ ನಿನ್ನಯ ೨

ಸಂಗಮಾಡಿಸು ಡಿಂಗಿಯರ ಕಡೆ ಕಂಗಳಿಂಗದಲಿ ಶೋಭಿಪಡುವ
ಸುಶಾಮಗೊರಳನ ಪೊಡದ ತಂದೆವರದಗೋಪಾಲವಿಠಲನ
ಪ್ರೇಮಗುರುಮಣಿ ೩

# ಉ. ದಾಸವರ್ಯ ಸ್ತುತಿ

## ೨೫೬

### ವಿಜಯದಾಸರು

ಬಾಲೆಯರ ಪಾಲಿಸೈ ದೀನಜನ ಪಾಲ ವಿಜಯಾಖ್ಯ ರಾಯಾ ಪ

ಫಾಲನಯನನ ಬಾಲಗೋಪಾಲದಾಸರಿಗೊಲಿದದ್ದು
ಅಚ್ಚರವಲ್ಲ ಜೀಯಾ ಅ.ಪ.

ಘನ ವ್ಯಾಧಿಯಂ ಪೀಡಿತಳಾಗಿ ಸೇವಿಸೆ
ನೀನಾಗಿ ವಲಿದು ಅಭಯವನಿತ್ತು
ನಿನ್ನ ದಾಸನೆಂದುಪದೇಶಿಶಿ ಜರಿದು ದೂರ ನೋಡುವರೇ
ಪರಮ ಕರುಣಾಶರಧಿ ನಿನ್ನ ದ್ವಂದ್ವಗಳಿಗಭಿವಂದಿಪೆ ೧

ಅನ್ಯಳಲ್ಲವೋ ರಾಯಾ ನಿನ್ನ ಪರಮ ಪ್ರೀತ್ಯಾಸ್ಪದನ
ತನುಜಳೋ ಸದ್ಭಕುತಿಯುಳ್ಳವಳು ಸಲ್ಲೇಲ ಸಂಪನ್ನೆ
ಸತ್ಯಭೇದ ಜ್ಞಾನ ಸಚ್ಚಿತ್ತಪುರಿರಾಜನಿಂದ ಪಡೆದು
ನಿನಗೆ ಸರಿಯಾಗಿ ತೋರಿದ ಬಳಿಕ ೨

ಬಹೂಪರಿಯಿಂದ ಬೇಡುವೆನೊ ತವಚರಣ ನಂಬದ
ಶರಣೆಯೆಂತೆಂದು ಕಣ್ತೆರೆದು ಕರುಣಿಸೊ
ನಿನ್ನ ಶರಣರೊಳು ಶರಣಾಧಮನಯ್ಯ ಉದಾಶಿಸದೆ
ಸಲಹು ತಂದೆವರದಗೋಪಾಲವಿಠ್ಠಲನ ಪ್ರೀಯಾ ೩

## ೨೫೭

### ಗೋಪಾಲದಾಸರು

ಕರದಾಗ ಬಾರದೇ ವೈದುಗ ಬಂದು ಬೋಧಿಸಿ ಮಾರ್ಗವ ತೋರಿಸಿ
ಹೃದಯದಿ ಪಾದನಿಲ್ಲಿಸಿ ಮಂದನ ಪೋಷಿಸಿ ಭಂಗವ ಬಿಡಿಸುತಾ
ಮಂಗಳ ಮೂರುತಿ ನಿನ್ನ ಮಹಿಮೆಗೆಣೆಗಾಣೆ ಧವಳ ಗುಣವಂತ
ತಂದೆವರದಗೋಪಾಲವಿಠಲರೇಯನ ದಾಸನೆಂದೆನಿಸದೆಯನ್ನ ೧

ಮಾವಿನ ವನದೊಳು ಪಾವಿನ ಪಾಶದಿ ಮೀನುವೊ ನರನ
ಪನ್ನಗ ವೈರಿ ಬಂದು ಬನ್ನ ಬಿಡಿಸುವಂತೆ ಘನ್ನ ಭವ ಕೂಪದೊಳು
ಬಿದ್ದು
ಬನ್ನ ಪಡುತಿರೆ ಕಣ್ಣು ಕಾಣದೆ ಕರುಣವ ಬೀರುತ ಪಾಣಿಯ ಪಿಡಿದು
ವೀಣಾವನಿತ್ತು ಗಾನವ ಪೇಳಿ ಗುಣವಂತನೆಂದೆನಿಸಿದೇ
ಎನ್ನ ಅಣ್ಣಾ ಅಣ್ಣಾ ಭಾಗಣ್ಣ ಗಜಮುಖ ರೂಪದಿ ಬಂದು ಪಾಲಿಸಿದ್ಯೆ

ನಿನ್ನಾ ಕರುಣಾರಸಕೆಣೆಯುಂಟೆ ಯೆಣೆಯುಂಟೆ ನಿನ್ನ
ದೇನಿಪರೊಳಗಿಟ್ಟು
ಶಿರಿಯರಮಣ ತಂದೆವರದಗೋಪಾಲನ ತೋರೋ ೨

ನೂರಾರು ಸಾವಿರ ನಾರಿಯರೊಡಗೂಡಿ ಬೆಡಗು ಮಾಡೆ
ನಾರಿಯಾಗಿ ನಿನ್ನಡಿಗಳ ಪೂಜಿಸಿ ಗರುಡನಂತೆ ನನ್ನ ಹೆಗಲೀನ
ಕೂಡಿಸಿಕೊಂಡು
ತಿರುಗುವೆ ನೀತಿ ಕಪಿಯಂತೆ ನಿನ್ನ ಕಪ್ಪಾದಿ ವಲಿಸುವೆ ಕಮತವ ಮಾಡಿಸಿ
ಮರ್ಮವ ಘಾಡಿಸಿ ಶರ್ಮವ ಗೂಡಿಸಿ ಚರ್ಮವ ತೊಡಿಸಿ ಕರ್ಮವ
ಕೆಡಿಸಿ
ಮೃಡನೊಡೆಯ ವಂದಿತ ತಂದೆವರದಗೋಪಾಲವಿಠಲನಡಿಗಳ
ಧೇನಿಸುವಂತೆ ಮಾಡೋ ೩

ಸುಂದರವದನನೆ ಮಂಗಳನಯನನೆ ಕಂದನ ಬಂಧಿಸಿ
ದ್ವಂದ್ವವ ಪೊಂದಿಸಿ ಬಂದಿಖಾನೆಯೊಳಗೆ ಯಿಟ್ಟಾನಂದವ ಬಡಿಸುತ
ಕರ್ಣಕುಂಡಲಧಾರಿ ಕಿರೀಟಾಂಕಿತ ಮುತ್ತುರತ್ನ–ಮಯೋಪೇತ ಚಿರಂಗ
ಚಾಕಿಲಿ
ರಂಗರಾಗರಸ ಸಾರಂಗ ರಸಪೂರಿತ ನವರಂಗ ಮೈಯ್ಯವ್ವ ವಜ್ರಾಂಕ
ಭೂಷಿತ
ಪದ್ಮಾಂಕಶೋಭಿತ ಪಾಶಾಂಕುಶಧರ ಗೋಪಾಲ ರಾಜನೆ ಅಂಬರ
ಭೋಜನೆ
ಕಂಬುಕಂಧರನಿಂದ ಡಿಂಗರಪಾಲಿಪ ಡಿಂಬದಿ ಪೊಳೆಯುವ
ಅಂಬಾರಮಣಸುತ ಭೀಮಾಂತರ್ಯಾಮಿ ತಂದೆವರದಗೋಪಾಲ
ವಿಠಲನ ನಿಜ ಕೊಂಡಾ ೪

ಭಂಗಾರ ದೇಹದಿ ಶೃಂಗಾರ ಮಂದಿರ ಮಂಗಳ ಮಂಟಪ
ಪಂಕಜ ಕರ್ಣಿಕ
ಘುಂಘರು ಶ್ಯಂದನ ಘನಘನ ಶಬ್ದದಿಂ ರಂಭಾದಿ ವೇಶ್ಯೇರು
ನಂದಾದಿಂ ಬೆಳಗುವ

ಮಂಗಳ ಆರತಿ ಕಂಗಳ ಬೆಳಕಲಿ ನೋಡುವ ನೋಟವೆ
ಪಾಡುವ ಪಾಟವೇ
ಆಡುವ ಆಟವೇ ಉಂಬುವ ಊಟವೇ ಕಾಡೂವೊ ಘೂಟವೇ
ಪರಿಪರಿಯಿಂದಲಿ
ಮಾಡುವುದೆಲ್ಲ ನಿನ್ನ ಮಹಾಪೂಜೇಗೇಳ್ಯೆಯ್ಯ ಇರುವಂತೆ ಮಾತ್ರ ನಿನ್ನ
ಕಾಡಿಬೇಡುವೆನ್ಯೆ ಯಾಮಯಾಮಕೆ ನಿನ್ನ ಕರ್ಮಗಳೆಲ್ಲ ನೀನಾಗಿ
ಕೊಂಡು
ನವನಿಧಿಗಿತ್ತು ಸುಪ್ರೀತನಾಗಿ ನಿಗಮ ನಿಧಿ ಕೃಷ್ಣಾಂತರ್ಯಾಮಿ ಲಕುಮಿ
ಅರಸ
ತಂದೆವರದಗೋಪಾಲವಿಠಲನ ವಾರಿಜದಲ್ಲಿ ತೋರೋ ೫

ಜತೆ : ಆವಾಗ ಬಂದು ನೀ ಕಾವದಿರೇ ಸೇವಕನಾಗಲ್ಯಾಕೋ
ಭಾವಜಪಿತ ತಂದೆವರದಗೋಪಾಲವಿಠಲರೇಯನ ದೂತ

## ೨೫೮

## ಗೋಪಾಲದಾಸರು

## (ಸುಳಾದಿ)

ಕೃಪಣವತ್ಸಲನೆ ನಿನ್ನ ಚರಣ ಶರಣಾನೆಂದು ಕರುಣದಿ ಪಾಲಿಸು
ಮತ್ತಾ ಕಾಯ್ವರ ಕಾಣೆ ಕರುಣಾನಿಧಿಯೆಂದು ಮೊರೆಪೊಕ್ಕ ಮ್ಯಾಲಿನ್ನು
ಭಾಪುರೆ ಭಾಪುರೆ ನಿನ್ನ ಬಿರುದು ಸಾರುತಿದೆ ಲೋಕಾಲೋಕಾಧಿಪನೆ
ಬಾಲ ಚೇಲನ ಲಾಲಿಸು ಪರಮ ಪಾಮರನೆಂದು ಕರೆಸುವ ದಾಸನು
ರೋಗ ಸಾಗರದೊಳು ಮುಳುಗಿ ಈಸಲಾರದೆ ನಿನ್ನ ಸ್ಮರಿಸೆ
ವಾಸಿ ಮತ್ತೇನು ರಕ್ಕಸ ಜನರನ್ನು ಉದ್ಧರಿಸೊ
ಸಾಸಿರ ಮಾತುಗಳಿನ್ಯಾಕೆ ಸತಿಯೆಂದು ಸಾಕೋ ಬಿಡದೆ
ಸೋಮಪುರಿವಾಸ ವೇಣಿಯೆಂಬೊ ಕೋಪಿ ಶ್ರೀನಿವಾಸದಾಸರ ಭಾಸ
ಭಾಗಣ್ಣ ಭೂಪ ಮುಕ್ಕಣ್ಣ ಕೂಸಾ ಮೂರ್ಜಗ ಸೋಸ
ಸಾಕು ಸಾಕು ನಿನ್ನ ಸ್ಯಜಿಸೊ ಘೋಷ ದೋಷರಹಿತರೇ
ಭೂಮಕೇಶವಾದಿ ಚತುರ್ವಿಂಶತಿ ನಾಮ ವಾಸುದೇವ ವ್ಯಾಸದಿತ್ತ

ಕಪಿಲ ಹಿಯಾಸ್ಯ ಮಹಿವಾಸ ತಂದೆವರದಗೋಪಾಲವಿಠ್ಠಲರೇಯನ
ದಾಸ ೧

ಭಾಯೆಂದು ಭಜಿಸಲು ತ್ಯಜಿಸೋದು ಭವರೋಗ
ಗಾಯೆಂದು ಗುಣಿಸಾಲು ಗೆದಿಯುವ ಫಾಸಿ
ಣಯೆಂದು ನೆನೆಸಾಲು ನಾರಾಯಣ ಧ್ಯಾನ
ಸಿದ್ಧಿಸುವದೆಂದು ಇನಿತು ಈ ಪರಿ ವರವನಿತ್ತು
ಸುಳಿಸುಳಿಸುಳಿಯುತಾ ಬಂದಾ
ಪಾಶದಿ ಸಿಲ್ಕಿಸಿ ಕಾಸು ಕಾಸಿಗೆ ನೀಯೆನ್ನ ಮೋಸಮಾಡಿ
ಶಾಸಕನಂತೆ ಶಯನಾದಾಸೆ ಕೋರಿ ಸರಸಾವ
ಸರಸಾವ ಪಡಿಸಾದೆ ಪೀಡಿಸೋದು ನಿನಗೇನು ಲೇಸೋ
ಹೇಸಿ ರೋಗವ ಛೇದಿಸಿ ತೋಷ ನೀಗರಿಯೋ
ಶರಣಪಾಲ ರಾಜ ನಿನ್ನ ಪಲಾಯನ ಸರಿಯೇ
ಪೋಷಿಸಬೇಕೆಂದು ಪಾದಕ್ಕೆ ಸುತ್ತಿದೆ ಯನ್ನ
ಮನೋಭೀಷ್ಟವ ಸಲಿಸೋ ಪಾಲಸಾಗರ ಮಧ್ಯೆ
ಪಂಕಜ ಪಂಕಜ ಪಾಣಿಯಿಂದ ಆಲದೆಲೆ ಮೇಲೆ ಬಾಲರೂಪನಾಗಿ
ಲಾಲಿ ತೂಗಿಸಿಕೊಂಬೊ ಕಾಳಿರಮಣನೊಡಿಯ
ಮಧ್ಯರಾಯಳ ವರಹಾದ್ಯವತಾರ ಧರಿಸಿದ
ಹೇಯ ಕಶ್ಯಿಪು ಶತ್ರು ಕಾಶ್ಯಪಿಯಾಚಕ ಕ್ಷತ್ರಿಯರ್ವೈರಿ
ವನವನ ಸಂಚಾರಿ ಶಕಟಾದಿ ಭಂಜಕಾ ಯುವತೀರ ವ್ರತಗೇಡಿ
ವಸನಾದಿರಹಿತ ಶ್ರೀ ಶ್ರೀನಿವಾಸ ತಂದೆವರದಗೋಪಾಲವಿಠಲ ದ್ಯಾತಾ
ಪ್ರಖ್ಯಾತಾ ೨

ಆಳಿನ ಮೇಲೊಂದು ಕಾಳಗ ಮಾಡಲು ಬಾಳುವ
ಬಾಳುವ ತೆರಳೆಂದು ಬಾಳಿಸೋ ಗೆಳಿಯಾ
ಖೂಳರು ಬಂದು ಮರಳೀಸೆ ಗರಳಾದಿ ತರಳಾದ ತಾಳ್ವಿಕೆಯೆಂತೊ
ಪೇಳೋ
ಸುಳ್ಳೆಂದು ತಿಳಿದರೆ ಸುಳ್ಳಾರಿಗಿನ್ನುಂಟೆ ಮರ ಮೂಲಿಕಾ
ಕಾಲಕಾಲಕೆ ನೀನು ಹೃದಯಾಲಯದೊಳಗಿದ್ದು

ಸಕಲ ಕರ್ಮಗಳಾಚರಿಸಿ ಚರಿತೇಯ ತೋರುತಾ ಚರಮ ಕಾಲ ನೀನು
ಕೆರಳುವರೇ ನೀನಾಡಿಸಿದಾಟ ಪಾಡಿದಾ ಪಾಟ ಪೇಳಿ ಪೇಳುತ ತಿರುಗಲು
ಮಾನ ಮುಕ್ಕದೇನೋ ದೀನ ಜನರ ಪಾಲ ವಿಜಯದಾಸರ ಬಾಲ
ಫಾಲನಯನನ ಗೋಪಾಲೀಸಿ ಫಲಮಳೆಗರಿಯೋ
ಕೇಶವಾ ಅಚ್ಯುತ ವಿಶ್ವ ತೈಜಸ ಪ್ರಾಜ್ಞ ಘೋಟಕಾಸ್ಯ
ಮೃಗರೂಪಿ ನಗಧರ ಮಚ್ಛಾದ್ಯವತಾರಾರ್ಯ್ಯಾಮಿ
ವಾಯು ಕೂರ್ಮ ನಾಮಕವಾದಿರಾಜರಿಗೊಲಿದ ನಿಗಮ ವೇದ್ಯನುತ
ಕೃಷ್ಣಾಂತರ್ಯಾಮಿ ತಂದೆವರದಗೋಪಾಲವಿಠಲನ ನಿಲ್ಲಿಸೋ ಬಿಡದೆ
೩

ನಡದಾರಿ ನಡಿವೇನೋ ಡಾಲು ನೋಡುವ ಪಾಡಾಲು ಪಾಡುವೆ
ಕೇಳಾಲು ಕೇಳೂವೆ ವೋಡಾಲು ವೋಡುವೆ ಗ್ರಹಿಸಾಲು ಗ್ರಹಿಸೂವೆ
ಕುಣಿಯಾಲು ಕುಣಿಯೂವೆ ರೋಧಿಸೆ ರೋಧಿಸುವೆ ನಗೆಯಾಲು
ನಗೆವೆ
ಮಣಿಯಾಲು ಮಣಿಯೂವೆ ಹಣಿಯಾಲು ಹಣಿಯೂವೆ ದಣಿಯಾಲು
ದಣಿಯೂವೆ
ಬೀಳಾಲು ಬೀಳೂವೆ ಕೂಡಾಲು ಕೂಡೂವೆ ಬರಿಯಾಲು ಬರಿಯೂವೆ
ಪೇಳಾಲು ಪೇಳುವೆ ನಿರುತ ಈ ಪರಿ ಸರ್ವಕಾಲದಲಿ ಬಂದು ವದಗಿ
ಪಾಲಿಸುವ ಧೀರ ಗುರು ಗೋಪಾಲವರ್ಯನೆ ಈ ಪರಿ ಆಟವನಾಡಿಸಿ
ಸಲಹೋ ಬಿಡದೆ ನಾಗಮರ್ದನ ಕೃಷ್ಣ ರುಜುವಿನುತ
ತಂದೆವರದಗೋಪಾಲವಿಠಲನ ಬಂದು ತೋರೋ ೪

ಪರಿಸರಾನೊಬ್ಬನು ಹರಪರನೆಂದು ಪರಿಪರಿಯಲಿ ವದರುವ
ಜನರೊಳು ಉದಿಸಿ ಬಂದು ಪಾಶಕೆ ವಳಗಾಗಿ ಕ್ಲೇಶವ ಪಡೂತಿರೆ
ವಿಷವೆ ಸುಧಿಯೆಂದು ಕುಡಿಸುವೊ ದ್ವೇಷಕರನು ಘಾಸಿಪಡಿಸಿ
ಮೇಲೆ ನಿನ್ನ ಪಾಶದಿ ಪಾಶಿಸಿ ಹಸ್ತಿದಂತಗಳೆಂಬೊ ರುಜುವರದನಿಂದ
ಅಂಕುಶದಿಂದ ಶಂಖಚಕ್ರಧಾರಿ ಪಂಕದಿ ಕೂಡಿಸಿ
ಶಂಕೆಯಿಂದಲಿ ವಂಚಿಸಿಕೊಂಡನೋ ನಿನ್ನ ಕೆಂಡಗಣ್ಣಿನ

ಪಡದೀಹ ಪವಮಾನನನುಜನಾಗಿ ಕರವಿಡಿಂದುದಕೆ ಯೆನ್ನ ಗುಂಡೀಗಿ
ಶಿಲಿಕೀಸಿ ಭಂಡತನ ಮಾಡುವರೆ ಸುಮ್ಮನೆ ಬಿಡೆ ನಿನ್ನ ಗಂಡುಗಲಿ
ಪ್ರಚಂಡ
ಅನ್ಯ ದೈವರ ಮಿಂಡಾ ಭಜಿಸುವ ದನುಜರ ಗಂಡಾ ಅಂಶೂಲ
ನಿನ್ನಯ ಚರಣಕಮಲವನ್ನು ನೆರೆನಂಬಿದ ಜನರನ್ನು ದೂರನೋಡದೆ
ಕಾಯೋ
ಕರುಣೀ ಜಲಧಿಯೊಳು ಬಂದು ಜನಿಸೀ ಮೇರುಧರ ಧರಣೀವರ
ಪ್ರಹ್ಲಾದ ವರದ ಬಲಿಯ ಚಪ್ಪ ಕೊಡಲಿಧಾರಿ ಶಿಲೆಯ ಪಾಲ
ಬಾಲೇರಿಗೊಲಿದ ವ್ರತನಳಿದ ಹಯನೇರಿದ ಹಯಮುಖ ಮದ್ಗುರು
ರಾಜಾಂತರ್ಗತ ಹಯವದನ ತಂದೆವರದಗೋಪಾಲವಿಠಲರೇಯನ
ದೂತ ೫

ಜತೆ : ಅನುಕೂಲವಿದ್ದರೂ ಬಂದು ಕಾಯಾದಿರೇ ಶಂಭುಪುತ್ರನೆ
ತಂದೆವರದಗೋಪಾಲವಿಠ್ಠಲ ಪ್ರೀಯಾ

## ೨೫೯

ಲೇಸಾಗಿ ಭಜಿಸುವೆ ಗೋಪಾಲದಾಸರ ರಾಶಿ ದುರಿತಂಗಳಾ ಪ

ವಾಸವಾ ಪಿಡಿದ ವಜ್ರವೀಗಿರಿಯಂತೆ ನಿಶ್ಶೇಷದಿ ಭೇದಿಪರೊ
ಇವರು ಅ.ಪ.

ಮುರಹರ ನಾಮಕ ವರದ್ವಿಜೋತ್ತಮ ಸತಿ
ಗಿರಿವಾಸ ನಾಮಕಳಾ ಸುರುಚಿರೋದರವೆಂಬೊ
ಶರನಿಧಿಯಲ್ಲಿ ಚಂದಿರನಂತೆ ಉದಿಸಿಹರೋ ಇವರು ೧

ಸದಮಲಮನದಲ್ಲಿ ಪದುಮನಾಭನ ನಾಮ
ಪದೋಪದಿಯಲ್ಲಿ ಬಿಡದೇ ಪದರೂಪದಲ್ಲಿ
ಪೊಗಳುವೊ ಸುಜನರಿಗೆ ಮೋಹವನುಣಿಸುತಿಹರೊ ಇವರು ೨

ವಿಜಯದಾಸರೇ ತಮ್ಮ ನಿಜಗುರುಗಳೂ ಎಂದು
ಭಜಿಪರೋ ಭಕುತಿಯಲ್ಲಿ ದ್ವಿಜವರ್ಯ ಜನಕಿಷ್ಟ
ಸೃಜಿಸೋರು ಕಲ್ಪ ಭುಜದಂತೆ ನಿರುತದಲ್ಲಿ ಇಲ್ಲಿ ೩

ಕುಂಡಲೀ ಗಿರಿವಾಸ ಪಾಂಡುರಂಗನ ಕ್ಷೇತ್ರ
ತೊಂಡ ಪ್ರಹ್ಲಾದ ಪ್ರಿಯನ ಮಂಡಲ ಯತಿಗಳ ಬೆಳೆಪ
ಯಾತ್ರೆಗಳ ಕೈಕೊಂಡು ಸೇವಿಸುತಿಹರೊ ಇವರು ೪

ಭಕುತಿ ಪ್ರಾಚುರವಾಗೆ... ಹರಿನಾಮ
ಪ್ರಕಟಿಸಿ ಕವನದಿಂದಾ ನಿಖಿಳಾಭೀಷ್ಟವನೀವ
ಲಕುಮೀಪತಿಯೇ ಎಂದು ಭಕುತಗೆ ಬೋಧಿಪರೊ ಇವರು ೫

ಆವಾವ ಕ್ರಿಯೆಗಳಲ್ಲಾವಾವ ಕಾಲದಿ
ತಾವದಗಿನ್ನು ಹರಿಕಾವ ಸುಜೀವರ
ಈ ವಿಧವೆಂದು ತನ್ನವರಿಗುಪದೇಶಿಪಾ ೬

ಓಂ ಓಂ ಭಾವಿಂತೆಂದೊಲಿಸಲು ಭಕುತಿ ಭಕುತಿ ಪುಟ್ಟಿಸುವನೊ
ಶ್ರೀ ಅರಸನ ಪಾದದೀಗಾ ಎಂದು ಎಚ್ಚರಿಸೆ
ಗಂಗಾಜನಕ ಭವ ತೋಯದಿ ಕಡೆಗೆತ್ತುವಾ .೭

ಣಾ ಎಂದುಪಾಸನೆ ಮಾಡುವ ಸುಜನ ಜನರ
ಕಾಯಕ್ಲೇಶವ ಕಳೆದು ಮಾಯಾರಮಣನ ವಲಿಸುವಂಥ
ದಿವ್ಯ ಉಪಾಯವ ತೋರಿಪರೊ ಇವರು ೮

ಮಂದ ಮನುಜ ನಾನು ಒಂದೊಂದಿವರ
ಗುಣವೃಂದ ಪೊಗಳಲೊಶವೇ ತಂದೆ-
ವರದಗೋಪಾಲವಿಠ್ಠಲನ ಹೊಂದಿ ಸೇವಿಪ ಗುರುವೇ ೯

## ೨೬೦

ಸ್ಮರಿಸಿ ಸುಖಿಸೆಲೊ ಮಾನವಾ ಪ

ಸ್ವಾನುಭಾವದಿಂದ ಸುಖವಬಡಿಪ
ಗೋಪಾಲದಾಸ ರಾಜರಡಿಗಳನುದಿನಾ ಅ.ಪ.

ಅಪಾರ ಜನುಮದ ದಾಸ್ಯಹರಿಸಿ ಸುಖಸಾರ ಸುರಿಪರನುದಿನಾ ೧

ಸತ್ಯವಾದ ವಚನ ಸತ್ವಜೀವರಿಷ್ಟಗರೆವ ಚಿತ್ತದೊಳಗನುದಿನಾ ೨

ಸರ್ವ ವಿಧದಿ ತೋಷಬಡಿಪ ತಂದೆವರದಗೋಪಾಲವಿಠಲನೇ
ಸಾಕ್ಷಿಯಾಗಿಪ್ಪನನುದಿನಾ ೩

# ಊ. ಆತ್ಮನಿವೇದನೆ

## ೨೬೧

ಇಂದು ನಿನಗಿಷ್ಟ ವಂದಿಸಿ ಬಾಯ್ತೆರದು ಬೇಡಿದೆ ಪ

ಮುಂದೆ ನೀ ಮನ ಬಂದಂತ್ಯದ ಮಾಳ್ಪುದು
ಕಂದು ಕಂಠನ ಪದ ತೀವ್ರಗಮನ ಬಾಲಾ ಅ.ಪ.

ಆರು ಅರಿಯದೆ ಇದು ಒಂದು ಬಾರಿ ಸೇವೆಮಾಡಲು
ನಿನ್ನ ಘೋರ ದಾರಿಯಲಿಂದ ಪಾರುಗಾಣಿಸುವಾ ೧

ಹಿಂದೆ ಪೇಳಿದನು ಕಳುಹಿ ಪೂರ್ಣಾನಂದ ಪಡಿಸೊ
ಇಂದುಧರ ಪಿತನಾಣೆ ಸುಖ ಸಿಂಧುವಿನೊಳಗಿಟ್ಟು ಪೊರೆವಾ ೨

ಪುಸಿಯಲ್ಲ ಪುಶಿಯಲ್ಲ ಈಶನಾಣೆ ಮಧ್ವದಾಸನೆ ಕೇಳು
ತಂದೆವರದಗೋಪಾಲವಿಠಲನಾಣೆ ೩

## ೨೬೨

## (ಅಹಂಕಾರ ಖಂಡನ ಸುಳಾದಿ)

ಕಪಟನಾಟಕ ಸೂತ್ರಧರನೇ ಕೇಳು ಕುಟಿಲರೊಳಗೆ ನಾನು ಆಗರನಯ್ಯ
ನಿಷ್ಕುಟಿಲ ಜನರೊಳು ನೀನಿದ್ದು ದಾಸನೆಂದು ಕರಿಯೋದು ನಾ ಕೇಳಿ
ತನುಮನಧನ ಮಾನಿಗಳೆಲ್ಲ ನಾಚುತಲಿಹರಯ್ಯ
ಎಳ್ಳಿನಿತು ದಾಸತನದ ಭಾವವನ್ನಲ್ಲಿ ನಾ ಕಾಣೆ ನಿನ್ನಾಣೆ
ಶಿರಿ ಅರಸ ಧರಣಿ ದೇವಿಯ ರಮಣಿ ದುರ್ಗಿಯ ವಲ್ಲಭ
ಧರಣಿ ಸುರರೊಳು ನೆರೆದು ಮೆರೆಯಲು ಲಜ್ಜೆ ಬರುತಲಿದೆ
ಜ್ಞಾನಿಗಳರಸನೇ ಸುಜ್ಞಾನಿಗಳೊಳಗಿಷ್ಟು ಜ್ಞಾನಿಯೆಂದೆನಿಸುವಿ-
ಅಜ್ಞಾನಿಗಳಿಗೆಲ್ಲ ವಿಜ್ಞಾನ ತತ್ವದೊಡೆಯನ ಪ್ರೀಯ
ತಂದೆವರದಗೋಪಾಲವಿಠಲರೇಯಾ
ಜ್ಞಾನಿ ಎಂದೆನಿಸಿದಕ್ಕೆ ಜ್ಞಾನವಿತ್ತು ಪರಿಪಾಲಿಸಬೇಕಯ್ಯ ೧

ತಾರತಮ್ಯ ಪಂಚಭೇದ ವರ್ಗವ ಕಾಣದೆ ಸಾರಿಸಾರಿಗೆ
ಇನ್ನು ಹರಿಕೃಷ್ಣಾ ವಾಸುದೇವಾ ಅಚ್ಯುತಾನಂತನೆಂತೆಂದು
ಚೀರಿ ಚೀರುತಲೊದರುವೆ ಚೋರ ದಾಸನ ಮೇಲೆ
ವರಗಿ ಮುಗಿಲು ಹರಿದು ಮ್ಯಾಲೆ ಬಿದ್ದು
ಭಾರವನು ತಾಳದೆ ಮೊರೆಯ ಬಿದ್ದೆ
ನಿನ್ನ ಪಾದ ದ್ವುದ್ವದೊಳಗೆ ಬಂದು ತಿದ್ದಿ
ಯನ್ನ ಬುದ್ಧಿ ಮದ್ದುಹಾಕಿ ಯದ್ದು ನಿಲ್ಲುವಂತೆ ಮಾಡೊ
ಹದ್ದು ವಾಹನನಾದ ಮಧ್ವ ಮುನಿಗೆ ಒಲಿದ
ಮುದ್ದು ಮೊಗದನಯ್ಯ
ರಂಗ ಚೆಲ್ವ ಅರಸ ಗೊಲ್ಲ ತೆರಗಲ್ಲ ಪಿಡಿದ
ತಂದೆವರದಗೋಪಾಲವಿಠ್ಠಲ ಸುಧಿಯ ರಸವ ಸುರಿಸಿ
ಬಂದು ನಿಲ್ಲೊ ೨

ಕಾಕಜನರೊಳು ಕೋರ ತನದಿಂದನೇಕ ಬಗೆಯಲಿ ಕೂಡಿ
ಕುಹಕ ಚೇಷ್ಟೆ ಮಾಡುತ ಶೋಕ ರಹಿತರ ಶಾಪಕೊಳಗಾಗಿ
ಕೋಕನದ ರಸ ಸವಿಯದೇ ಏಕಮೇವಾದ್ವಿತೀಯ
ಈ ಶ್ರುತಿ ಪಾದ್ಯ ಶ್ರೀ ಶುಕಮುನಿ ಸೇವ್ಯ
ಸದ್ಗುಣ ತಂದೆವರದಗೋಪಾಲವಿಠಲ ಸಲಹೊ ೩

ಅಶದಿಂದಭಿಲಾಷೆ ಪರಿತೋಷವಾಗದೆ ಕ್ಲೇಷ ಪಡುವೆನೊ ವಾಸುದೇವ
ಅಭಿಲಾಷೆ ಪೂರ್ತಿ ಘಾಸಿ ಪಡಿಸಿದೆ ನಾಶಗೈಸೊ ನಾಗಶಯನನೆ
ನಾಕು ರೂಪದಿ ಗಾತ್ರ ನಾಮಕಗೋತ್ರ ವಂದಿತ
ಸೂತ್ರ ಜಾತ ಸುಸೇವ್ಯ ಸದ್ಗುಣ
ತಂದೆವರದಗೋಪಾಲವಿಠ್ಠಲ ಗಾತ್ರದೊಳು ಬಂದು ಸೂತ್ರ ತಿರುವೊ
ಸೂತ್ರಧಾರಿ ೪

ಇಷ್ಟ ಜನರಿಗೆ ದೃಷ್ಟಿಗೋಚರನಾಗಿ
ಕಷ್ಟ ಹರಿಸುತ ಪುಷ್ಟಿಗೈಸುವ
ಜಗಜಟ್ಟಿ ವಿಠ್ಠಲ ದಾಸರೆನಿಸುವ ವಿಜಯ ವಿಠ್ಠಲ ಪ್ರೀಯ
ನಷ್ಟಗೈಸು ವಿಶಿಷ್ಟ ಮನದ ದುಷ್ಟ ಭಾವನೆ
ಕುಷ್ಠರೋಗಕೆ ಉತ್ಕೃಷ್ಟಯೌಷಧ ಕೊಟ್ಟು
ಪೊಟ್ಟೆಯೊಳಗಿಟ್ಟು ಪೊಳಿಯೋ
ತಂದೆವರದಗೋಪಾಲವಿಠ್ಠಲನೇ ೫

ಜತೆ : ಸಾರಥಿ ನಿನ್ನಯ ಚರಣ ನಂಬಿದಕೆ
ಸಾರ ಶಾಸ್ತ್ರವನರಿ ಹೋ ತಂದೆವರದಗೋಪಾಲವಿಠ್ಠಲನೇ

## ೨೬೩

ಕಲುಷಗಳ ಪರಿಹರಿಸು ಕಲುಷಕಂಠಾ ಪ

ಸುಮ ಶರಗಳಿಂದಲಿ ಬೆಂದು ನೊಂದು
ತವ ದ್ವಂದ್ವಗಳಿಗಭಿವಂದಿಸುವೆನೊ ರಾಜ ಅ.ಪ.

ತಾಪಗಳಿಗೊಳಗಾಗಿ ಪರರ ತಾಪವನು ಕಾಣದೆ
ಆಲಾಪನೆಯ ಮಾಡುತಲಿ ಕೂಪದೊಳು ಪೋಪ
ನೋಡುವೆನಯ್ಯ ಜೀಯ್ಯಾ ೧

ಬರುವದೆಂತೆಂದು ಬಯಸಬಾರದ ವಿಷಯಗಳ ಬಯಸಿ
ಭವದೊಳಗೆ ಬವಣೆ ಬಡುವೆನು
ಪರಿಹರಿಸು ಭವಕೆ ಭೀಮಾ ೨

ಕಾಮನಯ್ಯನೆ ಕೇಳು ಕಾಮಗಳ ಪೂರೈಸು ಕಾಮಿನಿಯರಾ
ಕಂಡು ಮೋಹಿಸಿದ ಕಾರಣದಿ ಪೂರೈಸು ಮನಾಧಿಪ
ತಂದೆವರದಗೋಪಾಲವಿಠಲನ ದೂತಾ ೩

## ೨೬೪

ಕರುಣ ಬಾರದೇ ಗುರುವೇ ಕರುಣ ಬಾರದೇ ಪ

ಅಕಟ ನಿನ್ನ ಚರಣ ನಂಬಿದ ಶರಣನ ಮೇಲೆ ಅ.ಪ.

ಕಷ್ಟ ಸಹಿಸಲಾರೆ ಭವ ಕಷ್ಟದಿಂದ ಕಡಿಗೆ ಮಾಡಿ
ಕೃಷ್ಣ ಪದ್ಮವನ್ನು ತೋರುತುತ್ಕೃಷ್ಟ ಪದವಿ
ಪಾಲಿಸೊ ಗುರುವೇ ೧

ಸಾಲೆ ಸಾಲದು ಸಾಲಮಾಡಿ ಸಾಲದು ನಾಳಿಗೆಂಬೊ ಪಾಶ
ಸಾಲುಗೆಡದೆ ಬರಲುಪಾಯ ನಿನ್ನ ಶೀಲ ಮೂರುತಿ
ಸ್ಮರಣೆ ಒಂದೇ ೨

ಸಕಲ ಲೋಕಧರನೆ ಬಲೂ ಭಾರನಾದೆನೇ
ಅಖಿಳ ಸುರರ ಸಲಹುವ ಸೀಲ ತಂದೆವರದಗೋಪಾಲವಿಠ್ಠಲ
ಪ್ರೀಯಾ ೩

## ೨೬೫

ಕಾರಣವು ತಿಳಿಯದೊ ಕರುಣ ನಿಧಿಯೇ ಪ

ಬಹು ಪರಿಯಿಂದ ಕರಮುಗಿದು ಪ್ರಾರ್ಥಿಸಿದರೂ
ಈ ಪರಿ ಮೌನವಾಗಿಪ್ಪ ಅ.ಪ.

ಅನ್ಯರಿಗೆ ತಲೆವಾಗಿ ಬಾಯ್ತೆರೆದು ಬೇಡುವಂಥಾ ಸಮಯ
ಬಂದೊದಗಿರಲಾಗಿ ನೋಡುವುದುಚಿತವೇ ಅನಿಮಿತ್ತ ಬಂಧೊ
ಈ ವಿಧದ ದುಷ್ಕರ್ಮ ತಂದೊದಗಿಸುವುದಕೆ
ಅನ್ಯ ಜೀವರೇ ಕಾಯಾ ಹೇ ಜೀಯಾ ೧

ರೋಗ ಸಾಗರದೊಳಗೆ ಮುಳುಗಿ ತಾಪ ಬಡುವುದು ನೋಡಿ
ಸಹಿಸಲಾರದೇ ನಿನ್ನ ಸುಖ ಸಾರ ಚರಣಕ್ಕೆ ಮೊರೆ ಪೊಕ್ಕುದೊ
ಕಂಡು ನಿನ್ನ ಉದ್ದಂಡ ತೊಂಡನ ಡಿಂಗನೆಂತೆಂದು ಕಣ್ತೆರೆದು
ನೋಡದಿರೆ
ಹೆಂಡತಿಗೆ ಗತಿ ಗಂಡನಲ್ಲದೇ ಪರಮಿಂಡನೇ ಪಂಚ
ಪಾಂಡವ ಪ್ರೀಯಾ ಹೇ ಜೀಯಾ ೨

ಅಂಗನಿಯಳಿಗೆ ಬಂದು ಭಂಗ ಬಿಡಿಸುವ ರೋಗಂಗಳಿಗೆ
ಮಗ್ಗಂಗಳುಂ ಕೊಟ್ಟು ಅಂಗದೊಳು ಪೊಳಿಯೊ.
ರಂಗರಾಜನ ಪಾದ ಅದುಮದ ಭೃಂಗನೆನಿಸುವೊ
ಧವಳ ಗಂಗೆಯ ದಾಸಾ ತಂದೆವರದಗೋಪಾಲವಿಠಲನ ದಾಸಾ ೩

## ೨೬೬

ಕುಟಿಲವನು ಕಳಿಯೋ ನಿಟಿಲ ನಯನಾ ಪ

ದುರ್ವಿಷಯ ಲಂಪಟದಿ ಮುಳಿಗಿ ಘನ
ಸಂಕಟಕೆ ಒಳಗಾದೆನೊ ಪ್ರಭುವೇ ಅ.ಪ.

ಚಂಚಲವಗೊಂಬಂಥ ಮನದೊಳಗೆ ನೀ ನಿಂತು
ನಿಶ್ಚಿಂತನಾ ಮಾಡು ಜೀಯಾ
ಪಂಚಶಿರಪಿತನೆ ಪ್ರಪಂಚದೊಳು ವಂಚಿಸಿದರೊ ವಿರಿಂಚಿತನಯಾ
ಪಂಚಭೇದ ಜ್ಞಾನವನು ಪಂಚವಿಧ ತೋರೆಂದು
ಬಿನ್ನೈಪೆ ಮಂಚಪದಯೋಗ್ಯಾ ವೈರಾಗ್ಯ ೧

ಕಾಮಿನಿಯಳಾ ಇಟಕೊಂಡು ಅನ್ಯಳ
ಕಾಮಿಸುವುದುಚಿತವೇ ರಾಯಾ
ಕಾಮರೂಪದಿಂದೆನ್ನ ಕಡೆಗೆತ್ತಿ ಕಾಯದಿರೆ
ಕಾಮಹರನೆಂಬ ಬಿರುದ್ಯಾತಕೊ
ಕಾಮಪಿತನೇ ಕೇಳು ಕಾಲಕಾಲಕೆ ನಿನ್ನ
ಕಾಲಿಗೆರಗುವಂತೆ ಮಾಡಿ ೨

ಬಿಲ್ವಭಜಕನೆ ಕೇಳು ಮತ್ತೊಂದು ನಾನೊಲ್ಲೆ
ಶಪಥ ಪೂರ್ವಕ ಪೇಳ್ವೆ ಮಿಥ್ಯಮತವೊಲ್ಲೆನೊ
ಒಲ್ಲದ ಸುರನಿಗೆ ಚೆಲ್ವಿಯಾಗಿತ್ತು
ಕಂಗೆಡಿಸಿ ಉಳಿಸಿದೆ ಬಿಲ್ಲುಗಾರನೆ
ಮಗನ ಕಾಳಗದಿ ಕೆಡಹಿ ತಂದೆ-
ವರದಗೋಪಾಲವಿಠಲನ ನೋಡಿ ತೋರಿದೇ ೩

## ೨೬೭

ಕೃತ್ಯವನು ತಿಳಿಸಯ್ಯ ಕೃತ್ತಿವಾಸನ ಪ್ರೀಯಾ ಪ

ಭೃತ್ಯವತ್ಸಲ ಭಾಗ್ಯ ಸಂಪನ್ನ ಮೋಹನ್ನಾ ಅ.ಪ

ಹಾಸರಲಿ ನಿಂತು ಕ್ಲೇಶಪಡಿಸುವ ವಾಕ್ಯ ಅಕ್ಲೇಶಪಡಿಸುವಾ ೧

ಭಾವದಿಂದೊಮ್ಮೆ ಭಯನಿತ್ತಭಯ ಪಾಲಿಪ ಭಕ್ತ ಬಂಧೊ ೨

ಕಾಲಕಾಲಕೆ ಕಾಲೋಚಿತದ ಮರ್ಮ ಸೂಚಿಸೆನಗೆ ೩

ವಚನ ಸತ್ಯವ ಮಾಡು ವಾಚಸ್ಪತಿಯ ಸಖ
ಚಾಚುವ್ಯನೋಕರ ೪

ವಾಚಾಮಗೋಚರ ತಂದೆವರದಗೋಪಾಲವಿಠಲನ
ಚರಣ ಭಜಕ ಸುಖೇಚರೇಂದ್ರಾಧಿಪ ೫

## ೨೬೮

ಕೈಲಾಸ್ಪದ ಹುಲಿಯೇ ಕಲಿಕಲುಶವ ಕಳೆಯೊ
ಕಾಳಿಯಾಗಿಳಿಯೇ ಪ

ಕಾಲಕಾಲಕೆ ನಿನ್ನ ಕಾಲಿಗೆರಗುವೆ ಕರುಣಾಲಯ
ತೋರೋ ಕರುಣಾಳುಗಳರಸನೆ ಅ.ಪ.

ತುಳಸಿಗೆ ಕಳಸೀದರೆನ್ನ ತುಳಸಿಯ ತಾರದೆ ನಾ
ಹೊಲಸಿನೊಳಳುತಿರೆ ಘಳಿಗೆಯಾ ತಾಳದೆ ಘಳಿಸಿದೆ
ತುಳಸಿಯಾ ಕಳಸವ ಕಳ್ಳ ನಾ ಗೆಳೆಯನೆ
ಕಳವಳಿಗಳು ಕಳುಹಿಸಿ ಕಾಳ್ಗೈಸುವ
ಕಾಳಿರಮಣ ನಿನ್ನ ಧೂಳಿ ಧರಿಸುವಂತೆ ಖೂಳನಾ ಮಾಡದೆ ೧

ಚಲುವ ಚನ್ನಿಗ ನೀನಹುದೋ ಚಂಚಲ ನಯನಾ ಕರುಣಾ
ಚಲ ನೀನಹುದೊ ಚಾಲೂವರಿಯಲು ಎನಗೆ
ಕಾಲವು ತಿಳಿಯದು ಶೂಲಿ ಚಂಚಲ ಎನ್ನ ಸಂಚಿತಗಾಮಿ
ವಂಚಿಸದೆ ಕಾಯ್ವುದೊ ಇದೇ ಕೊಡುವುದೋ
ಕಂಬು ಕಂಧರಮಣಿ ಹಂಚುವುಗಾಣದೆ ಚಂಚಲೂ ನಯನದಿ
ಸುರವಂಚಕನಾಗಿ ಪ್ರಪಂಚದಿ ಶರಪಂಚನ ಚಿಂತಿಸಿ
ಸಂತೆಯಾನರುಹಿದ ೨

ಅಕಳಂಕ ಮಹಿಮನೆ ದೋಷದೂರ ನೀ ಗುಣವಂತನೇ
ಸಹಸ ಬಲವಂತನೆ ಕಾಂತಿಯ ತಂದನೆ

ಕಾಂತಿಯುಳ್ಳ ಕಂತಿಯು ಧರಿಸಿದ ದಿಗಂತ ನಿಷ್ಕಿಂಜನರ ಕಾಂತನೆ
ಭುಜಬಲ ಮಹಬಲವಂತನೆ ಕುರುಕಂತನೆ
ಅಂತು ಇಂತು ತಂತು ಬಿಡದೆ ನಿಜ ಕುಂತಿಯ ಮಗನನ ಕಂತೆಯು
ಪೂಜಿಪ
ಮಂತ್ರಿಯೆನಿಸಿ ಸುಖತಂತ್ರ ಪಠಿಸಿ ಶೃತಿಪಂಶವಿಂಶತಿ ದ್ವಿಪಿಂಚಕಲ್ಪವ
ಮಿಂಚಿನಂದದಿ ತಪವಗೈದು ಪಂಚಪದವಿಯ ಪೊಂದುಕೊಂಡು
ಪಂಚ ಬಾಣನ ಪಿತನು ಯನಿಸಿದ ಮಾಂಗಲ್ಯ ಲಕುಮಿಯ ರಮಣ
ಯೆನ ತಂದೆವರದಗೋಪಾಲವಿಠ್ಠಲನ ಆತಂಕವಿಲ್ಲದೇ
ಚಿಂತಿಸುವ ನಾರಾಯಣಾಚಾರ್ಯನೇ ೩

## ೨೬೯

ಚಲಿಸದಂದದಿ ಮಾಡು ಎನ್ನನು ಶೈಲೇಂದ್ರವರ್ಯಾ ಪ

ನಿನ್ನಾಣೆ ನಿನ್ನಾಣೆ ಸಹಿಸಲಾರದೆ ನಿನ್ನ ಶರಣು ಬಂದೆನೊ
ರಾಯಾ ಅ.ಪ.

ಕಾಲವನು ತಿಳಿಯದಲೆ ಕಾಲಿಗೆರುವೆನೆಂದರೂ
ಬಿಡದೆ ಕರಕರೆಯ ಬಿಡಿಸಿದಳು
ಅರಿತು ವಿಚಾರಿಸೋ ನಿನ್ನ ಮರಿಯಾದ ಬಳಿಕ
ಈ ಪರಿ ನಗುತಿಪ್ಪುದು ಥರವೇ ೧

ಸರಸಾದ ಬೇಟಿಯು ಕರಬಿಟ್ಟು ಪೋಗಲು
ನೋಟಗಾರರಿಗೆ ನೀಟವೇ
ಸೂತ್ರವಿಹುದು.....ಗ್ರಹದಲಿ ಸೂತ್ರ ಏನು
ಸರಿಯಾದ ಕಾಲದಲಿ ಹರಿಯಲು ಸರಿದೋರುವುದೇ ರಸಿಕರಿಗೆ ೨

ಯೇನಾದರಾಗಲಿ ಅಪರಾಧ ಶತಕೋಟಿವಿದ್ದರೂ ಸರಿ
ಶೀಘ್ರದಿಂ ಪಾಲಿಸಯ್ಯ ಸಾಲದಾ ಭಾರ ತಾಳೆನೊ

ಬೇಗ ಬರುವಂತೆ ಮಾಡಿ ಪಾಂಡುರಂಗ ಪ್ರಾಯ ಗುರುಕೃಷ್ಣ
ತಂದೆವರದಗೋಪಾಲವಿಠ್ಠಲನಾಣೆ ಪೊರೆಯದಿರೆ ೩

## ೨೭೦

ತಾಯಿ ಅಲ್ಲವೇ ನೀನು ಹೆತ್ತ ಪ

ತಾಯಿಯಾದ ಮೇಲೆ ಕತ್ತೆಮರಿಯಾದರೂ ಪೊರೆಯಬೇಕು
ಎನ್ನ ಅ.ಪ.

ಸಾರ್ಥಕಾಗಲಿಲ್ಲ ಜನುಮವು ವ್ಯರ್ಥವಾಯಿತಲ್ಲಾ
ಸಾಗುತಿದೆ ಆಯು ಸಹಿಸಲಾರೆ ಬಡಿಸೆ ಭವದ ನೋವು ೧

ಸಾರವೆಲ್ಲಿದೆ ಸಂಸಾರ ಶರಧಿಯೊಳಗೆ ಮುಣುಗಿದೆ
ಅಸಾರ ಸುಖವ ಸವಿದು ಘನ ಸಂಸಾರಿ ಎನಿಸಿ ಮೆರೆದೆ ೨

ನಿಷ್ಠೆಯಿಂದ ನಿನ್ನ ಭಜಿಸಿದೆ ಭ್ರಷ್ಟನಾದೆ ಇನ್ನು
ಶಿಷ್ಟರೊಡಯ ತಂದೆವರದಗೋಪಾಲವಿಠ್ಠಲನ
ಮುಟ್ಟಿ ಭಜಿಪ ಎನ್ನ ೩

## ೨೭೧

ದೂತನಾ ಮನೆಗೆ ಬಂದ ಕಾರಣ ಪೇಳೋ ದಾತಾ ಪ

ಪಾತಕವ ಪರಿಹರಿಸಿ ಪರಿಪಾಲಿಸುವುದಲ್ಲದೇ ಮತ್ತಾವ
ಕಾರಣ ಅ.ಪ.

ಸಂಸಾರಿಗೆ ಇನ್ನು ಘೋರ ದುರಿತಕೊಳಗಾಗಿರುವ
ಶರಣರಿಘರುಷ ವರ್ಷಗರೆಯುವುದಲ್ಲದೇ ೧

ತವ ಚರಣದಲಿ ಕುಳಿತು
ನೀರು ಕುಡುವೆನೆಂದರೆ ದಾರಿಗಾಣೆಯೋ ರಾಯಾ ೨

ಸುಮನಸರ ಪ್ರೀಯಶ್ವಾಸ ಜಾಪಕ
ಪ್ರಾಶ ವಿಷನನುಜ ತಂದೆವರದಗೋಪಾಲವಿಠಲನ ದಾಸಾ ೩

## ೨೭೨

ಭಕ್ತನಲ್ಲವೇ ನಾನು ಹರಿ ಪ

ಭಕ್ತನಾದ ಬಳಿಕ ವಿಷಯಸಕ್ತನಾಗೋದುಚಿತವೇ ಅ.ಪ.

ಶಕ್ತಿಹೀನನಾದ ಮನವು ಬಯಸುತಿಪ್ಪ ಬಯಕೆ ಪೂರೈಸು
ಗುರುವೇ ೧

ಕಾಮತಾಪದಿ ಮುಳುಗಿ ಪರ ಕಾಮಿನಿಯಳ ನೆನೆವೆ ಕೇಳೋ
ಬಿನ್ನಪ ಕಾಮಹರನೆ ೨

ರಾಮನಾಮ ಸುಖದ ಸವಿಯು ಮರೆತೆನೊ ಶಾಮಕಂಧರ
ತಂದೆವರದಗೋಪಾಲವಿಠ್ಠಲನಪ್ರೀಯಾ ೩

## ೨೭೩

ಭಜಿಪೇನೆ ನಿನ್ನ ಭಕುತಿಯಿತ್ತು ಪೊರೆ ಎಮ್ಮಾ ಪ

ಭಾರ ನಿನ್ನದು ಭರತರಾಯನ ಪ್ರೀತಿ ವಿಷಯಳೆ ಅ.ಪ.

ಬಂದ ಕಾರ್ಯವಾಗುವಂತೆ ಮಾಡೆ
ನಿನ್ನ ದ್ವಂದ್ವಕೆ ನಮಿಪೆ ಅನ್ಯರ ಬೇಡೇ
ಬನ್ನ ಬಡುತಿಹ ಧಮ್ಮ ಭಕುತನ
ನೋಡೆ ಸುಜ್ಞಾನವಿತ್ತು ಕರಪಿಡಿದು ಕಾಪಾಡೆ ೧

ತರಳನ ಮತಿಯನ್ನು ಸರಳಮಾಡಿ ಉರುಳಿಸು
ಸುಧೆಯಾಂಬುಧಿಯೊಳಗೆನ್ನ ಗರಳವಾಗಿದೆ ಮನವೆಲ್ಲಾ...
ಪಾಶಾದಿ ಸುತ್ತಿ ಇನ್ನು ಅರಳಿಸಿದೆ ಮೋಹಸತಿಯೊಡನೆ ಪಾದಾ ೨

ದಾಸಾನಿಗೆ ನಿನ್ನ ದಾಸನಾಗುವದೆಂಬೊ ಆಶಾಪುಟ್ಟಿದ್ದಕ್ಕೆ
ದಾಸನ ಮಾಡಿಕೊ ಉದಾಶಿಸದೆ
ಏಸು ಮಾತುಗಳಾಡಿದರೂ ಕಾಸು ಬಾಳದು
ಸಾಸಿರ ಮಾತಿಗೆ ಒಂದೇ ತಂದೆವರದಗೋಪಾಲವಿಠ್ಠಲನ
ತೋರೆ ೩

## ೨೭೪

ಸಾಕು ಸಾಕು ಈ ಜನಸಂಗ ಪ

ಅದರಿಂದ ಆಗೋದು ವಿಚಾರ ಭಂಗಾ ಅ.ಪ.

ನಾಲ್ಕಾರು ತತ್ವಮಾತಿಗೆ ಮರುಳ್ಯಾಗಬ್ಯಾಡ
ನಿನ್ನೊಳು ನೀನಾಗಿ ತಿಳಿದುಕೋ ಗಾಢಾ
ನಿನಗೆ ನಾನರುಹುವೆ ಅವರ ಮನೋವೃತ್ತಿ ಗೂಢಾ
ಅನಿಮಿತ್ತವಾಗಿ ಸರಸದಿ ಬಂದು ವಿರಸವ
ಮಾಡೋರು ಮೂಢಾ ೧

ಪಿರಿಯರು ಪೇಳಿದ ವಾಕ್ಯವನ್ನು ಗ್ರಹಿಸಿ
ತ್ಯಜಿಸೋದು ಸತ್ಕರ್ಮ ಬಾಹ್ಯ
ವಳಗೆ ನೋಡಲು ತುಂಬಿದೆ ವಿಷಯರಾಶಿ ಜೀಯಾ
ಆದ್ದರಿಂದ ನಿನಗೆ ಬೇಡಿಕೊಂಡು ಮುಗಿವೆ ನಾ ಕೈಯ್ಯಾ ೨

ಸಂತರ ಸಂಗ ಮಾಡಬೇಕು ಅದು
ಹ್ಯಾಗೆಂದರೆ ಕಂತೆಯೊಳಗೆ ಉಳ್ಳವರಾಗಬೇಕು
ಸಂತೆ ಜನರ ಭಂಗಾ ತಾಳಲು ಬೇಕು ನಮ್ಮ
ಸಂತತ ಸುರ ತಂದೆವರದಗೋಪಾಲವಿಠಲನ ದಯಬೇಕು ೩

## ೨೭೫

(ಶ್ರೀ ವಿಷ್ಣುತೀರ್ಥರು)

ಮೋದ ಬೀರುತ ತಾ ಮೋದಪುರಕೆ ಬಂದವನ್ಯಾರೆ
ಪೇಳಮ್ಮಯ್ಯಾ ಪ

ಶುಕಮುನಿ ಪೇಳಿದ ಶಾಸ್ತ್ರದ ಸಾರವ ಸುರಿಸಿದ
ಧೀರ ಶ್ರೀ ವಿಷ್ಣುತೀರ್ಥಾರ್ಯ ಕಾಣಮ್ಮಾ ಅ.ಪ.

ಶುದ್ಧವೃತ್ತಿಗಳಿಂದನುಭೋಗಿಪನ್ಯಾರೆ ಪೇಳಮ್ಮಯ್ಯಾ
ಶುದ್ಧ ಜೀವರತಾ ಬುದ್ಧಿ ಭೇದಿಪನ್ಯಾರೆ ಪೇಳಮ್ಮಯ್ಯಾ
ಶುದ್ಧ ಶೂನ್ಯರುಪದ್ರವ ಬಿಡಿಸುವನ್ಯಾರೆ ಪೇಳಮ್ಮಯ್ಯಾ
ಶುದ್ಧ ಶೃತಿ ಸ್ಮೃತಿ ಪದ್ಧತಿ ತಪ್ಪದೆ ಇರುವೋ ಯತೀಶ್ವರರೇ ೧

ಮರೆಪೊಕ್ಕವರನು ಮರೆಯದೆ ಪೊರೆವನದಾರೆ ಪೇಳಮ್ಮಯ್ಯಾ
ಮೋರೆಯ ತೋರೆಂದು ಮಾರನಯ್ಯ ಮುರಾರಿಗೆ ಪೇಳ್ವವನಾರೆ
ಪೇಳಮ್ಮಯ್ಯಾ
ಮೋರೆ ಮೋಹಿಸಿ ಮೂಲೋಕವ ಸುತ್ತಿದನ್ಯಾರೆ ಪೇಳಮ್ಮಯ್ಯಾ
ಮೋರೆ ಒಂದು ಮೂರು ಕಣ್ಣುಳ್ಳ ಬೊಮ್ಮನ ಪ್ರೀತಿಯ ಮಗನಮ್ಮ ೨

ಬಂದು ಸೇವಿಸೆ ಘನ ಬಂಧನ ಬಿಡಿಸುವನ್ಯಾರೆ ಪೇಳಮ್ಮಯ್ಯಾ
ಹಿಂದು ಮುಂದು ತನ್ನ ನಂಬಿದವರ ಮನಮಂದಿರ ದಿಪ್ಪುವನ್ಯಾರೆ
ಪೇಳಮ್ಮಯ್ಯಾ
ಇಂದುಧರ ಖಳವೃಂದ ಮೋಹನ ಗುರು ನಂದಿವಾಹನನೇ
ಪೇಳಮ್ಮಯ್ಯಾ
ಇಂದಿರೇಶ ತಂದೆವರದಗೋಪಾಲವಿಠಲನ ಸೇವಿಪ ನೀಲಕಂಠ
ಕಾಣಮ್ಮಾ ೩

## ೨೭೬

ಕರುಣಿಸೋ ಶಾಸ್ತ್ರಾರ್ಥ ಮದ್ಗುರು ಶ್ರೀ ವಿಷ್ಣುತೀರ್ಥಾ ಪ

ಭವರೋಗ ಭೇಷಜನೆ ಬಹುಬಾಧೆ ಬಡುವೆನೊ
ಭಾರತೀಶನ ಮುಖ್ಯ ಪ್ರೀತಿಪಾತ್ರಾ ೧

ಶ್ರೀನಾಥ ನಿನ್ನಂಥ ದಾತರನು ನಾಕಾಣೆ ಅವನಿಯೊಳಗೆಲ್ಲ ಅರಸಿ
ನೋಡಲು ೨

ಪರಮ ಭಾಗವತರಿಗೆ ಮುಖ್ಯ ಹಿತಕರ್ತ ನೀನೆ ಧ್ವರಿಯೇ
ಧರಿಯ ರಮಣ ತಂದೆವರದಗೋಪಾಲವಿಠಲನ ಮರಿಯೇ ೩

## ೨೭೭

ಕೃಷ್ಣಾರ್ಯರು

ಮನವೇ ಲಾಲಿಸಿ ಕೇಳೊ ಬಿನ್ನೈಸುವೆನೊ ನಿನಗೆ
ಚೆನ್ನಾಗಿ ವಡೆಯಾನಾ ಪಾದದಲ್ಲಿ ಭಕುತಿಯನ್ನೆ ಮಾಡಿ
ಮಮತೆ ವಿಷಯಾದಿ ಅಹಂಕಾರ ಬುದ್ಧಿಯನ್ನೇ
ಬೀಸಾಟಿ ದೃಢವಾಗಿ ಧೈರ್ಯದಿಂದ ಇದೇ ಸಾಧನವೆಂದು
ಗುಪಿತಾದಲ್ಲಿ ಸಂಚರಿಸೆ
ಪಾಣಿಯಾ ಪಿಡಿದುತಾ ವಾಣಿ ಅರಸ ನಿರ್ಮಾಣವ ತೋರಿಸುವ
ಪ್ರಾಣದೇವರು ಪ್ರಾಣವಪ್ಪಿಸಿ ಸಾಕುವಬಿಡದೆ ಪಂಚಪ್ರಾಣಾತ್ಮಕನಾದ
ತಂದೆವರದಗೋಪಾಲವಿಠಲರೇಯಾನ ಭಜಿಸು ಬಿಡದೆ ೧

ಆವ ಜನುಮದ ಪುಣ್ಯ ಫಲಿಸೀತು ಇಂದು ನಿನಗೆ
ಕಾವುತನಾಗಿದ್ದ ಕೃಷ್ಣಾರ್ಯರ ಕಂಡೆ
ಈ ಮುನಿಯು ನಿಜವಾಗಿ ದೇವಾಂಶರಾರು ಎಂಬೊ
ಜ್ಞಾನ ಪುಟ್ಟಿದುದಕೆ ಸಾಧಿಸಿಕೋ ನಿನಗೆ ಇದೇ ಘನ್ನವಾದ
ಸಾಧನವೆಂದು ತಿಳಿದು

ನಿನ್ನಿಂದ ನೀನೇ ಓಗ್ಗಿ ಕುಗ್ಗಾದೀರು ಮಗ್ಗುಲೊಳಗಿದ್ದ
ಮಧ್ವದ್ವೇಷಿ ಬಂದು ಮದ್ದು ಹಾಕಿ ಮಣಿಸೂವ
ಮಧ್ವರಾಯರ ಪಾದಪದ್ಮದಲ್ಲಿ ಬುದ್ಧಿಯನಿಟ್ಟರೆ ಬಾಧೆಯ ತಪ್ಪಿಸಿ
ಉದ್ಧರಿಸುವ ಮುದ್ದು ಮುಖದ ತಂದೆವರದಗೋಪಾಲ–
ವಿಠಲರೇಯಾನವಲಿಸು ಬಿಡದೆ ೨

ಅನಾದಿ ಕಾಲದಿಂದ ನಿಜ ಗುರುರಾಯನು
ನಿನ್ನೊಳಿದ್ದು ಜನಿಸಿ ಬಂದ ಸಾಧನ ಬಿಟ್ಟು
ಸುಖದುಃಖ ಜಲಮಯ ಸಂಸಾರದೊಳಗೆ ಬಿದ್ದು ಬಾಯ್ಬಿಡುವಿ ಕಂಡ್ಯಾ
ಆ ಗುರುರಾಯರ ಮೂರುತಿ ನಿನ್ನೊಳು ನೋಡುತ್ತ ಪಾಡುತ್ತ
ಸುಖಿಯಾಗಿ ಸಕಲ ಕರ್ಮಗಳಾಚರಿಸಿ
ತದ್ವಾರ ನವನಿಧಿ ರಾಜನ ಚರಣಕ್ಕೆ ಆರೋಪಿಸೆ
ಕೈಗೊಂಡು ಪೊಸಹೂವ ಸುಂದರ ಮೂರುತಿ
ತಂದೆವರದಗೋಪಾಲವಿಠ್ಠಲರೇಯಾನ ನಿಲ್ಲಿಸೊ ಬಿಡದೇ ೩

ಅವರ ಬಳಿಯಲ್ಲಿ ಪೋಗಿ ನೀನೂ ನಿನ್ನದು ಎನ್ನದಿರು ಕಂಡ್ಯಾ
ಮುನ್ನ ನಿನಗೆ ಘನ್ನವಾದ ವೈರಾಗ್ಯ ಪುಟ್ಟುವಾದೂ
ಇನ್ನು ನೀನು ಮನದಾಶೆ ಎಂಬ ಪಿಶಾಚೀಗೆ ಒಳಗಾಗಿ ಏನಾಹೋದೋ
ನಿನ್ನ ಘಾಸಿಯನರಿತು ಕ್ಲೇಶಾಪಾಶಾಗಳಿದ್ಯಾಡಿಪಶುಪತಿಪಿತನ ಪಡೆದ
ತಂದೆವರದಗೋಪಾಲವಿಠಲರೇಯಾನ ವಲಿಸೋ ಬಿಡದೆ ೪

ಸದಾಕಾಲದಲ್ಲಿ ಇವರ ಸ್ಮರಣೆ ಮಾಡಿ
ಧ್ಯಾನಕೆ ತಂದು ಯೋಗಾದಿ ನೋಡುವಾದೆ ಮಹಾ ನಿಜವಾದ ಭಕುತಿ
ಇವರ ಪಾದಸ್ಮರಣೆ ಮಾಡಾದ ಮನುಜರಿಗೆ
ಶ್ರೀಪದ್ಮ ರಮಣಾನು ಸೃಷ್ಟಿಸೂವ ಆ ಮನುಜಗೋಸುಗ ನರಕ
ನರಕಾದೊಳಗಿಟ್ಟು ಕುಟ್ಟುವ ಕ್ಷಣ ಬಿಡದೆ ಎಷ್ಟು ಮಾಡಿದರೇನು
ಉತ್ತುಮೋತ್ತಮರೆಲ್ಲ ಸೋತ್ತುಮರಾಯರ ದ್ರೋಹಮಾಡಿ
ತುತ್ತುತುತ್ತೀಗೆ ಹಾಕಿಸಿಕೊಂಡು ಕುತ್ತೀಗೆ ಕಟ್ಟಿ ನಿತ್ಯಾದಲ್ಲಿ

ಸ್ಮರಣೆಯ ಮಾಡಿದರೆ ನೃತ್ಯವಾಗೈಸುವ ಭಕ್ತಾವತ್ಸಲ
ತಂದೆವರದಗೋಪಾಲವಿಠಲರೇಯಾನ ನಿಲ್ಲಿಸೋ ಬಿಡದೆ ೫

ಜತೆ : ನವವಿಧಭಕುತಿಯನ್ನೇ ಅರಿತು ಗುರುಪೂಜೆ ಮಾಡಲು
ತದ್ವಾರಾ ವಲಿದಾ ತಂದೆವರದಗೋಪಾಲವಿಠ್ಠಲಾ ೬

## ೨೭೮

ಮನವೆ ಲಾಲಿಸಿ ಕೇಳೊ ಬಿನ್ನೈಸುವೆನೊ ನಿನಗೆ ಕನಸಿನ ಫಲವನ್ನು
ಕನಸಿನೊಳಗೆ ನಿನ್ನ ನೈಜಧೊರೀ ಬಂದು ಸರಿಯಾಗಿ ತೋರಿಸಿ
ಸುಖವನ್ನು
ಬಡಿಸಿ ಸುಸ್ಥಿರವಾದ ಧೈರ್ಯವಿತ್ತು ಅಗಣಿತ ಮಹಿಮನ ಅನಂತ
ಬಗೆಯಿಂದ
ಪಾಡಿ ಪೊಗಳಾಡುವ್ಹೋ ಜಯ ಜಯ ವಿಜಯಾ ಎಂದು
ಅವನಿಯೊಳಗೆ ಪೆಸರಪೆತ್ತರಾಯನ ಚಾರು ಚರಣವ ತೋರಿದಾ
ಶಿರಿ ಅರಸನ ತಂದೆವರದಗೋಪಾಲವಿಠ್ಠಲನ ದಯದಿಂದಾ ೧

ಇಂದಿನ ದಿನ ಪರಿಯಂತ ಬಲು ಬನ್ನ ಬಡುತಲಿದ್ದೆ
ಹೊನ್ನ ಕಾಣದೆ ಹೆಣ್ಣುನ್ನಿಯಂದದಿ ದೀನ ಜನರ ಕೂಡಿ
ಹಾನಿಯಾಗಿ ಘನಕಾನನ ಪೋಗುವ ನರ... ವಾಗುತಲಿರೆ
ಪೊರಟು ಬಂದು ಕನಸಿನೊಳಗೆ ಸುಖಗರದ
ತಂದೆವರದಗೋಪಾಲವಿಠ್ಠಲನ ಸುರ ಭಕ್ತರ ಮಣಿ
ಚಿಂತಾಮಣಿಯೇ ೨

ಇಂದಿನ ದಿನದಾರಭ್ಯ ಸರಿದು ಪೋದುವು ಕುಂದುಗಳೆಲ್ಲಾ
ಸುಖ ಸಿಂಧುವಿನೊಳಗೆ ಬಂದು ನಿಂದೆನಯ್ಯ
ಖಳವೃಂದ ರಿಪುಗಳು ಬಂದು ಹೋದವು
ಕಂಡು ಕಂಠನುತ ಗುರು ಸುರೇಂದ್ರನ ದಯದಿಂದಾ
ಅರಿ ಆರರ್ಥ ತಾಪಗಳೆಂಬೊ ವೈರಿಗಳನು ಗೆದ್ದು

ಭೂ ಪದ್ಮಿಯರಮಣಾ ತಂದೆವರದಗೋಪಾಲವಿಠ್ಠಲನ
ದಯದಿಂದಾ ౩

ಶರೀರದೊಳಗುಳ್ಳ ಸುರನದೀ ಮೊದಲಾದ ಸರ್ವ ತೀರ್ಥಸ್ನಾನ
ಮಾಡುವೊ
ಫಲ ಬಂದುವಪ್ಪುದೋದಯ್ಯ ಕಾಲಕಾಲದಿ ಎದ್ದು ಮಾಡುವೊ
ಜಪತಪಾನುಷ್ಠಾನಾ
ಮಾಡಿದಾ ಫಲ ಮತ್ತು ಜೀವನ್ಮುಕ್ತ ಸ್ಥಿತಿ ಬಂದೊದಗಿತು
ಯನ್ನ ಕುಲಕೋಟಿ ಪಾವನ್ನವಾದೀತು ಸರ್ವದೋಷದಿಂದ ಮುಕ್ತನಾದೆ
ಸದ್ಗುರುವರನ ಕೃಪೆಯನ್ನು ಪಡೆದ ಮ್ಯಾಲೆ ಇನ್ನುಂಟೆ ಭವ ತಾಪತ್ರಯ
ತಾಪಹರ ತಂದೆವರದಗೋಪಾಲವಿಠಲನು ಬಂದು ತೋರುವಾ ೪

ದಯದೃಷ್ಟಿಯಿಂದಲಿ ನೋಡಲು ಅರಿಷ್ಟ ಪರಿಹಾರ
ಅಷ್ಟ ಸಂಪತ್ತು ಮತ್ತಿಷ್ಟು ಬಂದು ವದಗೋದಯ್ಯಾ
ಅಷ್ಟ ಮಾಸದಿ ಉತ್ಕೃಷ್ಟ ವಾರದಿ ಅಷ್ಟಮೀಯೋಗ
ಶುದ್ಧ ಶುಕ್ರಾರ ವಾರದಿ ಸಿದ್ಧ ಶ್ರೀ ಪದ್ಮನಾಭನ ದಾಸನ
ಮದ್ಗುರುರಾಜನ ಪಾದಕಮಲವನ್ನು
ಕನಸಿನಲಿ ನೋಡಿ ಧನ್ಯನಾದೆ ಲಕುಮಿರಮಣ
ತಂದೆವರದಗೋಪಾಲವಿಠಲನ ಪದಪೊಂದಿದೆ ೫

ಜತೆ : ಮುಕ್ತನಾದೆನೊ ನಾನು ಜೀವನ್ಮುಕ್ತರ ಕಂಡು
ತಂದೆವರದಗೋಪಾಲವಿಠಲನ ದಯದಿಂದಾ ೬

# ೮. ಗುರುತಂದೆ ವರದಗೋಪಾಲವಿಠಲ

## ೨೭೯

ಸಾರ್ಥಕ ಉದ್ದದಕೆ ಸಿರಿ ಪಾರ್ಥಸಖಿನಾ ಗುಣ
ಕೀರ್ತನೆ ಮಾಡಲು ಪ

ಯಂಟೆಂಟೆರಡುನಾಲ್ಕು ಸಾವಿರ ನುಡಿಯಲಿ
ಯಂಟೆಂಟೆರಡು ರೂಪದಲಿ
ಯಂಟೆಂಟೆರಡು ಮೂರೈದು ವ್ಯಂಜನದಿ
ಯಂಟೆಂಟು ಮತ್ತೆಂಟು ಸ್ವರವ ತಿಳಿ ೧

ಯಂಟೆಂಟೆರಡು ಕೇಸರದಳ
ಆರೆಂಟು ಕಮಲ ಕರ್ಣಿಕೆಯಲ್ಲಿ
ಯಂಟೆಂಟೆರಡರ ನಾಲ್ಕು ಸ್ತಂಭರಥ
ಮಂಟಪದೊಳಗಿನ ವೆಂಕಟನ ನೋಡು ೨

ಯಂಟೆಂಟು ಕರಗಳಲಿ ಯಂಟಾಯುಧ ಪಿಡಿದು
ಯಂಟು ದಿಕ್ಕಿನಲಿ ತಿರುಗುತಲಿ
ಯಂಟು ವಿಧದಿ ಪ್ರೇರಣೆ ಮಾಡುವ ನಮ್ಮಾ
ನೆಂಟ ತಂದೆಗುರುಗೋಪಾಲವಿಠಲನು ೩

## ೨೮೦

ದಯ ಮಾಡು ದಯಾನಿಧೇ ಹನುಮ ನಿಲಯ ವಾತಾತ್ಮ ವಿಠಲ
ಗುರುತಂದೆವರದಗೋಪಾಲವಿಠಲನಲ್ಲಿ ಅತಿ ಶೀಘ್ರ
ಕರಿ ಬಲಿ ಧ್ರುವ ಪ್ರಹ್ಲಾದನಲ್ಲಿ ಬಂದಂತೆ ಎನ್ನಲ್ಲಿ ಪ

ನಿನ್ನಾಗಮನಕೆ ಹೃದಯ ಮನ ಬುದ್ಧಿ ಅರಳುವುದು ಸರ್ವದಾ
ನಿನ್ನಾಗಮನಕೆ ಸರ್ವ ಮಾನಿಗಳೆಲ್ಲ ಕಾದು ನಿಂದಿಹರು
ನಿನ್ನಾಗಮನಕೆ ಸರ್ವ ಕಾಲಾಕರ್ಮ ಅನುಕೂಲವಾಗಿಹವು
ನಿನ್ನಾಗಮನಕೆನೇನೆ ಸರ್ವತ್ರ ಅನುಕೂಲ ೧

ಯಾಕೆ ಯೋಚಿಪೆ ನೀನು ಬಲ್ಲ ಮುನಿ ಹೃದ್ದೈವ
ಸೊಲ್ಲು ಲಾಲಿಸಬೇಕು ಶೀಲರುಕ್ತಿ
ಬಲ್ಲಿದ ಮಹದೇವನೊಡೆಯ ಶುಕತಾತ
ಹಲ್ಲಲ್ಲು ಕಿರಿದು ಕಾದು ನಿಂದಿಹರೊ ೨

ಕರಿಗಿರಿ ಮುದಮಯ ಗುರುತಂದೆವರದಗೋಪಾಲವಿಠಲ
ಹೆದ್ದೈವ ಪಾಂಡುರಂಗಾ ವೆಂಕಟ
ತಡವ್ಯಾಕೆ ಬರಲು ಯೋಚಿಪುದು ಏಕೆ
ಬಾರಯ್ಯ ಭಕ್ತ ಬಂಧು ನಿನ್ನವರೆ ನಿಜ ಬಂಧೊ ೩

## ೨೮೧

(ಆರೋಹಣ ಕ್ರಮದಲ್ಲಿ ದಾಸ-ಗುರು-ದೇವತಾನಮನ)

ಅಕ್ಕ ನೋಡೆ ನಾನಾ ನಿನ್ನ ದಯದಿಂದ ಗುರು ರಂಗವಲಿದದಾಸರ
ಕನುಷಿನೊಳಗುಳ್ಳ ರಕ್ಕಸರಿಗೆಲ್ಲ ಕಕ್ಕಸವಾಗುತಿದೆ ದಕ್ಕಲಾರದು ಇನ್ನು
ರೊಕ್ಕ ರೊಕ್ಕಕ್ಕೆ ಸಿಕ್ಕಿ ಬಲುಪರಿಯಿಂದ ಸೊಕ್ಕಿ ಧಕ್ಕೆ ತಿನ್ನುತ ಇದ್ದು
ಶಕ್ತುತಿಯಿಲ್ಲದೆ ಯನಗೆ ಪುಕ್ಕಟೆ ಸಿಕ್ಕಿತುಯೆನ್ನ ಕಕ್ಕನು ಇವರಕ್ಕ
ಮುಕ್ಕಿ ಮಹ ಪಕ್ಕಿವಾಹನ ತಂದೆವರದ
ಗೋಪಾಲವಿಠಲನ ತೋರುವಾ ೧

ಮಂಗಳ ಮಹಿಮವರ ತುಂಗ ತೀರದಿ ನಿಂದ ತುಂಗಮಹಿಮ ಗುರು
ರಾಘವೇಂದ್ರನ ಅನುಜನೆ ಇವನು ವಂದನೆ ಇಲ್ಲದೆ ವಿಪ್ರವೃಂದಗಳಿಗೆ
ಬಹು ಕುಂದು ಮಾಡುವೊ ಮನದಿಂದ ಮರೆವುತಿರೆ ಅಂದು ವಂದು
ವತ್ಸರ ತಿರುವೇಂಗಳೇಶನ ಯಾತ್ರೆಗೆ ಬಂದಾನೆಂದು ವರ ವೀರ
ವಿಜಯಾಖ್ಯ
ರಾಯನು ಬಂದಿರೆ ಅಂದು ತಂಬೂರಿ ಮೀಟುತ ಇಂದಿರೆ ರಮಣನ
ತುತಿಸುತಿರೆ ಮಹಾ ಮಂದಭಾವದಿ ದಾಸರ ನಿಂದಿಸೆ
ಅವರು ವಂದನೆಯಲ್ಲದೆ ಛಂದಾಗಿ ಕುಳಿತಿರೆ
ಕುಂದುಬಂದು ಕೊರತೆ ಆಯಿತು ಕ್ಷೀಣವೃದ್ಧಿಗೆ ಬಂದು
ಕ್ಷಯರೋಗ ಪ್ರಾಪುತವಾಗಲು ಬಂದು ಮತ್ತೆ ದಾಸರ ದ್ವಂದ್ವಕೆ ಬಾಗೆ

ನಿನ್ನ ಉದ್ಧರಿಪಾ ಕರ್ತು ನಾನಲ್ಲ ಚಂದ್ರ ಪುರಕೆ ಪೋಗು
ಭಾಗಣ್ಣನೆಂಬುವನುಂಟು ಶಿರಿ ಅರಸ ವರದಗೋಪಾಲವಿಠಲನ
ದಯದಿಂದಾ ಬಂದು ಸೇರಿದರು ೨

ಕಾಲವ ಮೀರುತ ವಿಪ್ರರ ಪಾಲಿಪ ಗೋಪಾಲದಾಸರು ಶೀಲದಿ
ಕರದು ಬಾಲಗೆ ಬೋಧಿಸಿ ಎಲ್ಲರ ಭೇದಿಸಿ ಸುರರೆಲ್ಲರ ಮೋದಿಸಿ
ತನು ಮೆಲ್ಲನೆ ಪೋಷಿಸಿ ಕಲಶದಿ ಸುಧಿಯಿತ್ತು ಅಪರೋಕ್ಷ ಪಾಲಿಸಿ
ಮಂತ್ರಗಳುಪದೇಶಿಸಿ ಚರಣಂಗಳ ಲಯ ಮಾಡಿಸಿ ನಿರುತದಿ
ಪಾಲಸಾಗರಶಾಯಿ ತಂದೆವರದಗೋಪಾಲವಿಠಲನ ನಿಲ್ಲಿಸಿ ಕೊಟ್ಟು
ಬಿಡದೆ ೩

ತರುವಾಯ ತಾನು ಮಾನವಿ ಪುರದಲ್ಲಿ ವಾಸವ ಮಾಡುತ
ದಾಸರ ಪೋಷಿಸಬೇಕೆನುತ ಆಶೆಯುಕ್ತ ದೋಷರಹಿತ
ಭಾವಿ ವಾಯುಪದಸ್ಥ ಸ್ವಾದಿರಾಜರ ಆಜ್ಞಾವ ಧರಿಸಿ ಶೇರಿ
ಅರಸನ ಮಹಿಮೆಯ ಶೋಧಿಸಿ ಭಾಗವತಾದಿ ಶಾಸ್ತ್ರ ಅರ್ಥಸಮ್ಮತ
ಕವನದಿ ರಚಿಸಿ ಹರಿಕಥಾಮೃತಾಖ್ಯ ಗುಣಸಾಗರ ಸಾರವೆಂದು ನಾಮವೆ
ನಿರ್ಮಿಸಿ
ಕುಮತವ ಭೇದಿಸಿ ಹಾನಿ ವೃದ್ಧಿಯ ಭೇದಿಸಿ ನೀತಿ ಹಿತನ ದ್ವಾರ
ಜಗನ್ನಾಥವಿಠಲನೆಂಬೊ ಪೆಸರು ಪಡೆದು ತೀರ್ಥಕ್ಷೇತ್ರಾದಿಯಾಟಿಸಿ
ಗಾತ್ರವ ಘೋಟಿಸಿ
ಸೂತ್ರವ ಮೀಟುತ ಪಾತ್ರರ ಸಂಗಡ ಚಿತ್ರವೇಷವ ಧರಿಸಿ
ವರ್ತನೆಗ್ಯಯ್ಯುತ
ಸೂತ್ರನಾಮಕ ಕೃಷ್ಣನಂತರ್ಯಾಮಿ ಸೂತ್ರವಂದಿತ
ತಂದೆವರದಗೋಪಾಲವಿಠಲನ ಭಜಿಸಿ ಮಹಪದವೈದ ೪

ಆನಂದ ಆನಂದ ಮಹಾಸಾಗರದೊಳಗೆ ಮುಳುಗಿ ಶಿಂಧುಶಯನ
ಅರವಿಂದನಯನನ ಪೊಂದಿ ಮಹ ಪೊಂಗೊಳಲನೂದುತ
ಜಗಂಗಳ ಪೋಗುತ ಗಂಗಾಜನಕ ಹರಿ ಗೋವಿಂದನಾಶ್ರಯಿಸಿ
ದ್ವಂದ್ವಾವ ಭಜಿಸುತ ಮಂಗಳ ಮೂರುತಿ ಸ್ವಪನದಿ ಬಂದು
ನಂದಾದಿ ಕವನ ಪೇಳಿ ಪವಿತ್ರನ ಮಾಡಿದಿ ಭಾವಿ ಭಾರತಿ ವರನ
ಮಹಿಮೆಗೆಣೆಯುಂಟೆ ಹನುಮ ಭೀಮ ಮಧ್ವಾತ್ಮಕ ರೂಪಧಾರಿ

ಗುರುರಾಜಾಂತರ್ಗತ ತಂದೆವರದಗೋಪಾಲವಿಠಲನು
ಬಂದು ವದಗಿದ ವಾಸನಾಮಯದಿ ೫

ಜತೆ : ಪಾತಕ ಪೋಯಿತು ಪೂತಾತ್ಮಕನ ಸೇವಿಪ
ಜಗನ್ನಾಥರಾಯನ ಕಂಡೇ ಹರಿರೂಪಧಾರಿ ಗುರು
ತಂದೆವರದಗೋಪಾಲವಿಠಲನ ದಯದಿಂದಾ ೬

## ೨೮೨

### ರುದ್ರದೇವರು

ಕರುಣ ಬಾರದೇ ನಿನಗೆ ಅಕಟಕಟ
ಪಾರ್ವತೀ ಧೊರೆಯೇ ಕಾಳಿಯ ಮರಿಯೇ ಪ

ತರುಳನಾ ತರುಳಿಯ ಭವದೊಳಗೆ ಬಲು ದಿವಸ
ಬಹು ವ್ಯಾಧಿಯಲಿ ನೊಂದು ಬಾಯ್ತೆರದು ಮೊರೆಯಿಡುವುದ
ಕಂಡು ೧

ಆರು ಗತಿಯಿಲ್ಲೆಂದು ನಿನ್ನ ಸುಖ ಸಾರ ಚರಣಕ್ಕೆ
ಬಿದ್ದಿಹನೆಂದು ಉದಾಸಿಸದೆ ಸಲಹೋ ಕರುಣೀ ೨

ಏಸೇಸು ಜನುಮದೊಳು ದಾಸ ನಾನಿನಗಯ್ಯ
ಈಶ ನೀನೆಂದು ಮರೆಪೊಕ್ಕೆ ಜೀಯ್ಯಾ ೩

ಅಭಯ ನೀನಿತ್ತು ಭಯ ಪಾಲಿಸದಿರೆ ಗತಿ ಯಾರೋ ಎನಗೆ
ಇಂದ್ರಾದ್ಯಮರ ಗಣಗಳಿಗೆ ದಾತನೆನಿಪ ಗುರು-
ತಂದೆವರದಗೋಪಾಲವಿಠಲನ ದೂತಾ ೪

## ೨೮೩

ಪಾಲಿಸೈಯ್ಯ ಇವಳಾ ಶ್ರೀ ಭೂತರಾಜರ ಹೃನ್ಮಂದಿರ ನಿಲಯ
ಧವಳ ಗಂಗಾವಾಸಿ ಹಯಮುಖನ ತನಯ ವಾಗೀಶ
ಗುರು ಅರ್ಚಕಾ ಪ

ಹರಿಸಿರಿಯ ಕಿರಿಪುತ್ರ ಸಿರಿದೇವಿ ಗುರು ನಿನಗೆ
ಹಯವದನ ಸ್ವಾಮಿ ವೇದವ್ಯಾಸಾ
ಪ್ರಭುತ್ರಿವಿಕ್ರಮನ ಮುಖ್ಯ ಪ್ರತಿಬಿಂಬ ನಿತ್ಯ ನಿನ್ನಲ್ಲಿ
ಶ್ರೀಹರಿಯು ಅನುಗಾಲ ಕೋಲಾಹಲದೆ ಮಾಳ್ಪ
ಆನಂದ ಕ್ರೀಡೆಗಳ ಕಾರುಣ್ಯರೂಪದಲಿ ೧

ವರಶುಕ್ಲನೊನನು ನಿನ್ನ ಸತಿ ಭಾರತಿಯು
ಪರುಶುಕ್ಲಳೊ ಸತತ ಧ್ವಸ್ತದುರಾಗಮಾ ನೀನೆಂದು
ಸಾರುತಿದೆ ಶೃತಿಯು ಶೃತಿವೇದ್ಯ ನೀನೈಯ್ಯ
ಶೃತಿಯಿಂದ ನೀ ಗಮ್ಯ ಶೃತ್ಯರ್ಥರೂಪ ನೀನೆನಗೆ ಸತತಾ ೨

ನಾ ಪಾಮರಕೆ ಪಾಮರನು ಎಂದೆಂದು ಮಮಸ್ವಾಮಿ
ನಾನು ತುತಿಸಲಾಪೆನೆ ನಿನ್ನ ನಿರ್ದೋಷಗುಣರಾಶಿಯಾ
ಗಾನಮಾಡಿ ವೈರಾಗ್ಯ ಶಕ್ತಿ ಭಕ್ತ ಯುಕ್ತಿ ರಾಘವ
ಎಮಗಿಲ್ಲವೆನುತಾ ಬಾಗಿ ಬಗ್ಗಿ ಹಾರುವುದು ಪೀಠಕೆ ಸತತ
ಶಿವಶೇಷ ಗುರುತಾದಿ ಸುರಕೋಲಿನಿಕರಾ ೩

ಒಂದು ಅರಿಯದಾಕಂದ ಇಂದಿರೆಯು ನಂಬಿಹಳು
ಗತಿದಾತನೆಂದು ಸತತ ಅಂತರಂಗದಿ ನಲಿವ ಮಮತೆ
ನಾನಿನ್ನ ನಿಜ ದೂತನೆಂದು ಹೌದಾದರವಳ ಮನ ಸೆಳೆದು
ನಿನ್ನಲ್ಲಿ ಶ್ರೀಕೃಷ್ಣನಲಿ ಬಿಡು ಅವಳ ವಾಜಿವದನಾರ್ಚಿ
ಶ್ರೀವಾದಿರಾಜ ೪

ಲೌಕಿಕ ಮನ ತೊರೆಸು ಲೌಕಿಕರ ತೊರೆಸು ಲೌಕೀಕ ವಿಷಯ ಸುಖವ
ವಮನ ಸದೃಶವೆನಿಸು ನಿದ್ರಾ ಜಾಗರ ಸ್ವಪ್ನ ಅರ್ಶನ
ಕೂಕದಿರಲೆ ಇವಳ ಚಿತ್ಸುಖದ ನಿಜ ಅನ್ನ ನೀ ನಿತ್ತು ರಕ್ಷಿಸು
ಭದ್ರ ಮೂರುತಿ ನಮ್ಮ ಗುರುತಂದೆವರದಗೋಪಾಲವಿಠಲನ
ಪ್ರಥಮಾಂಗ ಭಾವೀ ಭಾರತೀಶ ೫

## ೨೮೪

ಭಾರತೀಶನೆಯನ್ನ ಭಾರ ನಿನ್ನದೊ ತಂದೆ
ಬಲು ಭಾರವಾಗಿದೆ ಎನಗೆ ಈ ಭವರ ತಾಪಾ

ತಾಳಲಾರನೇ ಗುರುವೇ ನಿನ್ನಂಥ ಸ್ವಾಮಿಯಿದ್ದು
ನಿರ್ಭಯ ತೋರದಿರೆ ಗತಿದಾರು ಎನ್ನ ಸಾಧನಕ್ಕೆ
ಪ್ರಾಣನಾಥನೆ ಪೇಳು ಪ್ರಾಣಸಖನಾಗಿ ಈ ಪ್ರಾಣದೊಳಗೆಯಿದ್ದು
ಪ್ರಾಣಮಾರ್ಗನು ಆಗಿ ಪ್ರಾಣಿಗಳ ಪೊರೆವ ನಿರ್ವಾಣ್ಯದಾದಿ
ಪ್ರಾಣ ಪ್ರೇರಕನು ನಮ್ಮ ಗುರು ತಂದೆವರದಗೋಪಾಲವಿಠಲನ
ಜ್ಞಾನಪೂರ್ವಕ ತೋರು ಎನ್ನ ಪ್ರಾಣನಾಗಿ ೧

ನಿನ್ನಲ್ಲಿ ಮನವಿರೆ ಗುರು ತಂದೆವರದಗೋಪಾಲವಿಠಲ
ಈಗಲೇ ಸಲುವಾ ೨

ಭೂತರಾಜರ ಪ್ರಾಣ ಈ ಜೀವನ ಪ್ರಾಣ ಭೂತರಾಜರ ಪದಕ
ಎನ್ನತ್ರಾಣಪದಕ
ಭೂತರಾಜರ ಜನರು ಎನ್ನ ಜನರು ಭೂತರಾಜರ ಪ್ರೀತಿ ಎನ್ನ ಪ್ರೀತಿ
ಭೂತರಾಜರ ಒಲುಮೆ ನಿನ್ನ ಒಲುಮೆ ಭೂತರಾಜರ ಚಿತ್ತ ನಿನ್ನ ಚಿತ್ತ
ಭೂತರಾಜರ ಅಗಲಿಕೆ ನಿನ್ನ ಅಗಲಿಕೆ ಭೂತರಾಜರ ಪಾದ ನಿನ್ನ ಪಾವ
ಭೂತರಾಜರ ಹೃದಯ ಸದನದ ಮುಖ್ಯ ಪ್ರಾಣ ಎನ್ನ ಪ್ರಾಣ
ಗುರುತಂದೆವರದಗೋಪಾಲವಿಠಲನ ಶ್ರೀ ಮುಖ್ಯಪ್ರಾಣನೆ ೩

ಎಂದಿಗೆಂದಿಗೂ ಬ್ಯಾಡ ನಿನ್ನಗಲಿದಾ ಜನರ ಸಂಗ
ಎಂದೆಂದಿಗೂ ಬ್ಯಾಡ ನಿನ್ನ ದ್ರೋಹಿಗಳ ಸಂಗ
ಎಂದೆಂದಿಗೂ ಬ್ಯಾಡ ನಿನ್ನ ಕಾಣದ ಜನರಿಂದ ಬರುವಿ ಜ್ಞಾನಾದಿ
ಅಹಿತತಂದೆ
ಎಂದೆಂದಿಗೂ ನಿನ್ನ ಕಂಡವರ ಸಂಗ ಎನಗಿರಲಿ
ಗುರು ತಂದೆವರದಗೋಪಾಲವಿಠಲನಾಮೀವಾ ಪ್ರತಿಬಿಂಬಾನೇ ೪

ನೀ ಬಂದು ಪೊಳೆಯಾಬೇಕಿನ್ನು ಎನ್ನ ಹೃದಯದಲಿ
ಮಾತ್ರಭೂನಾಳ ರೂಪಾದಿ ಶ್ರೀನಿವಾಸನು
ಕರುಣಿಸಲೆಂದೆನುತಲಿ ಎನಲ್ಲಿ ಗುರುವೆ ೫

ಜತೆ : ಎಂದೆಂದಿಗೂ ಬಿಡದ ಮಾನ ನಿನ್ನಯ
ಪದ ಪದ್ಮದಲ್ಲಿ ಕೊಡು ಎನಗೆ

ಗುರು ತಂದೆವರದಗೋಪಾಲವಿಠಲನ
ಕುವರನೆಂದು ಮೊರೆಯಿಡುವೆ ೬

## ೨೮೫

ಮಂಗಳಾವೆನ್ನಿರೊ ಜಗಮಂಗಳ ನಾಯಕಗೆ
ಶುಭ ಮಂಗಳಾ ಎನ್ನಿರೋ ಶುಭ ನಿಧಿಗೆ ಪ

ಮಂಗಳಾ ಗುರುವಾದಿರಾಜರಿಗೆ ಜಯಮಂಗಳಾ
ಭಾವಿ ಮುಖ್ಯಪ್ರಾಣರಾಜನೀಗೆ ಅ.ಪ.

ಮಾಯಾವಾದಿಗಳಾ ಗೆದ್ದ ಸ್ವಾದಿಪುರವಾಸಿಯಾದ
ವಾದಿರಾಜಾ ಮಧ್ವಮುನಿಗೆ ಜಯಮಂಗಳಾ ೧

ಭೂತರಾಜಾರಿಂದ ಸೇವ್ಯಾಭೂತ ಪತಿಗೊಲಿದ
ಗುರು ಲಾತವ್ಯ ರಾಜರಿಗೆ ಜಯಮಂಗಳಾ ೨

ಧವಳಗಂಗಾವಾಸಿಯಾದ ಹಯಗ್ರೀವ ತ್ರಿವಿಕ್ರಮಾ
ವೇದವ್ಯಾಸರ ಪೂಜಿಪಗೆ ಜಯಮಂಗಳಾ ೩

ಹಂಸವಾಹನಾರೂಢರಾದ ಭಾವಿ ಭಾರತಿ ಪತಿ ರಮಣ
ಹರಿಯಾ ಪ್ರಥಮಾಂಗ ಮುಖ್ಯಪ್ರತಿಬಿಂಬಾಣೆ
ಗುರುತಂದೆವರದಗೋಪಾಲವಿಠ್ಠಲನಾ ವೀಹಾರಕ್ಕಾ-
ವಾಸನಾದ ಸುವ್ರೇತಾ ಘನದೂತಾ ಗುರುವಾದಿರಾಜಗೆ ೪

## ೨೮೬

ಯಚ್ಚರಿಕೆ ಯಚ್ಚರಿಕೆ ಶ್ರೀ ಸೋದೆಪುರ
ಯಚ್ಚರಿಕೆ ಯಚ್ಚರಿಕೆ ಶ್ರೀ ಸೋದೆಪುರವಾಸಿ
ಗುರುಪಾದ ಯಚ್ಚರಿಕೆ ಯಚ್ಚರಿಕೆ ಪ

ಶ್ರೀ ತ್ರಿವಿಕ್ರಮ ಲೋಕನಾಥನ ತಂದೆ ಶ್ರೀಪಾದ
ಯಚ್ಚರಿಕೆ ಯಚ್ಚರಿಕೆ ಅ.ಪ.

ಗುರುಹಯವದನ ಮನಮುಟ್ಟಿ ಸ್ಮರಿಸಿ ಪೂಜಿಪ
ಶ್ರೀ ಗುರುಪಾದ ಯಚ್ಚರಿಕೆ ಯಚ್ಚರಿಕೆ ೧

ಶತಷಣ್ಣವತಿ ಸಪ್ತ ಬ್ರಹ್ಮ ಕಲ್ಪಗಳಲ್ಲಿ ಶ್ರೀಹರಿಯೆ
ಮಹ ಮಾರೆತವ ಚರಿಸಿದ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೨

ತಪಚರಿನಿಯರ ಡ್ರುವತ್ತೂ ಷಣ್ಣವತಿ ಲಿಷ್ಚನೇ ಕಲ್ಪದ–
ಲಿಲಾತವ್ಯ ವಾಯುಸಾಧನ ಮಾಡುವಾನಂದ
ಜ್ಞಾನ ಯೋಗ ಸಿದ್ಧಿಸಿ ಕೊಡುವ ಉದಾರ ಶ್ರೀಪಾದ ಯಚ್ಚರಿಕೆ
ಯಚ್ಚರಿಕೆ ೩

ಗುರುಪಿತಾಮಹ ಸಹಿತ ನದಿ ವಿರಜತೆಯಲಿ ಪ್ರಥಮ
ಸ್ನಾನವಗೈದು ಶತಷಣ್ಣವತಿ ನವಮ ಕಲ್ಪದಲಿ
ಪ್ರಧಾನ ವಾಯು ಪದ ಸ್ವೀಕರಿಪ ಹಂಸವಾಹನ ಶ್ರೀಪಾದ ಯಚ್ಚರಿಕೆ
ಯಚ್ಚರಿಕೆ ೪

ಹಿಂದೆ ವಿರಜಸ್ನಾನದಿ ಅಜ್ಞಾನಾತ್ಮಕ ಲಿಂಗದೋಷ
ನಿಶ್ಶೇಷ ಹೊಂದಿದ ಗುರುವಿರಾಜರ ಪಾದದ್ವಯ
ಯಚ್ಚರಿಕೆ ಯಚ್ಚರಿಕೆ ೫

ನಿರ್ಜೀವ ನಿಷ್ಕ್ರಿಯಾ ದಗ್ಧಪಟದಪ್ಪಂತಿರುವ ದೇಹ ಲಿಂಗವ
ನಿಮಿತ್ತ ಮಾತ್ರಕೆ ಹರಿಯಿಭಯಿಂ ಧರಿಸಿರುವ ಲಾತವ್ಯ ಗುರುಪಾದ
ಯಚ್ಚರಿಕೆ ಯಚ್ಚರಿಕೆ ೬

ಮುಕ್ತ ಅಮುಕ್ತಿ ಭೇದ ತೋರ್ಪದಕೆ ಶಿರಿಯಿಂದ
ನದಿ ಶಾಲ್ಮಲ ವಾಸಿಯ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೭

ಧ್ವಸ್ತ ದುರಾಗಮಿ ಶ್ರೀರಾಜಗುರು ಪಾದಕೆಚ್ಚರಿಕೆ ೮

ಅಜ್ಞಾನ ಅಹಂಕಾರ ಭಯ ಮೋಹ ವಿಸ್ಮೃತಿ ದುಃಖಾದಿ
ಬಂಧನ ಕಳೆವ ಪ್ರಭುಪಾದಕೆಚ್ಚರಿಕೆ ೯

ಆನಂದ ಮಯದವೃಷಾರಾಗಿದ ಭಾವಿ ಭಾರತಿ ಪತಿ
ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೧೦

ಬ್ರಹ್ಮಾಂಡಗತ ತ್ರಿವಿಧ ಜೀವರ ಚತುರ್ವಿಧ
ಶರೀರದಿಯಿದ್ದವರ ಸಾಧನವಾ ಮಾಡಿಸಿ ಜೀವರ
ಸುಖದುಃಖಗಳಿಂತಾ ಬದ್ಧರಾಗದೆ ಪೂರ್ಣ ನಿರ್ಲಿಪ್ತರಾಗಿರುವ
ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೧೧

ತ್ರಿವಾರ ವಿರಜ ಸ್ನಾನವ ಮಾಡ್ವ ಸೌಭಾಗ್ಯ ಪ್ರಾರಬ್ಧಪೊಂದಿರುವ
ಗುರು ವಾದಿರಾಜರ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೧೨

ಸತ್ವ ಜೀವರ ಮೋಕ್ಷ ಪ್ರಾಪ್ತಿಗೆ ವಿರಜ ನದಿಯಲಿ
ಸ್ನಾನ ಮಾಡಿಸಿ ಜೀವಸತ್ವರ ಮೋಕ್ಷಕ್ಕಿಡುವ
ನಿರ್ವ್ಯಾಜ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೧೩

ಸುಜೀವರ ಅನಾದಿ ಲಿಂಗ ಅಜ್ಞಾನ ಸ್ವರೂಪ ದೇಹ–
ಭಂಗಿಸುವ ಶ್ರೀರಮಾತ್ಮಕ ವಿರಜ ನದಿಯಲಿ ಸ್ನಾನ–
ಮಾಡಿ ಸ್ವಲಿಂಗ ವಿಶಿಷ್ಟವಾದ ಅಜ್ಞಾನದಿಂ–
ವಿರಹಿತರಾದವರ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೧೪

ಆನಂದವ ವೃಷಭಾವಿ ಆನಂದ ತೀರ್ಥ ಶ್ರೀಪಾದ
ಯಚ್ಚರಿಕೆ ಯಚ್ಚರಿಕೆ ೧೫

ತ್ರಿವಿಧ ಜೀವರಲಿಯಿದ್ದು ತ್ರಿವಿಧಸಾಧನ ಮಾಡಿಸುವ ಭಾವಿ
ವಾಯುನಾಮಕ ನತ್ತಾ ಪ್ರದ ಲಾತವ್ಯವಾಯು ವಾದಿರಾಜ
ಮಧ್ವ ಮುನಿ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೧೬

ಆಯಾಯರ ಜೀವರ ಚಲನವಲನಾದಿ ವ್ಯಾಪಾರ ಮಾಡಿಸುವ
ಭಾವಿ ಪ್ರಾಣನಾಮಕ ಭೀಷ್ಟಾಪ್ರದ ವಾದಿರಾಜಗುರುಪಾದ
ಯಚ್ಚರಿಕೆ ಯಚ್ಚರಿಕೆ ೧೭

ಚತುರ್ವಿದ ಶರೀರಗಳಲಿದ್ದು ಸಂರಕ್ಷಿಸುವ ಭಾವಿ
ಧರ್ಮನಾಯಕಧಾರಣಪ್ರದ ಶ್ರೀ ಗುರುರಾಜರ
ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೧೮

ಪ್ರಭುತ್ವವಾರ್ತೈಸಿಜೀರರ ಅವರವರ ಸ್ವರೂಪಯೋಗ್ಯ
ಗತಿ ಕೊಡುವ ಭಕ್ತಿ ಮುಕ್ತಿ ಪ್ರದ ಭಾವಿ ಭಾರತೀ ರಮಣ
ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೧೯

ದೇವೋತ್ತಮ ಲಾತ ವಾಯುಸ್ವನಾಮಕೆ ಭಗವಂತಗೇ
ನಿತ್ಯನ್ವ ಭಕ್ತರ ಪಾಪ ಮನ್ನಿಸುವಂತೆ ಪ್ರಾರ್ಥಿಸಿ ತಾವು
ಮನ್ನಿಸಿ ಕ್ಷಮಿಸುವಲ್ಲಿ ಕ್ಷಮಾ ಸಮುದ್ರರಾದ ಶ್ರೀಗುರುಪಾದ
ಯಚ್ಚರಿಕೆ ಯಚ್ಚರಿಕೆ ೨೦

ಪುಣ್ಯ ಪ್ರದಾನ ಮಾಡುವಲ್ಲಿ ಜೀವರಿಗೆ ಪರಮ ದಯಾಳು
ಆರ್ತರಿಗೆ ದಯತೋರುವ ಕೃಪಾನಿಧಿ ಸಜ್ಜನರ ದೋಷ
ವಿಚಾರದಿ ಮಹಾ ಸಹಿಷ್ಣುಗಳಾದವರ
ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೨೧

ಸಾತ್ವಿಕ ಶಿಖಾಮಣಿ ಸಕಲ ತಾತ್ವಿಕ ದೇವತಾ ರಂಜಕ
ಆಹ್ಲಾದಕರ ದಾನವ ಭಂಜಕ ಸಂಹಾರ ಕರ್ತರಾದ ಕಾರಣ
ಭಾವಿ ಪ್ರಭಂಜನ ವರವಾಜ್ಯರಾದವರ ಶ್ರೀಪಾದ
ಯಚ್ಚರಿಕೆ ಯಚ್ಚರಿಕೆ ೨೨

ಸರ್ವದಾ ಅನ್ಯ ಜೀವರು ಕಾಣದಾ ಅಸಾಧಾರಣ ಗುಣ
ಕ್ರಿಯಾ ಸ್ವರೂಪರಾದ ವೇದ ಪ್ರತಿಪಾದ್ಯರಾದುದರಿಂದ
ಮಹಂತರೆಂದು ಕರೆಸುವ ಭಾವಿ ವಾಯುವಿನ
ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೨೩

ಅವರವರ ಸಾಧನಗಳ ಪೂರೈಸಿ ಕೊನೆಗವರ ನಿಜಗತಿ
ಪ್ರವರಾದ ಸರ್ವ ಜೀವರಂತರ್ಯಾಮಿ ಸಕಲ ಗುಣ

ಸದ್ಧಾಮ ಭಾವಿ ಮರುತ ಗುರುವಾದಿರಾಜರ
ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೨೪

ಬರುವ ಜಗತ್ತಿನ ಸರ್ವ ಜೀವರಿಗೆಲ್ಲ ಜೀವನ ಪ್ರಾಣ-
ವಾಗಿರುವ ಜೀವೋತ್ತಮ ಶ್ರೀ ಭಾವಿ ಬ್ರಹ್ಮ ಮರುತ
ವಾದಿರಾಜರ ಶ್ರೀಪಾದದ್ವಯ ಯಚ್ಚರಿಕೆ ಯಚ್ಚರಿಕೆ ೨೫

ಸಕಲ ಜೀವರ ಸಂಜೀವರಾದ ಯಲ್ಲ ಜೀವರ ಜೀವ ಯಲ್ಲ
ಪ್ರಾಣಿಗಳ ಪ್ರಾಣರಾಗಿ ಪ್ರಾಣೆಂದು ಕರೆಸುವ ಭಾವಿ
ಮುಖ್ಯ ಪ್ರಾಣ ವಾದಿರಾಜರ ಗುರುಪಾದಕೆಚ್ಚರಿಕೆ ೨೬

ಸದಾಸರ್ವತ್ರ ಭಗವದ್ರಷ್ಟ್ರಗಳಾದ ಬ್ರಹ್ಮದೇವರ
ಭೃತ್ಯಣ ಜೀವ ಪರ್ಯಂತ ವ್ಯಾಪ್ತರಾದ ಆಯಾ
ಸ್ಥಳದಿದ್ದು ಆಯಾ ಜೀವರ ತಕ್ಕ ವ್ಯಾಪಾರ ಮಾಡುವ
ಭಾವಿ ಪೂರ್ಣಪ್ರಜ್ಞರೆನಿಸಿರುವ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೨೭

ನಾರಾಯಣನ ತೆರದಿ ಬ್ರಹ್ಮಾಂಡದಲಿ ವಿಶಿಷ್ಟ
ಚೇಷ್ಟಾದಿಗಳ ಮಾಡಿ ತದರ್ಥಾ ಅಂದರೆ ಅರ್ಥನಾರಾ-
ಯಣನೆಂದು ಕರೆಸಿ ಆತ್ಮಾವೈಪುತ್ರ ನಾಮಾಸಿಯಂಬ
ಶ್ರುತ್ಯೋಕ್ತಿಯಂತೆ ತನ್ನಿಂದ ಜನಿಸಿದ ಶ್ರೀ ವಾಸುದೇವ-
ನೆಂಬ ಪ್ರಸಿದ್ಧ ನಾಮವ ಪಡೆದು ಶ್ರೀವಾಸುದೇವನು
ತಾನೇ ಅಷ್ಟಾಂಶಗಳಿಂದ ಯಿವರಲ್ಲಿ ಸ್ಥಿರ ಸ್ಥಾಯಿಯಾಗಿದ್ದು
ಇವರಿಂದ ಅಷ್ಟು ಕಾರ್ಯಗಳ ಮಾಡಿಸುವ ಮುಂದೆ
ಭಾವಿ ವಾಯಾವೆನಿಸಿದವರ ಶ್ರೀವಾಸುದೇವಗೆಯಿವರು

ಸಾಕ್ಷಾತ್ಪ್ರತಿಬಿಂಬರಾದ ಕಾರಣ ಭಾವಿ ಮುಖ್ಯ ಪ್ರತಿಬಿಂಬ-
ರೆಂದೆನಿಸಿಕೊಂಡ ಗುರುವಾದಿರಾಜ ವಿಭುಪಾದಕೆ
ಯಚ್ಚರಿಕೆ ಯಚ್ಚರಿಕೆ ೨೮

ಇಂಥ ಶ್ರೀ ಭಾವಿ ಮಸರುತ ಶ್ರೀ ವಾದಿರಾಜರ ಶ್ರೀ ಹರಿಯು
ಇಂದಿರಾದೇವಿಯಲಿ ಬಹುಪ್ರೇಮದಿಂದಲಿ ಪಡದು

ತನ್ನ ಬಲ ತೊಡೆಯ ಮೇಲೆ ಏರಿಸಿ ಕೊಂಡಿವರಿಗೆ
ನಿತ್ಯ ಸಹ ಭೋಜನ ವೀವಾ ಈ ಸಹ ಭೋಜನ ಭಾವಿ-
ವಾಯು ಬ್ರಹ್ಮಪದ ಪ್ರಾಪ್ತರಿಗೂ ಮೋಕ್ಷದಲಿ ಶ್ರೀಹರಿಯ
ಸರ್ವಾಂಗ ಸಾಯುಜ್ಯಭೋಗ ಪೊಂದುವರಿಗೂ ಶ್ರೀಗುರು
ವಾದಿರಾಜರಿಗೆ ಶ್ರುತಿಯಲ್ಲಿ ಈ ಚಿನ್ಹೆಕಂಡ ಕಾರಣದಿಂದ
ಸರ್ವಾಂಗ ಸಾಯುಜ್ಯ ಸಹ ಭೋಜನದ ಭೋಗ ಹೊಂದುವ
ಭಾವಿ ಮರುತ ಶ್ರೀಲಾತವ್ಯ ವಾಯು ಗುರು ಮಧ್ವ ಮುನಿಯ
ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೨೯

ಈ ಲಾತವ್ಯವಾಯು ಶ್ರೀ ಜಯಾವತಿ ಸಂಕರ್ಷಣ - ಸಂಭೂತ
ರಾಗುವರು ಪಿತನಂತೆ ಅಸಾಧಾರಣ ಸೌಂದರ್ಯ ಶರೀರ
ಉಳ್ಳವರು ಬಿಂಬ ಸೌಂದರ್ಯಗಳೆಲ್ಲ
ಪ್ರತಿಬಿಂಬ -
ದಲೀಲಿ ಪ್ರಕಾಶಮಾನವಾಗಿ ಸದದ ಕಂಗೊಳಿಸುವದು
ಅದರಿಂದ ಭಗವದಪರೋಕ್ಷಗಳು
ಶ್ರೀಮಾನ್ಮಧ್ವಮತ-
ದ್ಧಾರಕರು ಗುರು ಸಾರ್ವಭೌಮರು ಧೀರರು ಸಂಪೂರ್ಣ
ಲಕ್ಷಣ ಚಣ ಸೌಂದರ್ಯ ಸಮುದಯ ಸದನ ಪೂರ್ಣ
ಚಂದ್ರವದನರು ಮೋಕ್ಷ ಸಾಮ್ರಾಜ್ಯ ನಿರ್ದುಷ್ಟ ಆನಂದ
ಸುಖಸ್ವರೂಪರು ಪರಮ ಪುರುಷಾರ್ಥ ಪಾತ್ರಗಳು
ಪುಣ್ಯ ಸ್ವರೂಪ ಪಂಚ ರೂಪಾತ್ಮಕ ಹರಿಯೆ ಪಂಚ
ವೃಂದಾವನ ಸ್ವರೂಪದಿಯಿರುವ ರಂಜಪುಣ್ಯ
ವೃಂದಾವನದಿ ವಿರಾಜಿಸಿ ಪಂಚ ಪುಣ್ಯ ಧಾರೆಯೆರೆವ
ಪಂಚಪ್ರಾಣರಾದ ವಾದಿಗಳ ಪಲ್ಮುರಿವ ವಾದಿರಾಜ
ಮಧ್ವ ಮುನಿಯ ಶ್ರೀ ಭಾವೀ ಭಾರತೀದೇವಿ ತನ್ನ ಮೃದು
ಕೋಮಲ ತೊಡೆಯ ಮೇಲೆ ಪತಿಯ ಶ್ರೀಪಾದಪದ್ಮದ್ವಯ
ವಿಟ್ಟು ವತ್ತೂವ ಅಜ್ಞಾನ ತಿಮಿರಕೆ ಮಾರ್ತಾಂಡ ವಾದ
ಜ್ಞಾನಾನಂದ ದಾಯಕ ಶ್ರೀಗುರುಪಾದ ಯಚ್ಚರಿಕೆ ಯಚ್ಚರಿಕೆ ೩೦

ಜಗಜ್ಜೀವನಗಳಿಗೆ ಮುಖ್ಯ ಕಾರಣ ಪ್ರಾಣ ಆ ಪ್ರಾಣವಿಲ್ಲ
ದಿರೆ ಸ್ವತಃ ಚಲಿಸಲು ಅಸಮರ್ಥ ಸರ್ವ ಜಗತ್ತಿಗೆ
ಪ್ರಾಣ ವಿಜ್ಞಾನ ಪ್ರಾಣಾಗ್ನಿ ಶಬ್ದವಾಚ್ಯ ಈ ಭಾವಿ
ಮುಖ್ಯ ಪ್ರಾಣ ಜಗಜ್ಜೀವನಗಳಿಗೆ ತಾನೇ ಮುಖ್ಯ
ಪ್ರಾಣರೂಪ ಹೀಗೆಂದು ಬಳಿತ್ಥಾ ಸೂಕ್ತ ಅಗ್ನಿ ಸೂಕ್ತದಲಿ
ಉಕ್ತ ಈ ಸೂಕ್ತಿಗಳಿಂದ ಪ್ರತಿಪಾದ್ಯರಾದ ಜಗನ್ನೇತ್ರ
ಜಗಜ್ಜೀವನರಾದ ಪಂಚಪ್ರಾಣ-ರೂಪಾತ್ಮಕ
ಶ್ವಾಸನಿಯಾಮಕ ಸೋದೆಪುರವಾಸಿ ಭೂತರಾಜರ ಹೃನ್ಮಂದಿರ
ವೇದ್ಯ ವೇದ್ಯನುತ ಅಹಿಪ ಖಗಪ ಉಮೇಶಾದಿ ಸುರರಿಗೆ
ಚಿಂತಿಸಲು ಅಳವಲ್ಲದ ಅಗಮ್ಯ ಮಹಿಮ ಶ್ರೀ ಪ್ರಭು-
ವಾದಿರಾಜರ ನಿರ್ದೋಷ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೩೧

ಜಿತಣಮ ಸರ್ವಜ್ಞ ಅಶೇಕ್ಷ ಸಂಪದ್ವಿಶಿಷ್ಟ ಸದ್ಗುಣ
ಭರಿತ ಪೂರ್ಣ ತೃಪ್ತ ನಿಶ್ಚಲ ಭಕ್ತ ದೃಢವೈರಾಗ್ಯಶಾಲಿ
ಚಿರಂಜೀವಿ ಶ್ರೀ ಗುರುವಾದಿರಾಜರ ಶ್ರೀಪಾದ
ಪದ್ಮ ನಖರೇಣುಗಳಿಗೆ ಯಚ್ಚರಿಕೆ ಯಚ್ಚರಿಕೆ ೩೨

ಸರ್ವದಾ ಸ್ತ್ರೀರೂಪ ಧರಿಸಿ ಹರಿಯೊಡನೆ ಪರಿ ಪರಿ ಕ್ರೀಡೆ-
ರಮಿಸಿ ಆ ಆನಂದ ಶ್ರೀ ಹರಿಗೆ ಅರ್ಪಿಪ ಗುರುವಾದಿರಾಜ
ಶ್ರೀಪಾದಂಗಳ ಶ್ರೀಪಾದ ಯಚ್ಚರಿಕೆ ಯಚ್ಚರಿಕೆ ೩೩

ಕರುಣಾಳು ತಾ ನಿತ್ಯ ತನ್ನ ಪದ ಜೀವಿಗಳಲಿ ಶ್ವಾಸೋಚ್ಛ್ವಾಸ
ಚರಿಸಿ ಆಚರಿಸಿ ದಾರ್ವಾನಾತ್ಮಕ ಶ್ರೀ ತುಳಸಿದಳಗಳು ನಿತ್ಯ
ಶ್ರೀವರ ಮಾಲೇಶಗೆ ಅರ್ಪಿಪ ಭಾವಿಲಾಳೂರ ಶ್ರೀ ಗುರುರಾಜರ
ಪಾದಕೆ ಯಚ್ಚರಿಕೆ ಯಚ್ಚರಿಕೆ ೩೪

ತನ್ನ ಶ್ರೀಪಾದ ರಜ ಧಣಿಯಲಿ ಧರಿಸಿ ಜೀವಿವರ ಹಯವದನ
ಪಾದಕರ್ಪಿಸುವೆನೆಂದು ಪಣತೊಟ್ಟು ಜೀವನ್ಮುಕ್ತರನು ಮಾಡಿ

ಪರಿಪಾಲಿಪೆನೆಂದು ಧೀರ ವೃಂದಾವನದಿ ಮೆರೆವ ಶ್ರೀಗುರು-
ವಾದಿರಾಜರ ಶ್ರೀಪಾದಕೆ ಯಚ್ಚರಿಕೆ ಯಚ್ಚರಿಕೆ ೩೫

ಶ್ರೀ ತ್ರಿವಿಕ್ರಮನ ರಥೋತ್ಸವಕೆ ಬಂದವರಲಿ ಒಂದೊಂದಂಶ
ಸುರರ ಪ್ರವೇಶಿಸಿ ಅವರಲ್ಲಿ ತನ್ನೊಂದಂಶದಿಂದ ಸುರರ
ಸಾಧನ ಮಾಡಿ ಸುರನರರ ಕೃತ ಕೃತ್ಯರೆನಿಸಿ ಶಿರಿ ಹಯ-
ವದನನ ಕಾಣ್ವ ಜ್ಞಾನ ಭಕುತಿ ವೈರಾಗ್ಯ ನಿಷ್ಠೆಯನಿತ್ತು
ಬ್ರಹ್ಮ ನಿಷ್ಠ್ಯೆ ಕರೆನು ಮಾಳ್ವ ಶ್ರೀ ಗುರು ಶ್ರೀಪಾದಕೆ
ಯಚ್ಚರಿಕೆ ಯಚ್ಚರಿಕೆ ೩೬

ಶ್ರೀ ಧವಳ ಗಂಗೆಯ ಸ್ನಾನ ಮಾಡುವ ಜ್ಞಾನವೀವ ಶ್ರೀ ಗುರು-
ಪಾದಕೆ ಯಚ್ಚರಿಕೆ ಯಚ್ಚರಿಕೆ ೩೭

ಈ ಪದವ ಭಕ್ತಿ ಭರಿತದಿಂದಾರು ಪಠಣ ಮಾಡ್ವರೋ
ಸತತ ಬರೆದ ಈ ವಾಲಿ ಆರಮನೆಯಲ್ಲಿಹುದೋ ಸತತ
ನಿರುತ ಪಠಣೆ ವ್ರತ ಮಾಡಿದ ಪುಣ್ಯವು ದೊರೆವುದು
ಸಂಪೂರ್ಣ ಮನೋರಥ ಸಿದ್ಧಿಪುದು ವರ ಬ್ರಾಹ್ಮಣ
ವೇದವೇದ್ಯ ಶ್ರೀಮಂತನಾಹೋನು ಧುರದಿ ಕಾದೂವ
ಕ್ಷತ್ರಿಯನಿಗೆ ವರಪರಾಕ್ರಮ ಬರುವುದು. ವೈಶ್ಯನಿಗೆ
ಧನದ ಕೋಶಲಭಿಸುವುದು, ಚರಣ ಶೂದ್ರನಿಗೆ ಮಹಾ
ಕೃಷಿಧನ ಪ್ರಾಪ್ತಿಯಾಗುವುದು. ಮಹಾರೋಗಿ ನರ
ಆರೋಗ್ಯನಾಗುವನು. ಪುತ್ರಾರ್ಥಿಗೆ ಪುತ್ರ ಲಾಭವಾಗುವದು.
ಯೆರಡೊಂದು ಧರ್ಮಕ್ಕಿಲ್ಲ ಅನುಕೂಲವಾದ ದ್ರವ್ಯ
ಆಗಮಿಸುವುದು. ಪರಮ ಮಂಗಳ ಮೋಕ್ಷಾರ್ಥಿಗೆ ಮೋಕ್ಷ
ಲಭ್ಯವಾಗುವುದು. ಸ್ಮರಿಸುತ ವಾದಿರಾಜರ ಶ್ರೀಪಾದ
ಅವರ ನಾಮವನು ಸ್ಮರಿಸುತ್ತ ಪ್ರಯಾಣ ಮಾಡಲು ಸರ್ವದಾ
ವಿಜಯಪ್ರದನಾಗಿ ತಿರುಗಿ ಶೀಘ್ರದಿಂದ ಬರುವನು. ನರರು ಈ ಪರಿ
ಭಕುತಿಯಿಂದ ಮೂರಾವರ್ತಿ ಓಂ ನಮೋ ಭಗವತೇ ಶ್ರೀ
ವಾದಿರಾಜಾಯ

ಯೆಂದು ವರಮಂತ್ರದಿಂದ ಗಂಧಲೇಪನ ಮಾಡಿ ಪಣೆಗೆ, ಸ್ಮರಿಸಿ
ತಿಲಕವನಿಡಲು ಲೋಕರಾಜುವಳತ್ ನಿರುವ ಸದಾಚಾರಿಯಾಗುವನು.
ಸರ್ವತ್ರ ಸಭೆಯಲ್ಲಿ ಜಯವು ಬರುವ ವ್ಯವಹಾರ ದ್ಯೂತಾದಿ
ವ್ಯಸನದಿಂದ ಮುಕ್ತಾನಾಗುವನು. ಕರೆಕರೆಗೊಳಿಸುವ ಸಿಂಹ, ವ್ಯಾಘ್ರ
ದುಷ್ಟ ಮೃಗಗಳ ಭಯದಿಂದ ದೂರವಿರುವ ಸರ್ವಕಾರ್ಯಗಳಿಂದ
ಸರ್ವತ್ರ ವಿಜಯಶಾಲಿಯಾಗುವನು. ನಿಸ್ಸಂದೇಹವಾಗಿ ಸರ್ವಾಭೀಷ್ಟ
ಶಿದ್ಧಿಯಾಗುವುದು. ವರ ಬ್ರಾಹ್ಮಣ ಕ್ಷತ್ರಿಯ
ವೈಶ್ಯ ಶೂದ್ರರಿಗೆ ವಿಶೇಷ ಸಂಪತ್ಕರವಾಗುವುದು. ಪತಿವ್ರತ
ಸ್ತ್ರೀಯರಿಗೆ ನಿರುತ ಜ್ಞಾನ ಭಕ್ತಾದಿಗಳಯೀವುದು ಸತ್ಯ ಸತ್ಯಾ ಹರಿ, ವೇಷ
ಧಾರಿ ಶ್ರೀವಾದಿಗುರುರಾಜರ ನಾಮ ಪಠಿಸಲು ಹರಿಯ ಮಂಗಳ
ನಾಮದ ಮಹಿಮೆ ತಿಳಿಸಿ ನಿತ್ಯಾ ಹರಿ ಒಲಿಮೆ ಯಾಚಿಸಿ ಹರಿಯ-
ವಲಿಸುವುದು ಸತ್ಯ. ವರ ವಾಸುದೇವ ಗುರು ತಂದೆವರದಗೋಪಾಲ
ವಿಠಲ ನಿರುತ ವಿಜ್ಞಾನದಲಿ ಚರಿಸಿದ ಈ ಪರಿ ಸ್ತೋತ್ರ ಮಾಡಿರ್ಯೆ ಜ್ಞಾನಿ-
ಗಳಾದವರೆಲ್ಲ ಶ್ರೀ ಗುರುಪಾದದೆಚ್ಚರಿಕೆಯಲಿ
ತಂದೆವರದಗೋಪಾಲವಿಠಲ ೩೮

## ೨೮೭

ನಿನ್ನ ಸ್ಮರಿಸುವ ಮನ ಕೊಡು ನೀ ಎನಗೆ ನಿರುತ
ಎನಗೆ ತಂದೆ ತಾಯಿ ಸಕಲ ಬಂಧು ಬಳಗವು ನೀನೆ
ಒಂದು ಕಾಣದ ಮಂಗನಾದೆ ಇಂದು
ಹೊತ್ತು ಹೋಯಿತು ವ್ಯರ್ಥ ನಿನ್ನಾ ಕಾಣದಲೆ ಎನಗೆ
ಯತ್ತಿದ್ದರೇನು ನಿನಗಲ್ಲದವನು
ಶ್ರೀ ಮಧ್ವಶಾಸ್ತ್ರವ ತಿಳಿಸಿ ಉದ್ಧರಿಸು ಎನ್ನ
ಸದ್ಭಕ್ತರಲಿ ಇಟ್ಟು ಕಾಪಾಡು ಎನ್ನ
ತದ್ಭಕ್ತನ ಮಾಡಿಕೋ ತವ ಧ್ಯಾನ ಕೊಟ್ಟೆನಗೆ
ಹೇಡಿ ಜೀವನನಾಗಿ ನಾ ನಿನ್ನ ಮರೆತೆ
ನಾನೆಂಬೊ ಭಗವದ್ರೂಪವ ನೋಡು

ನಾನೆಂಬೊ ಭಗವದ್ರೂಪದ ಸಂಸ್ಮೃತಿಯ ನೀಡೆಲೊ ಎನಗೆ
ನಾನೆಂಬೊ ಸ್ಮೃತಿಯ ನೀಡದಿರೆನಗೆ
ನಾನು ನನ್ನದು ಎಲ್ಲ ನಿನ್ನ ಪರವಾಗಲಿ
ಎಂದು ಶ್ರೀಹರಿಯ ಸಿರಿಸಹ ತೋರುವಿ ಎನಗೆ
ಎಂದೆಂದು ನೀನೆ ನಿಜ ಬಂಧು ಎನಗೆ
ಎಂದೆಂದು ಸ್ಮೃತಿಯಲ್ಲಿ ನೀನಿದ್ದು ತಿಳಿಸುತಿರು
ನಿನ್ನವರಲ್ಲಿ ಎಂದೆಂದು ದ್ವೇಷವಕೊಡದಿರು ಎನಗೆ
ನಿನ್ನ ಶ್ರೀಪಾದ ರಜದಲ್ಲಿ ನೀ ತೋರು ಎನಗೆ
ಸತತ ಎಲ್ಲೇಲ್ಲಾ ಎನಗೆ ನೀ ಪೊಳೆಯುತಿರು
ಯಾಕಿಷ್ಟು ನಿರ್ದಯ ಎನಮ್ಯಾಲೆ ನಿನಗೆ
ತಂದೆವರದರಾಜರ ಅತ್ಯಂತ ಕೃಪೆ ತೋರಿಸು
ಗುರುತಂದೆವರದಗೋಪಾಲವಿಠಲನ ಸಹ ಪರಿವಾರ ಸಹ ನೀ ಬಂದು
ತೋರೆನ್ನ ಮನದಲ್ಲಿ

## ೨೮೮

### ಶ್ರೀ ವಾದಿರಾಜರು

ಸಾಗಿ ಬಾರಯ್ಯ ಗುರುರಾಜಾ ನಾ ಬಾಗುವೆ
ನಿಮಗೆ ಶಿರವಾ ಗುರುರಾಜಾ
ಭಾಗವತರ ದುರಿತೌಘಗಳ ಕಳೆಯೊ ಗುರುರಾಜಾ
ದುರ್ಮಾಯವಾದಿಗಳ ಪಲ್ಮುರಿಯೊ ಗುರುರಾಜಾ
ಸುರರೆಲ್ಲ ತವ ಮೇಲೆ ನಿತ್ಯಪೂಮಳೆಗರೆವರೊ ಗುರುರಾಜಾ
ತುಂಬುರ ನಾರದರು ನಿತ್ಯಗಾನಗಳಿಂದ
ಮೆರೆವೊರೊ ಗುರುರಾಜಾ
ಬಲು ಧಿಮಿಕೆಂದು ಅಪ್ಸರರು ನಾಟ್ಯಗಳಿಂದ
ಕುಣಿವರೊ ಗುರುರಾಜಾ
ನೀನ್ಹೊದ್ದ ಕಾವಿ ಶಾಟಿ ನಿನಗೊಪ್ಪುತಿದೆ ಗುರುರಾಜಾ
ಶ್ರೀ ಮುದ್ರೆ ಗಂಧಾಕ್ಷತಿ ಛಂದನೋಳ್ಪರಿಗೆ ಗುರುರಾಜಾ

ಗಳದಲ್ಲಿ ಶ್ರೀ ತುಳಸಿ ಪುಷ್ಪಮಾಲೆಗಳಿಂದ ಗುರುರಾಜಾ
ಝಗ ಝಗನೆ ಮುಖಕಮಲಗಳ್ಹೊಳೆವದೊ ಗುರುರಾಜಾ
ಋಜುಗುಣದವರ ಹೌದೆಂದು ಪೇಳುವನರನ ಗುರುರಾಜಾ
ನಿಂದೆ ಮಾಡಿದವರಿಗೆ ದೇಹದಲಿ ಕ್ರಿಮಿಕೀಟ-
ಗಳುದುರುವುದು ಗುರುರಾಜಾ
ನೀ ಬಂದ ಜನರಿಗೆ ಇಲ್ಲಿ ಹರುಷ ಪಡಿಸುವಿಯೊ ಗುರುರಾಜಾ
ನಿನ್ನ ಮಹಿಮೆನಾನಿನ್ನೇನು ಪೇಳಲೊ ಗುರುರಾಜಾ
ನೀ ಪೇಳು ನಿನ್ನ ಮಹಿಮೆಯ ಎನಗೆ ಗುರುರಾಜಾ
ನೋಡಲಾಶ್ಚರ್ಯಯೆನಗಾಗಿದೆಯೊ ಗುರುರಾಜಾ
ಶ್ರೀ ಭೂತರಾಜರಿಂದ ನೀ ಪೂಜೆಯಕೈಕೊಂಬೆ ಗುರುರಾಜಾ
ಅವರು ಧಿಮಿಧಿಮಿಕೆಂದು ಕುಣಿದಾಡುವರೊ ಗುರುರಾಜಾ
ಎಡಬಲದಿ ದ್ವಾರಪಾಲಕರಾನಂದದಿಂದಿರುವರೋ ಗುರುರಾಜಾ
ಭಕ್ತಿಯಲಿ ಭಜಿಸುವರಿಗೆಲ್ಲ ನೀ ಮುಕ್ತಿಯನೆ
ಕೊಡುವೆ ಗುರುರಾಜಾ
ನಿನ್ನಂಥ ಕರುಣಿ ಗುರು ಇನ್ನಿಲ್ಲ ಧರೆಯೊಳಗೆ ಗುರುರಾಜಾ
ನೀ ಮನ್ನಿಸಿ ಎನ್ನ ಸಲಹಯ್ಯ ಗುರುರಾಜಾ
ಘನ್ನ ಸಂಸಾರದಲಿ ಬನ್ನ ಬಟ್ಟು ನಾ ಬಹಳ
ನೊಂದೆನೊ ಗುರುರಾಜಾ
ಕೈ ಪಿಡಿಯೆಂದು ಇಲ್ಲಿ ನಾ ಬಂದೆ ಗುರುರಾಜಾ
ಉದ್ಧಾರ ಮಾಡಬೇಕೆಂದು ನಿಂದೆನೊ ಗುರುರಾಜಾ
ಮಂದ ಭಾಗ್ಯ ಜೀವನ ಕುಂದೆಣಿಸಬ್ಯಾಡಿಂದು ಗುರುರಾಜಾ
ಬಂಧು ನೀನೆಂದು ನಿನ್ನಡಿಗೆ ನಮೋ ನಮೋ
ಎನುವೆ ಗುರುರಾಜಾ
ಆನಂದ ಸಿಂಧು ನೀನೆಂದು ಅಡಿಗಡಿಗೆ ಬೇಡುವೆ
ಎನ್ನಾನಂದಕೊಡು ಎಂದು ಗುರುರಾಜಾ
ರುಕ್ಮಿಣಿ ಕಳುಹಿದ ವಾಲಿಯನು ಶ್ರೀಕೃಷ್ಣಗರ್ಪಿಸಿದೆ
ಹಿಂದೆ ಗುರುರಾಜಾ
ಸಾಮಾನ್ಯವಲ್ಲವೋ ನೀ ಪವಮಾನರಾಯನೋ ಗುರುರಾಜಾ

ಸುರರಿಗಮೃತವುಣಿಸಿದಿಯೋ ನೀ ಗುರುರಾಜಾ
ವೃಂದಾವನಾಚಾರ್ಯರಿಂದ ಸೇವೆಯನು ಸ್ವೀಕರಿಸಿ ಸುಖವ
ಸುರಿಸಿದೆಯೋ ಗುರುರಾಜಾ
ಶ್ರೀ ಸ್ವಾದಿಯ ಮಠದಿ ನೀನಿರುವಿ ಗುರುರಾಜಾ
ಧವಳಗಂಗೆಯ ಸ್ನಾನ ಅಮೃತಪಾನವ ಮಾಡಿಸಿ ನೀದ
ಮುಕ್ತಿಯನೆ ಕೊಡುವೆ ಗುರುರಾಜಾ
ಜೀವೇಶಕೊಂದೆಂಬೋರ ಪಲ್ಗಳುದರಿಸುವೆ ಗುರುರಾಜಾ
ಕಚ್ಛರಕ ಮಣಿಮಂತ ಖಳ ಸಂಕರನ ಶಾಸ್ತ್ರ
ಹುಟ್ಟಡಗಿಸಿದೆಯೊ ಗುರುರಾಜಾ
ಮಧ್ವಮತವನುದ್ಧಾರ ಮಾಡಿ ನೀ ಕಡಗೋಲ
ಕೃಷ್ಣನ್ನುಡುಪಿಯಲಿ ಪೂಜಿಸಿದ್ಯೊ ಗುರುರಾಜಾ
ಲಂಡಮಾಯಿಗಳ ಗುಂಡಿ ವಡೆಯಲುದ್ದಂಡ
ಮಾರುತಿ ಪದಕೆ ಬರುವೆಯೋ ಗುರುರಾಜ
ಪಂಚಬಾಣನ ಪಿತನ ಸ್ಮರಿಸುತ ಪಂಚ ವೃಂದಾವನದಿ
ಮೆರೆವೆ ಗುರುರಾಜಾ
ಮಿಂಚಿನಂದದಿ ಪೊಳೆಯುತಿಲ್ಲಿ ಪಂಚನಂದನನೆಂದು
ತೋರುವಿ ಗುರುರಾಜಾ
ಪಂಚಪಾತಕ ಕಳವಿ ಗುರುರಾಜಾ
ಪಂಕಜಾರಿಯ ವಕ್ತ್ರ ಗುರುರಾಜ
ಆತಂಕವಿಲ್ಲದೆ ಭಜಿಪ ಕುಜನರಶಂಕೆಹಿಡಿಸಿ
ಸುಜನರ ಶಂಕೆ ಬಿಡಿಸುವೆ ಗುರುರಾಜಾ
ಪಕ್ಕಿ ರಾಜಾ ರಾಜನಾಗ ಶಂಕರೇಶನೋ ನೀ ಗುರುರಾಜಾ
ಭಜಿಸುವ್ರೋರಿಗೆ ಭಾಗ್ಯ ಕೊಡುವಿಯೋ ಗುರುರಾಜಾ
ಅಮರೇಂದ್ರ ವಂದಿತ ಋಜುಗಣೇಶ ಭಾವಿಮರುತ ಗುರುರಾಜಾ
ಶ್ರೀಶನ ಭಜನೆ ಮಾಡುತ ಭಾಗ್ಯ ಕೊಡುವೆ ಗುರುರಾಜಾ
ವಾಜಿವದನಾರ್ಚಕ ಶ್ರೀ ಗುರುರಾಜಾ
ರಾಜೀವನಯನ ಶ್ರೀ ಕೃಷ್ಣನಲಿ ಬಿಡು ಎನ್ನ ಗುರುರಾಜಾ
ದೇವ ದೇವೇಶನ ಪರಮ ಒಲುಮೆಗೆ ಪಾತ್ರ ಗುರುರಾಜಾ

ಪಾವನ್ನ ತಮ ಚರಿಯನೊ ಗುರುರಾಜಾ
ಪತಿತ ಪಾಲನೊ ಶ್ರೀ ಗುರುರಾಜಾ
ಸಾವಧಾನದಿ ಎನ್ನ ಆದಿರೋಗವ ಕಳೆಯೊ ಗುರುರಾಜಾ
ಕೇವಲ ಸದ್ಭಕ್ತಿಶೀಲನ ಮಾಡಯ್ಯ ಗುರುರಾಜಾ
ಶ್ರೀ ಭಾರತೀಪತಿ ಪದವನ್ನೈದುವ ಮಹಾತ್ಮ ಗುರುರಾಜಾ
ಮುರಾರಿ ಸುರ ಪೂಜ್ಯ ಕರುಣಿಕಾಯೊ ಗುರುರಾಜಾ
ಸಾರಿದೆನು ತ್ವಚ್ಚರಣ ಸರಸೀ ಯುಗ್ಮಗಳ ಗುರುರಾಜಾ
ದೂರ ಮಾಡದೆ ಹರಿಯ ಕರುಣ ಪಾತ್ರನ ಮಾಡೊ ಗುರುರಾಜಾ
ಪರಮ ಭಾಗವತ ಶಿರೋರತ್ನರಿಂದರ್ಚಿತನೆ ಗುರುರಾಜಾ
ಸಿರಿ ವೇಣುಗೋಪಾಲವೇದ್ಯವೇದ್ಯನ ಮನದಲ್ಲಿ ಬಿಡದಿಪ್ಪ
        ಪರಮಕೃಪೆ ಬೇಡುವೆ ಗುರುರಾಜಾ
ಕರುಣಾಬ್ಧಿ ಕೃಪೆ ಮಾಡೊ ಗುರುರಾಜಾ
ವಾದಿರಾಜ ಗುರು ನೀ ದಯವಾಗದೆ ಗುರುರಾಜಾ
ಈ ದುರಿತವ ಕಳೆದು ಆದರಿಪರ‍್ಯಾರೋ ಗುರುರಾಜಾ
ಯಮಿವರ್ಯನೆ ತ್ರಿವಿಕ್ರಮನ ರಥೋತ್ಸವ
        ಸಮಯವಿದೆಂದು ಗುರುರಾಜಾ
ಮತ್ತಮಣವ ನಿಲಿಸಿದೆ ಏಕಾಂತ ಭಕ್ತ ಹರಿಗೆ ಗುರುರಾಜಾ
ಬಂದು ಕರೆಯೆ ಪುರಂದರನಾಳ್ಗಳು ಗುರುರಾಜಾ
ಹಿಂದಟ್ಟಿದೆ ಅವರಕರ್ಮಂದಿಗಳರಸೇ ಗುರುರಾಜಾ
ಅರ್ಥಿಗಳಿಗೆ ಪರಮಾರ್ಥ ಕೊಡುವ ಗುರುರಾಜಾ
ತೀರ್ಥ ಪ್ರಬಂಧವ ಕೀರ್ತನೆಗೈದೇ ಗುರುರಾಜಾ
ಭಾಗೀರಥಿಯಂತ್ಯೋಗಿವರ ಶ್ರೀ ವಾಗೀಶರ
        ಕರಯುಗ ಸಂಭವನೆ ಗುರುರಾಜಾ
ನರ ಮಿಶ್ರಿತ ನರಹರಿ ನೈವೇದ್ಯವ ಅರಿತು ಪೇಳಿ ಉಂಡರಗಿಸಿಕೊಂಡಿ
        ಗುರುರಾಜಾ
ಯಲರುಣಿಯ ಭಯಕೇ ಅಂಜಲಿ ನಿರ್ವಾಸನ
        ಕೆಳಗಿರೆ ಕಂಡು ಗುರುರಾಜಾ
ಅದನುಳುಹಿದೆ ಕರುಣಿ ಗುರುರಾಜಾ

ಹಯವದನ ಪದದ್ವಯ ಭಜಕಾಗ್ರಣಿ ಗುರುರಾಜಾ
ನಯದಿ ವಿಪ್ರಗೆ ನಯನವನಿತ್ತೇ ಗುರುರಾಜಾ
ಪೂತೋತ್ತಮ ಶ್ರೀ ಶೌರಿಯ ಖ್ಯಾತಿಯ
ತುತಿಪನಾಥಜನಾಪ್ತ ಗುರುನಾಥ
ಖ್ಯಾತಿಯ ತೋರಿಸು ಯೆನ್ನಲಿ ನೀ ಯನ್ನ ಗುರುರಾಜಾ
ದಾಸ ಸಮೂಹವ ನೀ ಸಲಹೋ ಸದಾ ಗುರುರಾಜಾ
ನೀ ಗತಿಯೆಂದನುರಾಗದಿ ನಂಬಿದ ಗುರುರಾಜಾ
ಇಳೆಯೊಳು ಕಲಿಬಾಧೆಯು ವೆಗ್ಗಳವಾಗಿದೆಯೊ ಗುರುರಾಜಾ
ಜನ್ಮ ಆದಿವ್ಯಾಧಿ ಉನ್ಮಾದ ವಿಭ್ರಮನಿರ
ಹೊಕ್ಕರೆಯನ್ನುಂಟೆ ಗುರುರಾಜಾ
ನಿನ್ನೊಶನಾದ ಜಗನ್ನಾಥರಾಯನ ಇನ್ನಾದರೂ
ತೋರೆನ್ನಮನದಲ್ಲಿ ಗುರುರಾಜಾ
ಹರಿಯ ಯೋಚನೆಯೊಳಗುಳ್ಳ ಭಕುತಿಯ
ಕೊಡೆನಗೆ ಗುರುರಾಜಾ
ಅನಂತನ ಮುಖ್ಯ ಪ್ರತಿಬಿಂಬನೋ ಗುರುರಾಜಾ
ಕ್ಷಣದೊಳಗೆ ಸಿದ್ಧರನು ಮಾಳ್ಪನಂತಮಹಿಮ
ನೀ ಗುರುರಾಜಾ
ಅನಂತಗಣಿತ ಕರುಣರಸ ಸುರಿಸೆನಗೆ ಗುರುರಾಜಾ
ಕರುಣದ ಆಕಾರನೋ ನೀನು ಗುರುರಾಜಾ
ಯಲ್ಲಿ ನೀನಿರುವಿಯೋ ಅಲ್ಲಲ್ಲೆ ಹರಿಯಿರು-
ವನೋ ಗುರುರಾಜಾ
ಅಲ್ಲಲ್ಲೆ ನೀ ಹರಿವೆ ಮುಖ್ಯ ಪ್ರತಿಬಿಂಬನೋ ಗುರುರಾಜಾ
ಹರಿಯ ವಿಹಾರಕ್ಕೆ ಆಲಾಪನೊ ನೀನು ಗುರುರಾಜಾ
ಹರಿಯು ಕೋಲಾಹಲದಿ ನಿನ್ನಲ್ಲಿ ಆನಂದಕ್ರೀಡೆ
ಮಾಡುವನೊ ಅನುಗಾಲ ಗುರುರಾಜಾ
ಶ್ರೀಹರಿಯ ಸುಪ್ರೀತ ಘನ ದೂತನೊ ನೀನು ಗುರುರಾಜಾ
ಶ್ರೀಹರಿಯ ನೀ ಸಹಿತ ಯೆನ್ನಲ್ಲಿ ತೋರೆನಗೆ
ಸತತ ಗುರುರಾಜಾ

ಭಾವಿ ಭಾರತಿಯ ಮನಕೊಪ್ಪುವ್ರೋ ಅತಿ
ಚೆಲ್ವ ಸುಂದರ ಗುರುರಾಜಾ
ಶ್ರೀಹರಿಗೆ ಅವಸರದ ಆಳೋ ನೀ ಗುರುರಾಜಾ
ಶ್ರೀಹರಿಗೆ ಮುಖ್ಯ ಮಂತ್ರಿಯು ನೀ ಗುರುರಾಜಾ
ಚತುರ್ದಶ ಭುವನದಲ್ಲಿ ನಿನ್ನ ಪಾದ
ವ್ಯಾಪಿಸಿದೆ ಗುರುರಾಜಾ
ಚತುರ್ದಶ ಭುವನದಲಿ ಅಡಗಿದೆಯೊ
ನಿನ್ನಸ್ತ ಗುರುರಾಜಾ
ಶ್ವಾಸ ನಿಯಾಮಕ ಪ್ರಭುವಾಸವೇ
ನಿನ್ನಿಂದ ಗುರುರಾಜಾ
ಉಸುರಲೇನಯ್ಯ ನಿನ್ನಲ್ಲಿ ನಾನು ಗುರುರಾಜಾ
ಹಯ ಮುಖ ಪಾದದ್ವಯ ಸೇವಕವರ
ಜಯಶೀಲನೋ ನೀನು ಗುರುರಾಜಾ
ನಿಜ ಭಕ್ತರ ನಿಜ ಭಯಹಾರಕ ನೀ ಗುರುರಾಜಾ
ದೂಷಕರಿಗೆ ಬಹು ಘಾಸಿಕೊಟ್ಟು ನಿಜದಾಸರ
ಪೋಷಿಪೆ ಗುರುರಾಜಾ
ಮೋದತೀರ್ಥಮತ ಸಾಧಿಸಿ ಮೆರೆಸುವ ಗುರುರಾಜಾ
ವಾಣೀಶರು ಗುರುಬೋಧರ ಸಮ ನೀ ಗುರುರಾಜಾ
ಇಂದಿರಾಪತಿಯ ಛಂದದಿ ಪೂಜಿಪೆ ಗುರುರಾಜಾ
ನಿಷ್ಕಲುಷ ಚಿತ್ತ ಯತಿಕುಲ ಭೂಷಣಕೇ ಗುರುರಾಜಾ
ಕಲಿ ಮುಖ ದಾನವ ಕುಲಕಂಟಕನೋ ಗುರುರಾಜಾ
ಯೆನ ತುಂಟತನ ಬಿಡಿಸಿ ನಿನ ಬಂಟನ ಮಾಡಿಕೊ ಗುರುರಾಜಾ
ಕಂಸಾದಿ ಮುಖ ಧ್ವಂಸಿ ಸಮೀರಣ ಗುರುರಾಜಾ
ನೀ ಹಂಸವಾಹ ಪಂಚಾಂಶಸಹಿತನೊ ಗುರುರಾಜಾ
ಲಾತವ್ಯಾತ್ಮಕ ಭೀತಿರಹಿತನೇ ಗುರುರಾಜಾ
ಮಹಪಾತಕ ಹರನೇ ಸುರನಾಥ ಮಹಿತನೇ ಗುರುರಾಜಾ
ಸುಂದರ ಪಂಚಸು ವೃಂದಾವನದೊಳು ಗುರುರಾಜಾ
ವೃಂದಾರಕ ಮುನಿ ವೃಂದವಂದನೇನೋ ಗುರುರಾಜಾ

ಭಾವಿ ಭಾರತಿಯ ಕರ ಕಮಲ ಸೇವಿತ
ಪದ ರಾಜೀವದ್ವಯನೊ ಗುರುರಾಜಾ
ವೃಂದಾವನ ಸದ ಮಂದಾಖ್ಯಾನವ ಭೂ
ವೃಂದಾರಕರಿಗೆ ತಿಳಿಸಿದೆ ಗುರುರಾಜಾ
ಸಾನುರಾಗದಿ ಪ್ರಾಣಪತಿ ಶೌರಿಯ ಧ್ಯಾನದಿಂದ
ನೀ ಸನ್ಮಾನಿತನೊ ಗುರುರಾಜಾ
ನಿನ್ನಯ ಆಳರಸುತನಕೆ ನಮೋ ನಮೋ ಗುರುರಾಜಾ
ಹೇ ಭಾವಿ ಭಾರತೀಶ ಗುರುರಾಜಾ
ಯೆನ್ನಯ ಭವ ಭೀತಿ ಭೇದಿಸೊ ಗುರುರಾಜಾ
ಭಾವಕನೆ ನಿನ್ನ ಭಯ ತೋರೊ ಗುರುರಾಜಾ
ನಾ ನಿನ್ನ ನಿನ್ನವರದಾಸನೊ ಗುರುರಾಜಾ
ನೀ ಭಾರತವ ಭೇದಿಸಿ ಗುರುರಾಜಾ
ಭುವನದಳ ಚತುರ್ದಶಕೆ ಭವಸುಧಾಂಬುಧಿಯ
ಕಲ್ಪಿಸಿದೆ ಗುರುರಾಜಾ
ಜಾಣೆ ಶ್ರೀ ಭಾರತಿ ದೇವಿಯು ಕೈಕೊಂಡು
ತೋರುವಿಯೊ ಗುರುರಾಜಾ
ಭಾವಿ ಪಾರ್ವತೀಶ ಶ್ರೀ ಭೂತರಾಜರಿಂದೊಂದಿತ
ಗುರುವರ ಶ್ರೀ ಗುರುರಾಜಾ
ವಂದಿಪೆ ನಾನಿನಗೆ ಶ್ರೀ ಗುರುರಾಜಾ
ಕಾಲನಾಮಕ ನೀನಹುದೊ ಶ್ರೀ ಗುರುರಾಜಾ
ಕಲಿ ಕುಲ ಮಾರಶೂರನೊ ನೀನು ಗುರುರಾಜಾ
ಬಾಲ ಬಲು ಚತುರೇಶನೂ ನೀನು ಗುರುರಾಜಾ
ಬಲು ಶೂರನೂ ನೀನಹುದೊ ಗುರುರಾಜಾ
ಕಾಲ ಬರಲು ಕೇವಲವು ನೀ ಗುರುರಾಜಾ
ಪ್ರಹ್ಲಾದ ರಾಜ ಶ್ರೀವ್ಯಾಸರಲಿ ನೀ
ಸೇವಿಸುತಲಿರೇ ಗುರುರಾಜಾ
ಸುರ ಹರ ನಾರಾಯನನು ನಿನ್ನಯ
ದ್ರೋಹಿಸೇ ಗುರುರಾಜ

ಕುಲಯಾದವಾಧಿಪ ಕೃಷ್ಣ ಪರಿಸರ
    ನೀನಾಗ ಶಪಿಸಲು ಗುರುರಾಜ
ಅವನು ವೇಗದಿ ತಾಳಿದ ತನುಭೂತ ಗುರುರಾಜ
ಭೂತಗಣದೊಳು ಮಹರಾಜನೆನಿಸಿ ಅವ ಭೂಸುರರ ನೀಗುತಲಿರಲು
    ಗುರುರಾಜ
ಕೆಲವು ಕಾಲದಿ ಅವನ ನೀ ಸ್ಥಳಕೆ ನೀ
    ಪೋಗ್ಯವನ ಸೋಲಿಸೆ ಗುರುರಾಜ
ನಿನ್ನ ದಾಸನಾಗ್ಯವನು ನಿನ್ನ ಸೇವಿಸೇ ಗುರುರಾಜ
ಸೇವಿಸಿದವಗೆ ನಿಜ ಪದವನಿತ್ಯೋ ನೀ ಗುರುರಾಜ
    ಫಾಲನಯನನ ಪಾಲನೇ ಗುರುರಾಜ
ಶ್ರೀ ತಂದೆವರದರಾಜರ ಹೃತ್ಪದ್ಮ ಪೀಠಕೋಣತ್ರಯ
    ವಿರಾಜಿತನೋ ಗುರುರಾಜ
ನೀಲಿಂಗುಂತರ್ಬಹಿರ್ವ್ಯಾಪ್ತನೊ ಗುರುರಾಜ
ಬಹುಪರಿಯಲಿ ಜೀವರ ಹೃದಯಾಕಾಶದಿ
    ಶೋಭಿಪೆ ಗುರುರಾಜ
ಮೂಲ ಮುಕುಟಾಭರಣ ಕೆತ್ತಿದ ರತ್ನ
    ನವಮಣಿ ವಜ್ರ ಧರಿಸಿ ಗುರುರಾಜ
ದನುಜರ ಕೊಂದು ಬಿಸುಟುವಿಯೊ ಗುರುರಾಜ
ನೀ ರುದ್ರೇಂದ್ರ ವಂದ್ಯನೊ ಗುರುರಾಜ
ನೀ ಸುಂದರಾಂಗನೋ ಗುರುರಾಜ
ಸುವಂದ್ಯ ಮಹಿಮನೋ ಗುರುರಾಜ
ಶ್ರೀ ವೃಂದಾವನಾರ್ಯ ಗುರುವರನೋ ಗುರುರಾಜ
ವೇದ ವಂದ್ಯ ಸುಮಹಿಮನೊ ನೀನು ಗುರುರಾಜ
ವೇದಾದಿ ಆಶ್ರಿತಹೋಮನೋ ಗುರುರಾಜ
ವೇದಾಭಿಮಾನಿಗಳ ಕಾಮನೋ ಗುರುರಾಜ
ವೇದನಿಧಿ ಗುರು ಭೀಮನೋ ಗುರುರಾಜ
ವೇದ ವೇದ್ಯ ಸುವಂದ್ಯನೋ ಗುರುರಾಜ
ನೀ ವಿಧಿ ಸಖನೋ ಗುರುರಾಜ

ವಾದಿಗಳ ಕುಲವದ್ದು ದಶರಥ ಹೇಯನೆನಿಸಿದ
ಬೌದ್ಧದೇವನ ಗುರುರಾಜ
ಶ್ರದ್ಧೆಯಿಂದಲಿ ಸಿದ್ಧಪಡಿಸುವದೆಂದು ಗುರುರಾಜ
ಜನರ ಬುದ್ಧಿ ಭೇದವ ಮಾಡಿ ದಿವದಿ ಕದ್ದು ದೇವನ
ಭಾವದಿಂದಲಿ ಪೂಜಿಸಲು ನೀ ಗುರುರಾಜ
ಅದು ಬಲು ಸುದ್ದಿಯ ತಿಳಿಯಲು ಸದ್ದು
ಇಲ್ಲದೆ ಬೌದ್ಧ ಜನರು ಬಂದು ನೋಡೆ ಗುರುರಾಜ
ತಿದ್ದಿ ವಿಗ್ರಹ ತೋರಿ ಸರ್ವ ಸುರರನು ಸಲಹಿ ಅಸುರರ ವದ್ದ
ಪಲ್ಗಳ ಮುರಿದು ಮೆರೆದೇ ಗುರುರಾಜ
ನೀ ಪದ್ಮಜಾತನ ಪದವಿ ಪೊಂದುವಿ ಎಂದು ನಿನ್ನಯ
ಪದ್ಮಪಾದಕೆ ಬಿದ್ದೆನಾ ಗುರುರಾಜ
ನೀ ಗುರು ಮಧ್ವವಲ್ಲಭನಿಂದ ರಮಣವ
ಕೊಂಡು ಭಜಿಸುವೆ ಗುರುರಾಜ
ಸಿದ್ಧ ಶೇಖರ ಸೋಮ ವಂದ್ಯನೊ ನೀ ಗುರುರಾಜ
ಹರುಷದಿಂದಲಿ ನಿನ್ನ ದರುಶನವಾದ
ದಿನದಾರಭ್ಯ ಗುರುರಾಜ
ಮನದಲಿ ಮಿಂಚಿನಂತೆ ಪೊಳೆವೊ ಸುಂದರ
ಸುಂದರಾಂಗಿಯ ಸಹಿತ ವಂದಿಪೆನೊ ಗುರುರಾಜ

## ೨೮೯

### (ಋಜುಗಣದ ಪಟ್ಟಿ)

ಗುರುರಾಜ ಗುರುರಾಜ ನೀ ಕಲ್ಕಿಯಿಂದೊಂದಿತ ಗುರುರಾಜ
ಸುತೇಜನಿಂದೊಂದಿತ ಗುರುರಾಜ
ದಾಸನಿಂದೊಂದಿತ ಗುರುರಾಜ
ಧರ್ಮನಿಂದೊಂದಿತ ಗುರುರಾಜ
ಅಧರ್ಮ ಖಂಡನಿಂದೊಂದಿತ ಗುರುರಾಜ
ವರ್ಚಸ್ವಿಯೊಂದಿತ ಗುರುರಾಜ

ಖಷಣನಿಂದೊಂದಿತ ಗುರುರಾಜ
ಸಾಧುಯಿಂದೊಂದಿತ ಗುರುರಾಜ
ಮಹಿಪತಿಯಿಂದೊಂದಿತ ಗುರುರಾಜ
ಸದ್ಧರ್ಮಜ್ಞನಿಂದೊಂದಿತ ಗುರುರಾಜ
ಧರ್ಮಜನಿಂದೊಂದಿತ ಗುರುರಾಜ
ಸಂಪೂರ್ಣನಿಂದೊಂದಿತ ಗುರುರಾಜ
ಶುಚೆಯಿಂದೊಂದಿತ ಗುರುರಾಜ
ವೈಕೃತನಿಂದೊಂದಿತ ಗುರುರಾಜ
ಅಂಜನನಿಂದೊಂದಿತ ಗುರುರಾಜ
ಸರ್ಷಪನಿಂದೊಂದಿತ ಗುರುರಾಜ
ಖರ್ಪಟನಿಂದೊಂದಿತ ಗುರುರಾಜ
ಶ್ರದ್ಧಾಪ್ತನಿಂದೊಂದಿತ ಗುರುರಾಜ
ಸಂಧ್ಯಾತನಿಂದೊಂದಿತ ಗುರುರಾಜ
ವಿಜ್ಞಾನದಿಂದೊಂದಿತ ಗುರುರಾಜ
ಮಹಾವಿಜ್ಞಾನನಿಂದೊಂದಿತ ಗುರುರಾಜ
ಕೀರ್ತನನಿಂದೊಂದಿತ ಗುರುರಾಜ
ಸಂಕೀರ್ಣಾಖ್ಯನಿಂದೊಂದಿತ ಗುರುರಾಜ
ಕಕ್ಥನಿಂದೊಂದಿತ ಗುರುರಾಜ
ಮಹಾಬುದ್ಧಿಯಿಂದೊಂದಿತ ಗುರುರಾಜ
ಮಹತ್ತರನಿಂದೊಂದಿತ ಗುರುರಾಜ
ಸುವೀರ್ಯನಿಂದೊಂದಿತ ಗುರುರಾಜ
ಮೇಧಾವಿಯಿಂದೊಂದಿತ ಗುರುರಾಜ
ವಿಜಯನಿಂದೊಂದಿತ ಗುರುರಾಜ
ಜಯನಿಂದೊಂದಿತ ಗುರುರಾಜ
ರಂತಿಮ್ನನಿಂದೊಂದಿತ ಗುರುರಾಜ
ಪ್ರಮೋದನಿಂದೊಂದಿತ ಗುರುರಾಜ
ಸಂತಸನಿಂದೊಂದಿತ ಗುರುರಾಜ
ಆನಂದನಿಂದೊಂದಿತ ಗುರುರಾಜ

ಸಂತುಷ್ಟನಿಂದೊಂದಿತ ಗುರುರಾಜ
ಚಾರ್ವಾಂಗನಿಂದೊಂದಿತ ಗುರುರಾಜ
ಚಾರುಯಿನಿಂದೊಂದಿತ ಗುರುರಾಜ
ಸುಬಾಹುಯಿನಿಂದೊಂದಿತ ಗುರುರಾಜ
ಚಾರುಪದನಿಂದೊಂದಿತ ಗುರುರಾಜ
ಸುಲೋಚನನಿಂದೊಂದಿತ ಗುರುರಾಜ
ಸಾರಸ್ವತನಿಂದೊಂದಿತ ಗುರುರಾಜ
ಸುವೀರನಿಂದೊಂದಿತ ಗುರುರಾಜ
ಪ್ರಾಜ್ಞನಿಂದೊಂದಿತ ಗುರುರಾಜ
ಕಪಿಯಿಂದೊಂದಿತ ಗುರುರಾಜ
ಅಲಂಪಟನಿಂದೊಂದಿತ ಗುರುರಾಜ
ಸರ್ವಜ್ಞನಿಂದೊಂದಿತ ಗುರುರಾಜ
ಸರ್ವಜಿತನಿಂದೊಂದಿತ ಗುರುರಾಜ
ಮಿತ್ರನಿಂದೊಂದಿತ ಗುರುರಾಜ
ಪಾಪ ವಿನಾಶಕನಿಂದೊಂದಿತ ಗುರುರಾಜ
ಧರ್ಮವಿನೇತನಿಂದೊಂದಿತ ಗುರುರಾಜ
ಶಾರದನಿಂದೊಂದಿತ ಗುರುರಾಜ
ಓಜನಿಂದೊಂದಿತ ಗುರುರಾಜ
ಸುತಪಸ್ವಿಯಿಂದೊಂದಿತ ಗುರುರಾಜ
ತೇಜಸ್ವಿಯಿಂದೊಂದಿತ ಗುರುರಾಜ
ದಾಸಸುಶೀಲನಿಂದೊಂದಿತ ಗುರುರಾಜ
ಯಜ್ಞ ಸುಕರ್ತನಿಂದೊಂದಿತ ಗುರುರಾಜ
ಯಜ್ವೀಯಿಂದೊಂದಿತ ಗುರುರಾಜ
ಯಾನವರ್ತಕನಿಂದೊಂದಿತ ಗುರುರಾಜ
ಪ್ರಾಣನಿಂದೊಂದಿತ ಗುರುರಾಜ
ಅಮರ್ಷಿಯಿಂದೊಂದಿತ ಗುರುರಾಜ
ಉಪದೇಷ್ಟನಿಂದೊಂದಿತ ಗುರುರಾಜ
ತಾರಕನಿಂದೊಂದಿತ ಗುರುರಾಜ

ಕಾಲಕೀರ್ತನಿಂದೊಂದಿತ ಗುರುರಾಜ
ಸುಕರ್ತನಿಂದೊಂದಿತ ಗುರುರಾಜ
ಸುಕಾಲಜ್ಞನಿಂದೊಂದಿತ ಗುರುರಾಜ
ಕಾಲಸುಸೂಚಕನಿಂದೊಂದಿತ ಗುರುರಾಜ
ಕಲಿ ಸಂಹರ್ತನಿಂದೊಂದಿತ ಗುರುರಾಜ
ಕಲ್ಕಿಯಿಂದೊಂದಿತ ಗುರುರಾಜ
ಕಾಲಕನಿಂದೊಂದಿತ ಗುರುರಾಜ
ಶ್ಯಾಮರೇತನಿಂದೊಂದಿತ ಗುರುರಾಜ
ಸದಾರತನಿಂದೊಂದಿತ ಗುರುರಾಜ
ಸುಬಲನಿಂದೊಂದಿತ ಗುರುರಾಜ
ಸಹೋಯಿಂದೊಂದಿತ ಗುರುರಾಜ
ಸದಾಕೃಷ್ಣಿಯಿಂದೊಂದಿತ ಗುರುರಾಜ
ಜ್ಞಾನನಿಂದೊಂದಿತ ಗುರುರಾಜ
ದಶಕಲನಿಂದೊಂದಿತ ಗುರುರಾಜ
ಶ್ರೋತವ್ಯನಿಂದೊಂದಿತ ಗುರುರಾಜ
ಸಂಕೀರ್ತಕನಿಂದೊಂದಿತ ಗುರುರಾಜ
ಮಂತವ್ಯನಿಂದೊಂದಿತ ಗುರುರಾಜ
ಕವ್ಯನಿಂದೊಂದಿತ ಗುರುರಾಜ
ದ್ರಷ್ಟವ್ಯನಿಂದೊಂದಿತ ಗುರುರಾಜ
ಸಖ್ಯನಿಂದೊಂದಿತ ಗುರುರಾಜ
ಗಂತವ್ಯನಿಂದೊಂದಿತ ಗುರುರಾಜ
ಕ್ರವ್ಯನಿಂದೊಂದಿತ ಗುರುರಾಜ
ಸ್ಮರ್ತನಿಂದೊಂದಿತ ಗುರುರಾಜ
ಸ್ತವ್ಯನಿಂದೊಂದಿತ ಗುರುರಾಜ
ಸುಭವ್ಯನಿಂದೊಂದಿತ ಗುರುರಾಜ
ಸ್ವರ್ಗವ್ಯನಿಂದೊಂದಿತ ಗುರುರಾಜ
ಭಾವ್ಯನಿಂದೊಂದಿತ ಗುರುರಾಜ
ಜ್ಞಾತವ್ಯನಿಂದೊಂದಿತ ಗುರುರಾಜ

ವಕ್ತವ್ಯನಿಂದೊಂದಿತ ಗುರುರಾಜ
ಗವ್ಯನಿಂದೊಂದಿತ ಗುರುರಾಜ
ಲಾತವ್ಯನಿಂದೊಂದಿತ ಗುರುರಾಜ
ವೃಂದಾವನದಾಕಾರನಾಗಿರುವೆ ಗುರುರಾಜ
ವಾಯು ಬ್ರಹ್ಮ ಬ್ರಾಹ್ಮಣಪ್ರಿಯನಾಗಿರುವೆ ಗುರುರಾಜ
ಸರಸ್ವತಿ ಪತಿಯಾಗುವೆ ಗುರುರಾಜ
ಮಾಂಪಾಹಿ ಮಾಂಪಾಹಿ ಶ್ರೀ ಗುರುರಾಜ
ಎಮ್ಮ ಹಿರಿಯರಾಡಿದ ನುಡಿಗಳಿಂದಲೇ ನಿನ್ನ ನಾ
ಕೊಂಡಾಡುವೆನೋ ಗುರುರಾಜ
ಎನ್ನಪರಾಧ ಅನಂತ ಕ್ಷಮಿಸು
ಕ್ಷಣ ಕ್ಷಣಕೆ ಗುರುರಾಜ
ವಾರುಣೀಪತಿ ಬಿಂಬ ಹನುಮ ಭೀಮಾನಂದ
ಮುನಿ ನಿಲಯ ಗುರು ತಂದೆ
ವರದಗೋಪಾಲವಿಠಲನ ಉದ್ದಂಡ ದೂತ
ಎನಗೆ ತಂದೆ ತಾಯಿ ಸಕಲ
ಬಂಧು ಬಳಗವು ನೀನೆ ಗುರುರಾಜ
ವಂದು ಕಾಣದ ಮಂಗ ನಾನಾದೆಯಿಂದು ಗುರುರಾಜ
ಹೊತ್ತು ಹೋಯಿತು ವ್ಯರ್ಥ ನಿನ್ನ
ಕಾಣದಲೆ ಎನಗೆ ಗುರುರಾಜ
ಯತ್ತಿದ್ದರೇನು ನಿನಗಲ್ಲದವನು ಗುರುರಾಜ
ಶ್ರೀ ಮಧ್ವಶಾಸ್ತ್ರವ ತಿಳಿಸಿ ಉದ್ಧರಿಸು ಎನ್ನ ಗುರುರಾಜ
ಸದ್ಭಕ್ತರಲಿ ಇಟ್ಟು ಕಾಪಾಡು ಎನ್ನ ಗುರುರಾಜ
ತ್ವದ್ಭಕ್ತನಾ ಮಾಡಿಕೊ ತವ ದಾಸ್ಯ ಕೊಟ್ಟೆನಗೆ ಗುರುರಾಜ
ಹೇಡಿ ಜೀವನನಾಗಿ ನಾ ನಿನ್ನ ಮರೆತೆ ಗುರುರಾಜ
ಏನು ಮಾಡಲು ಒಲಿವೆನೀ ಎನಗೆ ಗುರುರಾಜ
ನಾನೆಂಬೊ ಭಗವದ್ರೂಪದಾ ಸಂಸ್ಮೃತಿಯ
ನೀಡೆಲೊ ಎನಗೆ ಶ್ರೀ ಗುರುರಾಜ
ನಾನೆಂಬೊ ಸ್ಮೃತಿಯ ನೀಡದಿರೆನಗೆ ಗುರುರಾಜ

ನಾನು ನನ್ನದುಯಲ್ಲ ನಿನ್ನ ಪರವಾಗಲಿ ಗುರುರಾಜ
ಎಂದು ಶ್ರೀಹರಿಯ ಶಿರಿ ಸಹ ತೋರಿವಿ ಎನಗೆ ಗುರುರಾಜ
ಯೆಂದೆಂದು ನೀನೆ ನಿಜ ಬಂಧು ಎನಗೆ ಗುರುರಾಜ
ಎಂದೆಂದು ಸ್ಮೃತಿಯಲಿ ನೀನಿದ್ದು ತಿಳಿಸುತಿರು ಗುರುರಾಜ
ನಿನ್ನ ನಿನ್ನವರಲ್ಲಿ ಯೆಂದೆಂದು ದ್ವೇಷವಾ
ಕೊಡದಿರೆನಗೆ ಗುರುರಾಜ
ನಿನ್ನ ಶ್ರೀಪಾದ ರಜದಲ್ಲಿ ನೀ ತೋರು ಎನಗೆ ಗುರುರಾಜ
ಶ್ರೀಕೃಷ್ಣಾರ್ಯ ಗುರುವಿನಲ್ಲಿ ನೀ ತೋರು ಎನಗೆ ಗುರುರಾಜ
ಸತತ ಎಲ್ಲೆಲ್ಲೂ ಪೊಳೆಯುತಿರು ಎನಗೆ ಗುರುರಾಜ
ಯಾಕಿಷ್ಟು ನಿರ್ದಯ ಎನಮ್ಯಾಲೆ ನಿನಗೆ ಗುರುರಾಜ
ತಂದೆವರದರಾಜರ ಅತ್ಯಾಪ್ತಸಖನೆಂದು ಸಲಹೋ ಗುರುರಾಜ
ಗುರುತಂದೆವರದಗೋಪಾಲವಿಠಲನ ಸಹ ಪರಿವಾರ ಸಹ ಬಂದು
ತೋರೆನ್ನ ಮನದಲ್ಲಿ ಗುರುರಾಜ

# ೯. ಸಿರಿಗುರುತಂದೆವರದ ಗೋಪಾಲವಿಠಲರು

## ೨೯೦

### ಲಕ್ಷ್ಮೀದೇವಿ

ದಾಸನಲ್ಲವೇ ನಿನ್ನ ದಾಸನಲ್ಲವೆ ಪ

ದಾಸನಾದ ಮೇಲೆ ಎನ್ನ ಘಾಸಿಗೊಳಿಸುವುದುಚಿತವೇನೇ
ಘೋಷ ರೂಪನ ಪೆತ್ತ ತಾಯಿ ಅ.ಪ.

ಮಾಯೆಯೆ ನೀನು ಮಹಾ ಮಾಯ ಮಾಡುವರೇನು
ಮಾರ ಮುಖ್ಯ ಶರತಾಪವ ಹರಿಸುತ ಮಾನದಿಂದ ಕಾಯೆ
ಮಾರನ ತಾಯೇ ೧

ಪದ್ಮಜಾತೆ ನೀನು ಕುಬುದ್ಧಿ ಶರಧಿ ನಾನು
ತಿದ್ದಿ ತೋರೆ ಹೃತ್ಪದ್ಮನಿವಾಸಿಯ ಶಿರಿಪದ್ಮನ
ರಮಣಿಯೆ ೨

ಕಷ್ಟ ಪಡಿಸ ಬ್ಯಾಡೆ ಭವ ಕಟ್ಟು ಬಿಡಿಸಿ ನೋಡೇ
ಯೆಷ್ಟೆಂದು ಪೇಳಲಿ ಗುರುಕೃಷ್ಣನ ಪೆತ್ತ ಶಿಷ್ಟ
ಶಿಖಾಮಣಿಯೆ ೩

ಸಾರಶಾಸ್ತ್ರ ತೊರೆದೂ ದಿವ್ಯ ಮಾರಶಾಸ್ತ್ರ ಸುರದೂ
ಶಾಸ್ತ್ರಾ ಶಾಸ್ತ್ರದ ದಾರಿಯ ತೋರಿಸಿ
ಶತ್ರು ನಿವಾರಿಸು ೪

ಸಾಧು ಜನರ ಕೂಡೀ ಮೋಕ್ಷಕೆ ಸಾಧನವನೆ ಮಾಡಿ
ಶಿಖರಪುರಕೆ ಬಂದೆ ಶಿರಿ ತಂದೆವರದಗೋಪಾಲವಿಠಲನ
ತೋರೆಂದೆ ಇಂದು ೫

## ೨೯೧

### ಸುಪರ್ಣಾದೇವಿ

ಜಗವ ಪಾವನ ಮಾಳ್ಪ ವರದ ಮಾತೆ ಪ

ಖಗರಾಜನಿಗೆ ಅತಿ ಪ್ರೀತಿ ಪಾತ್ರಳೆ ದೇವಿ ಅ.ಪ.

ವರಹ ರೂಪದ ನಾಶಿಕದಿಂದ ಉದ್ಭವಿಸಿ
ವಾಗ್ದೇವಿ ಸುತನಿಂ ಜಗದೊಳಗೆ ಪರಿದು
ವದನದಿಂದಲಿ ನಿಮ್ಮ ನಾಮಸ್ಮರಣೆಯ ಮಾಡೆ
ವೇಗದಿ ಬರುವ ತಿಮಿರಗಳ ನಾಶಮಾಳ್ಪೇ ೧

ನೀನಾಗಿ ಕರುಣವ ಮಾಡೆ ನಾ ಪಾವನನು
ನಿನ್ನ ಪಾದದ ಮಹಿಮೆ ತೋರೆ ಜಗದಿ
ನಿನ್ನ ಪತಿಯ ಪಾದ ಕಮಲದ ಮಹಿಮೆಯನು
ಉನ್ನತವಾಗಿ ತೊರೆನ್ನ ಹೃದಯದಲಿ ೨

ಎನ್ನ ಪಿತನ ತಾತಾ ಬಾಳಾರ್ಯ ಪ್ರಭುಗಳು
ನಿನ್ನ ಪಾದದ ಧ್ಯಾನ ಅನುದಿನ ಮಾಡೆ
ಯದುಪತಿಯ ಮಹಿಮೆಯನು ಶಿಷ್ಯರಿಗೆ ತೋರುತಲಿ
ಚನ್ನ ಶ್ರೀಗುರುತಂದೆಗೋಪಾಲವಿಠಲ–
ಪುರವ ಪೊಂದಿಸಿದ ಮರಿಯೇ ೩

## ೨೯೨

### ಶ್ರೀ ವಿಷ್ಣುತೀರ್ಥರು

ಅಡಿಗಳ ಭಜಿಸುವ ಮನುಜರ ಬಿಡನ್ಯೆ ತನ್ನ ಪ

ಕಡು ಕರುಣೀ ಬಿಡು ಸ್ಮರಣೀ ನುಡಿ ಮನದೀ
ಅಡವಿಗಳೊಡೆಯನ ಪದ ದೃಢದಿ ಪಿಡಿ
ಮೂಢ ಮಾನವಾ ಅ.ಪ.

ಕಂಕಣ ಕಟ್ಟೀ ಬಿಂಕವ ಮುರಿಯುತ ಕಿಂಕರ
ಸಲಹುವ ಪಂಕಜನಯ್ಯನ
ಪಂಕಜದೊಳು ತಾ ಮಿಂಚಿನಂದದಿ ಕಂಗಳಿಗೊಪ್ಪುವ
ಮಂಗಳಾ ಮಂಟಪದಲಿ ಮೀನಾಂಕನ ಸಹತೋರುವ
ಮದಗಜಸಿಂಹನು
ಮಾದನೂರಿನಲಿ ನಿಂತಿಹ ಪವನತನಯನು
ಕಮಲನಯನನು ಕರಾಳವದನ
ಪರಕಪಾಲನಯನನು ೧

ಧೀರನಾಗಿ ಪರದಾರರಿಗೋಸುಗ ಬಲು
ಕ್ರೂರನಾಗಿ ಇರುವೋನು
ಸೂರಿಪುರೇಶನ ಸಲಹುವ ಸತಿ ಪಾರ್ವತಿವರನು
ಮಾರಹರಿಸಿ ಸುರಸಾರ ಮತೋದ್ಧರ
ಸ್ವಾಮಿನಿಲಯ ಶ್ರೀ
ಗುರುರಾಜರ ಪದ ಸ್ಮರಿಸುವನು
ಶಿರದಲಿ ಜಾಹ್ನವಿ ಧರಿಸಿದ ಕೊರಳೊಳು
ಶಿರಮಾಲೆ
ಕರಮಾಲೆ ಜಟಬಾಲೆ ಸಹಕುಶನದಿ
ನಿಲಯನಪದ ಹೃದಯದಿ ಸ್ಮರಿಸುತ ೨

ಮೊಮ್ಮಗನೆನಿಸಿ ತಾತನ ಮೋಹಿಸಿ
ದಾತನ ತಲೆ ತರಿದವನು
ಮಹಾಮುನಿಪುರದೊಳು ತೆರಳಿದ ಸಮಯದಿ
ತನ್ನ ಸತಿಯೊಳು ಸರಸವನಾಡಿದನು
ಕಾಳಕೂಟವಾ ತಾ ಪಾನಮಾಡಿ
ಗರಗೊರಳೆಂದೆನಿಸಿದನೂ
ಶಿರಿಸುತ ತಂದೆವರದಗೋಪಾಲವಿಠಲನ
ಪದ ಧೇನಿಪನೋ ಸೇವಿಪನೋ ಪಾವಿನ ಪದನೋ
ವನದೊಳು ನಿಂದು ಶ್ರೀರಾಮನ ಜಪಿಸುವ ೩

## ೨೯೩

### ಧೀರೇಂದ್ರ ಯತಿಗಳು

ಪಾದ ನಂಬಿದೆ ಜನಕೆ ಪಾರುಗಾಣಿಪ
ಪರಮ ಕರುಣಿ ಶ್ರೀ ಧೀರೇಂದ್ರವರ್ಯಾ ಪ

ಪದಕಮಲದಲಿ ನಿತ್ಯ ಅನವರತ ಭಕ್ತಿಯನೆ
ಇತ್ತೆನ್ನ ಕಾಯೆಯ್ಯ ಕರುಣಾನಿಧೆ ಅ.ಪ.

ವಸುಧೀಂದ್ರ ಕರಕಮಲ ಸಂಜಾತ ವಸುಧೆಯೊಳು
ವಾಸವಾಗಿಹ ಭಕ್ತ ಜನಕೆಲ್ಲಾ ವಾಸವಾನುಜ ಶ್ರೀ
ವಾಸುದೇವನ ಸರ್ವಜಗಕೆಲ್ಲಾಪಾಯನೆಂಬಾ
ವಾಸುದೇವನ ಮತವ ಬೋಧಿಸುತೆ ಸಾತಾರಾ
ಪುನಯಾದಿ ನಗರದ ವಾದಿಗಳನೆಲ್ಲಾ
ವಾದದಿಂದಲಿ ಗೆದ್ದು ಬಹುಮಾನವನೆ ಪಡೆದು
ಮಹಿಯೊಳಗೆ ಬಹು ಖ್ಯಾತಿ ಪಡೆದ ಮಹಾಮಹಿಮ ೧

ಭೂರಮಣ ಶ್ರೀಕಾಂತ ಬಹುಕೋಪದಿಂದಲಿ
ಕೋದಂಡಪಾಣಿಯಾಗಿ ಭವಜನಕೆ ಮೋಹವನೆ ಬೀರುವಾ
ಸಮಯದಲಿ ಬಹು ಭ್ರಾಂತಿಗೊಂಡು ಇರಲು
ಭಾರತೀಶನ ದಯದಿ ಭಾಗೀರಥಿಯ ಕೂಡಿ
ಬಹುಭಕ್ತಿಯಿಂದ ಒಲಿಸಿ ಭೂಮಿಜೆಯ ಕಳ್ಳನನೆ ಸಂಹರಿಪ
ಕಾರ್ಯದಲಿ ಬಹುಸೇವೆಗೈದಂಥ ಪುಣ್ಯಶಾಲಿ ೨

ಶ್ರೀರಮಣನಾಜ್ಞೆಯಲಿ ಭಜಿಪ ಭಕ್ತರಿಗೆಲ್ಲ
ಬೇಡಿದಿಷ್ಟಾರ್ಥಗಳ ಸಲಿಸುತ್ತಲೀ ಶ್ರೀಕೃಷ್ಣಭಕ್ತರಿಗೆ
ಕೃಷ್ಣವಾಗಿಹ ಮನವ ಉತ್ಕೃಷ್ಟಗೈಯ್ಯುತ್ತಲೇ
ಶ್ರೀಸುರಪನಾಯಕೆ ಸರಿಮಿಗಿಲು ಎಂದೆನಿಪ
ಬಹುಭಾಗ್ಯವನ್ನೆ ಪಡೆದು ಶ್ರೀಗುರುತಂದೆವರದ–
ಗೋಪಾಲ ಅಸಿ ಬಿಟ್ಟು ಬಿಡದಲೆ
ಭಕ್ತಿಯಿಂ ಭಜಿಪ ಗುರುವರ್ಯ ೩

## ೨೯೪

ಶಿಖರಪುರ ದಾಸಾರ್ಯ ವಂಶದಿ
ಶಶಿಯಂತೆ ಉದಿಸಿದ
ಶ್ರೀನಿವಾಸಾರ್ಯರೆಂಬ ಪ್ರಚಲಿತ ನಾಮದ
ದಾಸಾರ್ಯರ ಚರಿತೆ
ಗುರುಗಳ ದಯದಿಂದ ಅರಿತಷ್ಟು ಪೇಳುವೆ
ಬುಧ ಜನರು ನಿಷ್ಕಪಟ ಭಾವದಿಂದಲಿ ಕೇಳಿ
ಸಿರಿಗುರುತಂದೆವರದಗೋಪಾಲವಿಠ್ಠಲನ
ಭಕ್ತರೊಳಗಿವರೊಬ್ಬರು ಕಾಣಿರೊ ೧

ಶ್ರೀ ರಮೇಶಕೃಷ್ಣನು ತನ್ನ ಪರಿವಾರ ಸಹಿತಾಗಿ
ಓಲಗದಿ ಕುಳಿತಿರಲು ಸಾವಧಾನದಿ ತಾನು
ಶ್ರೀದೇವಿ ಖುಷಿಯಾಜ್ಞೆಯಿಂದಲಿ ಬಂದು
ಶಿರಬಾಗಿ ಧರಣಿಯೊಳು ಭಾಗವತರ ಮಹಿಮೆ
ತಿಳಿದು ಸಾಧನೆಗೈಯ್ಯಬೇಕೆಂಬ ಕುತೂಹಲದಿಂದ
ದೇವಾಂಶರ ಬಿಡದೆ ಅವತಾರ ಮಾಡಿದ ಪವಿತ್ರವಂಶದಿ
ಬಹುಕಾಲ ಪುತ್ರಾಪೇಕ್ಷೆಯಿಂದಲಿ
ಶ್ರೀನಿವಾಸನ ಸೇವೆಗೈದ ಮಾತೆ ಶ್ರೀ ರುಕ್ಮಿಣೀದೇವಿ
ಪಿತ ರಾಘವೇಂದ್ರರ ಉದರದಿಂದಲಿ ಜನಿಸಿ
ಬಾಲತ್ವ ಕೆಲಕಾಲ ಕಳೆದು
ತದನಂತರದಿ ಭೂವೈಕುಂಠಪುರದಲ್ಲಿ ದ್ವಿಜತ್ವವನೆ ಪಡೆದು
ಲೌಕಿಕ ವಿದ್ಯೆಗಳನೆಲ್ಲ ಕಲಿಸಿ ಬಳಿಕ
ಸಂಗೀತ ವಿದ್ಯೆಯ ಸಾಧನಕೆ ಮಿಗಿಲೆಂದು ಸಾಧಿಸಿ ಬಿಡದೆಲೆ
ಪ್ರಾವೀಣ್ಯತೆಯ ಪಡೆದು ಅತಿ ಗೌಪ್ಯದಿಂದಲಿ
ಶಿರಿಗುರು ತಂದೆವರದಗೋಪಾಲವಿಠ್ಠಲನ ಸ್ತುತಿಸಿ
ಮನದಿ ಅತಿ ಹಿಗ್ಗುತಲಿರ್ದ ಬಗೆ ಕೇಳಿ ೨

ಗುರು ಕಾಳಿಮರ್ದನ ಕೃಷ್ಣಾಖ್ಯದಾಸರ ಸಹವಾಸದಿಂದಲಿ
ಲೌಕಿಕದಿ ಹುರುಳಿಲ್ಲವೆಂಬ ಮರ್ಮವ ತಿಳಿದು
ಮನದಿ ವಿಚಾರಿಸುತಿರಲು

ಕಾಲವಶದ ಸೋತ್ತುಮ ರಾಜ್ಯದಿ ಸ್ವರೂಪ ಕ್ರಿಯೆಗಳಾಚರಣೆಗೆ
ಮನಮಾಡುತಲಿಹ ಓರ್ವ ದ್ವಿಜನ ಮರ್ಮವ ತಿಳಿಯದೆ
ನಿಂದಿಸುವ ಮನವ ಮಾಡೆ ಶ್ರೀವದ್ವಿಜಯರಾಯರು
ತಮ್ಮ ವಂಶಜನಿವನೆಂದು ಶ್ರೀಮತ್ ರಾಘವೇಂದ್ರ ಮುನಿಗೆ
ಬಹು ವಿಧ ಪ್ರಾರ್ಥಿಸಿ ಫಲ ಮಂತ್ರಾಕ್ಷತೆಯನಿತ್ತು
ಧ್ಯಾನಕ್ಕೆ ತೊಡಗಿಸಿ ಶ್ರೀಮದ್ ಭಾವಿ ಸಮೀರ
ಪದರಜವೇ ಬಹು ಭಾಗ್ಯವೆಂದು ಧೇನಿಪ ಭಕ್ತವರ್ಯರಾದ
ತಂದೆವರದಗೋಪಾಲ ವಿಠಲದಾಸರಾಯರ
ಪದಪದ್ಮಂಗಳಿಗೊಪ್ಪಿಸಿ ಅಪರಾಧಗಳನ್ನೆಲ್ಲ
ದೃಷ್ಟಿ ಮಾತ್ರದಿ ದಹಿಸಿ ಫಣಿಗೆ ಮೃತ್ತಿಕೆ ತಡೆದು
ಗುರುಗಳನೆ ಅರುಹಿ ನಿಜ ಮಾರ್ಗದಿಂದ
ಶಿರಿಗುರುತಂದೆವರದಗೋಪಾಲವಿಠ್ಠಲನ ಕರುಣಿ
ಪಡೆವ ಮಾರ್ಗವನೆ ಪಿಡಿದರು ಜವದಿ ೩

ಭವದೊಳು ಬಳಲುವ ಭೌತಿಕ ಜೀವಿಗಳ
ಬಹು ಬೇಗದಿಂದಲಿ ಉದ್ಧರಿಸಲೋಸುಗ ಬೋಧಮುನಿ ಕೃತ
ಗ್ರಂಥಸಾರವ ಬೋಧಿಪ ಮುನಿಗಳ ದರ್ಶನಗೋಸುಗ
ಪೊರಟ ಸಮಯದಲಿ ಶ್ರೀಗುರು ವಾದಿರಾಜ ಮುನಿವರ್ಯ
ತನ್ನಯ ಪುತ್ರನ ಮೊರೆಕೇಳಿ ಶ್ರೀಲಕ್ಷ್ಮೀಹಯವದನನ
ಮೂರ್ತಿಯ ಪ್ರಾರ್ಥಿಸೆ ರೌಪ್ಯಪೀಠ ಪುರವಾಸಿ
ಶ್ರೀಕೃಷ್ಣನ ಕರದಿ ಶೋಭಿಪ ವಸ್ತುವಿನ ಪುರದಿ ಸ್ವಪ್ನದಿ ಬಂದು
ತಂದೆವರದವಿಠ್ಠಲನೆಂಬ ಅಂಕಿತವನಿತ್ತು
ಅದೇ ಸುಂದರ ರೂಪವ ತೋರಿ ನೈಜಗುರುಗಳ ದ್ವಾರಾ
ಭಜಿಸೆಂದು ಬೋಧಿಸಿದ ನಂತರದಿ ಬಹು ಸಂಭ್ರಮದಿಂದಲಿ
ಉಬ್ಬುಬ್ಬಿ ತನ್ನ ತನುಮನಧನ ಮನೆ ಮಕ್ಕಳನೆಲ್ಲ
ನಿನ್ನ ಚರಣಾಲಯಕೆ ಅರ್ಪಿತವೆಂದು ಅರ್ಪಿಸಿ
ಗುರುಗಳ ದ್ವಾರಾ ಸಿರಿಗುರು ತಂದೆವರದಗೋಪಾಲಗೆ
ಸದಾ ಧೇನಿಸುತ ಮೈಮರೆತಿರ್ದನೀ ದಾಸವರ್ಯ ೪

ಮೊರೆ ಪೊಕ್ಕವರನೆ ಬಿಡದೆ ಪೊರೆವುದಕೆ
ಭೂತಳಕೆ ನೆಲಸಿಹ ಸುರಪನಾಲಯಕೆ

ಮಿಗಿಲಾದ ಸುಖಿಗರೆವ ತುಂಗಾತೀರ ನಿವಾಸ
ಶ್ರೀ ರಾಘವೇಂದ್ರರ ಪೀಠದಿ ಶೋಭಿಪ ಯತಿವರ್ಯ
ಶ್ರೀ ಧೀರೇಂದ್ರ ಸುಶೀಲೇಂದ್ರ ಸುವ್ರತೇಂದ್ರ
ಶ್ರೀ ನರಹರಿಯ ವಂಶಸ್ಥ ಶ್ರೀ ಸತ್ಯಬೋದಾದಿ ಯತಿವರ್ಯರ
ಸಂದರುಶನವ ಪ್ರತಿ ವತ್ಸರದಲಿ ಕೊಳ್ಳುತಲಿ ಗೌಪ್ಯದಲಿ
ನಿಜಮರ್ಮಕ್ಕನುಸರಿಸಿ ಸೇವೆಗೈದು ನೈಜಗುರುಗಳ
ದರುಶನಕೆಂದು ಶ್ರೀ ಕ್ಷೇತ್ರ ಸೋದಾಪುರಕೆ ಪೋಗಿ
ಮಹಾದ್ವಾರದಲಿ ಬಹು ಭಕ್ತಿಯಿಂದಲಿ ಸಾಷ್ಟಾಂಗ
ನಮನವ ಮಾಡಿ
ಕರಮುಗಿದು ಶಿರಬಾಗಿ ನಿಂತಿರಲು ಶ್ರೀ ಗುರುರಾಜಾಜ್ಞೆಯಿಂದಲಿ
ಶ್ರೀ ಭೂತರಾಜರು ಸಮಸ್ತ ಪರಿವಾರದೊಡನೆ
ಬಹು ಬೇಗದಿಂದಲಿ ಬಂದು ಕರುಣದಿಂದಲಿ ಮೈದಡವಿ
ಆದರದಿ ಸಂಪ್ರದಾಯಾನುಸಾರದಲಿ
ಪವಿತ್ರ ಸ್ಥಳಗಳನೆ ತೋರಿ ತದಭಿಮಾನಿ ದೇವತೆಗಳ
ಪೂರ್ಣಾನುಗ್ರಹಕೆ ಪಾತ್ರರನೆ ಮಾಡಿ ಶ್ರೀಲಕ್ಷ್ಮೀ
ತ್ರಿವಿಕ್ರಮ ಸ್ವಾಮಿಯ
ಸಂದರುಶನವ ಗೈಸಿ ತನ್ನ ಪ್ರಭುಗಳ ಪಾದ
ಪದ್ಮಂಗಳ ಸನ್ನಿಧಿಗೆ
ತಂದೊಪ್ಪಿಸಿ ಕರವ ಮುಗಿದು ಸ್ವಾಮಿ ಶ್ರೀಗುರುರಾಜಾತ್ವದ್ದಾಸವರ್ಗಕೆ
ಸೇರಿದ ಬಾಲಕ ದಾಸನೀತಾ ಕರುಣದಿಂದಲಿ ಜವದಿ
ಕರುಣ ಕಟಾಕ್ಷದಿ ಈಕ್ಷಿಸಿ ಉದ್ಧರಿಸಬೇಕೆಂದು ಬಹುವಿಧ
ಪ್ರಾರ್ಥಿಸಲು ಪರಮ ಕರುಣಾನಿಧಿ ಋಜುವರ್ಯ ಶ್ರೀ
ವಾದಿರಾಜಾರ್ಯ
ತನ್ನ ಹಂಸರೂಪಿಣಿ ಶ್ರೀ ಭಾವೀ ಭಾರತಿ
ಯಿಂದೊಡಗೂಡಿ ಬಹು
ಆನಂದದಿಂದಲಿ ಪಂಚ ಬೃಂದಾವನ
ರೂಪದಿ ಮೆರೆವ
ತನ್ನಯ ರೂಪವ ತೋರಿ ತುತಿಸಿಕೊಂಡು ಬಹು
ಆನಂದಭರಿತರಾಗಿ ಬಹು ಬೇಗ
ಸಾಧಿಸುವ ಗೈಸಲೋಸುಗ

ಶಿರಿಗುರು ತಂದೆವರದಗೋಪಲವಿಠಲನ ಪ್ರಾರ್ಥಿಸಿ
ಸಕಲ ಉತ್ಸವಗಳ ತೋರಿ ಶ್ರೀಮದ್ವಿಶ್ವೇಂದ್ರರ ದ್ವಾರಾ
ತವ ಪಾದರೇಣು ಫಲ ಮಂತ್ರಾಕ್ಷತೆಯನಿತ್ತು
ಬಗೆಯನೆಂತು ವರ್ಣಿಸಲಿ ಪಾಮರ ನರಾಧಮನು ನಾನು ೫

ಕೇವಲ ಲೌಕಿಕ ಜನರಂತೆ ಆಧುನಿಕ
ಪದ್ಧತಿಗನುಸರಿಸಿ
ದಿನಚರ್ಯವನೆ ತೋರುತಲಿ ಭಾರತೀಶನ
ಪ್ರಿಯವಾಗಿಹ
ಕರ್ಮಗಳನೊಂದನೂ ಬಿಡದೆ ತಿಳಿದು
ಮನದಿ ಮಾಡುತಲಿ
ಮಂಕುಗಳಿಗೆ ಮೋಹಗೊಳಿಸಿ ಮಮಕಾರ
ರಹಿತನಾಗಿ
ದಿನಾಚರಣೆಗೈದು ಶ್ರೀ ಶುಕಮುನಿ
ಆವೇಶಯುತರಾದ
ಸದ್ವಂಶಜಾತ ಶ್ರೀಕೃಷ್ಣನ ಸೇವೆಗೋಸುಗ
ಅವತರಿಸಿದ
ವಾಯುದೇವ ಪೆಸರಿನಿಂದಲಿ ಶೋಭಿಪ
ಕುಲಪುರೋಹಿತರ
ಬಳಿಯಲಿ ಬಹು ವಿನಯದಿಂದಲಿ
ಶ್ರೀ ನಿಜತತ್ವಗಳ ಮರ್ಮಗಳ
ಕೇಳಿಕೊಂಡು ಮನದಿ ವಿಚಾರಿಸಿ
ದೃಢೀಕರಣ ಪೂರ್ವಕ ಪಕ್ವವಾದ
ಮನದಿಂದಲಿ ಶ್ರೀಶಶ್ರೀ ಮಧ್ವಮುನಿ
ಶ್ರೀಗುರುಗಳ ಕರಣವನೆ
ಕ್ಷಣಕ್ಷಣಕೆ ಬಿಡದೆ ಸ್ಮರಿಸುತಾನಂದ
ಭಾಷ್ಯಗಳ ಸುರಿಸುತ
ಭಾಗವತರ ಸಮ್ಮೇಳನದಿ ತತ್ವಗಳ ವಿಚಾರಿಸುತ
ಶ್ರೀ ದಾಸಾರ್ಯರಾ ಉಕ್ತಿಗಳ ಆಧಾರವನೆ
ಪೇಳುತಲಿ ಮನದಿ

ಗುರುಗಳ ಸನ್ನಿಧಿಗೆ ಅರ್ಪಿಸಿ ತತ್ವದ್ವಾರ ತಿಳಿದು
ಪೂರ್ಣ ಸಾಧನವಗೈದು ಶ್ರೀ ಪ್ರಲ್ಹಾದ
ಬಲಿ ಮಾಂಧಾತ ಕರಿರಾಜ ಶಿಬಿ
ಮೊದಲಾದ ಚಕ್ರವರ್ತಿಗಳಲಿ ಬಹುಬೇಗ
ಸಾಧನವ ಗೈದರು
ಇವರಾರೊ ನಾ ಕಾಣೆ ಶಿರಿ ಗುರುತಂದೆವರದ-
ಗೋಪಾಲವಿಠಲನ ಆಣೆ ೬

ಸಾರಸುಖವ ಸತಿ ಆವೇಶದಿಂದಲಿ ಉದ್ಭವಿಸಿದ
ಸುತೆಯ ವಿಯೋಗದ ನೆಪಮಾಡಿ
ನಾಲ್ಕೆಂಟು ವತ್ಸರ ಪಾಂಚಭೌತಿಕ ದೇಹದಿಂದಿದ್ದು
ಸಾಧನ ಪೂರ್ತಿಗೈದ
ಬಗೆಯನೆ ಸಾಧುಜನಕೆ ತಾ ತೋರದಲೆ ಇನ್ನು
ಈ ಭೂಲೋಕದ ವಾಸವು
ಸಾಕೆಂದು ತಾರುಣ ವತ್ಸರ ಬಹು ತಾರಕವೆಂದು ಬಗೆದು
ಬಲು ಸಂಭ್ರಮದಿಂದಲಿ ಭೌತಿಕ ದೇಹದಿ ಏಳು
ದಿನ ಬಿಡದೆ ಪ್ರಾಯೋಪವೇಶಗೈದು
ಬಂದ ಜನರಿಗೆಲ್ಲ ಕರುಣದಿಂದಲಿ ನೋಡಿ ತದಾಕಾರನಾದ
ಶ್ರೀಹರಿಯ ಗುರುಗಳ ದ್ವಾರಾ ಧೇನಿಸುತ
ನೈಜ ಸತಿ ಇವಳೆಂದು
ಮನದಿ ವಿಚಾರಿಸಿ ಕಪಿಲ ಮುನಿಯು
ತನ್ನ ಮಾತೆಗೆ ಪೇಳಿದಂತೆ
ಪಿರಿಯರೆಂದು ಬಗೆದು ಪರ್ಯಾಯದಿಂದಲಿ
ತತ್ವವನೆ ಪೇಳಿ
ಭಾಗವತ ಜನರಿಗೆ ಮೌನದಿಂದಲಿ ಬಹುಬೇಗ
ಸಾಧನವ ಗೈಯ್ಯಬೇಕೆಂದು
ಸೂಚನೆಯ ಮಾಡುತ ಮಾಯಾ ಮಮತೆಗಳೆಂಬ
ವ್ಯಾಘ್ರಾದಿಗಳನೆಲ್ಲ
ನೈಜಜ್ಞಾನಾಖ್ಯ ಖಡ್ಗದಿಂದಲಿ ಸವರಿ
ಆಶ್ವೀಜ ಶುದ್ಧ ನವಮಿ

ಮಂಗಳ ಶುಭ ದಿನದಿ ಸಂಖ್ಯಾ ಕಾಲದಿ
ಪ್ರಥಮ ಯಾಮವೆ
ಮಿಗಿಲೆಂದು ಮನದಿ ಲಯ ಚಿಂತನೆಯ
ಬಿಡದೆ ಮಾಡುತ
ದೇವತೆಗಳ ದುಂದುಭಿ ವಾದ್ಯಗಾಯನಗಳ ರಭಸದಿ
ಶ್ರೀ ಲಕುಮಿ ದೇವಿಯ ಸೌಮ್ಯ ದುರ್ಗಾ ರೂಪಕೆ
ನಮೋ ನಮೋ ಎಂದು ಶಿರಿಗುರುತಂದೆ
ವರದಗೋಪಾಲ ವಿಠಲನ
ಪುರಕೆ ಪುಷ್ಪಕ ವಿಮಾನ ರೋಹಿಣಿಯನೆ ಮಾಡಿ
ನಲಿನಲಿದಾಡುವ ತೆರಳಿ ಪೋದಾರಿವರು ೭

ಜತೆ : ಸತಿದೇವಿ ರಮಣನ ಭಕ್ತನೇ ನಿನ್ನಯ
ಸುಖತನವೆಂದಿಗೂ ಕೊಡಲೆಂದು ಬೇಡಿಕೊಂಬೆ
ಸಿರಿಗುರುತಂದೆವರದಗೋಪಾಲ ವಿಠಲನಿಗೆ ೮

## ತಂದೆವರದವಿಠಲರು

### ೨೯೫

### ಗಣೇಶ

ವಂದಿಸುವೆ ಮುದದಿಂದ ನಂದಿವಾಹನ ಸುತಗೆ ಪ

ಬಂದ ದುರಿತವ ಕಳೆದಾನಂದವೀಯುತ ಮನಕೆ
ಇಂದಿರೇಶನ ಚರಣದ್ವಂದ್ವ ತೋರಲೋ ಬೇಗ ೧

ಹೀನಜನರೊಡಗೂಡಿ ಕಾಣದಾದೆನು ಹಾದಿ
ಸಾನುರಾಗದಿ ಪೊರೆಯೊ ಸನಕಾದಿ ಮುನಿವಂದ್ಯ ೨

ಮರುತ ಮತದ ಸಾರ ಕರುಣದಲಿ ಅರುಹಯ್ಯ
ಶರಧಿಶಯನ ತಂದೆವರದವಿಠಲ ಪ್ರಿಯ ೩

## ೨೯೬

### ಗಣೇಶ

ವಂದಿಸುವೆ ಕರದ್ವಂದ್ವ ಜೋಡಿಸಿ ಪ

ವಂದಿಸುವೆ ಒಂದೆ ಮನದಲಿ ನಂದಿವಾಹನ
ಕಂದ ಗಣಪಗೆ
ಬಂದ ಭಯಗಳ ಹಿಂದೆ ಮಾಡುತ
ಸಿಂಧುಶಯನನ ತೋರಿಸೆಂದು ಅ.ಪ.

ಮೂಷಕವಾಹನನೆ ದೂಷಿತಮನವ
ನಾಶಮಾಡೆಲೊ ಬೇಗ
ಭಾಷ್ಯಕಾರನೆ ಭಾಷ್ಯಮಾಡಿಸು
ತೋಷದಿಂದಲಿ ದಾಸನೆಂಬಭಿ
ಲಾಷೆಗಳ ಪೂರೈಸು ಅನುದಿನ
ಪಾಶ ಅಂಕುಶದಾರನೇ ೧

ಆಕಾಶಕಭಿಮಾನಿಯೇ ಎನ್ನಯ ವಾಕು
ಲಾಲಿಸಬೇಕೊ ಪ್ರಭುವೇ
ಕಾಕುಜನ ಸಹವಾಸದಿಂದಲಿ
ನೂಕಿಸೆನ್ನನು ಏಕದಂತನೆ
ಏಕಭಾವದಿ ಭಜಿಪ ಭಕುತರೋಳ್ಹಾತನೆನ್ನ
ಗಜವದನನೆ ಬಾ ತ್ರೈಜ ವಿಶ್ವಭಾಜಕನೆ
ತೋರೋ ಪಾದ
ಭುಜ ಚತುಷ್ಟನೆ ತ್ರಿಜಗವಂದ್ಯನೆ ಭಜಿಪ
ಭಕುತರ ಅಘವ ಕಳೆವನೆ
ನಿಜ ಸುಜನರ ...ಭುಜಗ ಭೂಷಣ ಕಾಮನನುಜನೆ ೨

ವಾರಿಬಂಧನ ಪೂರ್ವದಿ ಶ್ರೀ ರಾಮಚಂದ್ರನು
ಪ್ರೀತಿಲಿ ಪೂಜಿಸಿದ

ದುರುಳ ರಾವಣ ಮೆರೆದು ಕೆಟ್ಟನು ಧರೆಯಗೆದ್ದನು
ಜರಿದು ಚಂದ್ರನು
ವಿದ್ಯ ಪ್ರದಾಯಕನೆ ಮನ ತಿದ್ದು ಬೇಗನೆ
ಬಿದ್ದು ಬೇಡುವೆ ಸಾಧುವಂದ್ಯನೆ
ಮಧ್ವ ಮತದೊಳು ಶ್ರದ್ಧೆ ಪುಟ್ಟಿಸೊ
ಮಧ್ವವಲ್ಲಭ
ತಂದೆ ವರದ ವಿಠಲ ಪ್ರಿಯ ಸಿದ್ಧಿದಾಯಕ

## ೨೯೭

## ಶ್ರೀ ಹರಿಸ್ತುತಿ

ಎಂದೆಂದಿಗೂ ಎನಗೆ ತಂದೆ ನೀ ದೇವಾ
ಬಂದೆನ್ನ ಕರಪಿಡಿಯೊ ಬಿಂದು ಮಾಧವಾ ಪ

ಚೋರ ತಮನ ಕೊಂದ ಧೀರ ಮಚ್ಛಕನೆ
ಸಾರೋ ವೇದದ ಸಾರ ಮಾರ ಜನಕನೆ ೧

ಮಂದರಗಿರಿಯನ್ನೆ ಚಂದಾದಿಂದೆತ್ತಿದೋ
ಕಂದನೆಂತೆಂದೆನ್ನ ಮುಂದಕೆ ಕರೆಯೋ ೨

ವರಾಹ ರೂಪವ ತಾಳಿ ಧರೆಯ ಸಲಹಿದೆಯೋ
ದುರುಳ ಮನವನಳಿದು ತ್ವರದಿ ನೀ ಕಾಯೋ ೩

ಕಂಬದಿಂದಲಿ ಬಂದ್ಯೊ ಅಂಬುಜನಯನ
ಬಿಂಬನ ಪಾಲಿಸೊ ಅಂಬುಧಿಶಯನ ೪

ಇಳೆಯ ದಾನವ ಬೇಡಿ ಬಲಿಯ ಮೆಟ್ಟಿದೆಯಾ
ಭಳಿರೆ ಪಾದವ ತೋರಿ ಉಳಹೊ ಮಹರಾಯ ೫

ಛಲದಿಂದ ಕ್ಷತ್ರಿಯ ಕುಲವನಳಿದನೆ
ಬಲವಾದ ದುರಿತವ ಕಳೆಯೊ ಸುರವರನೆ ೬

ಶಿಲೆಯ ಸತಿಯ ಮಾಡಿ ಸಲಹಿದ ರಾಮಾ
ನಲಿನಲಿವುತ ಬಾರೊ ಜಲಜ ಸಂಭವ ಪ್ರೇಮಾ ೭

ಆಕಳ ಕಾಯ್ದೆಯೊ ಗೋಕುಲನಾಥ
ಏಕಭಕ್ತಿಯನೀಯೋ ಲೋಕವಿಖ್ಯಾತ ೮

ಉತ್ತಮ ಸ್ತ್ರೀಯರ ಚಿತ್ತವ ಹರಿಸಿದ್ಯೋ
ಉತ್ತಮ ಜ್ಞಾನವನಿತ್ತು ಪೊರೆಯೊ ೯
ತುರಗ ರಾವುತನಾಗಿ ಮೆರೆದಂಥಾ ವೀರ
ಭರದಿ ಕಾಡುವ ಖಳರ ತರಿಯೊ ಗಂಭೀರ ೧೦

ಶರಧಿಶಯನ ತಂದೆವರದವಿಠಲನು
ಶರಣು ಬಂದವರನ್ನು ನಿರುತ ಕಾಯುವನು ೧೧

## ೨೯೮

ಮಂಗಳವೆನ್ನಿರೆ ಅಂಗನೆಯರೆಲ್ಲ
ಅಂಗಜಪಿತ ಸಿರಿ ರಂಗನಿಗೇ ಮಂಗಳಾಂಗನಿಗೆ ಪ

ಚೋರ ತಪನ ಕೊಂದು ಭಾರ ಬೆನ್ನಿಲೆ ಪೊತ್ತು ದಾಟಿಸಿ
ತಂದಂದು ನಾರಶಿಂಹನಿಗೆ ಸುರಶೂರ ಸಿಂಹನಿಗೆ ೧

ಬಲಿಯ ದಾನವ ಬೇಡಿ ಕುಲವ ಸಂಹರಿಸುತ
ಶಿಲೆಯನುದ್ಧರಿಸಿದ ಚೆಲುವ ಬಾಲನಿಗೆ ಗಾನಲೋಲ ಕೃಷ್ಣನಿಗೆ ೨

ಪುರವ ನಾರಿಯರ ವರವ್ರತ ಕೆಡಿಸಿದ
ತುರಗವಾಹನ ತಂದೆವರದವಿಠಲಗೆ ಬಂದ ದುರಿತ ನಾಶಕಗೆ ೩

## ೨೯೯

ಮಾಡಬಾರದೆ ಹರಿಪಾದ ಪೂಜೆ ಪ

ಮಾಡಬಾರದೇನೋ ಕೂಡುತಾ ಸನಾದಿ
ಬೇಡಿದೊರವನೀವ ಗಾಡಿಕಾರನ ಪೂಜೆ ಅ.ಪ.

ನರಜನ್ಮವು ಬರಿದೆ ಪೋಗುತಿದೆ ಗರುವತನದಿ ನೀ
ಮರೆಯ ಬೇಡೆಲವೋ ಮಾರಜನಕ
ಕೃಷ್ಣನನ್ನರಿತು ಪೂಜೆಯನು ೧

ಬಲಿಯ ಮೆಟ್ಟಿದಾ ನೆಲವ ಮೂರಡಿ ಮಾಡಿ ಖೂಳ ಶಕಟನನ್ನು
ಕಾಲಲೊದ್ದು ಕೊಂದ ಶಿಲೆಯಾದಹಲ್ಯೆಯ
ಸಲಹಿದ ಪಾದ ೨

ಕರುಣಾಸಾಗರ ಕರಿವರದಾ ಕೃಷ್ಣ ದುರಿತಗಳನೆ ಕಳೆದು
ಪರಮಪದವನೀವ ಗರುಡಗಮನ ತಂದೆ
ವರದ ವಿಠಲನ ಪೂಜೆ ೩

## ೩೦೦

ವಸುದೇವ ಸುತನೆ ಬಾರೋ ವಸುಧೆಪಾಲಾ ಪ.

ಶಿಸುತನದಲಿ ಕಡು ವಿಷದ ಮೊಲೆಯನುಂಡು
ಅಸುವನೆ ಹೀರಿದ ಶಿಸುಗಳರಸ ರಂಗಾ ೧

ಗೊಲ್ಲತೆಯರ ಮನೆ ಮೆಲ್ಲಮೆಲ್ಲನೆ ಪೊಕ್ಕು
ಗುಲ್ಲುಮಾಡುತ ಪಾಲ್ ಮೊಸರು ಬೆಣ್ಣೆಯ ಕದ್ದು ೨

ವೇಣುವನೂದುತ ಗಾನವ ಮಾಡುತ
ಜಾಣೆಯನೊಲಿಸಿದ ಜಾಣ ಶ್ರೀಕೃಷ್ಣ ೩

ತುರುವು ಕಾಯಲು ಪೋಗೆ ವರುಷವ ಸುರಿಸಲು
ಬೆರಳಲಿ ಬೆಟ್ಟವ ನಿರಿಸಿ ಗೋವ್ಗಳ ಕಾಯ್ದು ೪

ಕಾಳೀಯ ಮೆಟ್ಟುತ ನಲಿನಲಿದಾಡುತ
ಲೀಲೆಯ ತೋರಿದ ಬಾಲಾಗೋಪಾಲಾ ೫

ಬಿಲ್ಲನೆ ಮುರಿಯುತ ಮಲ್ಲರ ಗೆದೆಯುತ
ಖುಲ್ಲ ಕಂಸನ ಕೊಂದ ಫುಲ್ಲನಾಭಗೊಲ್ಲ ೬

ತಂದೆವರದ ವಿಠಲಾ ತಂದೆ ತಾಯ್ಗಳ ಬಿಡಿಸಿ
ತಂದು ತೋರಿದ ಅರವಿಂದನಯನ ಶೌರಿ ೭

## ೩೦೧

ವೆಂಕಟೇಶ ಭವ ಸಂಕಟ ಪರಿಹರಿಸೊ ಕಿಂಕರನೆಂದೆನಿಸೊ ಪ

ಶಂಕೆಯಿಲ್ಲದೆ ಪಾದಪಂಕಜ ಪೂಜಿಸಲೂ
ಮಂಕುಮತಿಯ ಕಳೆವಾ ಅಕಳಂಕನೆಂದೆನಿಸುವಾ ಅ.ಪ.

ಕಲಿಯುಗದೊಳು ಕಲಿ ಬಾಧೆಗೆ ಒಳಗಾಗಿ ಬಹುವಿಧವಾಗಿ
ಒಲಿಸದೆ ವರಗುರು ಹಿರಿಯರ ನಿಂದಿಸುತಾ ವೇಳೆಗಳೆಯುತಾ
ಗಳಿಸಿದೆ ಪಾಪವ ಚರಿಸುತ ಧರೆಯೊಳಗೆ
ತೊಳಲುವೆ ತಮದೊಳಗೇ
ಘಳಿಲನೆ ರಕ್ಷಿಸೊ ಬಾಲಕರನು ದೇವಾ
ಎನ್ನಯ ಕುಲದೈವಾ ೧

ಸಾಧನೆಗೋಸುಗ ಮೇದಿನಿಗೆ ಬಂದು ಸಾಧಿಸದೆ ಬಂದು
ಶೋಧಿಸುವೆನು ಪುರುಷಾರ್ಥದ ಮಾರ್ಗವನು ಮೋದವ
ಪೊಂದುವೆನು
ಭೇದವ ತಿಳಿಯದೆ ಹಾದಿಯ ತಪ್ಪಿರುವೆ
ಖೇದವ ಪಡುತಿರುವೆ
ಸಾದರದಲಿ ತವ ಪಾದದಿ ಧ್ಯಾನವನು ಒದಗಿಸಬೇಕಿನ್ನು ೨

ಮಾರ ಜನಕನೆ ಮಂದ ತಾಪ ಬಿಡಿಸೊ
ಕರುಣವ ತೋರಿಸೊ
ಆರು ಮೂರು ವಿಧ ಭಕ್ತಿಯನೆ ಈಯೋ
ಕರಪಿಡಿದು ಕಾಯೋ
ಸಾರುವ ಭಕುತರ ಧೀರ ವೃಂದದೊಳಗೆ
ಸೇರಿಸೊ ಜವದೊಳಗೆ

ಧಾರುಣೀಶ ತಂದೆವರದವಿಠಲನೆ
ಶರಣೆಂಬೆನು ನಾನೇ ೩

## ೩೦೨

ವೆಂಕಟೇಶನೆ ಶ್ರೀ ವೆಂಕಟೇಶನೆ ಪ.

ಶಂಖ ಚಕ್ರಗಳನೆ ಪಿಡಿದು
ಬಿಂಕದಿಂದ ಮೆರೆಯುತಿರುವ ಅ.ಪ.

ಮೀನನಾಗಿ ಬಂದು ಘೋರ ದಾನವನೆ ಕೊಂದು
ಯನ್ನೇ ಎತ್ತಿದಂಥ ಜಾಣ ಕೂರ್ಮಾವತಾರ ೧

ಧರಣಿದೇವಿಯನ್ನು ಕದ್ದ ಹಿರಣ್ಯಾಕ್ಷನೆ ತರಿದು
ಕರುಳಮಾಲೆಯನ್ನೆ ಧರಿಸಿ ವರ ಪ್ರಹ್ಲಾದನ ಕಾಯ್ದ ೨

ಬಲಿಯ ದಾನವನ್ನೆ ಬೇಡಿ ನೆಲವ ಮೂರಡಿ ಮಾಡಿ
ಛಲದಿ ಕ್ಷತ್ರಿಯನಳಿದ ಚಲುವ ಪರಶುರಾಮ ೩

ಹತ್ತುರಥನ ತನಯನೆನಿಸಿ ಹತ್ತುಶಿರನ ಸಂಹರಿಸಿ
ಮತ್ತೆ ಕಂಸಾದಿ ಖಳರ ಹತ್ಯಮಾಡಿದಂಥ ಶ್ರೀ ೪

ಚಾರು ಬುದ್ಧರೂಪವಾಗಿ ನಾರಿಯರ ವ್ರತವ ಕೆಡಿಸಿ
ತುರಗವೇರಿ ಚರಿಪ ತಂದೆವರದವಿಠಲ ಕಲ್ಕಿ ೫

## ೩೦೩

ಸುಧೆಯನು ಸುರಿಸುವ ಸಮಯವಿದು
ಸದಯಾಕರ ಶ್ರೀಯಾದವ ಕುಲಪತಿ ಪ.

ವೃಂದಾವನದಿ ನಿಂದಿರಿ ಕೊಳಲನೂದಿ
ಆನಂದಬಿಡಿಸಿದ ಇಂದಿರೆ ರಮಣನೇ ೧

ಬಾಲೆರ ಮಧ್ಯದಿ ಕೋಲನೆ ಹಾಕುತ
ಲೀಲೆಯ ತೋರಿದ ಬಾಲಗೋಪಾಲನೆ ೨

ಶಿರಿಯರಸ ತಂದೆವರದವಿಠಲನೆ
ಚರಣಕಮಲ ತೋರೋ ಹೃದಯ ಮಂದಿರದಲಿ ೩

## ೩೦೪

### ಅವತಾರತ್ರಯ

ಮೂರು ರೂಪವ ತೋರೋ ಮಾರ್ಜಿವದೊಡೆಯಾ ಪ.

ಸಾರುವೆನು ಶರಣೆಂದು ಚಾರುತವ ಚರಣಕ್ಕೆ ಅ.ಪ.
ಅಂಜನೆಯಲುದ್ಭವಿಸಿ ಸಂಜೀವನವ ತಂದು
ಕಂಜನಾಭನ ದಯದಿ
ಅಂಜದತಿ ಕೆಂಜಡೆಯ ಪಿತಗಂಜಲಿ ಮುಗಿಯುವೆನು ೧

ವಾರಿಧಿಯ ನೆರೆದಾಂಟಿ ನಾರಿಗುಂಗುರವಿತ್ತು
ಕ್ರೂರ ಕೀಚಕನ ಸಂಹಾರವನೆ ಮಾಡುತಲಿ
ವೀರ ಬದರಿಲಿ ಪೋಗಿ ಸಾರಶಾಸ್ತ್ರವ ತಿಳಿದ
ಧೀರ ಮಧ್ವಾಚಾರ್ಯ ಭೀಮ ಕರುಣವ ತೋರೋ ೨

ಎರಡೈದು ಶಿರದವನ ಪುರವನೇ ನೀನುರುಹಿ
ದುರುಳ ದುರ್ಯೋಧನನ ಧುರದಿ ಗೆಲಿದು
ವರ ಉಡುಪಿ ಕ್ಷೇತ್ರದಲಿ
ಸಿರಿಯ ರಮಣಾ ತಂದೆ ವರದ ವಿಠ್ಠಲರೇಯಾ ೩

## ೩೦೫

ವಂದಿಸುವೆ ಗುರುವರಾ ವಂದಿಸುವೆ ಗುರುವರಾ
ವಂದಿಸುವೆ ಗುರುವರಾ ಮಂದಮತಿಯ ಪಾಲಿಸೆಂದು ಪ.

ತ್ರಿವಿಧ ಜೀವರಲ್ಲಿ ನಿಂತು ತ್ರಿವಿಧವಸ್ಥೆಯಲ್ಲಿ ಬಿಡದೆ
ತ್ರಿವಿಧ ಕರ್ಮವನ್ನೆ ಗೈಸಿ ತ್ರಿವಿಧ ಫಲವ ಕೊಡಿಸುವವನೇ ೧

ತಾತ ರಾಮನಾಜ್ಞೆಗೊಂಡು ಖ್ಯಾತಿಯಿಂದ ಜಲಧಿ ದಾಟಿ
ಮಾತೆಗುಂಗುರವಿತ್ತು ಪ್ರೇಮ ವಾರ್ತೆಯನ್ನು ಪೇಳಿದವಗೆ ೨

ಭೀಮನಾಮದಿಂದ ಕರೆಸಿ ಭೂವಿಯಲ್ಲಿ ಮೆರೆವ ಖಳರ
ಧಾಮವನ್ನೆ ಸೀಳಿ ಸಾರ್ವಭೌಮಕೃಷ್ಣಗರ್ಪಿಸಿದಗೆ ೩

ಮಧ್ಯಗೇಹರಲ್ಲಿ ಜನಿಸಿ ಅದ್ವೈತ ಮತವನ್ನೆಲ್ಲ ಕೆಡಹಿ
ಶುದ್ಧಮತವ ಸ್ಥಾಪಿಸಿದ ಮಧ್ವಮುನಿರಾಯನಿಗೆ ೪

ತಂದೆವರದವಿಠಲನ್ನ ಒಂದೆ ಮನದಿ ಜಪಿಸುತಿರುವ
ಇಂದುಶೇಖರಾದಿ ಸುರವೃಂದ ವಂದ್ಯನಾಥವಹಗೆ ೫

## ೩೦೬

ಪಾಲಿಸಬೇಕಯ್ಯ ಪವಮಾನ ದೂತಾ ಪ.

ಬಾಲಕನು ಮಾಡಿರುವ ಅಪರಾಧವೆಣಿಸದೆಲೆ ಅ.ಪ.

ಇಷ್ಟು ದಿನಗಳವರೆಗೆ ದುಷ್ಟ ಜನರ ಸಹವಾಸದಿ
ಕಟ್ಟಿ ಕಳೆದೆನೊ ಕಾಲ ಶಿಷ್ಟರೊಡೆಯ
ಮುಟ್ಟಿ ಭಜಿಸುವ ನಿನ್ನ ಘಟ್ಟಿ ಜ್ಞಾನಮೃತವ
ಕೊಟ್ಟು ಸಲಹಲಿ ಬೇಕು ದಿಟ್ಟ ಪುರುಷ ೧

ಮಧ್ವ ದಾಸರೊಳ್ ನಿಂದು ತಾರತಮ್ಯ ಪಂಚಭೇದ
ಪದ್ಧತಿಗಳನುಸರಿಸಿ ತಿದ್ದಿ ತಿಳುಹಿದೆಯೋ ಶ್ರೀ
ಮಧ್ವರಾಯರೇ ಜಗಕೆಲ್ಲ ಗುರುವೆಂಬ
ಶ್ರದ್ಧೆಯನು ಪುಟ್ಟಿಸಿದೋ ಶೇಷಪದ ಯೋಗ್ಯ ೨

ಮಂದಮತಿಯೆಂದು ನಾ ನಿಂದ್ಯ ಮಾಡದೆ ಮನ
ಮಂದಿರದಿ ಛಂದದಲಿ ಪೊಳೆಯಬೇಕು

ಮಂದರೋದ್ಧರನ ಪದ ಕುಂದದಲೆ ಭಜಿಸುವ
ಸಿಂಧುಶಯನ ತಂದೆವರದವಿಠಲದಾಸ ೩

## ೩೦೭

### ಭಾರತಿದೇವಿ

ಭಕ್ತಿಯನು ನೀಡಮ್ಮ ಭಾರತೀದೇವಿ ಪ.

ಭಕ್ತಿ ದಾತೆಯು ಎಂದು ಶ್ರುತಿ ಶಾಸ್ತ್ರ ಸಾರುತಿವೆ ಅ.ಪ.

ಕಾಮ ಕ್ರೋಧಗಳೆಲ್ಲ ಮನೆಮಾಡಿಕೊಂಡುತಾವೆ
ನೇಮದಿಂ ಪರಿಪರಿ ಕಾಡುತಿಹವು
ಪ್ರೇಮಿ ನಿನ್ನಯ ಪಾದಕಮಲದಲಿ ಮತಿ ಕೊಟ್ಟು
ಕಾಮನಯ್ಯನ ತೋರು ಸೋಮಶೇಖರ ಜನನಿ ೧

ಮಧ್ವಮತದಲಿ ಎನಗೆ ಶ್ರದ್ಧೆ ಪುಟ್ಟದೆ ಪೋಯ್ತು
ಸಿದ್ಧವಾಗಿಹುದು ಮನ ದುರ್ವಿಷಯಕೆ
ಬುದ್ಧಿವಂತಳೆ ನಿನ್ನ ಮುದ್ದು ಮುಖವನು ತೋರಿ
ಉದ್ಧಾರ ಮಾಡೆ ಶ್ರೀ ಹದ್ದುವಾಹನ ತನಯೆ ೨

ಕರುಣವಾರಿಧಿಯೆಂದು ಮರೆಯ ಪೊಕ್ಕೆನು ತಾಯೆ
ಕರಪಿಡಿದು ಕಾಪಾಡೆ ಉರಗವೇಣಿ
ಕರುಣಸಾಗರ ತಂದೆವರದವಿಠಲನನ್ನು
ನಿರುತದಿ ಭಜಿಸುವ ಭರತರಾಜನ ರಾಣಿ ೩

## ೩೦೮

### ರುದ್ರದೇವರು

ಭಜನೆ ಮಾಡೆಲೊ ಮನವೆ ಭಜನೆ ಮಾಡೆಲೊ ಪ

ಭಜನೆಯನ್ನು ಮಾಡಿ ಸುಖಿಸೊ
ಭುಜಗಭೂಷಣ ಶಿವನೆ ಅ.ಪ.

ನಾನೆ ನಾನೆ ನಾನು ಎಂಬ ಶ್ವಾನಬುದ್ಧಿಯನ್ನು ಬಿಟ್ಟು
ನೀನೆ ನೀನೆ ಗತಿಯೆಂದು ಸಾನುರಾಗದಿಂದ ಮೃಡನ ೧

ಕಾಕುಜನರ ವಾಸ ಬಿಟ್ಟು ಏಕಭಾವದಿಂದ ಕುಳಿತು
ಸಾಕು ಸಾಕೆನಿಸದಂತೆ ನಾಲ್ಕು ಮೊಗದವನ ಸುತನ ೨

ತಂದೆವರದವಿಠಲನು ತಂದೆ ಜಗಕೆಲ್ಲವೆಂದು
ಛಂದಛಂದಾದಿ ಭಜಿಪ ಇಂದುಶೇಖರ ಭವನ ೩

## ೩೦೯

### ಪಾರ್ವತಿದೇವಿ

ನಂಬಿದೆ ನಿನ್ನಯ ಪಾದ ನಂಬಿದೆ ಪ

ನಂಬಿದೆ ನಿನ್ನಯ ಪಾದ ಜಗದಂಬೆ ಅರುಣೆ
ಪಂಚಭೇದಾ ಆಹಾ
ಶಂಭುವಿನರ್ಧಾಂಗಿ ಬಿಂಬನ ತೋರಿಸೆ
ಅಂಬುಜೋದ್ಭವನ ಪ್ರತಿಬಿಂಬವ ರಾಣಿಯೆ ಅ.ಪ.

ಮನದಭಿಮಾನಿ ದೇವತೆಯೆ ಯನ
ಮನವ ನಿಲ್ಲಿಸು ಪಾರ್ವತಿಯೆ ಆಹಾ
ಮುನಿಜನ ವಂದ್ಯಳೆ ಮನ್ಮಥ ಜನನಿಯೆ
ಸಾನುರಾಗದಲಿ ನೀ ಜ್ಞಾನ ಕೊಡುವೆಯೆಂದು ೧

ಭಕ್ತವತ್ಸಲೆ ಭಾಗ್ಯದೇವಿ ಭವದಿ
ಮುಕ್ತನ ಮಾಡೆಲವೋ ತಾಯೆ ಆಹಾ
ಯುಕ್ತಿವಂತಳೆ ಹರಿ ಭಕ್ತ ಜನರೊಳು
ಭಕ್ತಿಯನ್ನೇ ಕೊಡು ಭಕ್ತರ ಸಾರಥಿ ೨

ಶರಣು ಬಂದೆನೆ ನಾ ನಿನಗೆ ತವ
ಚರಣ ಭಜನೆ ಕೊಡು ಎನಗೆ ಆಹಾ

ಶರಧಿ ಶಯನ ತಂದೆವರದವಿಠಲನನ್ನು
ಪರಿಪರಿ ಸ್ತುತಿಸುವ ವರಕಾಳಿ ದೇವಿಯೆ ೩

## (ಆ) ಯತಿ ; ದಾಸ ನಮನ

### ೩೧೦

### ಶ್ರೀ ವಿದ್ಯಾಧೀಶರು

ಮುದ್ದು ಮುಖವನು ತೋರೋ ವಿದ್ಯಾಧೀಶಾ
ಬಿದ್ದು ಬೇಡುವೆ ಪಾದ ಪದ್ಮಂಗಳಿಗೆ ಪ.

ಸಾಧನದಗೋಸುಗಕೆ ಮೇದಿನಿಯೊಳ್ ಜನಿಸಿ
ಸಾಧನವ ಕಾಣದೆ ಮೋದಗೊಂಡಿಹೆನು
ಸಾಧುಜನ ಪ್ರಿಯನೆ ಸಾದರದಿಂದಲಿ
ಭೇದ ಕಂಚಜ್ಞಾನ ಹಾದಿಯನೆ ತೋರುತಲಿ ೧

ಧರೆಯ ರಮಣನು ತಾನು ಧೊರೆ ಎಲ್ಲ ಜಗಕೆಂದು
ಪರಿಪರಿ ಸ್ತುತಿಸುವಾ ಪರಮ ಭಕುತಿಯನಿತ್ತು
ಪರಿಪಾಲಿಸಬೇಕು ಕರಮುಗಿದು ಪ್ರಾರ್ಥಿಸುವೆ
ಶರಣು ಜನ ಪರಿಪಾಲಾ ೨

ನಿರುತ ಸಂಸಾರದೋಳ್
ವೈರಾಗ್ಯ ಕರುಣಿಸಿ ಕರಪಿಡಿಯೋ ಕರುಣಾಲವಾಲ
ಪರಮ ಪಾವನ ತಂದೆವರದವಿಠಲನ
ಚರಣವನು ಭಜಿಸುವೆನು ಮರುತ ಮತ ಮೋಹನ ೩

## ೩೧೧

### ಶ್ರೀ ಸತ್ಯಬೋಧರು

ಭೀಕರ ರೂಪವ ತೋರುವ ಯತಿವರನ್ಯಾರೆ ಪೇಳಮ್ಮಯ್ಯ ಪ.

ನಾಕಲೋಕಪತಿ ಪಿತನ ಬಲದಿ ಯಮಪಾಶ ಗೆದ್ದ ಸತ್ಯಬೋಧ
ಕಾಣಮ್ಮ ಅ.ಪ.

ಹರಿ ಆಚಾರ್ಯರ ಉದರದಿ ಜನಿಸಿದನ್ಯಾರೇ ಪೇಳಮ್ಮಯ್ಯ
ಮಾರನ ಪೋಲುವ ರೂಪದಿಂದ್ಹೊಳಿಯುವ-
ನ್ಯಾರೇ ಪೇಳಮ್ಮಯ್ಯ
ಗುರುಮುಖದಿಮಂದಧ್ಯಯನ ಮಾಡುತ
ಮನಮೋಹಗೊಳಿಪ ಬಾಲಕನಾರಮ್ಮ ೧

ಸುಂದರರೂಪನ ಸತಿಯನಾಮ ಕಳವರಿಸಿ-
ನ್ಯಾರೆ ಪೇಳಮ್ಮಯ್ಯ
ಮುದದಿಂದಲಿ ಸತ್ಪುತ್ರರ ಪಡೆದಿಹನ್ಯಾರೆ ಪೇಳಮ್ಮಯ್ಯ
ಮಿಂದಸಂಸಾರದಿ ಇಂದಿರೇಶನ ಭಜಿಸುವ
ಶ್ರೀರಾಮಾರ್ಯ ಕಾಣಮ್ಮ ೨

ಸತ್ಯಪ್ರೇಮರ ಪ್ರೀತಿಗೆ ಪಾತ್ರನುದಾರೆ ಪೇಳಮ್ಮಯ್ಯ
ತಂತ್ರಿಣಿ ತಲದಲಿ ಆಶ್ರಯಗೊಂಡವನ್ಯಾರೆ ಪೇಳಮ್ಮಯ್ಯ
ಮತ್ತೆ ಜಗದೊಳಿಹ ಮಿಥ್ಯವಾದಿಗಳೆಂಬಾ
ಮತ್ತಗಜಗಳಂಕುಶನಿವನಮ್ಮಾ ೩

ಶ್ರವಣಾಖ್ಯಪುರದಿ ಮಾಡಿಹನ್ಯಾರೆ ಪೇಳಮ್ಮಯ್ಯ
ಶೇಷರೂಪದ ದುಷ್ಟದೈತ್ಯನ ಸುಟ್ಟವನ್ಯಾರೆ ಪೇಳಮ್ಮಯ್ಯ
ಶೇಷಗತಿಯ ಮನ ಭೂಸುರ ವೃಂದಕೆ
ನಿಶಿಯಲಿ ರವಿಯನು ತೋರಿದನಮ್ಮ ೪

ತಪದ ಪ್ರಭಾವದಿ ಗಂಗೆಯನೊಲಿಸಿಹನ್ಯಾರೆ ಪೇಳಮ್ಮಯ್ಯ
ಗೋಪಿಯ ಮಗನನು ತೀರ್ಥದ ದಡದಲಿ
ನಿಲಿಸಿಹನ್ಯಾರೆ ಪೇಳಮ್ಮಯ್ಯ
ಗೋಪರೊಡೆಯ ತಂದೆವರದವಿಠಲನನ್ನು
ಸತತ ಭಜಿಸುವ ಯತಿವರನೆ ೫

## ೩೧೨

## ಶ್ರೀ ಧೀರೇಂದ್ರರು

ಧೀರೇಂದ್ರವರ್ಯರೇ ಚಾರು ನಿಮ್ಮಯ ಚರಣ
ತೋರಿಸುದ್ಧರಿಸಬೇಕೊ ಪ.

ಆರು ಇವನೆಂದು ನೀವ್ ಗಾರುಮಾಡದಲೆನ್ನ ಸಾ
ನುರಾಗದಿ ಪೊರೆಯಬೇಕೊ ಸ್ವಾಮಿ ಅ.ಪ.

ವರದಾ ತೀರದಿ ನಿಂದು ವರ ಕೊಡಿವೀಯೆಂದು
ಘನಗರ್ವ ನಿನಗ್ಯಾತಕೊ
ಸುರಪತಿಯ ಬಲದಲ್ಲಿ ಇಹನೆಂದು ನೀ ಬಲು
ಜರಿದು ನೋಡಲಿ ಬ್ಯಾಡವೊ
ಆರುಗತಿಯಿಲ್ಲವೆಂದೀರ ನಿನ್ನೆಡೆ ಬರಲು ಏರಿ ಕೂಡ್ರುವುದುಚಿತವೇ
ಸಾರಿ ಹೇಳುವೆ ನಿನಗೆ ಚೋರದಾಸನು ನಾನು
ಘೋರರೂಪದಿ ಬಂದು ತೋರೋ ಸ್ವಾಮಿ ೧

ರಘುಕುಲತಿಲಕನ ಭಕ್ತಿಪಾಶದಿ ಕಟ್ಟಿ
ಚಕ್ರವರ್ತಿಯೆನಿಸಿ ಗೋಕುಲದ ಗೊಲ್ಲನ ಯುಕುತಿಯಲಿ
ನೀನೊಲಿಸಿದ್ಯೊ
ಶಕ್ತಿಯಿಂ ಕಲಿಯುಗದಿ ಧೀರೇಂದ್ರ ಪೆಸರಿನಿಂ ದುರಿತಗಳ
ಕಳೆಯುವಿಯೊ

ಧಿಃಕರಿಸಿ ವಾದಿಗಳ ದೇಶದೊಳ್ ಚರಿಸಿದ ವಸುಧೀಂದ್ರ ಸಂಜಾತ
ಪೊರೆಯೆ ಸ್ವಾಮೀ ೨

ಹೆಣ್ಣಿನಾಶೆಗೆ ಬಿದ್ದು ಹೊನ್ನು ಸ್ಥಿರವೆಂದು ನಾ ಮಣ್ಣುಪಾಲಾದೆನೊ
ತನುವು ತನ್ನದು ಎಂಬ ಭಿನ್ನ ಜ್ಞಾನವನೇ ಹೊಡೆದೋಡಿಸೆ
ಮಾನ್ಯವಂತರ ಸಂಗ ಇನ್ನು ಮೇಲಾದರೂ ದಯಪಾಲಿಸೊ
ಘನ್ನ ಮಹಿಮಾ ತಂದೆವರದವಿಠಲನಲ್ಲಿ ಜ್ಞಾನದಿಂ ಭಕ್ತಿ
ವೈರಾಗ್ಯವನೆ ಈಯೋಸ್ವಾಮಿ ೩

## ೩೧೩

### ಭೂತರಾಜರು

ಭೀತಿಯನ್ನು ಬಿಡಿಸು ಬೇಗ ಭೂತರಾಜನೆ ಪ.

ಭಕ್ತಿಯಿಂದ ಬಾಗಿ ನಮಿಪೆ ಖ್ಯಾತಿವಂತನೆ ಅ.ಪ.

ಕಾಮಬಾಣ ಕಡಿಮೆ ಮಾಡು ಭಾರಿಕಾಮಹರನೆ
ರಾಮಧ್ಯಾನಿ ನೀಡು ವಾಮನ ದೇವನೇ ೧

ಮರುತದ ಸಾರ ತಿಳುಹು ಗರಳಧಾರಿಯೇ
ಕರವ ಮುಗಿದು ಬೇಡುವೆನು ತ್ವರಿತದಿಂದಲಿ ೨

ತಂದೆವರದವಿಠಲನ್ನ ಹೃನ್ಮಂದಿರದೋಳ್
ಛಂದದಿಂದ ತಂದು ತೋರೋ ಇಂದುಶೇಖರ ೩

## ೩೧೪

ಶ್ರೀಮತ್ ತಂದೆವರದಗೋಪಾಲದಾಸ ರಾಯಾ
ವೃಂದದಿಂದಲಿ ನಿಮಗೊಂದಿಸುವೆನೋ ಜೀಯಾ ಪ.

ಇಂದಿನವರೆಗೆ ನಾನಿಂದ್ಯ ಜನರೊಳು ಕೂಡಿ
ನಿಂದ್ಯ ಮಾಡುತ ಪರರ ಡಂಭತನದಲಿ ಮೆರೆದೆನೊ
ಕಂದನಾ ಕುಂದುಗಳ ಒಂದನೆಣಿಸದೆ ಗುರುವೇ
ಮಂದಜನ ರಾಶಿಯೊಳು ಬೆಂದುಹೋಗುವುದನು ಕಂಡು
ಅಂದದಲಿ ನೀ ಹಿಡಿದೆಳೆತಂದೂ ೧

ಮುಂದೆ ಪೇಳುವೆ ಕೇಳೋ
ಚಂದ್ರಮೌಳಿಯೆ ನಿನ್ನ ಪ್ರೀತಿಪಾತ್ರನಾದ
ಸುಂದರಾಂಗನ ಮುಖದೀ ನೀನಿಂದು ಅಘ
ವೃಂದಗಳ ಹೊಡೆದೋಡಿಸೀ
ಮಿಂಚಿನಿಂದಕ್ಷ ರ, ಯ, ಮ ಎಂಬಕ್ಷರಗಳ ಕಲ್ಪಿಸಿ
ಎಂದಿಗೂ ಮರೆಯದಂಥ ತಂದೆವರದವಿಠಲನೆಂಬ
ಅಂಕಿತದಿಂದ ಬಂಧನವ ಮಾಡಿ ಭಾವ ಸಂವತ್ಸರ
ಫಾಲ್ಗುಣ ಶುದ್ಧ ತ್ರಯೋದಶಿ
ಚಂದ್ರವಾರ ಅರುಣೋದಯ ಕಾಲದೀ
ಕಡೆಕೋಳ ಶ್ರೀ ವೆಂಕಟೇಶನ ಸನ್ನಿಧಾನದಿ
ಅನುಗ್ರಹಿಸಿದೆಯೋ ಮಹಾರಾಯಾ
ಮಂದಮತಿ ನಾ ನಿಮ್ಮ ಮಹಿಮೆಯನು ಪೇಳಲೆನ್ನಳವೆ
ತವಪಾದಾರವಿಂದದಿ ಅನವರದ ಜ್ಞಾನ ಭಕುತಿ
ವೈರಾಗ್ಯವನಿತ್ತು ರಕ್ಷಿಸಬೇಕೋ
ತಂದೆವರದವಿಠಲದೂತಾ ಮನೋ ನಿಯಾಮಕ ದೊರೆಯೇ

# ೧೧. 'ತಂದೆ ಶ್ರೀನರಹರಿ'

## ೩೧೫

ಓಡಿಬಾರೋ ಶ್ರೀ ಮನ್ಮಥ ಜನಕನೆ
ನೀಡುವೆ ತನುಮನವಾ ಪ.

ನೋಡಿ ಮುದ್ದಾಡಿ ಕೊಂಡಾಡಿ ನಾ ಬೇಡುವೆ
ಈಡಿಲ್ಲದ ನಿನ್ನೊಡನಾಡುವ ಸುಖ ಅ.ಪ.

ಕಾಡಿನ ಸುಖಕೆ ಮತ್ತೀಡಿಲ್ಲ ಧರೆಯೊಳು
ಮಾಡುವೆ ಶಪಥವನು
ಹಾಡಿಪಾಡಿ ಕೈಜೋಡಿಸಿ ಕುಣಿಯುತ
ಮಾಡಿದೆವೊ ನಾವ್ ರಾಸಕ್ರೀಡೆಯ ೧

ಧ್ವಜ ವಜ್ರಾಂಕುಶ ಚಿನ್ಹ
ಕಂಜ ಸುರೇಖೆಗಳ ಪುಂಜ ಪೂರಿತಪಾದ
ಕಂಜನಾಭ ಹೃತ್ಪಂಜರದೊಳಿಟ್ಟು
ಮಂಜು ಬಿಡಿಸು ನಿರಂಜನ ಮೂರ್ತೆ ೨

ನೀರಜನಾಭನೆ ತೋರೋಕರಪಲ್ಲವ
ಮೀರಿವೆ ಹೃದಯ ಸಂತಾಪಗಳು
ಮಾರ ಮೋಹನ ಸಾರುವೆ ನಿನ್ನಯ
ಜಾರ ಬುದ್ಧಿಯ ತಾಪವ ನೀಗಿಸು ೩

ಮಂದಸ್ಮಿತಾನನ ಚಂದ್ರಪೋಲುವ ಸದನ
ಬಿಂದುಮಾಧವಾ ಯಾದವಾ
ವಂದಿಸಿಬೇಡುವ ಸುಂದರಿ ಸುಖ ಮುಖಿ
ಬೃಂದ ಕಮಲ ವಿಹಂಗಮರಾಜ ೪

ನೀನೇ ದಯಾಪರ  ನೀನೇ ಭಕ್ತೋದ್ಧಾರ
ನೀನೇ ಗತಿ ಪರನಾರೆರಿಗೆ
ಪಾಣಿಮುಗೆವೆಯಮ್ಮ ವಾಣಿಯ ಲಾಲಿಸಿ
ವೇಣುನಾದ ತೋರೊ ತಂದೆ ಶ್ರೀನೃಹರೇ ೫

## ೩೧೬

ಜೋ ಜೋ ಪ

ಬಾರೆಯ್ಯ ಗೋವಿಂದಾ  ಅರವಿಂದ ನಯನಾ
ತೋರೆಯ್ಯ ಇಂದಿರಾ ಚುಂಬಿತಾ ಚರಣಾ
ಸಾರಯ್ಯ ತೊಟ್ಟಿಲ ಶ್ರೀ ದೇವಿ ಮದನಾ
ಸಾಕಯ್ಯ ಬೀದೀಲಿ ಹುಡುಗರ ಕದನಾ ೧

ಬಾಯೆನ್ನ ಕಂದಾ ಬಾ ಎನ್ನ ನಂದಾ
ಬಾ ಇನ್ನು ಮಲಗುವೆ ಮುದ್ದು ಕಂದಾ
ಬಾಯಲ್ಲಿ ತೋರಿದ ಜಗದ ಆನಂದಾ
ಬಾ ಇನ್ನು ತೂಗುವೆ ಮುಚಕುಂದ ವರದಾ ೨

ರತ್ನದ ತೊಟ್ಟಿಲ ಚಿನ್ನದ ಸರಪಣಿ
ಎತ್ತ ನೋಡಿದರತ್ತ ಆಡುವ ಬೊಂಬೆ
ಇತ್ತ ಬಾರಯ್ಯ ಮಾರ ಸುಕುಮಾರ
ಒತ್ತಿತೂಗುವನಯ್ಯಾ ತಂದೆ ಶ್ರೀ ನರಹರಿ ೩

## ೩೧೭

ಪ್ರೇಮದಿಂದೊಂದಿಸುವೆ ಗುರುವೃಂದಕೆ ಪ

ಕಾಮಧೇನುವಿನಂತೆ ಕೊಡಲೆಮಗಭೀಷ್ಟವನು ಅ.ಪ.

ಸತಿಯ ಬೇಡುವನಲ್ಲಾ ಸುತರ ಬೇಡುವನಲ್ಲಾ
ಅತಿಶಯದ ಭಾಗ್ಯವನು ಕೇಳ್ವನಲ್ಲಾ
ರತಿಪತಿ ಆಟವನು ಖಂಡಿದಿ ಬೇಗದಲಿ
ಮತಿ ತಪ್ಪಲೆನಗೆ ದುರ್ವಿಷಯದೊಳಗೆಂದ ೧

ಶಕ್ತಿ ಬೇಡುವನಲ್ಲ ಯುಕ್ತಿಬೇಡುವನಲ್ಲಾ
ಭಕ್ತಿವಿನಲ್ಲೆಂದು ಕೇಳ್ವನಲ್ಲ
ಮುಕ್ತಿದಾಯಕ ನಮ್ಮ ವಿಠಲನ ಚರಣದಲಿ
ಭಕ್ತಿ ದೃಢವಾಗೆಮಗೆ ಇತ್ತು ರಕ್ಷಿಸಲೆಂದು ೨

ಮಾನ ಬೇಡುವನಲ್ಲ ದಾನ ಬೇಡುವನಲ್ಲಾ
ಹೀನತನ ಬ್ಯಾಡೆಂದು ಕೇಳ್ವನಲ್ಲಾ
ಮಾನನಿಧಿ ನಮ್ಮ ಶ್ರೀ ನರಹರಿಯ ಚರಣವನು
ಕಾಣಿಸುವ ಜ್ಞಾನವನು ದಾನ ಮಾಡೆಮಗೆಂದು ೩

## ೩೧೮

ಬಂದಿಹ ನೋಡಿರಿ ಸುಂದರ ಸುಕುಮಾರ
ನಂದ ಸುನಂದನ ಯದು ಕಂದಾ ಪ

ಮಾಧವ ಮಧುಸೂದನಾ ಮಂದಸ್ಮಿತಾನನ
ಕುಂದರ ವದನ ಪೂರ್ಣ ಚಂದ್ರ
ಶತಾನನ ಗುಣ ಪೂರ್ಣಾ ಅ.ಪ.

ವೇಣುನಾದ ವಿಶಾರದಾ ಗಾನಾಪಹೃತಸ್ತ್ರೀ
ಮಾನಾಪಹರಣ ಮಾನಸ ಮಂದಿರ ಸ್ತ್ರೀಲೋಲಾ ೧

ಜಾರ ಚೋರ ಶಿಖಾಮಣಿ ಘೋರದುರಿತಾರಣ್ಯ
ಪಾರ ಪದಕ ನಾಮ ಅ ಪಾರ ಮಹಿಮ ಶಿರಿ ಮಾನವ ೨

ಪೂತನಾ ಪ್ರಾಣಾಪಹ ವಾತಾತ್ಮ ಜಾರಿಹರಿ
ಪೂತಾತ್ಮಾ ನಾರಿ ಜಾರ ಖ್ಯಾತಾತ್ಮ ನರವೀರ ಪ್ರೀತಾತ್ಮ ೩

ಭೂಧರಾರ ಮಾಧರ ಸುಧಾಪಾನದಿ ಮತ್ತ
ಸದಮಾಲಾ ಚಿತ್ತ ಮುದಾ ಪೂರಿತಗಾತ್ರ ಸರ್ವತ್ರ ೪

ಮಾಧವ ರಾಧಾ ಪ್ರಿಯ ತಂದೆ ಶ್ರೀನೃಹರಿಯೆ
ಇಂದೂ ವಂದಿಪೆ ನಿನ್ನ ಬಂಧನ ಬಿಡಿಸಯ್ಯ ಗೋವಿಂದ ೫

## ೩೧೯

### ಭೂತರಾಜರ ಸ್ತೋತ್ರ

ಭೂತರಾಜರ ಸ್ತುತಿಸಿ ಖ್ಯಾತಿಗೊಳ್ಳೊ ಪ

ಪ್ರೀತಿ ಇವರಲಿ ಅಧಿಕ ವಾದಿರಾಜರಿಗೆ ಅ.ಪ.

ಆತನಾಜ್ಞೆಯಿಂದ ಧರಿಸಲು
ಕೋತಿಯಂತೆ ಹುಬ್ಬು ಏಕೆ ಹಾರಿಸುವೆ
ಜ್ಯೋತಿ ಸ್ವರೂಪಕ್ಕೆ ಬೂದಿಯು ಮುಸುಕಲು
ಪಾತಕಿಯು ತಾ ಮುಟ್ಟಿ ಬೊಬ್ಬೆ ಬಾರಿಸನೆ ೧

ಗುರುಸೇವೆ ಇವರಂತೆ ಮಾಡ್ದವರು ಯಾರುಂಟು
ಗುರುಕೃಪಾ ಇವರಂತೆ ಪಡೆದವರು ಯಾರೊ
ಅರಿತು ನೋಡಲು ನಿರುತ ರತಿಗೆ ಕಾರಣವುಂಟು
ನರಕುರಿ ಇದರ ಮರ್ಮವ ತಿಳಿವದುಂಟೆ ೨

ಇಂದಿಗೂ ಸೋದೇಲಿ ಇವರದೇ ಗುರುಪೂಜೆ
ಸುದ್ದಿ ಸುಳ್ಳೆಂದವಗೆ ದೆಬ್ಬೆ ಪೂಜಾ
ಸದ್ದಿಲ್ಲದಿವರಡಿ ಸ್ಮರಿಸುವುದೇ ಗುರುಪೂಜಾ
ತಂದೆ ಶ್ರೀ ನರಹರಿ ಒಪ್ಪುವಾ ಪೂಜಾ ೩

## ೩೨೦

ಮದಲಗಟ್ಟಿ ಪ್ರಾಣನಾಥಾ
ಮುದವನಿತ್ತು ಪಾಲಿಸಯ್ಯ ಪ

ಮದನಜನಕ ಮಾಧವಾನ
ಬೋಧವಿತ್ತು ಕರುಣಿಸಯ್ಯ ಅ.ಪ.

ಪಾಪ ತಾಪ ಪೂರ ನಾವು
ಪಾಪ ಲೋಪ ಮೂರ್ತಿ ನೀನು
ದೀಪದಂತೆ ಹೊಳೆದು ಭವದ
ಕೂಪ ದಾಟಿಸಯ್ಯಾ ಭೂಪ ೧

ದೇವ ದೇವೋತ್ತಮನೆ ನೀನು
ಜೀವದಾನ ಮಾಡಿಸಯ್ಯ
ಪಾವಮಾನಿ ಪರಿಕೆಸೆಮ್ಮಾ
ನೋವನದೂರ ಮಾಡಿಸಯ್ಯಾ ೨

ಅಂಧ ಬಧಿರ ಮೂರ್ಖ ಜನರು
ಬಂದು ನಿನ್ನ ವಂದಿಸಲು
ಛಂದದಿಂದ ಅವರ ದುರಿತ
ವೃಂದವನ್ನು ನಾಶಗೈವೆ ೩

ಭೂಸುರೇಂದ್ರ ವ್ಯಾಸರಿಂದ
ಆರು ತುಂಗಾ ಹೃದವ ಬಿಟ್ಟು
ಭಾವಿಸುವೆ ಇಲ್ಲದೇವ
ಆ ಸಮೀರ ಜಾತ ಶೂರ ೪

ಮುದದಿನಾಥ ಜ್ಞಾನ ವಾತಾ
ಕಂದಧೀಮಂಥ ರಾಮ ದೂತಾ

ಹೃದಯ ಸದನದಲ್ಲಿ ತೋರೋ
ತಂದೆಶ್ರೀನರಹರಿಯ ರೂಪ ೫

## ೩೨೧

**ಶ್ರೀನಿವಾಸ ತೀರ್ಥರು**

ಶ್ರೀನಿವಾಸ ತೀರ್ಥನೆ
ಜ್ಞಾನವಿತ್ತು ಪಾಲಿಸೋ ಪ

ವ್ಯಾಸ ಶಾಸ್ತ್ರ ನಿನ್ನಿಂದ
ವಿಸ್ತಾರಾಯ್ತು ಭೂಮಿಲಿ ಭಾಷಿಪರೊ
ಜನರು ಲೇಸು ಟಿಪ್ಪಣಿಯೆಂದು ೧

ಅಂತಿಮಾ ಶ್ರಮವ್ಯಾಕೆ ಯಥಾರ್ಥ ಸ್ವರೂಪನೆ
ತೀರ್ಥಪದ ನಿನ್ನಯ
ಸಾರ್ಥಕಾಗಿ ಹೋಯಿತೋ ೨

ಒಂದೆ ಮನದಿ ನಿನ್ನಯ
ಪಾದ ದ್ವಂದ್ವ ಸ್ಮರಿಸುವೆ
ತಂದೆಶ್ರೀನರಹರಿಯ
ಪೊಂದೊ ಬಗೆ ಪ್ರೇರಿಸೊ ೩

## ೧೨. ಶ್ರೀ 'ಐಹೊಳೆ ವೆಂಕಟೇಶರು'

### ೩೨೨

### ಬಾಲಕೃಷ್ಣ

ಸುಮ್ಮನೆ ಹಟವ್ಯಾತಕಮ್ಮಾ ನಿನಗೆ
ಮೊಮ್ಮುಣಿಸುವೆ ನಾನು ಕೇಳೊ ಕೃಷ್ಣಯ್ಯ ಪ.

ಹಶಿವಿಯಾಗಿಹುದೇನೊ ನಿನಗೆ ಸಣ್ಣ
ಹಸುಳರಂಜಿಪ ಬಾವಾ ಬಂದಾನೊ ಹೊರಗೆ
ಮೊಸರಕಡೆದು ನಾ ಬೇಗ ಅಟ್ಟಿ
ಹೊಸ ಬೆಣ್ಣೆ ಕೊಡುವೆನೊ ಕಂದಯ್ಯ ನಿನಗೆ ೧

ಹಾಲು ಕುಡಿಸುವೆನೊ ನಾ ಒಬ್ಬ
ಕೀಳು ತಿರುಕ ಬಾಗಿಲಲ್ಲಿ ಬಂದಿಹನೊ
ಬಾಲಯ್ಯ ಅಳದೀರೊ ನೀನು ತನ್ನ
ಜೋಳಗೆಯಲಿ ನಿನ್ನ ಕೊಂಡೊಯುವನು ೨

ಅರಳೆಲೆ ಅಂದಿಗಿ ಇಡಿಸಿ ನಿನ್ನ
ಪೆರನೂಸಲಲಿ ಕಸ್ತೂರಿಯ ಧರಿಸಿ
ಪರಿಪರಿಯಲಿ ಸಿಂಗರಿಸಿ ಗೊಲ್ಲ
ತರಳರೊಡನ ಆಡಕಳುವೆನೋ ಕರಸಿ ೩

ಉಂಗುರು ಸರಪಳಿಯಿಟ್ಟು ಬಣ್ಣ
ದಂಗಿಯ ತೊಡಿಸುವೆ ಕೇಳೋ ನಿ ಇಷ್ಟು
ರಂಗಯ್ಯ ಬಂತ್ಯಾಕೊ ಸಿಟ್ಟು ನಿನಗೆ
ಮಂಗಳಾತ್ಮಕ ಏನೂ ಬೇಕೊ ಹೇಳಿಷ್ಟು ೪

ಚೆನ್ನಾರ ಚೆಲುವಾ ಐಹೊಳೆಯ ಪ್ರ
ಸನ್ನ ವತ್ಸಲ ಸಿರಿ ವೆಂಕಟರಾಯಾ
ನಿನ್ನಾಟವಬಲೇಶ ನಿಚಯಾ ನೋಡಿ
ಕರಂಣಿನೊಳಗಿಟ್ಟು ಹೀರುವರಯ್ಯಾ ೫

ಪಾಪ ಕರ್ಮವ ಮಾಡಬ್ಯಾಡಾ ನರಕ
ಕೂಪದೊಳಗೆ ಬಿದ್ದು ಹೊರಳಾಡಬ್ಯಾಡ
ಕಾಕಪುರುಷರ ಸಂಗ ಕೇಡಾ ನಮ್ಮ
ಶ್ರೀಪತಿಯ ಸ್ಮರಣೆ ಮಾಡದೆ ಬಿಡಬ್ಯಾಡಾ ೬

ವಿಹೀತ ಕರ್ಮಗಳನ್ನು ಮಾಡೋ ನೀನು
ಅಹಿತಲ್ಪನೊಲಿಸಿ ಸದ್ಗತಿಯನ್ನು ಬೇಡೊ
ಅಹಿತ ವಿಷಯ ಸುಖ ದೂಡೋ ಲೋಕ
ದಹಿತನ ಸೇವೆಗೆಯುತಲಿ ಕೊಂಡಾಡೊ ೭

ಸತ್ಯವಚನದಿಂದ ಬಾಳೊ ಬಲು
ಭಕ್ತಿಪೂರ್ವಕದಿ ಸಚ್ಛಾಸ್ತ್ರ ಕೇಳೊ
ಚಿತ್ತದಿ ಶಾಂತಿಯ ತಾಳೊ ದುಷ್ಟ
ರುಕ್ತಿ ಕೇಳದೆ ನಿನ್ನ ಕಿವಿ ಮುಚ್ಚಿಕೊಳ್ಳೊ ೮

ವೇದಬಾಹಿರನಾಗಬ್ಯಾಡಾ ಪರ
ವಾದಿಮತಕೆ ನೀನು ಮನ ಮೆಚ್ಚಬ್ಯಾಡಾ
ವೇದತೀರ್ಥರ ಗ್ರಂಥನೋಡಾ ಪಂಚ
ಭೇದ ಪ್ರಪಂಚವು ನಿಜವೆನ್ನೊ ಮೂಢಾ ೯

ಜೀವೇಶಾರೊಂದೆಂಬೊ ಹೊಲಿಯಾ ಪರಿ
ಭಾವಿಸೂ ದ್ವಾಸುಪರ್ಣವೆಂಬೊ ಶ್ರುತಿಯಾ
ಕಾವನಯ್ಯನೆ ಜಗದೊಡೆಯಾ ನಮ್ಮ
ಜೀವಾತ್ಮ ಭೃತ್ಯನೊ ಖರಿಯಾ ೧೦

ಅದ್ವೈತರೊಡನಾಟ ಬ್ಯಾಡ ನಮ್ಮ
ಮಧ್ವಮತದ ಪದ್ಧತಿ ಬಿಡಬ್ಯಾಡಾ

ಖದ್ಯೋತಸುತಗಂಜಬ್ಯಾಡಾ ನೀನು
ಪೊಂದು ಐಹೊಳಿಯ ವೆಂಕಟನಂಘ್ರಿಗಾಢಾ ೧೧

## ೩೨೩

ತಿಳಿವಳಿಕೆಯಲಿ ನಡಿ ಮನುಜಾ ಯಮ–
ನಲಿ ಆಗೊ ಭವಣೆಯು ತಪ್ಪದು ನೈಜಾ ಪ.

ಸುಳ್ಳು ಮಾತುಗಳಾಡೋರಿಲ್ಲೆ ನಿನ್ನ
ಹಲ್ಲು ಕಿತ್ತಿಸಿ ಕಡಿ ಘಾಕುವರಲ್ಲೆ
ಕಳ್ಳತನವ ಮಾಡೋದಿಲ್ಲೆ ಬೆನ್ನ
ಸೆಳ್ಳಿಯಬ್ಬಿಸೆ ಕೈಯ ಕಡಿಸುವರಲ್ಲೆ ೧

ದತ್ತಾಪಹಾರ ಮಾಡೋದಿಲ್ಲೆ ಜಿಂಹ್ವ
ಕತ್ತರಿಸುವರೆಲೊ ಅಂತಕರಲ್ಲೆ
ವೃತ್ತಿಛೇದನ ಮಾಡೋದಿಲ್ಲೆ ನಿನ್ನ
ಎತ್ತಿ ಹಾಕುವರೊ ಕುಂಭೀಪಾಕದಲ್ಲೆ ೨

ಪರಸತಿಯರನಪ್ಪೋದಿಲ್ಲೆ ನಿನ್ನ
ಉರಿವ ಉಕ್ಕಿನ ಕಂಭ ತೆಕ್ಕಿಸೋರಲ್ಲೆ
ಮರವಿ ಮೋಸವ ಮಾಡೋದಿಲ್ಲೆ ನಿನ್ನ
ಪರಿಪರಿ ಭವಣಿಯ ಬಡಿಸುವರಲ್ಲೆ ೩

ಪ್ರಾಣಹಿಂಸೆಯ ಮಾಡೋದಿಲ್ಲೆ ಕಲ್ಲ
ಗಾಣದೊಳಗೆ ಇಕ್ಕಿ ತಿರಗಿಸೋರಲ್ಲೆ
ಮಾನಿನಿಯರ ನೋಡೋದಿಲ್ಲೆ ಶಸ್ತ್ರ
ಪೋಣಿಸಿ ಕಂಣಾ ಮೀಟಿಸುವರೋ ಅಲ್ಲೆ ೪

ಹೇಸಿ ವಿಷಯ ನಂಬೋದಿಲ್ಲೆ ಸೀಸ
ಕಾಶಿ ಹೊಯ್ಯುವರೆನೊ ನಿನ್ನ ಬಾಯಲ್ಲೆ
ದೂಷಣ ನಿಂದಗಳಿಲ್ಲೆ ಬಲು
ದೋಷಿಯೆನ್ನುತ ನಿನ್ನ ಘಾಸಿಪರಲ್ಲೆ ೫

## ೩೨೪

### ತಿರುಪತಿಯ ಶ್ರೀ ವೆಂಕಟೇಶ

ಇಷ್ಟು ದಿನ ಈ ಶೇಷಾದ್ರಿ ಎಷ್ಟು
ದೂರವೊ ಎನುತಿದ್ದೆ
ದೃಷ್ಟಿಯಿಂದ ನೋಡಿದೆ ನಾ ಬೆಟ್ಟ
ದೊಡೆಯನಂಘ್ರಿ ಕಮಲ ಪ

ಹೇಮಮುಖದೀ ನದಿಯ ಕಂಡೇ
ಗೋಮಿನೀ ಪದ್ಮಾವತಿ ಕಂಡೆ
ಭೂಮಿಸುರರ ಮೇಳವ ಕಂಡೆ ಆ ಮಹಾ
ಗಾಳಿಗೋಪುರ ಕಂಡೆ ೧

ಸ್ವಾಮಿ ಪುಷ್ಕರಿಣೀಯ ಕಂಡೆ ಭೂಮಿ
ವರಹಾ ದೇವರ ಕಂಡೆ
ರಾಮದೂತನ ಪಾದವ ಕಂಡೆ ಸ್ವಾಮಿಯ
ಮಹಾದ್ವಾರವ ಕಂಡೆ ೨

ಹರಿಯು ಅಡಗಿದ ಹುತ್ತನು ಕಂಡೆ
ಹರಿಯಧ್ವಜದ ಸ್ತಂಭವ ಕಂಡೆ
ಪರಿಪರಿ ವೈಭವವನು ಕಂಡೆ ಪರಮ
ಪುರುಷನಾ ಮೂರ್ತಿಯ ಕಂಡೆ ೩

ಹರಿಹರಿ ಎನ್ನುವರನು ಕಂಡೆ ಹರಿದು
ಒಳ ಪೋಗುವರನು ಕಂಡೆ
ಹರಿಣಾಂಜನದ ತಾಡನ ಕಂಡೆ ಮಣಿಮಯಿ
ಮುಕುಟವನು ಕಂಡೆ ೪

ಹಣೆಯಲ್ಲಿಯ ನಾಮವ ಕಂಡೆ
ಅನುಪಮಾದಂಗವನೂ ಕಂಡೆ

ಕೊರಳ ಸರಗೀ ಸರಗಳ ಕಂಡೆ
ಹರಳು ರತ್ನದಾಭರಣಗಳನು ಕಂಡೆ ೫

ಉರದಿ ಶ್ರೀ ಭೂದೇವಿಯರ ಕಂಡೆ
ಕರದಿ ಶುಭಶಂಖ ಚಕ್ರಗಳ ಕಂಡೆ
ಗುರು ಶ್ರೀವಾದಿರಾಜರ್ಪಿಸಿದ ವರ
ಶಾಲಿಗ್ರಾಮ ಹಾರವ ಕಂಡೆ ೬

ಉದಗಿ ಪೀತಾಂಬರವ ಕಂಡೆ
ನಡುವಿನೊಡ್ಯಾಣವನು ಕಂಡೆ
ಜಡಿದ ಮಣಿಗಣ ಭೂಷಣನ ಕಂಡೆ
ಜಡಜನಾಭನ ಮೂರ್ತಿಯ ಕಂಡೆ ೭

ಅಂದದೀ ಕಾಲ್ಗಡಗವ ಕಂಡೆ
ಸುಂದರ ಪಾದಗಳ ಕಂಡೆ
ಮಂದಹಾಸ ಮುಖಾಬ್ಜ ಕಂಡೆ
ಇಂದಿರೆಯ ರಮಣನ ಕಂಡೆ ೮

ಆಗಮ ಶೃತಿ ಘೋಷವ ಕಂಡೆ
ಭಾಗವತರಾ ಮೇಳವ ಕಂಡೆ
ಬಾಗಿಲಾ ಬಲ ಹಸ್ತವ ಕಂಡೆ
ಭಾಗೀರಥಿಯಾ ಪಿತನವ ಕಂಡೆ ೯

ಚಿನ್ನದ ಕೂಪವನೂ ಕಂಡೆ
ಅನ್ನಪೂರ್ಣಾದೇವಿಯ ಕಂಡೆ
ರನ್ನದ ಹರಿವಾಣವ ಕಂಡೆ ಉಂಬುವ
ವೈಭವವನು ಕಂಡೆ ೧೦

ಕಪ್ಪದ ಕಣಜವನೂ ಕಂಡೆ ತಪ್ಪದೇ
ಹಾರುವವರನು ಕಂಡೆ
ಇಪ್ಪತ್ತು ದುಡ್ಡಿಗೆ ತೀರ್ಥ ಒಪ್ಪಿಲೇ
ಮಾರುದನುರನು ಕಂಡೆ ೧೧

ಸಾಸಿರ ನಾಮಗಳ ಒಡೆಯಾ
ವಾಸುದೇವಾಚ್ಯುತನ ಕಂಡೆ
ಕಾಸಿಗೆ ಕೈಚಾಚುವಂಥ ಕೇಸಕ್ಕ
ತಿಮ್ಮಪ್ಪನ ಕಂಡೆ ೧೨

ಆವ ಜನುಮದ ಸುಕೃತವೋ ಎನಗೆ
ಭೂವೈಕುಂಠವನ್ನೇ ಕಂಡೆ
ಶ್ರೀವಿಧಿಭವಾದಿ ವಂದ್ಯ ಐಹೊಳಿ
ವೆಂಕಟೇಶನ ಕಂಡೆ ೧೩

ಜಯ ಜಯ ಜಯ ಮಂಗಲಂ ಹರಿಗೆ
ಜಯ ಜಯ ಶುಭ ಮಂಗಲಂ ಸಿರಿಗೆ
ಜಯ ಪುದವೀ ಪದ ಕೇಳಿ ಪೇಳಿದರೆ
ಒಲಿದು ಫಲವೀವ ಕುಲಸ್ವಾಮಿ ಅವರೀಗೆ ೧೪

## ೩೨೫

### ಶ್ರೀ ರಾಘವೇಂದ್ರರು

ಎಂಥಾ ದಯವಂತರು ರಾಘವೇಂದ್ರರಿ
ನ್ನೆಂಥ ಮಹಿಮ ಪೂರ್ಣರು
ಚಿಂತಿತ ಫಲರೆಂದೆನಿಸಿ ವೃಂದಾವನ
ದಂತರ್ಗತ ಪೊಳೆವರು ಪ

ಪೃಥುವೀಧರನ ದಂತೋದ್ಭವೆಯಾದ
ಆ ತುಂಗಾತಟ ಕೃತ ಮಂದಿರರು
ಧೃತರಾಷ್ಟ್ರನೃಪರ ಮಕ್ಕಳ ಕೊಂದವನ ಸ
ನ್ನುತಾಂಬುಧಿ ಚಂದ್ರಮರು
ಪ್ರತಿಯಿಲ್ಲ ಇದರ ಸರಿಯ ಮಹಾತ್ಮೆಯು ಯಾವ
ಯತಿಯೊಳಗೆ ಕಾಣರು ಸತತಾ

ದಿತೇಯ ಸ್ವಭಾವಪೂರ್ಣರಾಗಿ
ಇಷ್ಟಾರ್ಥ ಕೊಡುತಿಹರು ೧

ಸಂತತ ಶುಭಕಾರ್ಯವಾಗುವವು ಇವರಲ್ಲಿ
ಅಂತರ ಬರಗೊಡರು ಹೊಂತಕಾರಿ ಮಹಿ
ಮಂತ ತಿಳಿಯದೆಂದು ಬುಧರು ಭ್ರಾಂತರಾಗ್ವರು
ಸಂತೋಷದಲಿ ಸದ್ಭಾಗವತ ಸಮ್ಮೇಳರು
ನಿಂತು ಸನ್ಮುಖ ಪಾಡ್ವರು ಸಂತರು ಶ್ರಾವಣ ಬಹುಳ
ತೃತೀಯ ರಥ ಸಂತೆ ನೆರೆದಂತೆಳೆವರು ೨

ಕರುಣಾರ್ಣವ ಎಂಬ ಗುಣ ನಿಮ್ಮಲ್ಲಿದ್ದ
ಕಾರಣದಿ ಪ್ರಾರ್ಥಿಸುತಿಹರು
ಧೊರೆ ನೀವು ಸಲಹಬೇಕಲ್ಲವೆ ಮರೆತರೆ ಇನ್ನಾರು
ಪೊರೆಯುವರು ಕರಿರಾಜವರದ ಐಹೊಳೆಯ ವೆಂಕಟಗೆ
ಪ್ರೀತಿ ಪಾತ್ರರು ಗುರು ಸಾರ್ವಭೌಮ ನಿಮ್ಮಂಘ್ರಿ
ಯುಗಳಲ್ಲಿ ಭಕ್ತಿಯಲಿ ಉದ್ಧರಿಸುವರು ೩

## ೩೨೬

### ಶ್ರೀ ರಾಘವೇಂದ್ರರು

ದಿನಕರನುದಿಸಿದನು ಧರೆಯೊಳಗೆ
ದಿನಕರನುದಿಸಿದನು

ದಾನವ ಕುಲದಲಿ ಕ್ಷೋಣಿಯೊಳಗೆ ಪ

ಪ್ರಥಮ ಪ್ರಲ್ಹಾದನಾಗಿ ಅವತಾರ ಮಾಡಿ
ಸತತ ಹರಿಯ ನುತಿಸಿ
ಮತಿ ಹೀನನಾದ ತಂದೆಗೆ ನರಹರಿರೂಪ
ರತಿಯಿಂದ ತೋರಿದ ಪ್ರಲ್ಹಾದರಾಯರೆಂಬ ೧

ವ್ಯಾಸಮುನಿಯ ಎನಿಸಿ ಸೋಸಿಲಿಂಗ
ವಾಸವನುತನ ಭಜಿಸಿ
ದಾಸನೆಂದು ಮೆರೆದಿ ನವ ವೃಂದಾವನದಿ
ಸೋಸಿಲಿ ಕರೆದರೆ ವಾಸ ಮಾಡುವುದಕ್ಕೆ ೨

ತುಂಗಭದ್ರೆಯ ತೀರದಿ ಮಂಗಳ
ಮಠ ಮಂತ್ರಾಲಯ ಸ್ಥಳದಿ
ಅಂಗಜ ಪಿತ ನಮ್ಮ ಐಹೊಳೆವೆಂಕಟನ
ಕಂಗಳಿಂದ ಕಂಡೆ ಗುರು ರಾಘವೇಂದ್ರನೆಂಬ ೩

## ೩೨೭

### ಶ್ರೀ ರಾಘವೇಂದ್ರರು

ನೋಡಿದೆ ನಾ ಗುರುವರನ ಈ
ರೂಢಿಗಧಿಕ ರಾಘವೇಂದ್ರರಾಯನ ಪ

ವೃಂದಾವನ ರೂಪನ ಭಕ್ತ ವೃಂದಕಾ
ನಂದ ಕೊಡುವ ಕಲ್ಪದ್ರುಮನ
ಕಂದರ್ಪನ ಗೆಲಿದವನ
ಅಂದಣದಲಿ ನಾಲವಿಂದ ಮೆರೆವರ ೧

ಕಮಲಾಕ್ಷಿಮಾಲಾ ಕಂಧರನ ಈ ಕ್ಷಿತಿಯೊ
ಳು ಮಧ್ವಮತಾಬ್ಧಿ ಚಂದಿರನ
ತಮವೈರಿಸಮತೇಜದವನ ಸಾಧು
ಸುಮನ ಪ್ರಿಯ ಸುಧೀಂದ್ರ ಕರಜನ ೨

ಶೃಂಗಾರಾಭರಣಭೂಷಣ ದಿವ್ಯ
ಅಂಗ ಪುಣ್ಯದಿ ಲೋಕ ಪವಿತ್ರ ಗೈಯುವನ
ತುಂಗಾತಟ ಮಂದಿರನ ಮಹ
ಮಂಗಲಪ್ರದ ಮಂತ್ರಾನಿಲಯದೊಲ್ಲಭನ ೩

ಲೇಸಾದ ಭಿಕ್ಷು ಎನಿಪನ ತನ್ನದಾಸ
ರಾ ಸ್ತುತಿಗೆ ಸರ್ವಾರ್ಥದಾಯಕನ
ಭಾಸುರಾಗಮ್ಯ ಮಹಿಮನ ಜಗ
ಧೀರ ನರಹರಿದೂತ ದೇವಸ್ವಭಾವನ ೮

ಪರವಾದಿ ಹೃದಯದಲ್ಲಣನ ದ್ವೈತ
ಸ್ಥಿರವೆಂದು ಜಗದಿ ಭೇರಿಯ ಹೊಡಿಸಿದನ
ಪರಿಮಳಾದಿ ಗ್ರಂಥ ಬೀರಿದನ ಕರಿ
ವರದ ಐಹೊಳೆ ವೆಂಕಟನ ಕಿಂಕರನ ೫

# ೧೩. 'ಸಿರಿವಿಠಲರು'

## (ಕಲಮದಾನಿ ನಾರಾಯಣರಾವ)

### ೩೨೮

ಎಂದಿಗೆ ಕಾಂಬೆನೊ ಮುರಹರ ಮಂದರೋದ್ಧರ
ಅಂದು ಇಂದು ಎನದೇ ಮನ್ಮನ
ಮಂದಿರದೊಳಿಂದಿರಾವರ ಪ

ಭೋಗಿ ಶಯ್ಯದಿ ಯೋಗ ನಿದ್ರೆಯಲಿ
ಜಾಗರಾದೆನೋ ಹರಿ
ಜಾಗು ಮಾಡದೆ ಹೃದಯ ಪದ್ಮದಿ
ಭಾಗವತರ ಭಾಗ್ಯದ ದೇವ ೧

ಸಿರಿಯ ಸುರುಚಿರ ಊರುಗಳ ಮೇಲೆ
ಚರಣ ಯುಗ್ಮವನಿರಿಸಿ
ಪರಮ ಸುಖಕೆ ಮರಳುಗೊಂಡೆನ್ನ
ಮರತೆಯಾದರೆ ಸ್ವರಮಣ ನಿನ್ನ ೨

ಸುರರು ಋಷಿ ಪಿತೃ ಧರಣೀಶ ಗಂಧರುವ
ನರರ ವರದ ಭಕ್ತಿಲಿ
ಕರೆಪ ಸೇವೆಗೆ ಮೆಚ್ಚಿ ಎನ್ನನು
ತೊರೆದು ಬಿಡಲು ಸಿರಿವಿಠಲ ನಿನ್ನ
ಎಂದಿಗೆ ಕಾಂಬೆನೊ ಮುರಹರ ೩

### ೩೨೯

ಹರಿಯಲ್ಲಿ ಧನ್ಯರು ಪೊರೆಯರು ಸತ್ಯ
ಸ್ಥಿರವೀ ಮಾತಿಗೆ ಸದ್ಭಕ್ತರು ಸಾಕ್ಷಿಯಿಹರು ಪ

ಪುಣ್ಯಾತ್ಮ ಪ್ರಿಯ ವ್ರತ ಸಾಕ್ಷಿ ಜಗ
ನ್ಮಾನ್ಯ ನಾರದ ದೇವ ಋಷಿ ಶ್ರೇಷ್ಠ ಸಾಕ್ಷಿ
ಧನ್ಯ ಧೃವರಾಯನು ಸಾಕ್ಷಿ ಹರಿಯ
ಪೂರ್ಣ ವ್ಯಾಪ್ತಿಯ ತೋರ್ದ ಪ್ರಲ್ಹಾದ ಸಾಕ್ಷಿ ೧

ದೊರೆ ಅಂಬರೀಷನು ಸಾಕ್ಷಿ ಹರಿ
ಗುರುಭಕ್ತಿ ನಾಮಕೆ ದ್ರೌಪದಿ ಸಾಕ್ಷಿ
ಸ್ಥಿರ ವಿಭೀಷಣ ರಾಜ ಸಾಕ್ಷಿ ತನ್ನ
ಮರಣ ಕಾಲದಿ ನೆನೆದ ಅಜಮಿಳ ಸಾಕ್ಷಿ ೨

ದೊರೆ ಧರ್ಮ ದೇವರು ಸಾಕ್ಷಿ ಜಗ
ದ್ಗುರುವಾದ ಮಹ ರುದ್ರದೇವರು ಸಾಕ್ಷಿ
ಗರಳ ಕಾಳಿಂಗನು ಸಾಕ್ಷಿ ಪ್ರಾಣಾತುರದಿ
ಹರಿಯ ಕರೆದ ಗಜರಾಜ ಸಾಕ್ಷಿ ೩

ಶಿಲೆಯಾದ ಅಹಲ್ಯೆಯ ಸಾಕ್ಷಿ ಗರ್ವ
ವರ್ತಿಸಿದ ನಹುಷನೃಗರು ಸಾಕ್ಷಿ
ಚೆಲುವೆ ಗಂಡಿಕಾ ವೇಶ್ಯ ಸಾಕ್ಷಿ ಭಕ್ತಿಗೊಲಿದು
ನಲಿದ ಜ್ಞಾನಿ ವಿದುರನು ಸಾಕ್ಷಿ ೪

ಮೊರೆ ಹೊಕ್ಕ ಸುಗ್ರೀವ ಸಾಕ್ಷಿ ಬಾಲ್ಯ
ಪರಮ ಮಿತ್ರನಾದ ಕುಚೇಲ ಸಾಕ್ಷಿ
ಶರಬಿಟ್ಟ ಭೃಗುವಾದ ಸಾಕ್ಷಿ ಶ್ರೇಷ್ಠ
ಹರಿದಿನ ವ್ರತದ ರುಗ್ಮಾಂಗ ಸಾಕ್ಷಿ ೫

ಪುಂಡಲೀಕ ಋಷಿಸಾಕ್ಷಿ ಆ ಮೃಕಂಡ
ಮುನಿಜ ಮಾರ್ಕಾಂಡೇಯ ಸಾಕ್ಷಿ
ಪಂಡಿತ ಸಾಂದೀಪ ಸಾಕ್ಷಿ ಕುರು
ಪಾಂಡವರ ಪಿತಾಮಹ ಭೀಷ್ಮನು ಸಾಕ್ಷಿ ೬

ಪಿರಿದು ಕಷ್ಟದ ನಳ ಸಾಕ್ಷಿ ಕೃಷ್ಣ
ಕರುಣಿಕೆ ಪಾತ್ರ ಪರೀಕ್ಷಿತ ಸಾಕ್ಷಿ
ನಳಕೂಬರು ಸಾಕ್ಷಿ ಸತ್ಯ
ದ್ಧರಿಶ್ಚಂದ್ರಾದಿ ಪುಣ್ಯ ಶ್ಲೋಕರು ಸಾಕ್ಷಿ ೭

ನಿದ್ದೆಯ ಮುಚುಕುಂದ ಸಾಕ್ಷಿ ಆತ್ಮ
ಬದ್ಧ ಭಕ್ತಿಯಲರ್ಪಿಸಿದ ಬಲಿ ಸಾಕ್ಷಿ
ಶುದ್ಧ ಜ್ಞಾನಿ ಶುಕ ಸಾಕ್ಷಿ ಹರಿಯ
ಸದ್ಯದಣನಾದ ಬಲಭದ್ರ ಸಾಕ್ಷಿ ೮

ಅರ್ಕಾದಿ ಋಷಿಗಳು ಸಾಕ್ಷಿ ವಿಶ್ವಾ
ಮಿತ್ರ ದಕ್ಷ ಪ್ರಜೇಶ್ವರೆಲ್ಲ ಸಾಕ್ಷಿ
ಮಿತ್ರೆ ಕುಬ್ಜಾ ತ್ರಿಜಟೆ ಸಾಕ್ಷಿ ಮಹಾ
ಮೈತ್ರೇಯ ಪರಾಶರ ಮುನಿಶರು ಸಾಕ್ಷಿ ೯

ಇಂದ್ರಾದಿ ದಿವಿಜರು ಸಾಕ್ಷಿ ಕೃಷ್ಣ
ನ್ನೊಂದಿ ಸೇವಿಸಿದುದ್ಧವಕ್ರೂರ ಸಾಕ್ಷಿ
ಸುಂದರ ಗೋಪಿಯರು ಸಾಕ್ಷಿ ಪಾಪ
ಸಂದೋಹದ್ಯುದೃತ ವಾಲ್ಮೀಕಿ ಸಾಕ್ಷಿ ೧೦

ಸರ್ವ ಮುಕ್ತ ಜೀವರು ಸಾಕ್ಷಿಯಾ ದೇವ
ರು ವಸುದೇವ ದೇವಕಿಯರು ಸಾಕ್ಷಿ
ಹರಿದಾಸರೆಲ್ಲರು ಸಾಕ್ಷಿ ಫಲ
ಸಿರಿವಿಠಲಗೆ ಕೊಟ್ಟ ಶಬರಿಯ ಸಾಕ್ಷಿ ೧೧

## ೩೩೦

### ಶ್ರೀ ಸುಧಾಮ ಚರಿತ್ರೆ

ಶ್ರೀ ಹರಿಪ್ರಿಯ ಸಖನು ಕುಚೇಲನು
ವರವಿಪ್ರೋತ್ತಮನವನೂ ಪ

ಘೋರ ದಾರಿದ್ರ್ಯದ ಬಾಧೆಯೊಳಿರುತಲಿ
ಚಾರು ಸಚ್ಚರಿತೆಯ ಆಗರವಾಗಿಹ ಅ.ಪ.

ಶೀಲ ಸದ್ಗುಣವತಿಯು ಸುಸೀಲೆಯು
ಸತಿಮಣಿ ಪತಿವ್ರತೆಯು
ಬಾಲಕ ಸಲಹಲು ಕಡು ಕಷ್ಟ ಬಡುತಲಿ ಶ್ರೀ
ಲೋಲನ ಧ್ಯಾನದಿ ಕಾಲಕಳೆಯುತಲಿಹಳು ೧

ಮನದಲಿ ಯೋಚಿಸುತ ಅನುನಯದೊಳು
ಪತಿಗೆ ತಾ ನುಡಿದಳೆಂದೂ
ಅನುಭವಿಸಲಾರೆ ಘನ ದಾರಿದ್ರ್ಯವನು
ಸಂ ಮ್ಮಂಧಿಗಳು ಸ್ನೇಹಿತರಲ್ಲವೇ ನಿಮಗೆ ೨

ಅಂದ ಮಾತನು ಕೇಳುತ ಕುಚೇಲ ತಾ
ಹಿಂದೆ ಗುರುಕುಲ ವಾಸದಿ
ನಂದ ಬಾಲನ ಕೂಡ ಹೊಂದಿದ ಸ್ನೇಹವ
ತಂದು ಸ್ಮರಣೆಗೆ ಶ್ರೀ ಕೃಷ್ಣ ಸಖನು ಎಂದಾ ೩

ಕಡುಹರುಷದಿ ಸತಿಯು
ಒಡನೆ ತಂದು ಪ್ರಥಕು ತಂಡುಲವ ನೀಡೀ
ಕಡಲೊಡೆಯ ಪಾದ ದರುಶನ ಕೊಂಡು ನೀವ
ಸಡಗರದಲಿ ಬನ್ನಿರೆಂದು ಕಳುಹಿದಳು ೪

ಭರತ ಮಾರ್ಗದಿ ಹರಿಯಾ
ಸ್ಮರಿಸುತಲೆ ಮನದೊಳು ಪೂಜಿಸುತ
ಸುರ ವೈಭವದಲಿ ಮೆರೆಯುವ ದ್ವಾರಕಾಪುರವನು
ನೋಡುತ ಬೆರಗಾಗಿ ನಿಂದನು ೫

ಚಾರರೊಡನೆ ಪೇಳಿದಾ
ಶ್ರೀ ಕೃಷ್ಣನ ಬಾಲ್ಯದ ಸಖ ತಾನೆಂದು
ದೂರದಿ ಬಂದು ದ್ವಾರದಿ ನಿಂದಿಹುದನು
ಅರುಹಿರಿ ಹರಿಗೆಂದು ಕಳುಹಿದನವರನು ೬

ವಾರುತಿಯನು ಕೇಳುತಾ
ಶ್ರೀಕೃಷ್ಣ ತಾ ವಿಪ್ರನೆಡೆಗೆ ಬರುತಾ
ಕರ ಪಿಡಿದವನ ಕರೆತಂದನರಮನೆಗೆ ತಾ
ವರ ಸಿಂಹಾಸನದಲ್ಲಿ ಕುಳ್ಳಿರಿಸಿದನಾಗ ೭

ದೂರದ ದಾರಿಯನು ನಡೆದು ಬಂದ
ಶ್ರಮ ಪರಿಹಾರಕೆಂದು
ನಾರಿ ರುಕ್ಮಿಣಿ ನೀರ ನೆರೆಯ ಪಾದವ ತೊಳೆದು
ಭಾರಿ ಉಪಚಾರ ಮಾಡುತಿದ್ದನು ಕೃಷ್ಣಾ ೮

ಮಡದಿ ಮಕ್ಕಳ ಕ್ಷೇಮವ ವಿಚಾರಿಸಿ
ಕಡು ಸಂಭ್ರಮವ ತೋರುತ
ಷಡುರಸದನ್ನವ ಮಡದಿ ರುಕ್ಮಿಣಿ ಬಡಿಪೆ
ಸಡಗರದಲಿ ಸುಭೋಜನವ ಮಾಡಿಸಿದನು ೯

ಅಂದಿನಿರುಳು ಕಳೆಯೇ
ತಂದಿಹುದೇನು ಕಾಣಿಕೆ ತಮಗೆನುತಾ
ಚೆಂದೆ ಬಟ್ಟೆಯೊಳಿದ್ದ ಪ್ರಥಕು ತಂಡುಲವ [ಅವಲಕ್ಕಿ]
ಬ್ರಹ್ಮಾಂಡದೊಡೆಯ ತಾ ಕೊಂಡೆ ಸಂಭ್ರಮದಿಂದ ೧೦

ಪ್ರಥಕು ತಂಡುಲವ ಕೊಂಡು
ಸುಧಾಮನ ಭಕುತಿ ಭಾವನೆ ಕಂಡು
ಅತುಲ ಐಶ್ವರ್ಯದ ಸುಖ ಸಂಪದವಿತ್ತು
ಮುಕುತಿ ನೀಡಿದ ನಮ್ಮ ಭಕುತ ವತ್ಸಲ ಕೃಷ್ಣಾ ೧೧

ಮಂಗಲಂ ಮಚ್ಚ ಕೂರ್ಮ
ವರಹ ನರಸಿಂಹ ಸುಂದರ ವಾಮನ
ಮಂಗಲಂ ಭೃಗುರಾಮ ದಶರಥ ತನಯಗೆ
ಮಂಗಲಂ ಸಿರಿ ಕೃಷ್ಣ ಬೌದ್ಧ ಸುಕಲ್ಕಿಗೆ ೧೨

ಮಂಗಲಂ ಪ್ರದ ಚರಿತ್ರೆಯಾ
ಭಕುತಿಯಿಂ ಪೇಳಿ ಕೇಳಿದ ಜನಕೆ

ಹಿಂಗದೆ ಸಕಲ ಸೌಭಾಗ್ಯ ಸಂಪದ ವೀವಾ
ಅಂಗಜ ಪಿತ ತಂದೆ ಸಿರಿ ವಿಠಲ ಸ್ವಾಮಿ ೧೩

ಶ್ರೀಹರಿಪ್ರಿಯ ಸಖನು ಕುಚೇಲನು
ವರ ವಿಪ್ರೋತ್ತಮನವನು
ನೀರಜನಾಭನ ಕರುಣೆಯಿಂದಲಿ ತಾ
ಭೂರಿ ಸಂಪದ ಸಿರಿ ಭೋಗಿಸುತಿದ್ದನು ೧೪

ಶ್ರೀ ಸುಧಾಮ ಚರಿತ್ರ ಸಂಪೂರ್ಣಂ

## ೩೩೧

ಜೋ ಜೋ ಜೋ ಶ್ರೀ ರಾಘವೇಂದ್ರರ
ಜೋಗುಳ ಪದ ಜೋ ಜೋ
ಜೋ ಜೋ ಜೋ ಜೋ ಗುರು ರಾಘವೇಂದ್ರಾ
ಜೋ ಜೋ ಶುಭಗುಣಸಾಂದ್ರ ಯತೀಂದ್ರಾ ಪ

ನರಹರಿಯೊಲಿಸಿದ ಬಾಲ ಪ್ರಲ್ಹಾದ
ಸಿರಿಕೃಷ್ಣನರ್ಚಕ ವ್ಯಾಸ ಯತೀಂದ್ರ ಜೋ ಜೋ ೧

ಗುರು ಮಧ್ವಮತವನುದ್ಧರಿಸಿದ ಮಹಿಮಾ
ಸಿರಿ ರಾಮ ಸೇವಕ ಗುರು ಸಾರ್ವಭೌಮ ಜೋ ಜೋ ೨

ತಂದೆ ಸಿರಿವಿಠಲನ ಆಜ್ಞೆಯಿಂ ಬಂದೂ
ನಿಂದೆ ವೃಂದಾವನದಿ ನಿಜ ಭಕ್ತ ಬಂಧು ಜೋ ಜೋ ೩

## ೩೩೨

ಶ್ರೀ ರಘುರಾಮ ಪದಾಂಬುಜ ಭೃಂಗನೆ
ಶ್ರೀ ರಾಘವೇಂದ್ರ ಸದ್ಗುರುವರನೆ
ಸಾರಿದೆ ನಿನ್ನ ಪಾದಾರವಿಂದಯುಗಳಾ
ರಾಧನೆಯಿತ್ತು ಸಲಹೆಮ್ಮನೂ ಪ.

ಶ್ರೀ ಮಧ್ವಶಾಸ್ತ್ರ ಸುಧಾಂಬುಧಿಯೊಳು
ಪುಟ್ಟಿ ಕಾಮಾರಿ ಶಿರಮುಟ್ಟಿ ಪೂರ್ವೋತ್ತರ
ಆ ಮಹಾ ಅಲೆಯೊಳು ಚಲಿಸಿ ದೇವಾಳಿಯಿಂ
ಪ್ರೇಮದಿ ಸೇವ್ಯವಾಗಿರುತಿರುವ ೧

ಹರಿಪದಾಂಬುಜಗಳಲ್ಲಿ ಬೆರೆದು ಪಂಚಭೇದ
ವರತಾರತಮ್ಯದಿ ದುರ್ವಾದವ
ತರಿದ ಶ್ರೀ ಗುರು ವಾಗ್ದೇವತಾನದಿಯನ್ನು
ನಿರುತನಿರ್ಮಲಗೈಸಿ ಕರುಣಿಸಲಿ ೨

ಗುರು ರಾಘವೇಂದ್ರನೆ ಸಕಲ ಪ್ರದಾತನೆ
ನಿರುತ ನಿನ್ನಡಿಯಲಿ ಭಕ್ತಿಯೊಳು
ಇರುವರ ಪಾಪ ಪರ್ವತವನ್ನು ಭೇದಿಪೆ
ವರದೃಷ್ಟಿಯೆಂಬ ವಜ್ರಾಯುಧದಿ ೩

ಭೂವಿಭುದೇಂದ್ರನೆ ಸೇವಿಸಿ ಹರಿಯ ಮಹಾ
ವಿಭವವನ್ನೆಲ್ಲ ಪಡೆದವನೆ
ದೇವ ಸ್ವಭಾವನೆ ಯಾವಾಗಲೆಮ್ಮಿಷ್ಟ
ದೇವತರುವಿನಂತೆ ನೀಡುವುದು ೪

ಶೀಲಸ್ವರೂಪನೆ ಸಂಸಾರ ದುಃಖದ
ತೂಲರಾಶಿಗೆ ಕಾಲಾನಲನೆ
ಸುವಿಮಲರೂಪನೆ ತವಕದಿ ಪರವಾದಿ
ನಿವಹಕೆ ವಾಗ್ಬಂಧನಗೈಸುವನೆ ೫

ವರ ವಿದ್ವಜ್ಜನರುಗಳರಿಯಲತ್ಯಧಿಕ
ವಾಗಿರುವ ಜ್ಞಾನವು ವಾಗ್ವೈಖರಿಯಿಂದಲಿ
ಪರವಾದಿಗಳ ಗೆದ್ದ ಶ್ರೀ ರಾಘವೇಂದ್ರ
ಸದ್ಗುರುವೆ ನಮ್ಮಿಷ್ಟವ ಸಲಿಸುವುದು ೬

ಸಂತಾನ ಸಂಪತ್ತು ಭಕ್ತಿವಿಜ್ಞಾನವು ಮುಂತಾದ
ವಾಗ್ದೇಹ ಪಾಟವವ

ಸಂತೋಷದಿಂದಿತ್ತು ನಮ್ಮ ಶರೀರದ
ಸಂತಾಪರುಜೆಯ ನಿಗ್ರಹಿಸುವವನೆ ೭

ಮೇದಿನಿಯೊಳು ಗಂಗಾದಿ ತೀರ್ಥಾಧಿಕವಾದ
ನಿನ್ನಯ ಪಾದೋದಕವು
ಮೋದದಿ ಬ್ರಹ್ಮಹತ್ಯಾದಿ ತ್ರೈಪಾಪವ
ಭೇದಿಸಿ ಸುಕೃತವ ಕೊಡುತಿಹುದು ೮

ಭೂಮಿಯೊಳು ಬಂಜೆಗೆ ಮಕ್ಕಳ ಕೊಡು
ವದು ಅವಯವದಬಿಳ ಕೈವಲ್ಯವನು
ತವಕದಿ ಸಕಲಗ್ರಹವ ನಿಗ್ರಹಿಸುತ
ವಿವಿಧ ಪಾತಕ ಪರಿಹರಿಸುವುದು ೯

ನಿನ್ನ ಪದಾಬ್ಜದರಜ ಧರಿಸಿರುವರ ನಿನ್ನ
ಪದಾಂಬುಜ ಕೀರ್ತಿಪರ
ಉನ್ನತ ಪರಿಪಕ್ವವಾದ ವಾಗ್ಮಿಗಳನಿನ್ನು
ಸಂದರ್ಶಿಸೆ ದುರಿತಹರ ೧೦

ಭವಶರಧಿಗೆ ಸೇತುವೆಯೆನಿಸಿರುವನೆ
ಭುವಿಯೊಳು ದ್ವೇಷಿಗಳಿಲ್ಲದಿಹ
ಸುವಿಮಲರೂಪನೆ ತವಕದಿ ಪರವಾದಿ
ನಿವಹಕೆ ವಾಗ್ಬಂಧಗೈಸುವನೆ ೧೧

ಜಯಸರ್ವತಂತ್ರಸ್ವತಂತ್ರನೆ ಜಯಜಯ
ಜಯಜಯ ಶ್ರೀ ಮಧ್ವಮತವರ್ಧನ
ಜಯ ವಿಜಯೀಂದ್ರರ ಕರಕಮಲ ಸಂಜಾತ
ಜಯತು ಸುಧೀಂದ್ರರ ವರಪುತ್ರನೆ ೧೨

ಪರಮಹಂಸೋತ್ತಮ ಪೂರ್ಣಾಯುಜ್ಞಾನವು
ನಿರುತ ಯಶವು ಪುಣ್ಯಭಕ್ತಿಯನು
ಸಿರಿಯ ಸುಪುತ್ರರ ವೃದ್ಧಿಯಗೊಳಿಸೆನ್ನ
ಪರಿಪರಿ ಭಯವೆಲ್ಲ ಪರಿಹರಿಸೋ ೧೩

ದುರುಳ ದುರ್ವಾದಿಗಳನು ನಿಗ್ರಹಿಸುವ
ದುರುಳರ ಹೃದಯ ಪ್ರಭೇದಿಸುವ
ಎರಡು ಚಿಹ್ನೆಗಳನ್ನು ಧರಿಸಿದ ವಿದ್ಯಾ
ಪರಿಪೂರ್ಣ ಗುರುವನ್ಯರಿಲ್ಲವೊ ೧೪

ಹರಿಯ ಪ್ರಸನ್ನತೆ ಪಡೆದು ಪ್ರಸಿದ್ಧ
ನಾಗಿರುತ ಸ್ಮರನಗೆಲಿದಿಷ್ಟಗಳ
ತ್ವರಿತದಿ ಕೊಡುವ ಶ್ರೀ ಗುರುರಾಘವೇಂದ್ರರ
ಹೊರತನ್ಯ ಗುರುವಿಲ್ಲ ಧರೆಯೊಳಗೆ ೧೫

ಮರೆವು ಮೂರ್ಛಾಕ್ಷಯವಜ್ಞಾನ ಭ್ರಾಂತಿಯು
ಉರುತರ ಮೂಕತ್ವ ಸಂದೇಹವು
ಕರಚರಣದಕಂಪ ಮೊದಲಾದ ಇಂದ್ರಿಯ
ಪರದುಷ್ಟದೋಷವ ಪರಿಹರಿಸೋ ೧೬

ಶ್ರೀ ರಾಘವೇಂದ್ರಾಯ ನಮಃ ಎಂಬುವ
ದಿವ್ಯ ಸಾರಾಷ್ಟಾಕ್ಷರ ಜಪಿಸುತಲಿ
ಆರಾಧಿಸುವರ ಇಷ್ಟಾರ್ಥ ಕೊಡುವೆಯೊ
ಆದರದಿಂದಲಿ ಅನವರತ ೧೭

ತನ್ನ ದೇಹದಿಂದ ಉತ್ಪನ್ನವಾಗುವ
ತನ್ನಿಂದ ತನ್ನ ಬಂಧುಗಳಿಂದಾದ
ಉನ್ನತ ದೋಷಗಳನ್ನು ನಿವರ್ತಿಸಿ
ಮುನ್ನ ಕೊಡುವೆ ಸಕಲೇಷ್ಟಗಳ ೧೮

ಸ್ವಾರ್ಥಸಿದ್ಧಿಗೆ ಈ ಸ್ತೋತ್ರ ತ್ರಿಕಾಲದಿ
ಪ್ರಾರ್ಥಿಸಲಿಹಪರದಿಷ್ಟಗಳ
ಅರ್ಥಿಯಿಂ ಪಡೆದು ಕೃತಾರ್ಥನಾಗುವ
ಯಥಾರ್ಥವು ಇದಕೆ ಸಂದೇಹವಿಲ್ಲ ೧೯

ಈ ಮಹಿಯೊಳಗೆ ಅಗಮ್ಯ ಮಹಿಮೆ
ಉದ್ದಾಮ ಸುಕೀರ್ತಿ ವಿಶಾರದನೇ

ಶ್ರೀ ಮಧ್ವಮತ ದುಗ್ಧಾಬ್ಧಿಗೆ ಚಂದ್ರನೆ
ಸ್ವಾಮಿ ನಿರ್ದೋಷ ನೀ ಎನ್ನ ಕಾಯೋ ೨೦

ವೃಂದಾವನ ಪ್ರದಕ್ಷಿಣೆ ಮಾಡಲು
ಪೊಂದುವ ಸಕಲ ಯಾತ್ರಾಫಲವ
ವೃಂದಾವನದ ಉದಯಯಿಂದು ಧರಿಸಲು
ಸಕಲ ತೀರ್ಥದ ಫಲ ದೊರಕುವುದು ೨೧

ನಮಿಸುವೆ ಸರ್ವಾಭೀಷ್ಟ ಸಿದ್ಧಿಗೆ ನಾನು
ವಿಮಲಶಾಸ್ತ್ರಾರ್ಥ ಜ್ಞಾನಗಳು
ಕ್ರಮದಿ ಲಭಿಸೆ ನಿನ್ನ ನಾಮೋಚ್ಚಾರಣೆ
ಅಮಿತ ಹರುಷದಿಂದ ಮಾಡುವೆನು ೨೨

ಪರಿಪರಿ ದುಃಖದಿ ಪರಿಪೂರ್ಣವಾಗಿಹ
ಉರುತರ ಗಂಭೀರವಾಗಿರುವ
ಅರಿಯಲಸದಳ ಪಾತಾಳವು ಉತ್ತರಿಸಲು
ಸಾಧ್ಯವು ಸಮಸಮವಿಲ್ಲದ ೨೩

ನಿರುತ ದೋಷಗಳೆಂಬ ಜಲಪಿಶಾಚಿಗಳಿಂದ
ಬೆರೆದರಿಷಡ್ವರ್ಗ ತರಂಗದಿ
ಪರಿಮಿತಿಯಿಲ್ಲದೆ ಭಯಸಮೂಹವೆ
ಬಿಳಿ ನೊರೆಯು ವ್ಯಸಲವಗಾಧವಾದ ೨೪

ಎಂದಿಗು ಹಿಂಗದ ವಿಷಜಲವಿರುತಿಹ
ಬಂಧಕವಾದ ಸಂಸಾರವೆಂಬ
ಸಿಂಧುವಿನೊಳು ಬಿದ್ದು ಮಗ್ನನಾದೆ
ರಾಘವೇಂದ್ರ ಗುರುವೆ ಎನ್ನನುದ್ಧರಿಸೋ ೨೫

ನಿಷ್ಠೆಯಿಂದಲಿ ಸ್ತೋತ್ರ ಮಾಡಲಷ್ಟಾದಶ
ಕಷ್ಟಾಂಧ ಮೂಕ ಬಧಿರತ್ವ ಹರ
ಸೃಷ್ಟಿಯೊಳಗೆ ಪೂರ್ಣಾಯು ಸಂಪತ್ತು
ಯುತ್ಕೃಷ್ಟ ಸುಖಗಳನಿತ್ತು ಸಲಹುವೆಯೋ ೨೬

ಮುದದಿ ಈ ಸ್ತೋತ್ರದಿಂದಭಿಮಂತ್ರಿತವಾದ
ಉದಕ ಪ್ರಾಶನದಿಂದ ಉದರದೊಳು
ಉದುಭಿಸಿದ ಮಹಾರೋಗಗಳೆಲ್ಲವು
ಅಧಿಕ ಶೀಘ್ರದಿ ನಾಶವಾಗುವುದು ೨೭

ವೃಂದಾವನದ ಬಳಿ ಸ್ತೋತ್ರ ಪ್ರದಕ್ಷಿಣೆ
ಯಿಂದ ವಂದಿಸಿ ಕುಂಟನಾದವನು
ಚಂದದಿ ನಡೆಯುವ ಶಕ್ತಿಯ ಕಾಲೊಳು
ಪೊಂದುವ ಗುರುವಿನನುಗ್ರಹದಿ ೨೮

ರವಿಶಶಿಗ್ರಹಣ ಪುಷ್ಯಾರ್ಕಾದಿ ದಿನದಲ್ಲಿ
ಸ್ತವನವ ನೂರೆಂಟು ಸಲ ಮಾಡಲು
ತವಕದಿಂದಲಿ ಭೂತ ಪ್ರೇತ ಪಿಶಾಚಿಯು
ವಿಧವಿಧ ಬಾಧೆಗಳೆಲ್ಲ ಪರಿಹರವು ೨೯

ವಿಮಲ ಬೃಂದಾವನದೆಡೆಯೊಳು ಸ್ತೋತ್ರದಿ
ನಮಿಸುತ್ತ ದೀಪವನಿಡುವವರು
ಶ್ರಮವಿಲ್ಲದ ಸುಜ್ಞಾನ ಸತ್ಪುತ್ರರ ಮಮತೆ
ಯಿಂದಲಿ ಹೊಂದಿ ಸುಖಿಸುವರು ೩೦

ಪರವಾದಿಗಳ ದಿಗ್ವಿಜಯ ದಿವ್ಯಜ್ಞಾನ
ಪರಿಪೂರ್ಣ ಭಕ್ತಿಯ ವರ್ಧಿಸುತ
ನಿರುತದಿ ಸಕಲೇಷ್ಟ ದೊರಕಿದ ವಿಷಯದಿ
ಬರಿದಾದ ಯೋಚನೆ ಫಲವಿಲ್ಲವು ೩೧

ಚೋರ ಮಹೋರಗ ನೃಪ ನಕ್ರ ವ್ಯಾಘ್ರಾದಿ
ಘೋರಭಯವ ಪರಿಹರಿಸುವುದು
ಧಾರುಣಿಯೊಳಗೀ ಸ್ತೋತ್ರ ಪ್ರಭಾವವೆ
ಸಾರುತಲಹುದು ಸಂದೇಹವಿಲ್ಲ ೩೨

ಪರಿಶುದ್ಧ ಭಕ್ತಿಯಿಂ ಗುರುರಾಘವೇಂದ್ರರ
ಚರಣ ಸ್ಮರಿಸಿ ಸಂಸ್ತುತಿಸುವರು

ಅರಿಯರು ಲವಲೇಶ ದುಃಖವ ಸ್ವಪ್ನದಿ
ಹರಿಯ ಅನುಗ್ರಹ ಬಲದಿಂದಲಿ ೩೩

ವಸುಧೆಯೊಳಗೆ ಸಕಲೇಷ್ಟ ಸಮೃದ್ಧಿಯು
ದಿಶೆ ದಿಶೆಯೊಳು ಕೀರ್ತಿಸಮವಿಲ್ಲದ
ಎಸೆವ ಐಶ್ವರ್ಯವು ದೊರಕಿಪುದಕೆ
ಹಯಾಸ್ಯನೆ ಸಾಕ್ಷಿಯಾಗಿರುತಿಹನು ೩೪

ಧರೆಯೊಳಗತಿ ಪೂಜ್ಯ ಗುರುರಾಘವೇಂದ್ರನೆ
ನಿರುತವು ಸತ್ಯಧರ್ಮದಿ ರತನೆ
ಸ್ಮರಿಸುವವರಿಗೆ ಸುರತರುವೆ ನಮಿಪರಿಗೆ
ಸುರಭಿಯೆನಿಸಿ ನಿತ್ಯ ಪೊರೆಯುವನೆ ೩೫

ಮಂಗಳ ಮಂತ್ರಾಲಯ ಪುರದಧಿಪನೆ
ಮಂಗಳ ತುಂಗಾತೀರದೊಳು
ಹಿಂಗದೆ ವಿವರಿಸಿ ಶ್ರೀರಾಮಚಂದ್ರನೆ
ಮಂಗಳ ಮೂರ್ತಿಯ ಪಾಡುವನೇ ೩೬

ಇಂತು ಶ್ರೀ ಗುರುಸ್ತೋತ್ರರಾಯನುಗ್ರಹ
ಸಂತತ ಪಡೆದ ಅಪ್ಪಣ್ಣಾಚಾರ್ಯರು
ಸಂತಸರ ಸುಖಕ್ಕಾಗಿ ರಚಿಸಿದವರ
ಮಹಂತೋಪಕ್ಕಾರಕ್ಕನಂತ ನಮೋ ೩೭

ಹರಿವಾಯುಗಳು ಸದಾ ಸ್ಥಿರವಾಗಿದ್ದಿರು–
ವಲ್ಲೀಪರಿ ವೈಭವದಿಂದ ಮೆರೆಸುವರ್‍ಯೆ
ಶರಣುಪೊಕ್ಕವರನ್ನು ಪೊರೆವ ಸಮರ್ಥರು
ಧರೆಯೊಳನ್ಯರು ಯಾರು ಇರುತಿಪರ್‍ಯೆ ೩೮

ಕೃತದಲ್ಲಿ ನರಹರಿ ತ್ರೇತೇಲಿ ಶ್ರೀರಾಮ
ತೃತೀಯ ಯುಗದಿ ಶ್ರೀಯಾದವಪತಿಯಾ
ನುತಿಸಿ ವ್ಯಾಸರ ಮನೋಗತಪೂರ್ಣ ಬೋಧರ
ಮತಸುವರ್ಧನರಾಗಿ ಕಲಿಯುಗದೀ ೩೯

ಹರಿಹರಿಯೆನ್ನಲು ಹರಿವುದು ಭವಬಂಧ
ಮರುತನ ಧ್ಯಾನದಿಂದಲಿ ನಾಶನಾ
ವರಗುರುಚರಣ ಸಂಸ್ಮರಣ ಸಂತತ
ಇಹಪರಕೆ ಸಕಲ ಸಾಧನವು ಪೂರಣ ೪೦

ಸಾಧಾರಣವಲ್ಲವೀ ಗುರುಗಳ ಸೇವಾ ಸಾಧು
ಜೀವರಿಗಷ್ಟೆ ಲಭಿಸುವುದು
ಪಾದಸ್ಮರಣೆಗೈಯದವ ಕಡುಪಾಪಿ
ವಿವಾದವೇತಕೆ ಇದು ಹಯವದನ ಸಾಕ್ಷಿ ೪೧

ಸರುವದಾ ಈ ಸ್ತೋತ್ರ ಪಠಿಸಲಾಗದ
ಸುಜೀವರು ಓಂ ಶ್ರೀ ರಾಘವೇಂದ್ರಾಯ ನಮಃ
ಗುರುಮಂತ್ರವೆಂದಷ್ಟೇ ಸ್ಥಿರವಾಗಿ ಜಪಿಸಲು
ಬರದು ಯಾವ ದೋಷ ಭವದೊಳಗೆ ೪೨

ಆವದಾದರೂ ಏನು ಈ ಮಂತ್ರ ಜಪಿಸುವ
ಭಾವ ಬುದ್ಧಿಯು ಮಾತ್ರವುಳ್ಳತನಕ
ಕಾವುದು ಕರುಣದಿ ಸತ್ಯ ಶ್ರೀಹರಿವಾಯು
ಈ ವಿವರಣೆಗೆಂದೂ ಚ್ಯುತಿಯಿಲ್ಲವೊ ೪೩

ಮಂಗಳಂ ಶ್ರೀ ತುಂಗಾತೀರದೊಳ್ಮೆರೆಯುವ
ಮಂಗಳಂ ವರಮಂತ್ರಾಲಯ ನಿಲಯಾ
ಮಂಗಳಂ ಕಾರ್ಯಗಳ್ಹಿಂಗದೆ ನಡೆಸುವ
ಶೃಂಗಾರ ಮಂಗಳ ಮೂರ್ತಿ ಸಿರಿವಿಠ್ಠಲರಾಯಾ ೪೪

# ೧೪. ಗದುಗಿನ ವೀರನಾರಾಯಣರು

## (ಹುಯಿಲಗೋಳ ನಾರಾಯಣರಾಯರು)

## (ಅ) ಶ್ರೀ ಗಣೇಶ

### ೩೩೩

#### ಗಣಪತಿ

ಶ್ರೀ ಗಜವದನಾ ಬೇಗದಿ ಕರುಣಿಸು ಪ

ಬಾಗುತ ಬೇಡುವೆ ನೀಗು ವಿಘ್ನಗಳ ಅ.ಪ.

ಪದ್ಯವ ರಚಿಸಲು ಬುದ್ಧಿಯನೀವುದು
ಬಿದ್ದು ಬೇಡುವೆ ಸಿದ್ಧಿ ವಿನಾಯಕ ೧

ತೋರು ದಯವನೋಂಕಾರ ರೂಪನೆ
ಶೌರಿಯ ತುತಿಸಲು ಬೀರು ಬಲವನು ೨

ಗದುಗಿನ ವೀರನಾರಾಯಣ ದೇವನ
ಪದವನು ಭಜಿಸಲು ಪದಗಳ ರಚಿಸಲು ೩

### ೩೩೪

#### ಗಣೇಶಂ

ಜಯಮಂಗಳಂ ಪ

ಬುದ್ಧಿಯನಾಳ್ವಂಗೆ ಸಿದ್ಧಿಯನೀವಂಗೆ
ಉದ್ದನ್ನ ಒಡಲಿಂಗೆ ವಿಘ್ನಗಳ ಕೊಲ್ವಂಗೆ

ಶುದ್ಧ ಹಿಮಗಿರಿಯ ಸುತೆಯ ಮುದ್ದಾದ ಕುವರಂಗೆ
ಜಿದ್ದಿನಲಿ ಶಣ್ಮುಖನ ಗೆದ್ದಂಥ ಜಾಣಂಗೆ ೧

ಶಂಕರನ ಕುವರನಿಗೆ ಓಂಕಾರ ರೂಪನಿಗೆ
ಸಂಕಷ್ಟನಾಶನಿಗೆ ಅಂಕುಶಾಯುಧ ಧರಗೆ
ಹೂಂಕರಿಪ ಜನಕುಳ್ಳ ಬಿಂಕವನು ತರಿದವಗೆ
ಕಿಂಕರರ ನಿರುತದಲಿ ಕರುಣದಲಿ ಕಾಯ್ವನಿಗೆ ೨

ಶುಭಕಾರ್ಯದಲಿ ಮೊದಲು ಪೂಜೆಗೊಂಬಾತನಿಗೆ
ಅಭಯವನು ತೋರ್ಪನಿಗೆ ಇಭವದನ ಗಣಪಗೆ
ಪ್ರಭುವಾಗಿ ಗಣಗಳಿಗೆ ಜಗದೊಳಗೆ ಮೆರೆವವಗೆ
ವಿಭವದಲಿ ಬಿಡುವಿಲ್ಲದೆ ಭಾರತವ ಬರೆದಂಗೆ ೩

ಸೂಕ್ಷ್ಮದಲಿ ಪರಿಕಿಸಲು ಸಣ್ಣ ಕಣ್ಣುಳ್ಳವಗೆ
ಕಾಂಕ್ಷೆಗಳ ಕೇಳಲಿಕೆ ಮರದಗಲ ಕಿವಿಯವಗೆ
ತೀಕ್ಷ್ಣತರ ಮತಿವಿಡಿದ ಘನವಾದ ತಲೆಯವಗೆ
ಸುಕ್ಷೇಮ ಲಾಭಗಳ ಭಕ್ತರಿಗೆ ಕೊಡುವವಗೆ ೪

ಇಲಿದೇರ ವೀರನಿಗೆ ಸುಲಿದೇಕದಂತನಿಗೆ
ಎಲರುಣಿಯನುಪವೀತ ಮಾಡಿಕೊಂಡವಗೆ
ನೆಲದೊಳಗೆ ಗದಗುಸಿರಿ ವೀರನಾರಾಯಣನ
ನೊಲಿಸಿ ಕೊಡುವಂಥ ಮಂಗಳ ಮೂರುತಿಗೆ ೫

## (ಆ) ಶ್ರೀ ಹರಿಯ ಸ್ತುತಿ

### ೩೩೫

ಇದು ಕಣೋ ನಿನ್ನ ದಯಾರಾಮರಾಯಾ ಪ

ಮೃದು ಬಾಲನಿಗಳಿದುದು ಮೃತ್ಯುಭಯಾ ಅ.ಪ.

ನರಳುವ ಕೂಸನು ಚರಣಕೆ ಹಾಕಲು
ಮೊರೆಯಿಡೆ ಕರುಣದಿ ಕರಗಿತು ಹೃದಯ ೧

ಭಕುತರ ಬಯಕೆಯನೀವುದು ನಿನ್ನಯ
ಸುಕರ ಕೆಲಸವೆಂದೆನು ಚಿನ್ಮಯಾ ೨

ಗದುಗಿನ ವೀರನಾರಾಯಣನೆ ಜಯ_
ವೊದಗಿಸಿ ನಿರುತ ಸಲಹುವೆ ನಿಶ್ಚಯಾ ೩

## ೩೩೬

ಎಂದು ಕಾಂಬುವೆ ನಿನ್ನ ಚರಣ ನಾರಾಯಣ
ತಂದು ತೋರಯ್ಯ ನಾ ಬಂದೆನು ಶರಣ ಪ

ಇಂದ್ರ ಸುರಮುನಿವಂದ್ಯ ಚರಣಾ _
ನಂದ ಗುಣ ಸಂಪೂರಣ
ಒಂದೆ ಮನದಲಿ ಮಾಳ್ಪೆ ಸ್ಮರಣಾ
ಬಂಧು ತೋರೈ ನಿನ್ನ ಚರಣಾ ಅ.ಪ.

ಚಾರು ಲಕ್ಷ್ಮೀಯು ನಿತ್ಯ ಒತ್ತುವ ಚರಣ
ತೋರ ಗಂಗೆಗೆ ಜನ್ಮ ಕೊಟ್ಟಂಥ ಚರಣ
ಮೂರು ಲೋಕವ ಹಿಡಿದ ಚರಣ
ನಾರಿ ಅಹಲ್ಯೆಯ ಪೊರೆದ ಚರಣ ೧

ಪ್ರಳಯ ಕಾಲದಿ ನೆಕ್ಕುತಿಹ ಚಿಕ್ಕ ಚರಣ
ಇಳೆಗೆ ಸುಯೋಧನನಿಳಿಸಿದ ಚರಣ
ಎಳೆಯ ಧ್ರುವ ತಾ ಕಂಡ ಚರಣ
ತುಳಸಿ ವನದಲಿ ಕುಣಿದ ಚರಣ
ಸುಳಿದು ಭಕ್ತರ ಪೊರೆವ ಚರಣ ೨

ಅಖಿಲಾಂಡದ ಸೃಷ್ಟಿ ಸ್ಥಿತಿ ಲಯ ಕಾರಣ
ಭಕುತರು ಕರೆಯಲೋಡುವ ದಿವ್ಯ ಚರಣ

ಶಕಟ ದೈತ್ಯನ ಒದೆದ ಚರಣ
ಯುಕುತಿ ಶಕುತಿಗೆ ಬರದ ಚರಣ
ಯುಕುತಿ ಪಥವನು ತೋರ್ಪ ಚರಣ
ಪ್ರಖರ ಗದುಗಿನ ವೀರನಾರಾಯಣ ೩

## ೩೩೭

ಎಂಥ ವಿಲಕ್ಷಣನೋ ಶ್ರೀಹರಿ ಪ

ಪಂಥವು ತಿಳಿಯದನಂತ ಮೂರುತಿಯೆ ಅ.ಪ.

ಅಣುವೆಂದರೆ ನೀ ಮಹತನಾಗುವಿ
ಅಣುವಾಗುವಿ ನೀ ಮಹತನೆಂದರೆ
ಅಣು ಮಹತ್ತೆರಡೂ ಕೂಡಿರ ಲಾ ಸಹ
ಗುಣವು ತಿಳಿಯದೊ ಅಜ್ಞೇಯಾ ೧

ಧನವ ಕೊಟ್ಟರೆ ನೀ ಬೇಡೆನ್ನುವಿ
ತಿನಿಸು ಕೊಟ್ಟರೆ ಒಲಿಯದಲಿರುವಿ
ಅನುದಿನ ಮನವನ್ನಿತ್ತು ಮಾಳ್ಪ ಬರಿ
ಘನ ಭಕ್ತಿಗೆ ಬಹು ನೀನು ಮೆಚ್ಚುವಿ ೨

ಆಕಾರವು ನಿನಗಿಲ್ಲವೆಂತೆನೆ
ಸಾಕಾರ ನೀನಾಗಿ ತೋರುವಿ
ಈ ಕಾರಣ ನಿಜ ನಿಜ ತಿಳಿಯದು ಪೇಳಲು
ಬೇಕೈ ಗದುಗಿನ ವೀರನಾರಾಯಣ ೩

## ೩೩೮

ಎಷ್ಟು ಭಜಿಸಿದರು ಸಾಕಷ್ಟು ನನಗಾಗದೊ ಪ

ಕಷ್ಟ ಮೂರ್ತಿ ನೀನು ಎಷ್ಟು ತುಷ್ಟಿವಡೆದರು ಅ.ಪ.

ಅಂಗಜಪಿತ ಮೋಹನಾಂಗ
ಚೆಂಗೊಳಲನು ನುಡಿಸುತಲಿರುವ
ಭಂಗಿಯಲಿ ನಿನ್ನ ರೂಪ
ಕಂಗಳಿಂದ ನೋಡಿ ನೋಡುತ ೧

ಪೂರ್ಣ ಗುಣ ನಿರ್ದೋಷನೆಸು
ವರ್ಣಗರ್ಭ ನಿನ್ನ ಲೀಲೆ
ವರ್ಣಿಸುತಿಹ ಕೀರ್ತನೆಯನು
ಕರ್ಣದಿಂದ ಕೇಳಿ ಕೇಳುತ ೨

ಅಪ್ಪ ನಿತ್ಯ ಮನಕೆ ಮುದವ
ತಪ್ಪ ನಿನ್ನ ನಾಮ ಸುಧೆಯ
ಚಪ್ಪರಿಸುತ ನಾಲಗೆಯಲಿ
ಒಪ್ಪಿ ಸವಿದು ಸವಿಯುತಿರಲು ೩

ಅಮಮ ನಿನ್ನ ತನುವಿನಿಂದ
ಘಮಘಮಿಸುತ ಬರುವ ಗಂಧ
ಅಮಿತ ಮುದವ ಮೂಗಿಗಿಡಲು
ರಮಿಸಿ ಮೂಸಿ ನೋಡುತಿರಲು ೪

ಪಾವನತರ ನಿನ್ನಡಿಯಲಿ
ಸೇವೆಗೊಳ್ಳು ನಿರುತದಲಿ
ಕಾವುದಯ್ಯ ಶ್ರೀ ಗದುಗಿನ
ದೇವ ವೀರನಾರಯಣ ೫

## ೩೩೯

ಏಕೆ ಬೇಕಾಗಿತ್ತೊ ನಿನಗೆ ಈ ಆಟ
ಲೋಕೇಶ ಸಾಕಯ್ಯ ಇಲಿ ಬೆಕ್ಕಿನಾಟಾ ಪ

ಸುಷ್ಟು ಜಲಧಿಶಯನ ಬಿಸುಟಿ ಬಿಸಲ್ಯಾಕೆ
ಸೃಷ್ಟಿಪುದು ಮೊದಲ್ಯಾಕೆ ಸೃಷ್ಟಿಸಲು ಪ್ರಾಣಿಗಳ

ಕಷ್ಟ ಪಡಿಸುವುದ್ಯಾಕೆ ಕಷ್ಟವನು ನೋಡಿ
ತುಷ್ಟಪಡುವುದು ಯಾಕೆ ಇಷ್ಟಕೆ ಬಯಕೆ ೧

ಸ್ವರ್ಗ ನರಕಗಳೇಕೆ ಜನ್ಮ ಜನ್ಮಾಂತರಕೆ
ವರ್ಗ ಮಾಡುವುದೇಕೆ ಪಾಪಪುಣ್ಯಗಳೇಕೆ
ದುರ್ಗಮದ ವೈಕುಂಠದಾಸೆ ತೋರುವುದೇಕೆ
ನಿರ್ಗುಣನೆ ಸಲ್ಲದಿ ಉದ್ಯೋಗವ್ಯಾಕೆ ೨

ಉದಧಿಶಯನದೊಳಾತ್ಮಾನಂದದಲಿ ಮುಳುಗಿ
ಹೃದಯದೊಳು ನೀನೊಂದು ನೀನೇಯೇ ನೀನಾಗಿ
ಮೋದ ಪಡುವುದು ಬಿಟ್ಟು ವೀರನಾರಾಯಣನೆ
ಗದುಗಿನೊಳು ಬಂದಿಲ್ಲಿ ನಿಂತಿರುವುದೇಕೇ ೩

## ೩೪೦

ಏನಿದು ಚಂದ ಹರಿಯೆ ಮುಕುಂದ ಪ

ಒದಗಿದ ಬಾಧೆಯ ಬಿಡಿಸಲು ಬೇಡಲು
ತುದಿಕೆಳಸುವ ತನಕ ಹಾನಿಯ ಕಾಯ್ವುದು ೧

ಕುರು ಸಭೆಯೊಳು ಮಾನವನುಳಿಸೆಂದು
ತರುಣಿ ಬಾಯ್ದೆರೆ ಬೇಗ ಬಾರೆಂದು ೨

ಮಕರಿಯ ಹಿಡಿತವ ಬಿಡಿಸಲು ಕರಿನೃಪ
ಮುಖವೆತ್ತಿ ಮೊರೆಯುತೆ ಜವದಿ ಪೊರೆಯುವುದು ೩

ತಡಮಾಡದೆ ಶರಣರ ರಕ್ಷಿಸದೆ
ಚಡಪಡಿಸುವುದನು ನೋಡುತಲಿರುವುದು ೪

ಮೊರೆಯಿಡೆ ಭಕುತರ ಪೊರೆಯಯ್ಯ ಜವದಲಿ
ಕರುಣಿಸು ಗದುಗಿನ ವೀರನಾರಾಯಣ ೫

## ೩೪೧

ಏನು ವೈಭವವೊ ಶ್ರೀನಿವಾಸ ಧೊರೆಯೆ
ನಿನ್ನದೇನು ವೈಭವವೊ ಪ

ಸಿರಿಯು ತಾನೆ ನಿಂತು ನಿನ್ನ
ನಿರುತ ಸೇವೆ ಗೈಯ್ಯುತಿಹಳೊ
ಸರಸಿಜಾಸನಾದಿ ಸುರರು
ಕರವ ಮುಗಿದು ತುತಿಸುತಿಹರೂ ೧

ನಾಗರಾಯ ದಿವ್ಯಾಸನ
ನಾಗಿ ಹೆಡೆಯ ಛತ್ರ ಪಿಡಿವ
ಯೋಗಿ ನಾರದ ತುಂಬುರಾರು
ರಾಗ ಮಾಡಿ ಹಾಡುತಿಹರೊ ೨

ಗರುಡ ವಾಯು ಸುತರು ನಿನ್ನ
ಪರಮ ವಾಹನರಾಗಿ ಬಹರು
ಸುರಮುನಿಗಳು ಸಕಲ ನರರು
ನಿರುತನಾಮ ಜಪಿಸುತಿಹರು ೩

ಮಂಗಳ ವಾದ್ಯಗಳು ಮೊಳಗಿ
ಮಂಗಳಾರುತಿಯಾಗಿ ಬೆಳಗಿ
ತಿಂಗಳು ನೇಸರರು ದಿವ್ಯ
ಮಂಗಳ ದೀವಟಿಗರಾಗಿ ೪

ಕ್ಷೀರದಲ್ಲಿ ನಿನ್ನ ಸ್ನಾನ
ಸಾರ ಅಮೃತ ನಿನ್ನ ಪಾನ
ತೋರ ಭಕುತರಾಳೆ ಗದಗು
ವೀರನಾರಾಯಣನೆ ನಿನ್ನದೇನು ವೈಭವವೊ ೫

## ೩೪೨

ಏಳು ನಾರಾಯಣ ಏಳು ಲಕ್ಷ್ಮೀರಮಣ
ಏಳು ಬೆಳಗಾಯ್ತರುಣ ಬೀರುತಿದೆ ಕಿರಣ ಪ

ರಂಗ ಬರುತಿಹನೆಂದು ಮಂಗಳಾಂಗಿಯರೆಲ್ಲ
ಅಂಗಳ ಸಾರಿಸಿಸುತೆ ಮಂಗಳವ ಪಾಡುತ್ತೆ
ರಂಗೋಲಿಯೊಳು ನಿನ್ನ ಚಿತ್ರವನು ರೇಖಿಸುತೆ
ಶೃಂಗರಿಸುತಿಹರು ನೋಡೆದ್ದು ಬಾರೋ ೧

ಹಿಂಡಿ ನೊರೆ ಹಾಲ್ಗಳನು ಗಿಂಡಿಯೊಳು ತಂದಿಟ್ಟು
ಕೊಂಡು ವದನವ ತೊಳೆಯ ಬಿಸಿ ನೀರು ತಂದಿಟ್ಟು
ತಂಡತಂಡದಿ ಭಕುತ ಮಂಡಲಿಯು ಕಾದಿಹುದು
ಹೆಂಡತಿಯನೊಡಗೂಡಿಯುಂಡು ತಣಿಯು ಬಾರೋ ೨

ವೆಳ್ಳೆ ತುಂಬಿಗಳಾಡೆ ಮಂಗಳಾರತಿ ಮಾಡಿ
ಬೆಳ್ಳಿ ಕಳಶಗಳೆನಲು ಅಮೃತವನು ತುಂಬಿ
ಬೆಳ್ಳನೆಯ ಹೂಗಳನು ಮಡಿ ತಳಿಗೆಯೊಳು ಹಿಡಿದು
ಬಳ್ಳಿ ಮಲ್ಲಿಗೆ ತಾವು ಆತುರದಿ ನಿಂತಿಹವು ೩

ಚಿಕ್ಕೆಗಳು ಬಾಡುತಿವೆ ಚೊಕ್ಕಲರು ತೀಡುತಿದೆ
ಮಕ್ಕಳಾಡುಲೆವೆ ಕಕ್ಕುಲತೆಯೊಲಿ ನಮ್ಮ ರಕ್ಷಿಸಲು ನೀನೇಳು ೪

ಸಾವಿರದ ಕಿವಿಯಂತೆ ಸಾವಿರದ ತಲೆಯಂತೆ
ಸಾವಿರದ ಪಾದುಗಳು ನಿನಗಂತೆ ಕೇಳು
ಭಾವುಕರು ಕರ ಮಕದು ಭಕುತಿಯಿಂದಲಿ ಬೇಡುವರು
ಪಾವು ಮಂಚವ ಬಿಟ್ಟು ಬೇಗೆದ್ದು ಬಾರೋ ೫

ಕಂಜದೆಲೆಯಲಿ ಬಿದ್ದ ಮಂಜುವನಿಗಳ ಮೇಲೆ
ಕೆಂಜೆಡೆಯನಾಂಶುಗಳು ರಂಜಿಸಲು ದೀಪದೊಳು
ಕಂಜನಾಭ ನಿರಾಂಜನವ ಬೆಳಗಲಿಕೆ
ಮುಂಜಾಮದಲೆ ಕಾಯುತಿಹಳೊ ೬

ಶಿರಬಾಗಿ ನಿನ್ನ ಚರಣಗಳಿಗೆ ಬಂದಿದೆ ಶರಣ
ನಿರುತ ಧನವಾರೋಗ್ಯವಿತ್ತು ದುರಿತಾಪಹರಣ
ಪರಿಕಿಸದೆ ರಕ್ಷಿಸಲು ಬಾರೋ ಕರುಣಾಭರಣ
ವರ ಗದುಗಿನಲಿ ಮೆರೆವ ವೀರನಾರಾಯಣ ೭

## ೩೪೩

ಒಲಿಯುವೆ ನೀನೆಂತು ಹಲಧರಾನುಜಾ ಪ

ಹೊಗಳಲು ನೀ ಮರುಳಾಗುವನಲ್ಲಾ
ತೆಗಳಲು ನೀ ಮುನಿಯುವನಲ್ಲಾ
ಹೊಗಳಲ್ಯೊ ತೆಗಳಲ್ಯೊ ತಿಳಿಯುವುದಿಲ್ಲ
ಬಗೆಯನು ತೋರಲು ಹೇಳಸೊಲ್ಲ ೧

ಪಂಚಪಕ್ವಾನ್ನವ ಹಂಚೇನೆಂದರೆ
ಲಂಚಗುಳಿಯು ನೀನಲ್ಲ
ಚಂಚಲಮನದವ ತಾನಾಗಿಹನ್ಯೆ
ಹಂಚಿಕೆಯನು ಹೇಳ್ ನಿತ್ಯತೃಪ್ತನೆ ೨

ಧನವ ಕೊಟ್ಟು ನಿನ್ನೊಲಿಸೇನೆಂದರೆ
ಧನಲಕ್ಷ್ಮಿ ಪತಿ ನೀನಹುದೋ
ಘನತರ ಗದುಗಿನ ವೀರನಾರಾಯಣ
ಮನಸಿನ ಇಂಗಿತವನು ಪೇಳೆಲೊ ನೀ ೩

## ೩೪೪

ಕಂಡಿರೇನಯ್ಯ ಹರಿಯನ್ನು ಪ

ಚಂಡ ಪ್ರಚಂಡನ ಪುಂಡರೀಕಾಕ್ಷನ ಅ.ಪ.

ಅಲ್ಲಲ್ಲಿ ಇರುವನಂತೆ ಎಲ್ಲೆಲ್ಲೂ ಶಿಕ್ಕನಂತೆ
ಗುಲ್ಲನು ಕೊಡದಿಹನಂತೆ ಬಲ್ಲವ ಬಲ್ಲನಂತೆ ೧

ಧ್ರುವನ ಮುಂದೆ ನಿಂತಿದ್ದನಂತೆ
ಕುವರ ಪ್ರಹ್ಲಾದನ ಹಿಡಿದಿದ್ದನಂತೆ
ಬವರದಿ ಪ್ರಾರ್ಥಿಸೆ ತೋರಿದವನಂತೆ
ಶಬರಿಯ ಎಂಜಲ ತಿಂತಿದ್ದನಂತೆ ೨

ಮುನಿಗಳು ಹೃದಯದಿ ಕಂಡರಂತೆ
ವನಿತೆ ಯಶೋದೆಗೆ ಸಿಕ್ಕಿದನಂತೆ
ಹನುಮ ಭೀಮರು ನೋಡಿದರಂತೆ
ಅನಿತೋದ್ಧವಗೆ ಮೆಚ್ಚಿದನಂತೆ ೩

ದ್ರೌವ್ಯದ ಕಣ್ಣಿಗೆ ಕಾಣಿಸನಂತೆ
ದಿವ್ಯ ದೃಷ್ಟಿಗೆ ಸಿಲುಕುವನಂತೆ
ಭವ್ಯ ಗದುಗಿನ ವೀರನಾರಾಯಣ
ದಿವ್ಯ ದೃಷ್ಟಿಯ ಕೊಡು ಓರಂತೆ ೪

## ೩೪೫

ಕರುಣಿಸಲಾರೆಯಾ ಇನ್ನಷ್ಟು ನೀ ಸಿರಿಪತಿಯಾ ಪ

ಕರುಣಿಸಲಾರೆಯಾ ಕರುಣಾಕರನೆಂಬೊ
ಬಿರುದನುಳಿಸಿಕೊಳ್ಳಲಾರೆಯಾ ನೀನರಿಯಾ ಅ.ಪ.

ಬುವಿಯೊಳು ನಿನ್ನ ದಯವಿರದಿರೆ ಕಣ
ಲವಸಹ ಸರಿಯದಯ್ಯಾ
ಭವದೊಳು ದೇವ ನಿನ್ನ ಕೃಪೆಯಾಗಲು
ಜವದೊಳೀಗಿನ ಸುಖ ಸ್ರವಿಸಿ ಪೋಗುವದಯ್ಯಾ ೧

ಈಗೆಲ್ಲ ನಿನ್ನದಯೆದಿಂದೀ ಬಾಳ್ವೆ
ಸಾಗಿದೆ ಬಲ್ಲೆನಯ್ಯಾ

ಹೋಗಿಸಿ ಸಂಸಾರ ಬೇಗುದಿಯನು ನೀನು
ಬೇಗ ನಿನ್ನ ಧ್ಯಾನಭೋಗವ ನೀಡಯ್ಯಾ ೨

ತುಷ್ಟಿಹೊಂದಲು ನೀ ಜೀಯಾ ಕಷ್ಟದ ಪರಿಯಾ
ನಷ್ಟಮಾಡಲು ಅರಿಯಾ
ಸೃಷ್ಟಿಯ ಜೀವಿಗದೃಷ್ಟ ಎಷ್ಟೆಷ್ಟೆಂಬ
ಸ್ಪಷ್ಟ ಸಂಕಲ್ಪವ ಬದಲಿಸಲರಿಯಾ ೩

ಎಲ್ಲವು ನಿನ್ನಧಿವಲ್ಲವೇ ಹರಿಯೇ
ಸಲ್ಲದ ಅನುಮಾನ
ಖುಲ್ಲ ದೈವವ ತಿರುವ ಬಲ್ಲೆಯಲ್ಲವೇ ನೀನು
ಬಲ್ಲೇಕೆ ಮನವನು ಕಲ್ಲು ಮಾಡಿದೆಯಾ ೪

ಶರಣೆಂಬ ಜನ ಕೈಯ್ಯಾ ಎಂದೂ ಬಿಡದೆ
ಪೊರೆಯುವೆ ಎಂಬರಯ್ಯಾ
ಧರೆಯೊಳು ಗದುಗಿನ ವೀರನಾರಾಯಣ
ಮರೆಯದೆ ಸಲಹಯ್ಯಾ ಕೇಳ್ವೆನ್ನ ಮೊರೆಯಾ ೫

## ೩೪೬

ಕಾಯೋ ತೋಯಜ ನೇತ್ರ ಪ

ಸುಮಿತ್ರ ಪವಿತ್ರ ಚರಿತ್ರ ಅ.ಪ.

ಮಾನವ ಜನುಮದಿ ನೀ ತಂದೆಯೊ
ಎನ್ನ ಗ್ಲಾನಿಯ ಕಳೆದು ಸುಜ್ಞಾನವನಿತ್ತು ೧

ಕಠಿಣ ಸಂಸಾರದ ಕಟು ಅನುಭವವ ಸೈಸೆ
ಸಟೆಯಲ್ಲೋ ಇದ ಸಂಕಟವ ಪರಿಹರಿಸಿ ೨

ಹೃದಯದಿ ನೆಲಿಸಿ ನೀ ಸದಾವಕಾಲದೊಳು
ಗದುಗಿನೊಳ್ಮೆರೆಯುವ ವೀರನಾರಾಯಣ ೩

## ೩೪೭

ಕಾಲಬೆರಳು ಬಾಯೊಳೇತಕೊ ರಂಗಯ್ಯ ನಿನ್ನ ಪ

ಸಾಲದಾಯ್ತೆ ಭಕ್ತರಿತ್ತ ಕಾಲೋಚಿತ ಶಾಲ್ಯನ್ನವು
ಹಾಲೋಗರ ಭಕ್ಷ್ಯಗಳು ಅ.ಪ.

ಆಲದೆಲೆಯ ಮೇಲೆ ಮಲಗಿರೆ ಚೆಲುವ ನಿನ್ನ
ಕಾಲುಚಾಚಲನುವೆ ಇಲ್ಲವೆ
ಬಾಲನಿನ್ನ ನಾಭಿಕಮಲ ಕಾಲಿವಾಲಿದಲ್ಲಿ ಗಂಗೆ
ಜಲವ ಬಿಡುತಲಿರುವೆಯೇನು ೧

ಹಸಿವೆ ಬಹಳವಾಗಿರುವದೆ ನಿನ್ನಮ್ಮ ಆ
ಯಶೋದೆ ನಿನಗೆ ಮೊಲೆಯನುಣಿಸಳೆ
ನಿಶಾಚರಿ ಪೂತನಿಯ ಮೊಲೆಯ
ವಿಷವನುಂಡ ಕಾರಣದಲಿ ನೀರಡಿಸುತಲಿರುವೆಯೇನು ೨

ಪದದಿಂದಲಿ ಬರುವ ಗಂಗೆಯ ಉದಕದಿಂದ
ಉದರದೊಳಿಹ ಜೀವರಾಶಿಯ
ಮುದದಿಂದುದ್ಧರಿಸಲೆಂದು
ಪದುಮಾಕ್ಷನೆ ಜುರುಜುರು ನೀ ಚೀಪಲಿರುವೆಯೇನು ಹೇಳು ೩

ಹಸುಳ ನಿನ್ನ ಪದದೊಳಿಡುತಿಹ ಭಕ್ತರ ಭಕ್ತಿ
ರಸವ ಸವಿದು ನೋಡುತಿರುವೆಯಾ
ಪೆಸರನೆತ್ತ ಗದುಗಿನ ಶ್ರೀ ವೀರನಾರಾಯಣನೆ
ದಯವ ತೋರಿ ಹೇಳು ಬೇಡುತಿಹೆನು ೪

## ೩೪೮

ಕೇಳಿಸಲೊಲ್ಲದೇನೋ ಕೃಷ್ಣಾ ಕೇಳಿ
ಕೇಳದಂತಿರುವಿಯೇನೋ ಪ

ಬಾಳುವೆಯೊಲು ಕೀಳಾದೆನಾನಿಂತು
ಏಳಿಸೆನ್ನನು ಎಂದು ಕೇಳಿಕೊಳ್ಳುವದಿನ್ನು ಅ.ಪ

ಯಾವತ್ತೂ ತಿಳಿದವನು ಎಂಬರು ಎನ್ನ
ನೋವು ತಿಳಿಯದಾಯ್ತೇನು
ಸಾವಿರ ವಿಧಿಗಳಿದ್ದೆನ್ನಯ ಪಾಲಿಗೆ
ದೇವಾ ಅವಲ್ಲವು ಕಿವುಡಾದವೇನೋ ೧

ಈ ವಿಶ್ವವನು ತುಂಬಿ ನಿಂತಿಹನೆಂಬೀ
ಭಾವಕೆ ನೀನೆಂಬಿ ಆವಾವ
ಜೀವರ ಭಾವವರಿತು ನೀ
ಕಾವುದೆಂತೆಂಬೊ ಈ ವಚನವು ನಿನಗೆ ೨

ಭೇದಭಾವವು ಇಲ್ಲೆಂದೂ ಸಾಧಿಸುವವು
ವೇದಗಳೆಲ್ಲ ಎಂದು
ಬಾಧೆಯ ಬಿಡಿಸೆಂದು ಬೇಡಿಕೊಳ್ಳುವೆ
ಗದುಗಿನ ಆಧಾರಿ ದೇವನೆ ವೀರನಾರಾಯಣ ೩

## ೩೪೯

ಕೊಳಲನೂದೆಲೋ ಕೃಷ್ಣ ಕೊಳಲನೂದೆಲೊ ಪ

ಕೊಳಲನೂದು ಮನದ ದುಗುಡ
ಕಳೆದು ಮತ್ತೆ ಮನಕೆ ಪ್ರಶಾಂತೆ
ತಳೆಯುವಂತೆ ನಿತ್ಯಮಂ_
ಜುಳ ಸ್ವರಗಳನ್ನು ತೆಗೆದು ಅ.ಪ.

ಧರಿಸಿ ಕೈಯಲೀ ಕೊಳಿವೆಯಿರಿಸಿ ಬಾಯಲಿ
ಭರದಿ ಉಸುರ ತುಂಬಿ ನಳಿನ
ಬೆರಳುಗಳು ತೂತು ಮುಚ್ಚಿ
ತೆರೆದು ಸವಿಯ ನಾದದಲ್ಲಿ ನಿ
ಸಾರ ನಿ ದ ಪ ಮ ಪ ನಿ ಎಂದು ೧

ಇಲ್ಲಿ ಪೀಠದಿ ಎದ್ದು ನಿಲ್ಲು ಥಾಟಿಟದಿ
ಮಲ್ಲಿಗೆ ವನಮಾಲೆ ಕೊರಳೊ
ಘಲ್ಲಾಡುತಿರಲು ರೂಪದಲ್ಲಿ ಮನವಿನ್ಯೈಕ್ಯವಾಗಿ
ತಲ್ಲೀನರಾಗುವಂತೆ ಕೃಷ್ಣಾ ೨

ಎದ್ದುನಿಂತು ಮಾಟದಿ ನಿಂತು ಮುದ್ದು ನೋಟದಿ
ಬಿದ್ದವರನು ನೋಡಿ ನಮಗೆ
ಶುದ್ಧ ಬುದ್ಧಿ ಕೊಟ್ಟು ನಮ್ಮ
ದುದ್ಧರಿಪುದು ಗದುಗಿನ ಪ್ರಸಿದ್ಧ ವೀರನಾರಾಯಣ ೩

## ೩೫೦

ಕೊಳಲೂದೋ ಕೃಷ್ಣ ಕೊಳಲೂದೊ ಪ

ಕೊಳಲೂದಲು ಮನ ತಳೆವುದು ಮನವಿದೊ
ಬಳಲಿಪ ಚಿಂತೆಯ ಕಳೆವುದು ನಾದೊ ಅ.ಪ.

ಸವಿಸವಿ ಸ್ವರಗಳು ಕಿವಿಗಳ ಹೊಗಲದು _
ಭವಿಸುದೆನ್ನೊಳು ಭಕುತಿಯನಾದೊ ೧

ತನು ಕೊಳವೆಯಲಿ ನಿನದುಸಿರನು ಕೊಡೆ
ಇನಿದು ನುಡಿದು ಪಾವನ ತನುವಹುದೊ ೨

ಸ್ವರಮಧುರತೆಯು ಶಿರದೊಳು ಚರಿಸುತೆ
ನಿರುತ ನಿನ್ನಯ ಸ್ಮರಣೆಯ ನೀವುದೊ ೩

ಮಧುರ ನಿನ್ನಯ ಗಾನವ ಕೇಳ್ವುದು
ಗದುಗು ವೀರನಾರಾಯಣನ ಮಹಾ ಪ್ರಸಾದೊ ೪

## ೩೫೧

ಚಂಚಲಿಸಲು ಕೊಡದಿರು ನೀನೆನ್ನ ಮನಕೆ ಶ್ರೀಹರಿಯೇ ಪ

ವಂಚಿಸುತಿಹುದೀ ಮನವು ಸ್ಥಿರಗೊಳಿಸಲರಿಯೇ ಅ.ಪ.

ನಿನ್ನ ಪದದಿ ಏನಿರಿಸೆ ಇನ್ನು ಭಜಿಸಬೇಕೆಂದರೆ
ಭಿನ್ನ ದೆಸೆಗೆ ಓಡಿಸದೆ ಅನ್ಯವನ್ನೆ ಚಿಂತಿಸುವುದು ೧

ಕಡಲ ಕಡಿಯುವಾಗ ಗಿರಿಯು ನಡುಗದಂತೆ ಗಟ್ಟಿ ನಿಂತು
ಹಿಡಿದ ತೆರದೊಳಡಲ ಹೊಕ್ಕು ಜಡಿದು ಎನ್ನ ಮನದಿ ನಿಂದು ೨

ಸದಾ ಭಜಿಸುವಂತೆ ಮಾಡೋ ಗದುಗು ವೀರನಾರಾಯಣ ೩

## ೩೫೨

ನನ್ನದೇನಿದೆಯೊ ದೇವ ನಿನ್ನದೆ ಎಲ್ಲವೂ ಪ

ಪನ್ನಗಾಸನ ಧೊರೆಯೆ ಸನ್ನುತಾಂಘ್ರಿಯ ಹರಿಯೆ ಅ.ಪ.

ಅವನಿಯೊಳು ಪುಟ್ಟಿಸುವ ಭವದೊಳಗೆ ನೂಕುವವ
ಕಿವಿ ಮೂಗು ಕಣ್ಣಿವದನವ ತ್ವಚೇಂದ್ರಿಯದಿ
ಅವಿತು ವ್ಯಾಪ್ತತನಾಗಿ ವ್ಯವಹರಿಸುವವ ನೀನೇ
ಅವಸರದಿ ಕಾಯುವ ದೇವ ನೀನೆಯೊ ೧

ತಿಳಿಯುವವ ನೀನೆಯೊ ತಿಳಿಸುವವ ನೀನೆಯೊ
ಗಳಿಸುವವ ನೀನೆಯೊ ಬಳಸುವವ ನೀನೆಯೊ
ಬೆಳಿಸುವವ ನೀನೆಯೊ ಕಳೆಯುವವ ನೀನೆಯೊ
ಕೊಳುವವನು ನೀನೆಯೊ ಕಸಿಯುವವ ನೀನೆಯೊ ೨

ಅಂತರಂಗದಿ ಅಡಗಿನಿಂತು ಪ್ರೇರಿಸುವನಂತ
ದ್ವಂದ್ವದ ನಟನೆ ಸ್ವಂತತನವೆನಗೆಲ್ಲಿ
ಸಂತರನು ಉದ್ಧರಿಸಲಿಂತು ಭೂಮಿಗೆ ಬಂದು
ನಿಂತ ಗದುಗಿನ ವೀರನಾರಾಯಣನು ನೀನೆ ೩

## ೩೫೩

ನಾನೇನು ನಿನಗೆಂದೆನೊ ಶ್ರೀಹರಿಯೆ
ನಾನಿನಗೇನೆಂದೆನೊ ಪ

ನಾನೇನು ನಿನಗೆಂದೆ ನೀನಿಂತು ನನ್ನದು
ಧ್ಯಾನವ ಬಿಡಿಸಲು ಜ್ಞಾನಿಗಳರಸನೆ ಅ.ಪ.

ಕರುಣಿ ನೀನೆಂತೆಂಬೋದು ನನಗೆ ಇನ್ನು
ಭರವಸೆ ಇಲ್ಲೆಂಬೆನೋ
ಕರುಣಿ ನೀನಾದರೆ ಪರಿಪರಿ ಬೇಡಲು
ಕರುಣೆ ತೋರದೆ ಇರುವದು ಸರಿಯೇನೊ ೧

ಭಕ್ತನು ನಾನಲ್ಲವೇನೊ ನಿನ್ನೊಳಗನು
ರಕ್ತಿ ಮಾಡುವದಿಲ್ಲೇನೋ
ಮುಕ್ತಿ ಮಾಡಲು ಮತ್ತೆ
ರಿಕ್ತ ಕರಣನೆಂಬ ಉಕ್ತಿ ಸುಳ್ಳೇನೋ ೨

ಸ್ಮರಿಸಲು ದುರಿತಗಳ ತರಿವನುಡಿ
ಬರಿದೆನ್ನ ಬಗೆಗಾಯ್ತೆನೊ
ಧರೆಯೊಳು ಗದುಗಿನ ವೀರನಾರಾಯಣ
ಬಿರುಸು ನನ್ನ ನುಡಿ ಬರೆಯಲ್ಲವೇನೋ ೩

## ೩೫೪

ನಾನೇನು ನಿನ್ನಯ ಚರಣವ ಮಾಣೆನು ಪ

ಮಾನವ ಕಾಯ್ವರನನ್ಯರ ಕಾಣೆನು ಅ.ಪ.

ಕಣ್ಣನು ಬಿಡುತಲಿ ಬಿರಿಬಿರಿ ನೋಡು
ತಿಣ್ಣನೆ ಬೆಟ್ಟದ ಮೇಲೆ ಬಿಸಾಡು

ಮಣ್ಣನುಗ್ಗಲು ಹಲ್ಲಲ್ಲಿ ತೋಡು
ಸಣ್ಣನ ಉಗುರಿಲಿ ಹರಿಕೊಂಡು ನೋಡು ೧

ಕಾಲಲಿ ತಲೆಯನು ತುಳಿಯುತೋಡಾಡು
ಮೇಲಾಗಿ ಕೊಡಲಿಯನೊಗೆದು ಈಡಾಡು
ಬಾಲದ ಮಂಗನ ಕರಡಿಯ ಭೂಬಿಡು
ಸೋಲಿಸಲಾವುದೆ ತಂತ್ರವ ಹೂಡು ೨

ಮೃದು ನುಡಿಯಲಿ ಅವಮಾನಿಸಿ ನೂಕು
ಕುದುರೆಯ ತಂದೆನ್ನ ಮೈಮೇಲೆ ಹಾಕು
ಗದುಗಿನ ವೀರನಾರಾಯಣ ಸಾಕು
ಪದಗಳ ಸೇವೆಯು ನಿತ್ಯದಿ ಬೇಕು ೩

## ೩೫೫

ನಿನ್ನ ದಿವ್ಯ ಸ್ವರೂಪವನು ಕಣ್ಣಿಲಿ ನೋಡಿ
ಧನ್ಯನಾದೆನು ಇಂದು ಪನ್ನಗಶಯನ ಪ

ಚೆನ್ನ ಪಾದಂಗಳಲಿ ಚಿನ್ನದಾ ಕಡಗರುಳಿ
ಹನ್ನೆರಡು ನಿರುಗೆಗಳ ಹೊನ್ನ ಪೀತಾಂಬರಕೆ
ರನ್ನಮಯದೊಡ್ಯಾಣವನ್ನು ಸುತ್ತಿದ ನಡುವು
ಚನ್ನ ಪದಗಳ ಮುಟ್ಟುವನ್ನಕ್ಕ ವನಮಾಲೆ ೧

ನನ್ನೀಯಿಂದೆಸೆವ ಕಂಪನ್ನ ಕೌಸ್ತುಭದೆದೆಯು
ಕನ್ನಿಕೆಯು ಲಕ್ಷುಮಿಯ ಚಿಹ್ನ ಧರಿಸಿದ ವಕ್ಷ
ಘನ್ನ ಚಕ್ಕರ ಶಂಖ ಸನ್ನೆ ಕೌಮೋದಕಿಯು
ಕನ್ನೈದಿಲೆಯ ವಿಡಿದ ಇನ್ನಂತು ನಾಲ್ಕೈಯು ೨

ಪನ್ನೀರು ಬೆರೆತು ಬಾವನ್ನ ಕಂಪಿನ ಮೈಯು
ಬೆನ್ನಗಲ ಹೆಗಲು ದುಂಡನ್ನ ತೊಳಗುವ ಕೊರಳು
ಕನ್ನವುರ ಕುಂಡಲಂಗಳನ್ನು ಧರಿಸಿದ ಕಿವಿಯು
ಜೊನ್ನ ಪಸರಿಪ ನಗೆಯ ಮನ್ನಿಸುವ ಕೆಂದುಟಿಯು ೩

ಮುನ್ನೂರು ಕೋಟಿ ರವಿ ಸನ್ನಿಭದ ಚೆಲ್ವ ಮೊಗ
ಕನ್ನೀಲ ಕಣ್ಣು ಚಂದನ್ನ ಎಳಸಿನ ಮೂಗು
ಉನ್ನತದ ಹಣೆಮೇಲೆ ಸೊನ್ನಿ ಕಸ್ತುರಿ ತಿಲಕ
ಸೊನ್ನ ಮುಕುಟವ ಧರಿಸಲಿನ್ನುಳಿದ ಕರಿಗುರುಳು ೪

ಎನ್ನೆದುರು ನಿಂತಿರಲು ಚಿನ್ಮಯ ರೂಪನೆ
ಕುನ್ನಿ ಮಾನವ ನಾನು ಇನ್ನೆಂತು ಬಣ್ಣಿಸುವೆ
ನಿನ್ನ ಕೃಪೆಯಿಲ್ಲದಿದನೆನ್ನಲಪ್ಪುದೆ ದೇವ
ಚನ್ನ ಗದುಗಿನ ವೀರನಾರಾಯಣನೆ ಮಣಿವೆ ೫

## ೩೫೬

ನಿನ್ನೊರೆಗೆ ನಾ ತಿಳಿಯಲಾರೆ ಪ

ಪನ್ನಗಾದ್ರಿವಾಸ ಶ್ರೀಹರೆ ಅ.ಪ.

ಕುನ್ನಿ ಮಾನವ ನಾನು ಎನ್ನಿಂದ ಸಾಧ್ಯವಿರೆ
ಇನ್ನೂ ಹೆಚ್ಚು ಹೆಚ್ಚು ಭಕುತಿಯನ್ನು ಬೇಡ ಬೇಡ ೧

ಬೊಮ್ಮಾದಿ ದೇವತೆಗಳು ಅಮ್ಮ ಲಕುಮಿಯ ಸಹ
ನಿಮ್ಮನ್ನು ತಿಳಿಯರಿನ್ನು ತಿಳಿವ ಹಮ್ಮು ನನಗೇಕೆ ಶೌರೇ ೨

ಅನ್ಯಜೀವಿಯಂತರಂಗ ಎಂದೂ ತಿಳಿಯಲಾರೆ ನಾನು
ಇನ್ನು ಸರಸಿಜಾಮನೊಡಲ ನಿನ್ನ ತಿಳಿವುದೆಂತಹನೇ ೩

ಇಷ್ಟೇ ಭಕುತಿಯಿಂದ ನೀನು ತುಷ್ಟನಾಗಿ ಸಲಹಬೇಕು
ಎಷ್ಟು ಕಷ್ಟಪಟ್ಟರೂ ನಿನ್ನಿಷ್ಟಕೆ ಸರಿ ಹೋಗುವದೆಷ್ಟು ೪

ಭಕುತಿಯಲ್ಲಿ ಸತತವಿರಲು ಶಕುತಿಯನ್ನುನ್ನೀಯೊ ಎನಗೆ
ಸಕಲ ಜಗದಿ ಮೆರೆವ ಗದುಗು ವೀರನಾರಾಯಣ ೫

## ೩೫೭

ನೀನಲ್ಲದಿನ್ನಾರು ಸಲಹುವರು ಹರಿಯೆ ಪ

ನಾನನ್ಯರನು ಕಾಣೆನೆಲ್ಲಿಯೂ ಕೇಳ್ದರಿಯೆ ಅ.ಪ.

ಘೋರ ಶಶಿಹಾಸನನು ತಂದೆ ತಾಯ್ಸಲುಹಿದರೆ
ಧೀರ ಪ್ರಲ್ಹಾದನನು ತಂದೆ ತಾಯ್ ಸಲುಹಿದರೆ
ವೀರ ಕರ್ಣನ ಹಡೆದ ತಾಯಿ ಸಲುಹಿದಳೆ
ನಾರಿ ದ್ರೌಪದಿಯನ್ನು ಭರ್ತೃಗಳು ಸಲುಹಿದರೆ ೧

ಮಡದಿಯನು ಗಜವರನ ಮೊಸಳೆಯಿಂ ಸಲುಹಿದರೆ
ಒಡಹುಟ್ಟಿದರ್ಜುನನ ಕರ್ಣ ತಾ ಸಲುಹಿದನೆ
ಕಡುಗಲಿಯ ವಾಲಿಯನು ಸುಗ್ರೀವ ಸಲುಹಿದನೆ
ಗಡ ಬಬ್ರುವಾಹನನು ತಂದೆಯನು ಸಲುಹಿದನೆ ೨

ಮುಸಿಯಲ್ಲದೆಲ್ಲವನು ಸಲಹುವಾತನೆ ನೀನು
ಪಿಸುಣರ್ಕೈ ಸಲಹುವರು ತಾವೆಂದು ಗಳಹುವರು
ಉಸಿರು ಗದುಗಿನ ವೀರನಾರಾಯಣನೆ ನೀನು ೩

## ೩೫೮

ನೀನೊಲಿದರೇನು ಏನಿಲ್ಲ ಹರಿಯೆ ಪ

ನೀನೊಲಿಯದಿರೆ ಮಾತ್ರ ಏನೇನು ಇಲ್ಲ ಅ.ಪ.

ಸಾಧನವು ಸಂಪತ್ತು ಸಾಧಿಸದೆ ದೊರೆಯುವುದು
ಪಾದಗಳ ಸೇವೆ ತಾ ತಾನಾಗಿ ಲಭಿಸುವುದು
ಖೇದ ವ್ಯಸನಗಳೆಲ್ಲ ಬಾಧಿಸದಲೋಡುವುದು
ಸಾಧು ಸಂಗವು ಭಕ್ತಿ ಬೋಧಿಸದೆ ಬರುವವು ೧

ವಾಸುದೇವನೆ ವಿಪುಲ ಐಸಿರಿಯನೀಡುತಲೆ
ಬೇಸರದೆ ನಿನ್ನವರ ಲೇಸಾಗಿ ಸಲಹುವೆಯೊ
ದಾಸ ಭಕುತರು ಶಿರಗ ಹಾನಿ ಬೇಡಿದರೇನು
ಶೇಷಶಯನನೆ ನಿನ್ನ ಈಸು ಮಹಿಮೆಯ ತಿಳಿಯೆ ೨

ಮನಸು ನಿನ್ನಡಿಗಳಲಿ ಕೊನೆತನಕ ಇರಿಸುವದು
ಘನಕೆಲಸ ನಿನದಯ್ಯ ಮನುಜರಿಗೆ ಸಾಧ್ಯವೇ

ತನುಮನಗಳಿವು ನಿನ್ನವೆ ನನದೆಂಬುದೇನುಂಟು
ಧಣಿಯ ಗದುಗಿನ ವೀರನಾರಾಯಣನೆ ಒಲಿಯೋ ೩

## ೩೫೯

ಪರಮಮಂಗಳ ಧಾಮಾ ಶ್ರೀರಾಮಾ ಪ

ಕರುಣಾಮೃತ ಸಾಗರ ನಿಸ್ಸೀಮಾ
ಚರಣಕೆರಗುವೆ ಸಾಸಿರನಾಮಾ ೧

ಶರಣಾಗತರನು ಕರವಿಡಿವುದು ನೇಮಾ
ಶರಣುಬಂದೆನಯ್ಯ ರಘುಕುಲ ಸೋಮಾ ೨

ವಚನವ ಪಾಲಿಪ ಸುಚರಿತವ್ಯೆ ನಿಮ್ಮ
ಅಚಲ ಭಕ್ತಿಕೊಡು ಮೇಘಶ್ಯಾಮಾ ೩

ಗದುಗಿನ ವೀರನಾರಾಯಣ ಪ್ರೇಮ
ವೊದಗಿಸಿ ಕಾಯೋ ವೀರ ಲಲಾಮಾ ೪

## ೩೬೦

ಪಾದಂಗಳ ತೋರಿಸೋ ನಾರಾಯಣ ಪಾದಂಗಳ ತೋರಿಸೊ ಪ

ಸಾದರ ಭಕುತಿಯ ನಿನ್ನಲಿ ಇರಿಸೋ
ಮೋದದಿ ಭಜಿಪಂತೆ ನನ್ನದು ಪ್ರೇರಿಸೊ ಅ.ಪ.

ನಾಗಾದಿ ಕಪ್ಪತ್ತ ಗಿರಿಯನ್ನೆ ಚಿನ್ನವ
ನ್ನಾಗಿಸಿ ಬಿಡಲೆಂದು ಯತ್ನಿಸುತ್ತಿದ್ದ
ನಾಗಾರ್ಜುನನ ನೀಗಲು ಭುವಿಯೊಳು
ಬೇಗದಿ ಬಂದಿ ವೀರನಾರಾಯಣ ೧

ಮ್ಯೆಯೊಳು ಕವಚವ ಶಿರದಿ ಕಿರೀಟವ
ಕೈಯೊಳು ಚಕ್ರ ಗದಾ ಶಂಖ ಧರಿಸಿ
ರಯ್ಯನೆ ಗದುಗಿನೊಳಿಳಿದು ಆ ದೈತ್ಯನ
ಹೊಯ್ಯಲು ಬಂದ ಶ್ರೀ ವೀರನಾರಾಯಣ ೨

ತೋರ ಕನ್ನಡದಲ್ಲಿ ವರ ಕವಿಯಾದ ಕು
ಮಾರ ವ್ಯಾಸನಿಂದ ಭಾರತ ರಚಿಸಿದಿ
ಧೀರ ಶ್ರೀ ಪುರಂದರದಾಸರು ಕರೆದಿಹ
ಭಾರತಮಲ್ಲ ಶ್ರೀ ವೀರನಾರಾಯಣ ೩

## ೩೬೧

ಪಾರ್ಥನ ಸಾರಥಿಯಾ ನೋಡಿದೆಯಾ ಪ

ಆರ್ತ ಜೀವನಿಗೆ ಕರ್ತವ್ಯವನು
ಗುರ್ತಿಸಿ ಪೇಳ್ವುದ ಪೂರ್ತಿಯ ರೀತಿಯಾ ಅ.ಪ.

ಗೀತೆಯ ಪೇಳಲು ವೇದಾಗಮಗಳ
ಸಾರಧಾರೆಯ ಕರೆವನೆಂಬಂತೆ
ಶ್ವೇತಾಶ್ವಂಗಳ ಕಡಿವಾಣಗಳ
ಪ್ರೀತಿಲಿ ಪಿಡಿದಿಹ ಕೃಷ್ಣ ಮೂರುತಿಯ ೧

ಭವದ ತೇರಿನಲಿ ಜೀವನನಿರಿಸಿ
ನಾಲ್ಕರ್ಥಗಳನು ಜೋಡಿಸುತ
ತವಕದಿ ತಾ ಹೊರಗಿರುತಲೆ ನಡೆಸಿ
ಪ್ರೇರಿಪನೆಂಬಂತಿಹ ಶ್ರೀಪತಿಯ ೨

ನೇತ್ರಕೆ ಜೀವನಯಾತ್ರೆಯ ಸಡೆಸುವ
ಸೂತ್ರಧಾರನೆನೆ ತೋರುತಲಿರುವ
ಕ್ಷೇತ್ರ ಗದುಗಿನ ವೀರನಾರಾಯಣನ
ಪಾತ್ರ ವಹಿಸಿದ ದಿವ್ಯಾಕೃತಿಯ ೩

## ೩೬೨

ಪುಟ್ಟಿ ಬಂದಿಹೆಯಾ ಕಿಟ್ಟಯ್ಯಾ ಪ

ಕೆಟ್ಟ ಲೋಕವನೆಲ್ಲ ನೆಟ್ಟನೆ ತಿದ್ದಲು
ಕಟ್ಟಿ ನೋಡು ಶ್ರಾವಣದಷ್ಟಮಿ ದಿನದಲ್ಲಿ ೧

ಹೀನಾದ ಧರ್ಮದ ಜ್ಞಾನೋದಯ ಗೈಸಿ
ದೀನರನುದ್ಧರಿಸಿ ಮಾನವನಾಗಿ ೨

ಬಾಧಿಪ ಕುಜನರ ಭೇದಿಸಿ ಜಗದೊಳು
ಸಾಧು ಸುಜನರನು ಮೋದದಿ ಸಲುಹಲು
ಮೇದಿನಿಯೊಳು ನೀ ಉದಿಸಿ ಬಂದೆಯಾ ೩

ಭಕ್ತರ ಮೊರೆ ಕೇಳಿ ಯುಕ್ತಿಯಿಂದ ಸಲುಹಲು
ಮುಕ್ತಿಯ ಸ್ಥಾನ ವೈಕುಂಠವ ಬಿಟ್ಟು ೪

ಸುರ ಮುನಿಗಳಿಗಿಂತು ವರವಿತ್ತ ಕಾರಣ
ಧರೆಯೊಳು ಗದುಗಿನ ವೀರನಾರಾಯಣ ೫

## ೩೬೩

ಬಂದೆಯಾ ಕೃಷ್ಣಯ್ಯಾ ಬಂದೆಯಾ ಪ

ಸುಂದರ ನರರೂಪದಿಂದಲೀ ಧರೆಯೊಳು ಅ.ಪ.

ಲೋಕೈಕ ದೇವನೆಂದು ಜ್ಞಾನಿಗ
ಳೇಕಾಗಿ ಸಾರ್ವರಿಂದು
ಆಕಾರ ರಹಿತನ ಲೋಕ ಸಾಮಾನ್ಯರು
ಸ್ವೀಕರಿಸರು ಎಂದು ಸಾಕಾರನಾಗಿ ೧

ಪೂರಾ ವಿಶ್ವದಲ್ಲೆಲ್ಲ ತುಂಬಾ ನಿಂತಿಹ ನಿನ್ನ _
ನಾರು ನಂಬರು ಎಂತೆಂಬ
ಕಾರಣ ಜಗಕೆ ತೋರರೆಲ್ಲಾ ಗುಣ
ಸಾರ ಸಂಗ್ರಹಿಸಿ ನೀ ಧೀರ ಮಾನವನಾಗಿ ೨

ಜಗದೊಳಂದದ್ಭುತ ಶಕ್ತಿ ಇರುವುದೆಂ _
ದುಗಮಿಕೆ ಜನದೊಳಾಸಕ್ತಿ
ಜಗದೊಳು ಗದುಗಿನ ವೀರನಾರಾಯಣ
ಬಗೆ ಬಗೆ ಮಹಿಮೆಯ ಸುಗುಣ ಮಾನವನಾಗಿ ೩

## ೩೬೪

ಬಾಲನಾಗಿ ಬಂದ ಶ್ರೀಹರಿ
ಲೀಲೆಯಿಂದ ತೋರಲೀಪರಿ
ಮೂಲ ಕೊಲೆಗಳಿಲ್ಲದಾತ
ಗೋಲವ್ಯಾಪಿ ನಿರಾಕಾರಿ ಪ

ಸೊಕ್ಕಿ ಮೆರೆವ ಬಲಿಯ ಬಳಿಯ
ಹೊಕ್ಕು ಮೂರು ಪಾದ ನೆಲವ
ಬಿಕ್ಕೆಬೇಡಿಯವನು ಹ
ತ್ತಿಕ್ಕಿ ತಳಕೆ ತುಳಿಯಲೆಂದು ೧

ಇಡಿಯ ಜಗವ ತನ್ನೊಡಲಿನಲ್ಲಿ
ಹಿಡಿಯ ಪರಿಯ ಬಾಯ ತೆರೆದು
ಜಡೆದು ತೋರಿ ಯಶೋದೆಯ
ತೊಡೆಯ ಮೇಲೆ ಆಡಲೆಂದು ೨

ಹಾಳುಮಾಡಿ ಹೂಡಿದಾಟ
ಕಾಲ ಬೆರಳು ಬಾಯೊಳಿಟ್ಟು
ಆಲದೆಲೆಯ ಮೇಲೆ
ಮಲಗೆ ಗದುಗು ವೀರನಾರಾಯಣ ೩

## ೩೬೫

ಬಿಡಬೇಡೋ ರಂಗಾ ಬಿಡಬೇಡೋ
ಕಡುಮೋಹಕದ ಕೊಳಲನೂದುವದನು ಪ

ಬಿಡುವೆಯಾದರೆ ಮನಕಡು ತವಕದೊಳು
ತಡವರಿಸುವುದೊಲೆಡೆಯನು ನೋಡೋ ಅ.ಪ.

ಕಿವಿಯೊಳು ನಾದವು ಅಮೃತವ ಸುರಿಯೆ
ಸವಿಯುಣ್ಣುತಲೀ ಮನ ಮೈಮುರಿಯೆ

ತಳಮಳಿಸುವದು ನಡುವೆ ನಿನಗಿದು ಸರಿಯೆ
ಹೊರಗಿನ ಭಾವದ ಪವಣವನರಿಯೆ ೧

ಕೊಳಲನೂದುತಿರಲಾನಂದೊಳು
ಮುಳುಗಿರಲಾಗ ಕಣ್ಣಮುಂದ
ಸುಳಿದಾಡುವ ನಿನ್ನ ಮೂರುತಿ ಚಂದ
ತೊಲಗಿ ಪೋಗುವದೊ ಗೋಪಿಯ ಕಂದ ೨

ಮಧುರವೋ ನಿನ್ನ ಕೊಳಲು ಗಾಯನ
ಇದರೊಳಿಲ್ಲವೊ ಲವ ಅನುಮಾನ
ಮೊದಲು ಮುರಳಿಯ ಹಿಡಿಹಿಡಿ ಜಾಣ
ಗದುಗಿನ ವೀರನಾರಾಯಣ ೩

## ೩೬೬

ಮನೆಗೆ ಬಾರೋ ಕೃಷ್ಣ ಬೇಗನೆ ಪ

ವನಿತೆಯರಕೋ ಓಡಿ ಬರುತಿಹರು ಅ.ಪ.

ಕೊಳಲಿನ ಧನಿ ಕೇಳಿ ಹೆಂ_
ಗಳು ನಲಿದು ಮೋಹತಾಳಿ
ಸುಳಿದು ನಿನ್ನೆತ್ತಿಕೊಳುತಲೊಯ್ವರು
ಗಲ್ಲವ ಚುಂಬಿಸಿ ನುಗ್ಗು ಮಾಡುವರೊ ೧

ಬೆಣ್ಣೆಯಾನೆ ನೀಡಿ ಕರೆವರೊ
ಕಣ್ಣು ತಪ್ಪಿಸ್ಯಾಡಿ
ಚಿನ್ನ ನಿನ್ನನಲ್ಲೆಲ್ಲೆಳದಾಡಿ
ಹಣ್ಣು ಮಾಡುವರೊ ಘಾಸಿ ಮಾಡಿ ೨

ಚೆನ್ನಿಗ ಹೇಳುವೆನು ಎಂದುಗು
ನಿನ್ನನು ಬಿಟ್ಟರೇನು
ಉನ್ನತ ಗದುಗಿನ ವೀರನಾರಾಯಣ
ಚೆನ್ನಾಗಿ ದಢದಢ ಹೆಜ್ಜೆಯನಿಕ್ಕುತಾ ೩

## ೩೬೭

ಮೀಸಲಾಗಿ ನಿನ್ನದೊಂದು ಚೆಲ್ವರೂಪವನ್ನಿಡೋ
ವಾಸುದೇವ ನಿನ್ನನಂತ ದಿವ್ಯರೂಪಗಳಲಿ ಎನಗೆ ಪ

ಮಣಿವ ಭಕುತ ಜನರು ಕರೆದ
ಕ್ಷಣಕೆ ಓಡಿಬಂದು ಮುಂದೆ
ಕುಣಿದು ಕುಣಿದು ಕುಣಿದು ಹೋಗಿ ಬಂದು
ದಣಿದುಕೊಳುವ ಮೊದಲು ಎನಗೆ ೧

ಎಷ್ಟು ನೋಡಿದರು ಎನಗೆ
ತುಷ್ಟಿಯಿಲ್ಲವಯ್ಯ ಕೃಷ್ಣ
ಅಷ್ಟಷ್ಟಕೆ ಹೋಗಿಬರುವ
ಕಷ್ಟವೇಕೆ ದಯದಿ ಎನಗೆ ೨

ಮಾಡಿದಘವ ಕುಟ್ಟಿ ಹಣಿವೆ
ನೋಡಿ ನೋಡಿ ಪದಕೆ ಮಣಿವೆ
ಹಾಡಿಹಾಡಿ ನಲಿದು ಕುಣಿವೆ
ನಾಡೆ ಕುಣಿದು ತುಂಬ ತಣಿವೆ ೩

ಸಾವಿರಾರು ಭಕ್ತಜನರು
ದೇವ ನಿನಗೆ ಗೈವೆಯೆಂತು
ಪಾವನಾತ್ಮ ಗದು
ಗು ವೀರನಾರಾಯಣ ದಯವ ತೋರಿ ೪

## ೩೬೮

ಯಾದವಾ ಮಾಧವಾ ಕರುಣಿಸು ಪ

ಮೋದವನೀವ ದೇವ ಅ.ಪ.

ತುಂಬಿದ ಸಭೆಯೊಳಾ ತರುಣಿಯಾ ಪೊರೆದೆಯಾ
ನಂಬಿದ ಶರಣರ ಕಾವಾ ೧

ಕರೆಯದೆ ವಿದುರನಾ ಮನೆಗೆ ನೀ ಬಂದೆಯಾ
ನಿರುತದಿ ಭಕುತರ ಜೀವಾ ೨

ಪ್ರಾರ್ಥಿಸೆ ಗದುಗಿನ ವೀರನಾರಾಯಣಾ
ಪಾರ್ಥನ ಬಂಡಿಯ ಬೋವಾ ೩

## ೩೬೯

ಯಾರಲ್ಲಿ ಅಡಗಿರುವೆ ಕೃಷ್ಣಯ್ಯ ನೀ_
ನಾವಲ್ಲಿ ಅಡಗಿರುವೆ ಪ

ಯಾವಲ್ಲಿ ಅಡಗಿರುವಿ ಯಾವಲ್ಲಿ ಹುಡುಕಲಿ
ಭಾವದ ಮೂಲೆಯ ರಾವನು ಬಿಟ್ಟು ಅ.ಪ.

ಕಣ್ಣುಮುಚ್ಚಾಲೆಯಾಟ ಬೇಡಯ್ಯ ಈ
ಬಣ್ಣದ ನುಡಿಯ ಬೇಟ
ಕಣ್ಣು ಮುಚ್ಚಲು ಕೊಟ್ಟಿ ಟಣ್ಣನೆ ಜಿಗಿದೋಟ
ಅಣ್ಣಾ ಹುಡುಕಿ ಹುಡುಕಿ ಹಣ್ಣಾಗಿ ಹೋದೆನೋ ೧

ಎಲ್ಲೆಲ್ಲೂ ತುಂಬಿರುವೆ ಹುಡುಕಲು ನೀ
ನೆಲ್ಲೆಲ್ಲ್ಯೂ ಸಿಗದಿರುವೆ
ಕ್ಷುಲ್ಲಕನೆನ್ನನ್ನು ಚಲ್ಲದೆ ನನ್ನೆದುರು
ಚೆಲ್ವರೂಪದೆ ಬಂದು ನಿಲ್ವುದನ್ನು ಬಿಟ್ಟು ೨

ಕಡುಕಷ್ಟ ಹುಡುಕುವದು ಹಿಡಿದು ಹಿಡಿದು ತಂದು
ಒಡಲಲ್ಲಿಡಲು ಮತ್ತೇ
ಒಡನೆ ನುಸುಳಿಕೊಂಡು
ಬಿಡವಲೋಡೋಡಿ ೩

ಇದೀಗ ನಡೆದು ತಂದು ನೆನೆಯಲು ನಿನ್ನ
ಸದಾವಕಾಲಕೆಂದು ಹೃದಯದ ಗವಿಯೊಳು
ಮುದದಿ ಕೂಡಿಸಿ ಮೇಲೆ
ಬದಿಗೆ ಕಾವಲವಿಟ್ಟು ಮನವ ಟೊಣೆದು ನೀ ೪

ಬದರಿ ಕಾಶಿ ಕಂಚಿಯೋ ನೀನಿರುವುದು
ಮಥುರೆ ಪಂಢರಪುರವೊ
ಪದುಮಾವತಿ ಗಿರಿಯೋ ಉಡುಪಿ ದ್ವಾರಕೆಯೊ
ಗದುಗೋ ನೀ ಹೇಳಯ್ಯ ವೀರನಾರಾಯಣ ೫

## ೩೭೦

ಯಾವ ಹೆಸರಿನಿಂದೆ ಕರೆದರೇನು
ಪಾವನಾತ್ಮನೆ ಬರನೆಸ್ವಾ ಸರ್ವೋತ್ತಮನು ಪ

ಸಾವಿರ ಹೆಸರುಳ್ಳ ಅವನಿಗೆ ಹೆಸರಿಂದೇನು
ದೇವನೊಬ್ಬನೆ ಜಗಕೆ ಎಂಬ ನುಡಿ ಸುಳ್ಳೇನು
ಭಾವಭಕುತಿಗಳಿಂದ ಕರೆದೊಡನೆ ಬರುವನು
ಠಾವು ಕಾಲಗಳಿಲ್ಲಿ ಆತನಿಗೆ ಬಹಳೇನು ೧

ಅಲ್ಲಾ ಎಂದರೆ ಬರುವ ಶಿವನೇ ಎಂದರೂ ಬರುವಾ
ಗೊಲ್ಲ ಕೃಷ್ಣನೆ ಬಾರ ಎಂದರಾತನೆ ಬರುವ
ಅಲ್ಲಿ ಇವ ಇಲ್ಲಿ ಅವ ಎಂದು ಬಡಿದಾಡಿದರೆ
ಖುಲ್ಲರೆಂದರೇನು ಬಲ್ಲವರು ಮರುಳಾ ೨

ವಿಧವಿಧ ನುಡಿಗಳಲಿ ಬೇರೆ ಶಬುದಗಳಿರಲು
ಅದು ಪರಾರ್ಥವೆ ಬೇರೆ ತಾನಾಗುವದೇನು
ಹದಿನಾರು ಪಥಗಳನೆ ಹಿಡಿದೊಂದು ಹೋದೊಡನೆ
ಅದರಿಂದಲಾ ಊರು ಸೇರಿಸುವುದಿಲ್ಲವೇನು ೩

ಹೃದಯದಲಿ ನಿಜವಾದ ಭಕುತಿಯನು ಬೇಡುವನು
ಇದನರಿತು ಪ್ರತಿದಿನದಿ ಭಜಿಸುವರು ಮುನಿಜನರು
ಗದುಗಿನಲಿ ವಾಸಿಸುವ ಶ್ರೀ ವೀರನಾರಾಯಣನು
ಮುದದಿಂದ ಸಲಹುವನು ಸಂದೇಹವೇನು ೪

## ೩೭೧

ರಘುಪತಿಯೆ ನಿನ್ನನ್ನೆ ಪೊಗಳುವ ಪದಗಳನು
ಸೊಗಸಾಗಿ ರಚಿಪಂತೆ ಬಗೆಯನ್ನು ನೀಡೋ ಪ

ಪರರ ಪೊಗಳಿಕೆ ಬೇಡ ಪರರ ತೆಗಳಿಕೆ ಬೇಡ
ಪರಮಪಾವನ ನಿನ್ನ ಮಹಿಮೆಯನು ಬಣ್ಣಿಸುವ
ಸರಸ ನುಡಿಗಳು ಬಾಯೆ ಬರುವಂತೆ ಮಾಡೊ ೧

ಒಂದು ಲಕ್ಷದ ನಾಮದೊಂದು ಮಣಿಮಾಡಿ
ಕುಂದದಿಹ ಭಕ್ತಿಗುಣದಿಂದ ಪೋಣಿಸಿ ಪದ್ಯ
ದಂಥ ಹಾರವ ಮಾಡಿ ನಿನ್ನೆಡೆಗೆ ಅರ್ಪಿಸಲು
ಮಂದ ಬುದ್ಧಿಯ ನನಗೆ ಶಕ್ತಿಯನೀಡೋ ೨

ರಾಗ ನಿನಗೆಯೆ ತಾಳ ನಿನಗೆಯೆ ಗೊತ್ತು
ರಾಗ ತಾಳಗಳ ಮೇಳ ನನಗೇನು ಗೊತ್ತು
ರಾಗತಾಳಗಳಲ್ಲಿ ಹಗುರಾಗಿ ಹಾಡಲಿಕೆ
ತೂಗಿ ಶಬ್ದಗಳಿಡಲು ಸನ್ಮತಿಯ ನೀಡೋ ೩

ಸುರವರನೆ ಬೇಕಯ್ಯ ನಿನ್ನ ಪ್ರೇರಣೆ ಇದಕೆ
ವರಕವಿಯು ಸು ಕುಮಾರವ್ಯಾಸನಿಗೆ ವರವಿತ್ತು
ಉರುತರದ ಕನ್ನಡದಿ ಭಾರತವ ಬರೆಯಿಸಿದ
ತೆರದಿ ಗದುಗಿನ ವೀರನಾರಾಯಣನೆ ಸಲಹೊ ೪

## ೩೭೨

ರಾಮಚಂದ್ರ ನೀ ದಯಮಾಡೊ
ಪ್ರೇಮದಿಂದಲಿ ಹರಕೆಯ ನೀಡೋ ಪ

ನಿನ್ನ ಜನುಮದ ದಿನವಿದು ನೋಡೊ
ಘನ್ನ ತರದ ಸಂತೋಷ ನೀಡೊ

ಬನ್ನವನ್ನು ನೀನಿಂತೀಡಾಡೊ
ಮನ್ನಿಸಿ ಎನ್ನನು ದಯದಿ ಕಾಪಾಡೊ ೧

ವನಿತೆ ಅಹಲ್ಯೆಯ ಶಾಪವ ಹರಿದೆ
ದನುಜರುಪಟಳ ತಾಪವ ತರಿದೆ
ಮನುಜರೆಲ್ಲರ ಧರ್ಮದಿ ಪೊರೆದೆ
ಘನ ಸೌಖ್ಯವ ಭೋಗಿಸುವಂತಿರದೆ ೨

ಕುಣಿಯುವದು ಮುದದಲಿ ಭಕ್ತರ ಗಡಣ
ದಣಿಯದು ನೋಡ್ಯೆ ಸೀತಾರಮಣ
ಗುಣಿ ನೆ ಸುಖವಕೊಡು ಕರುಣಾಭರಣ
ಮಣಿವೆ ಗದುಗಿನ ವೀರನಾರಾಯಣ ೩

## ೩೭೩

ಶ್ರೀಪತಿಯೆ ನಿನ್ನ ಒಲುಮೆಯೊಂದಿರಲಿಕ್ಕೆ
ತಾಪಗಳಾವೆನಗೆ ಮಾಡುವವೊ ಪ

ಪಾಪಿಯಂತೆದೆನ್ನ ಕೈಯನು ಬಿಡಬೇಡ
ಗೋಪಾಲನೆ ಎಲ್ಲಕ್ಕೂ ಕರ್ತೃ ನೀನಲ್ಲವೆ ಅ.ಪ.

ಸಂಸಾರ ತಾಪವನಳಿಯೆ ಬಗೆಬಗೆಯುನ
ಪುಂಸಕನಾಲೋಚನೆ ಮಾಡುವೆನೊ
ಕಂಸಾರಿಯೆ ನೀನೆ ಭಾರ ಹೊತ್ತವನೆಂಬ
ಅಂಶವನರಿಯದೆ ವ್ಯರ್ಥ ಬಳಲಿದೆನೊ ೧

ಅಪಶಕುನಗಳು ಆ ವಿಘ್ನಗಳೆಲ್ಲವೂ
ವಿಪರೀತ ಕಾಲವು ಉಪದ್ರವಂಗಳು
ಕೃಪೆಯಿಂದ ಪರಿಣಾಮಗೊಳ್ಳವೆಂದೆಂದಿಗೂ
ಕೃಪೆಯ ಮಾಡಯ್ಯ ನೀ ಭಕ್ತವತ್ಸಲನೆ ೨

ಯೋಚಿಸುವವ ನಾನು ಯೋಜಿಸುವ ನೀನು
ತೋಚದು ಗತಿಯೆಂದು ಚಿಂತಿಸುತಿರಲು

ಸೂಚನೆಗೊಡದೆ ಪರಿಹರಿಸಿ ಪೊರೆಯುವಿ
ನಿಗಮಗೋಚರ ನಿನ್ನ ಕಾರುಣ್ಯವನರಿಯನೋ ೩

ಅಂಬುಜಾಕ್ಷನೆ ನಿನ್ನ ನಂಬಿದ ಜನರನು
ಬೆಂಬಿಡದೆ ಕಾಯುವ ನೀ ಕೃಪಾಳೋ
ತುಂಬ ಒಲುಮೆಯನೀಯೊ ನಿತ್ಯದಿ ಭಕ್ತಕು
ಟುಂಬಿಯೆ ಗದುಗಿನ ವೀರನಾರಾಯಣ ೪

## ೩೭೪

ಶ್ರೀ ವೇಣುಗೋಪಾಲ ಕೃಷ್ಣಾ ಕಾವುದೈ
ಪರಿಹರಿಸಿ ನೀನೆನ್ನ ಕೃಷ್ಣಾ ಪ

ಶ್ರೀ ವ್ಯಾಸರಾಯಾರ್ಜಿತ ಕರುಣಾ
ದೇವಾದಿನುತಚರಣ ಗುಣಗಣಾಭರಣ ಅ.ಪ.

ಭೂಮಿ ಆಕಾಶಾದಿ ಸಕಲವನು ವ್ಯಾಪಿಸಿದ
ಪ್ರೇಮದಿಂ ನಿನ್ನಂಶವನು ಪೂರ್ಣಗೊಳಿಸಿದ
ನೇಮದಿಂ ಜಾಂಬುವತಿ ಭಕುತಿಯಿಂ ಪೂಜಿಸಿದ
ಭೀಮರಥಿಯಿಂ ಬಂದು ಶ್ರೀ ವ್ಯಾಸರಾಯಗೊಲಿದ ೧

ಅಚ್ಚೆಯದ ಪುರಂದರ ಕಚ್ಚು ನೈವೇದ್ಯಕ್ಕೆ
ಮೆಚ್ಚಿಯತಿ ವ್ಯಾಸರನು ಅಚ್ಚರಿಯಗೊಳಿಸಿದ
ಹುಚ್ಚು ಕುರುಬಗೆ ಜಗನ್ನಾಥದಾಸರ ಜನುಮ
ದಿಚ್ಛೆಯನು ವ್ಯಾಸರಿಂ ಪೂರೈಸಿ ಮೆರೆಯುತಿಹ ೨

ಕನ್ನಡದ ರಾಜ್ಯವೆಂದೆನಿಸಿದ ವಿದ್ಯಾನಗರ
ದುನ್ನತಿಯ ಗೈದ ಯತಿ ವ್ಯಾಸರನು ಪಟ್ಟದೊಳು
ಸನ್ನಹಿಸಿ ಘನ ಕೃಷ್ಣ ನರಪತಿಗೆ ಬಂದಿದ್ದ
ಬನ್ನ ಕುಹುಯೋಗವ ಸಂಹರಿಸಿ ಪಾಲಿಸಿದ ೩

ಪ್ರಾಣಯತಿ ಹರ ವ್ಯಾಸರಾಯಾದಿ ಹರಿದಾಸ
ಜಾಣರನು ಕುಣಿಸಲಿಕೆ ನಾದವನು ಕೊಡಲೆಂದು

ವೇಣುವನು ಊದುತ್ತೆ ಮೋದಿಸುವನೆಂಬಂತೆ
ಕಾಣಿಸುವ ರೀತಿಯಲಿ ನರ್ತಿಸುತ ನಿಂತಿರುವ ೪

ವ್ಯಾಸರಂದದಿ ಧರ್ಮದುಪದೇಶ ಮಾಡುತ್ತೆ
ದೇಶದೊಳು ಪಸರಿಸಲು ಲಕ್ಷ್ಮೀಶ ತೀರ್ಥರನು
ಶಾಸನವ ಗೈದುಪನ್ಯಾಸಕ್ಕೆ ನೇಮಿಸಿದ
ಶ್ರೀಶ ಗದುಗಿನ ವೀರನಾರಾಯಣನು ಎಂಬ ೫

## ೩೭೫

ಸ್ಮರಿಸಿವುದು ರಘುನಂದನನ ಪ

ನಿರುತದಿ ಬೆಳಗಿನೊಳೆದ್ದು ಭಕುತಿಯಲಿ ಅ.ಪ.

ಜನಪತಿ ದಶರಥನುದರದಿ ಜನಿಸಿದ
ವನಿತೆ ಅಹಲ್ಯೆಯ ತಾನುದ್ಧರಿಸಿದ
ಘನ ಶಂಕರ ಧನುವ ಭಂಗಿಸಿದ
ಜನಕ ಸುತೆಯ ವರಿಸಿದ ಶ್ರೀರಾಮನ ೧

ತಾಯಿ ಕೈಕೇಯಿಯ ಮಾತು ನಡೆಸಿದ
ನೋಯದೆ ವನವನು ಸತಿಸಹ ಸೇರಿದ
ಮಾಯಾಮೃಗದಾಶೆಗೆ ಸತಿಯನಗಲಿದ
ರಾಯ ಲಕ್ಷ್ಮಣನಣ್ಣ ಶ್ರೀರಾಮನ ೨

ದಂಡಕದೊಳು ಸತಿಯನು ಶೋಧಿಸಿದ
ಚಂಡ ಹನುಮಗೆ ತಾ ದೊರೆಯಾದ
ಪುಂಡ ಜಲಧಿಯ ದಾಟಿಸಿದ
ಹೆಂಡತಿ ಇರವನು ತಿಳಿದ ಶ್ರೀರಾಮನ ೩

ಜಲಧಿಗೆ ಸೇತುವೆ ನಿಂತು ಬಿಗಿಸಿದ
ಖಲ ರಾವಣನ ರಣದೊಳು ಕೆಡಹಿದ
ಒಲಿದು ವಿಭೀಷಣನನು ತಾ ಪೊರೆದ
ನೆಲದೊಳು ಸುಖ ಬೀರಿದ ಶ್ರೀರಾಮನ ೪

ಧರುಮವ ನೆಲಸಲು ದುಷ್ಟರ ತರಿದಾ
ಧರೆಯೊಳು ಶಿಷ್ಟರ ಪೊರೆಯಲು ಬಯಸಿದ
ಸಿರಿಪತಿ ಗದುಗಿನ ವೀರನಾರಾಯಣ
ನರನಾಗವತರಿಸಿದ ಶ್ರೀ ರಾಮ ೫

## ೩೭೬

ಸಿಕ್ಕ ಸಿಕ್ಕ ಇಲ್ಲೇ ಸಿಕ್ಕ ಪ

ಪಕ್ಕದೊಳೆಲ್ಲೆಲ್ಲ್ಯೂ ಹರಿ ತುಂಬಿಹನಕ್ಕ ಅ.ಪ.

ಅಡಗಲು ಎಲ್ಲೆಲ್ಲ್ಯೂ ಸ್ಥಳವಿಲ್ಲವಕ್ಕ
ಜಡ ಜೀವಗಳೊಳು ತೋರುವನಕ್ಕ ೧

ಸಕಲರಿಗಿವನು ಕಾಣನು ತಕ್ಕ
ಭಕುತರಿಗಷ್ಟೇ ಕಾಣುವನಕ್ಕ ೨

ಶಕ್ತಿಯುಕ್ತಿಯಿಂದರಸಲು ಸಿಗನಕ್ಕ
ಭಕ್ತಿಯೊಳರಸಲು ಇಲ್ಲೇ ಸಿಗುವನಕ್ಕ ೩

ಇಲ್ಲೆ ಗದುಗಿನಲ್ಲೆ ನಿಂದಿಹನಕ್ಕ
ಬಲ್ಲ ವೀರನಾರಾಯಣನಕ್ಕ ೪

## ೩೭೭

ಸುಲಭ ನೀನೆನಗಲ್ಲ ತಿಳಿವೆ ಶ್ರೀನಲ್ಲ ಪ

ಸುಲಭನೆಂದಾಡುವರು ಹರಿದಾಸರೆಲ್ಲ ಅ.ಪ.

ದರುಶನವು ಸಿಗಲೆಂದು ಪಂಢರಿಗೆ ನಾ ಬಂದೆ
ಪರಮಪಾವನ ನಿನ್ನ ಮೂರುತಿಯ ಮುಂದೆ
ತ್ವರದಿನಿಲೆ ಬರಲು ಬಹುಭಕ್ತಿಯಿಂದೆ
ತೆರೆಯಲಿಲ್ಲವೊ ದ್ವಾರ ಏನೆಂದೆ ತಂದೆ ೧

ಶಿಲೆಯ ಪ್ರತಿಮೆಯನೀಗ ತೋರದವ ನೀ ಮುಂದೆ
ಬಲು ನಿಜದ ರೂಪವನು ತೋರುವುದು ಹೇಗೆಂದೆ
ಜಲಜಾಕ್ಷ ಭರವಸೆಯ ನೀಡಲೆಂತು ಮನ ಗುಂದೆ
ಸಲಹು ವಿಠ್ಠಲರಾಯ ಕೈ ಮುಗಿಯುವೆನು ತಂದೆ ೨

ಸುಲಭದೊಳು ಸುಲಭನೈ ಪಂಢರಿಯ ವಿಠಲಾ
ಬಲು ಪಾಪಿಗಳನು ಉದ್ಧರಿಪ ಸಕಲ
ಬಲುಹಿ ನೀ ನುಡಿಯು ನನಗೆಲಾ
ಸುಲಭ ಗದುಗಿನ ವೀರನಾರಾಯಣನು ಅಚಲ ೩

## ೩೭೮

ಸೇವೆ ಮಾಳ್ಪೆ ನಾರಾಯಣ
ಈವುದಯ್ಯ ನಿನ್ನ ಚರಣ ಪ

ಸುರಮುನಿಗಳಿಗಿದು ದುರ್ಲಭ
ಸಿರಿದೇವಿಗೆ ಮಾತ್ರ ಸುಲಭ
ಕರುಣಿಸು ಹೇ ಕಮಲನಾಭ
ಇರದೆ ಭೌವ್ಯ ನಿನ್ನ ಚರಣ ೧

ತ್ರಿಜಗಗಳ ಗೆಲ್ದ ಚರಣ
ಭಜಕ ಗುಹಕಗೊಲಿದ ಚರಣ
ರಜತ ನದಿಯ ಹೆತ್ತ ಚರಣ
ಕಲ್ಲಹಲ್ಯೆ ಪೊರೆದ ಚರಣ ೨

ಕುರುನೃಪನನು ಕೆಡೆದ ಚರಣ
ಉರಗ ಕಾಳಿ ಹಣಿದ ಚರಣ
ಧರೆಗೆ ಮೆರೆದ ಗದಗು ವೀರ
ನಾರಾಯಣ ನಿನ್ನ ಚರಣ ೩

## ೩೭೯

ಹರಲಿ ಮಾಡಿದರಲ್ಲೊ ನಿನ್ನ
ಮುರಲಿಧರ ಚೆನ್ನ ಕೃಷ್ಣ ಸಂಪನ್ನ ಪ

ತುಂಟ ಕಾಮನು ಕೇವಲೆಂಟು ವರ್ಷದ ಬಾಲ
ಗಂಟಿದ್ದು ಹ್ಯಾಗೆಯದ ಗಂಟೊಡೆಯದ ಮುನ್ನ ೧

ಜಾರನೆಂದು ಕಡು ಶಿಶುಪಾಲನು
ದೂರಲಿಲ್ಲೆಂಬುದನಾಹದನಾ ಯಾರು ಅರಿಯದೆ ಘನಾ ೨

ಪಾವನ ಪರಮಾತ್ಮಾ ಜೀವರೇಕಾಗುವ ಭಾವದ ಮರ್ಮವನಾ
ತಾವರಿಯದಾ ರೀವಿಯಲಿ ಕುಜನಾ ೩

ಅತಿಶಯೋಕ್ತಿಯು ಮತ್ತು ಉತುಪ್ರೇಕ್ಷಾಲಂಕಾರ
ಮತಿ ಕೊಟ್ಟ ಕಾವ್ಯವನಾ ಅರ್ಥವನಾ ಮಥಿಸದೆ ಚೆನ್ನಾ ೪

ಸದ್ಧರ್ಮವನು ಬೀರಿ ಉದ್ಧರಿಸಲು ಬಂದ
ಸಿದ್ಧ ಗದುಗಿನ ವೀರನಾರಾಯಣ ಪದ್ದುಮನಯನೇ ೫

## ೩೮೦

ಹುಡುಕತಲಿಹೆನವನಾ ಮಾಧವನಾ ಪ

ಹಿಡಿಯುತ ಭಕುತಿಯ ಸೊಡರನು ಕರದೊಳು
ಕಡುಗತ್ತಲೆಯೊಳು ಕಡೆಗಾಣದೆನಾ ೧

ಸಿದ್ಧವೇದದೊಳು ಕದ್ದಡಗಿದನಾ
ಬುದ್ಧಿಯ ತಟ ಗಡ ನೆದ್ದಿ ಕದಡಿನಾ ೨

ಜಗ ತುಂಬಿಹನೆಂದು ನಿಗಮವು ಸಾರಲು
ಜಗದೊಳಗೆಲ್ಲಾ ಖಗವಾಹನನ ೩

ಜ್ಞಾನಿಗಳಿಗೆ ತಾ ಕಾಂಬನು ಎಂಬರು
ಧೇನಿಸುತಲಿ ಸಾಮಾನ್ಯನಲ್ಲನ ೪

ಎದೆಯ ಮರೆಯಲಿ ಹುದುಗಿ ಮೆರೆವನಾ
ಗದುಗಿನ ವೀರನಾರಾಯಣನನ್ನ ೫

## (ಇ) ಲಕ್ಷ್ಮೀದೇವಿ

### ೩೮೧

ಏನೆಂದು ವರಿಸಿದೆಯೆ ಹರಿಯ ಲಕುಮಿ ತಾಯೇ ಪ

ಆನಂದಪ್ರದನೆಂದು ಭ್ರಮಿಸಿದೆಯಾ ಶ್ರೀಯೇ ಅ.ಪ.

ಮಕ್ಕಳನು ಹೆರುವ ಮನದಭಿಲಾಷೆಯಿಂದೇನೆ
ಹೊಕ್ಕುಳಲಿ ಬ್ರಹ್ಮನನು ಪಡೆದು ಕುಳಿತನು ತಾನೆ
ರಕ್ಕಸರ ಕಂಡೊಡನೆ ಹೆಣ್ಣಾಗಿ ನಿಲ್ಲುವನೆ
ಅಕ್ಕ ಇಂಥವನೊಡನೆ ಸರಸವೆಂತಾಡುವೆಯಾ ೧

ತಾನು ಸೇವೆಯಕೊಂಡು ಮಾನವನು ಪಡೆಯದೇ
ದೀನನಂದದಿ ಭಕ್ತಜನ ಸೇವೆಗೆಳಿಸುವನೂ
ಆನೆ ಕರೆದೊಡೆ ನಿನ್ನ ಬಿಟ್ಟೋಡಲಿಲ್ಲೇನೆ
ಜ್ಞಾನಿಗಿಂತ ನೀನವಗೆ ಹೆಚ್ಚಿನವಳೇನೆ ೨

ಮುದಿಋಷಿಯ ಕರೆತಂದು ಒದೆಸಿಕೊಂಡವನೆ
ಹದನ ಬಂದೊಡನೆ ಬಹುರೂಪ ಧಾರಕನ
ಮದುವೆಯಾದರು ತನ್ನ ಗುಟ್ಟನ್ನು ಕೊಡದವನ
ಗದುಗಿನೊಡೆಯ ಶ್ರೀ ವೀರನಾರಾಯಣನ ೩

## ೩೮೨

ಜಯ ಕೊಲ್ಹಾಪುರ ನಿಲಯೇ
ಶ್ರೀನಿವಾಸನ ಸತಿಯೇ ಸಾಗರರಾಜನ ಸುತೆಯೇ
ನಾರಿಯರೆಲ್ಲರು ಕೂಡಿ ಆರತಿ ಬೆಳಗುವೆವು ಪ

ಬಿಳಿಯ ಪತ್ತಲವುಟ್ಟು ಕಡಗ ಕಂಕಣ ತೊಟ್ಟು
ಜಡೆಗೆ ಮಲ್ಲೆಯ ಮಾಲೆ ಮುಡಿದಾ ವರಮಹಾಲಕ್ಷ್ಮಿಗೆ ೧

ಮರುಗ ಮಲ್ಲಿಗೆ ಜಾಜಿ ಪಾರಿಜಾತದ ಕುಸುಮ
ಸಿರಿಯ ಚರಣಕೆ ಅರ್ಪಿಸಲೆಂದು ಜಯ ಜಯ ಜಯ ೨

ಬಡವರಾ ಮನೆತನಕೆ ಅಭಿಮಾನವನ್ನಿಟ್ಟು
ನಿರುತ ಕಳಶದಿ ಕುಳಿತ ಮಹಾಲಕ್ಷ್ಮೀಗೆ ಹಾಡುತ ಪಾಡುವೆವು ೩

ಶುಕ್ರವಾರವು ಇಂದು ನಮ್ಮ ಸದನಕ್ಕೆ ಬಾ ಎಂದು
ಗದುಗಿನ ವೀರನಾರಾಯಣನ ಅರಸಿಗೆ ಹಾಡುತ ಪಾಡುವೆವು ೪

## ೩೮೩

ಪಾಲಿಸು ಸೌಭಾಗ್ಯದ ಲಕ್ಷ್ಮೀದೇವಿ
ಮೇಲಾದ ಕರವೀರವಾಸಿನಿದೇವಿ ಪ

ಬಡಬಡಿಸಿ ಬಂದಿಹೆ ನಾನಿಲ್ಲಿನೋಡಿ
ಕೊಡುವಿ ವರವೆಂದು ಆಸೆಯ ಮಾಡಿ
ಬಿಡಬೇಡ ಮಗನನು ಕರುಣದಿ ನೋಡಿ
ಕೊಡು ನೀ ವರನನು ಸಿರಿಗಳ ನೀಡಿ ೧

ಬಡತನದ ಭೂತವ ಎದುರಿಸುವುದು ತಾಯೆ
ತಡೆಯಲಾರೆನು ಇನ್ನು ಕರುಣಿಸಿ ಕಾಯೆ
ಬಿಡದೆ ಭಜಿಪೆ ನಿನ್ನ ಹೇ ಶುಭಕಾಯೆ
ಕೊಡು ನೀ ವರವನು ಧನಗಳನೀಯೆ ೨

ಇಡುವೆ ತಲೆಯ ನಿನ್ನ ಪದದಿ ಪನ್ನಗ ವೇಣಿ
ನುಡಿಯೆ ಹರಕೆಗಳ ಹೇ ಶುಭವಾಣಿ
ಒಡೆಯ ಗದಗುವೀರ ನಾರಾಯಣನ ಜಾಣಿ
ಕೊಡು ನೀ ವರವನು ವಿಠಲನ ರಾಣಿ ೩

## ೩೮೪

ಧನ್ಯನಾದೆ ಧನ್ಯನಾದೆ ಘನ್ನ ಲಕುಮಿಯ ಪಾದ ನೋಡಿದೆ ಪ

ಚೆನ್ನದೇವಿಯ ಪಾದಕೆರಗಿದೆ
ಮನ್ನಿಸೆಂತೆಂದವಳ ಬೇಡಿದೆ ಅ.ಪ.

ಚರಣ ಯುಗಳಲಿ ಮೆರೆವ ನೂಪುರ
ಧರಿಸಿ ಪೀಠದೊಳಿಂದಿರೆ
ಜರದ ಶೀರೆಯನುಟ್ಟು ನಡುವೊಳು
ಹಿರಿದು ಒಡ್ಯಾಣದೊಳು ನಿಂದಿರೆ ೧

ಕರದ ಕಂಕಣ ಕೊರಳ ಹಾರವು
ವರ ಕಿರೀಟವು ಶಿರದೊಳಿಂದಿರೆ
ಕರಣ ಕುಂಡಲ ಮೂಗು ಮುಕುರವು
ಪರಮ ತೇಜದ ಸೊಬಗ ತಂದಿರೆ ೨

ಹೊಳೆವ ಕಂಗಳು ಹಣೆಯ ಕುಂಕುಮ
ಥಳಿಸೆ ಸರಸಿಜ ಮಂದಿರೆ
ಬಿಳಿಯ ಕೊಡೆಯನು ಹಿಡಿವ ತೆರದಲಿ
ಎಳೆಯ ನಾಗವು ಹಿಂದಿರೆ ೩

ಬೆರಳೊಳುಂಗುರ ಕುರುಳು ಸುಂದರ
ಹೆರಳು ಸಿಂಗರದಿಂದಿರೆ
ತಿರುಳು ಗಂಧದ ಸರಳ ಮೂರ್ತಿಯ
ತರಳೆ ಎನ್ನಾಯ ಮುಂದಿರೆ ೪

ಧೀರ ಭಕುತರ ಪೊರೆವುದಕೆ ಕರ
ವೀರ ಪುರದೊಳು ಬಂದಿರೆ
ಧಾರುಣೀಯೊಳು ಮೆರೆವ ಗದುಗಿನ
ವೀರನಾರಾಯಣನ ಚಂದಿರೆ ೫

## ೩೮೫

ಮಂಗಳಾರುತಿ ತಂದು ಬೆಳಗಿರೆ ರಂಗನಾಥನ ರಾಣಿಗೆ
ಅಂಗನಾ ಜನರೆಲ್ಲ ಕೂಡಿ ಮಂಗಳಾರುತಿ ಮಾಡಿರೆ ಪ

ಮುತ್ತು ರತ್ನಾಭರಣ ತೊಡಿಸಿರೆ ಉತ್ತುಮಾಂಬರ ಉಡಿಸಿರೆ
ಎತ್ತಿರಾರುತಿ ಭಕುತಿಯಲಿ ಸಂಪತ್ತುಗಳ ಮಹಾ ಲಕುಮಿಗೆ ೧

ಹೊಸತು ಹೂಗಳ ಮುಡಿಸಿರೆ ತುಸು ಬಿಸಿಯ ಭಕ್ಷವ ಬಡಿಸಿರೆ
ಎಸೆವ ಮಹಾಲಕ್ಷುಮಿ ದೇವಿಗೆ ಒಸೆದು ಶುಕರುವಾರದೆ ೨

ಹಳದಿ ಕುಂಕುಮಧರಿಸಿ ಸೌಭಾಗ್ಯಗಳ ನೀಡುವ ದೇವಿಗೆ
ಹೊಳೆವ ಗದುಗಿನ ವೀರನಾರಾಯಣನ ಪ್ರೇಮದ ಮಡದಿಗೆ ೩

## ೩೮೬

ಮಂಗಳಂ ಜಯ ಮಂಗಳಂ ಪ

ಇಂಗಡಲ ಕುವರಿಗೆ ಮಂಗಳಕಾಯೆಗೆ ಅ.ಪ.

ಮೂಜಗದೊಳು ನಿತ್ಯ ಪೂಜಿತದೇವಿಗೆ
ರಾಜೀವ ನಯನೆಗೆ ಭಾಗ್ಯವೀವಳಿಗೆ ೧

ಹಸಿರು ಸೀರೆಯನುಟ್ಟು ಹಳದಿ ಕುಪ್ಪುಸತೊಟ್ಟು
ಎಸೆವ ಚಿನ್ನಾಭರಣನಿಟ್ಟು ಮೆರೆವವಳಿಗೆ ೨

ಪ್ರತ್ಯಕ್ಷಾಪ್ರತ್ಯಕ್ಷ ಶಕ್ತಿಯ ದೇವಿಗೆ
ನಿತ್ಯ ಸಂಸಾರಿಗಗತ್ಯವಿರುವವಳಿಗೆ ೩

ಕುಲಗೋತ್ರವೆಣಿಸದಲೊಲಿಯುವ ದೇವಿಗೆ
ನೆಲೆಗೊಡದ ಚಂಚಲೆಮಾಲಕುಮಿದೇವಿಗೆ ೪

ಮದನನ ಮಾತೆಗೆ ಪದುಮಲಯಳಿಗೆ
ಗದುಗಿನ ವೀರನಾರಾಯಣನ ಸತಿಗೆ ೫

## (ಈ) ದೇವತಾ ಸ್ತುತಿ

### ೩೮೭

ಎಂಥ ಧನ್ಯಳೇ ಯಶೋದೆ
ಎಂಥ ಧನ್ಯಳೇ ಪ

ಎಂಥ ಧನ್ಯಳಮ್ಮ ನೀನು
ಎಂಥ ಪುಣ್ಯವಮ್ಮ ನಿನ್ನದು
ಕಂತುಪಿತನು ಕುವರನಾಗಿ
ಸಂತೋಷವ ಪಡಿಸಿದನು ೧

ಕಷ್ಟಪಟ್ಟು ಮುನಿಗಳೆಲ್ಲ
ಎಷ್ಟು ತಪವ ಮಾಡಿದರು
ಇಷ್ಟು ಪುಣ್ಯ ಪಡೆಯಲಿಲ್ಲ
ಸೃಷ್ಟಿಯೊಳಗೆ ಸ್ಪಷ್ಟವಿಹುದು ೨

ಒಡಲೊಳಗೆ ಹೊರೆಯಲಿಲ್ಲ
ಪಡೆಯಲಿಲ್ಲ ಅವನ ಪರರ
ಒಡಲೊಳ್ಹುಟ್ಟಿ ಬಂದು ನಿನ್ನ
ಹುಡುಗನಾಗಿ ಮೆರೆದ ನಮ್ಮ ೩

ಇಡಿಯ ಜಗವನುದರದಲಿ
ಹಿಡಿದು ಬಾಲನಾಗಿ ಗದುಗಿ
ನೊಡೆಯ ವೀರನಾರಾಯಣ
ತೊಡೆಯ ಮೇಲೆ ಆಡಿದನು ೪

## ३೮೮

### ಹನುಮ

ಅಣಿಯಾರೊ ನಿನಗೆ ಈ ತ್ರಿಭುವನದೊಳಗೆ
ಹಣಮಂತ ಗುಣವಂತ ಮಣಿಯುವೆನೊ ನಿನಗೆ ಪ

ಗಡ್ ಗಡ್‌ಗಡನೆ ರಾಮನ ಪಾದಾಂಬುಜಕೆ ವಂದಿಸುತ
ಖಡ್ ಖಡ್ ಖಡನೆ ಸಿಡಿಲಂತೆ ನಭದೊಳಗೆ ಗರ್ಜಿಸುತ
ಧಡ್ ಧಡ್ ಧಡನೆ ಕಡಲನ್ನೆ ಜಿಗಿಯುತ್ತ
ಭಡ್ ಭಡ್ ಭಡನೆ ಸೀತೆಯನು ಶೋಧಿಸುತ ಬಂದಿಯೋ ೧

ಬರಬರನೆ ಬಿಂಕದಲಿ ಉರಿಯುತಿಹ ರಕ್ಕಸರ
ದರ್ ದರ್ ದರನೆ ರಣರಂಗಕೊಬ್ಬನೇ ಎಳೆತಂದು
ಕರ್ ಕರ್ ಕರನೆ ಹಲ್ಗಿಡಿದು ತರಿಯುತ್ತ ಧರೆಯೊಳಗೆ
ಭರ್ ಭರನೆ ಸಿರಿವರನ ಇಚ್ಛೆಯನು ಪೂರ್ತಿಸಿದಿ ೨

ಖುದ್ ಖುದ್ ಖುದನೆ ನಗುತ ರಘುರಾಮನನು ಹೃದಯದೊಳು
ಖುದ್ ಖುದ್ ಖುದನೆ ಬಿಡದೇಳ್ವ ಭಕುತಿಯಲಿ ಸೇವಿಸುತ
ಗದ್ ಗದ್ ಗದುಗಿನೊಳು ವೀರನಾರಾಯಣನ
ಮುದ್ ಮುದ್ ವಂದಿಸಿ ಪರಬ್ರಹ್ಮನ ಪದವಿಯನೆ ಪಡೆಯೊ ೩

## ३೮೯

ಜನುಮದ ದಿವಸವಿದು ಹನುಮ ನಿನ್ನ
ಜನುಮದ ದಿವಸವಿದೂ ಪ

ಜನುಮದ ದಿನವಿದು ಅನುದಿನ ನಿನ್ನನು
ನೆನೆಯುವ ಜನರಿಗೆ ಘನ ಮುದ ಕೊಡುವಂಥ ಅ.ಪ.

ಯಾವಾಗಲೂ ಹರಿಯ ಭಕುತಿಯಲಿ
ಸೇವೆಮಾಳ್ಪ ಪರಿಯ

ಭಾವುಕರಿಗೆ ಕಲಿಸುವುದಕೆ ಗಡ
ಜೀವಿಯಾಗಿ ಅವತರಿಸಿದ ನಿನ್ನದೂ ೧

ಪೊಡವಿಯ ಮಾತೆಯನು ದನುಜಬ
ಚ್ಚಿಡಲವಳಿರುವದನು
ಹುಡುಕಿ ತೆಗೆಯಲಾ ಕಡಲನೆ ಜಿಗಿಯುವ
ಕಡುಶಕ್ತಿಯ ಗಡ ಪಡೆದ ನಿನ್ನಯ ೨

ಧಾರುಣಿನ ಕಾರಣ ಗದುಗಿನ
ವೀರನಾರಾಯಣ
ಚಾರು ಚರಣದಿ ತೋರಿ ಭಕುತಿಯನು
ಸೂರೆಗೈಯ್ಯೆ ಮೈದೋರಿದ ನಿನ್ನನು ೩

## ೩೯೦

ನಿಜ ವೈಷ್ಣವಾ ಅವನೇ ನಿಜ ವೈಷ್ಣವಾ ಪ

ಇತರರ ದುಃಖವು ತನಗೆಂದರಿವಾ
ಸತತದಿ ಸೇವೆಗೆ ತತಪರನಿರುವಾ ೧

ತೊರೆದು ಹೆಮ್ಮೆಯಾ ಸರುವರು ನಮಿಸುವ
ಪರರನು ಜರಿಯಾ ನಿರುಮಲನಿರುವಾ ೨

ಧನ್ಯನವನು ತಾಯನ್ಯ ಸತಿಯರನು
ತನ್ನ ತಾಯಿಯೊಲು ಮನ್ನಿಸುತಿರುವಾ ೩

ಸಟಿಯನು ನುಡಿಯಾ ಪರಧನವೆಡಿಯಾ
ಕಟ್ಟಿಲಿ ಸಿಕ್ಕದೆ ಸಮಮನನೆನವ ೪

ನಡೆನುಡಿಗಳಲಿ ಮಡಿಯಿಂದಿರುವಾ
ದೃಢ ಮನದಿಂ ಬಹು ಶಾಂತಿಯಲಿರುವಾ ೫

ಪ್ರತಿಪ್ರಾಣಿಯಲಿ ಹರಿಯನು ನೋಡುವಾ
ಅತಿಶಯ ದಯವನು ತೋರುತಲಿರುವಾ ೬

ಕಾಮಕ್ರೋಧಗಳ ಗಡ ಜೈಸಿರುವ
ರಾಮನಾಮವ ನೇಮದಿ ಭಜಿಸುವ ೭

ಗದುಗಿನ ವೀರನಾರಾಯಣನ
ಹೃದಯದಿ ಸತತ ಮುದದಲಿ ಪಿಡಿವ ೮

## ೩೯೧

### ಮಾರುತಿ

ನಿಲ್ಲಿಸಯ್ಯ ನಿನ್ನ ಮೂದಲೆ ಮಾರುತಿ ಪ

ನಿಲ್ಲಸಯ್ಯ ನಿನ್ನ ಮೂರುತಿ
ಫುಲ್ಲವಿಸಿದೆ ನಿನ್ನ ಕೀರುತಿ
ಬಲ್ಲಭಕ್ತಿಪಥವ ತೋರುತಿ
ಎಲ್ಲರೊಳಗೆ ಸುಖವ ಬೀರುತಿ ಅ.ಪ.

ಗಾಡಿಕಾರ ರಾಮನನ್ನು ನೋಡಿ ನೋಡಿಯವನ ಮೂರ್ತಿ
ಮೂಡಿನಿಂತ ನಿನ್ನ ಕಣ್ಣ ನೋಡಿ ಧನ್ಯನಪ್ಪೆ ಮೂರ್ತಿ ೧

ಪ್ರೇಮಭಕುತಿಯಿಂದ ನಿರುತ ರಾಮನನ್ನು ಭಜಿಸಿ ನುಡಿವ
ನಾಮವೆನ್ನ ಪಾಪಿ ಕಿವಿಯ ಧಾಮದಲ್ಲಿ ಸೇರುವಂತೆ ೨

ಎನ್ನ ಕಾಡುವಂಥ ದುರಿತವನ್ನು ಸೌಖ್ಯವನ್ನು
ಇನ್ನು ಕೊಡುವ ನಿನ್ನ ದಿವ್ಯ ಸನ್ನಿಧಿ ತಾನಾಗುವಂತೆ ೩

ಧಾರುಣಿಯೊಳು ಗದುಗಿನಲ್ಲಿ ವೀರನಾರಾಯಣನ ಪದವ
ತೋರಿ ನಿತ್ಯ ಸೇವಿಪಂತೆ ಧೀರತೆ ಬರುವಂತೆ ಎನ್ನೊಳು ೪

## ೩೯೨

ಪ್ರಾಣದೇವಾ ಕಾವುದೆಮ್ಮ ಜೀವೋತ್ತಮಾ ಪ

ಜಾಣರೊಳು ನೀನು ಜಾಣ
ತ್ರಾಣಿಕರೊಳು ನೀನು ತ್ರಾಣ

ಕಾಣೆ ನಿನಗೆ ಸರಿಸಮಾನ
ಕ್ಷೋಣಿಯಲ್ಲಿ ಹನುಮಾನ ೧

ಎಲ್ಲ ಗುರುಗಳಿಂಗೆ ಜಗದಿ
ಬಲ್ಲಿದ ಗುರುವು ನೀನಾದಿ
ಎಲ್ಲರನುದ್ಧರಿಪ ಮನದಿ
ಯಲ್ಲಗುರೇಶನಾಗಿ ಬಂದಿ ೨

ಸ್ಮರಿಪೆನೇಳುಪುರಗಳೊಡೆಯ
ಕರುಣಿಸಯ್ಯ ಮುಗಿವೆ ಕೈಯ್ಯ
ಸಿರಿಗದುಗಿನ ವೀರ ನಾರಾಯಣನ
ದೂತರೊಳಗೆ ಪ್ರಿಯಾ ೩

## ೩೯೩

### ಹನುಮ–ಭೀಮ–ಮಧ್ವ

ಭಾರತೀರಮಣ ಸಮೀರಣ ನಿನ್ನಯ
ಚಾರುಲೀಲೆಯನೆಂತು ಬಣ್ಣಿಪೆ ಪ

ಮೂರು ಯುಗಗಳಲಿ ಮೂರವತಾರದಿ
ಮೂರು ನಾಮಗಳಲಿ ಮೂರು ವೇಷದಲಿ
ಮೂರು ಕ್ರಮಗಳ ಮೂರು ಧರ್ಮಗಳ
ಮೂರು ಲೋಕಕೆ ತಿಳಿಸಿದ ಮೂರುತಿಯೆ ಅ.ಪ.

ಹನುಮನೆನಿಸಿ ಕೌಪೀನದಿ ತನುವಾಚ್ಛಾದಿಸಿ
ಜನರೊಳು ತನುಮನ ಬ್ರಹ್ಮಚರ್ಯ ಬೋಧಿಸಿ
ವನದೊಳು ಇನಕುಲ ರಾಮನ ವನಿತೆಯ ಶೋಧಿಸಿ
ಮನುಜನ ರೂಪದ ಹರಿಯ ಚರಿತೆಯ ಸಾಧಿಸಿ ೧

ತನುಮನಧನದಿಂದವನ ಸೇವೆಯನು
ಅನುದಿನ ಭಕುತಿಗಳಿಂದ ಮಾಡಿದಿ

ಘನ ಭಕುತಿಯ ಫಲ ಬ್ರಹ್ಮ ಪದವಿಯಂ
ದೆನಿತು ಮತವ ನೀ ಜಗಕೆ ತಿಳಿಸಿದಿ ೨

ಭೀಮನ ನಾಮದಿ ಭೂಮಿಪರುಡಿಗೆಯನೇರಿಸಿ
ಪಾಮರ ಜನರೊಳು ನಿಜ ಗಾರ್ಹಸ್ಥ್ಯರ ಬೀರಿಸಿ
ಸ್ವಾಮಿಯ ವೈರಿಗೆ ಸೋಮನಧಾಮವ ತೋರಿಸಿ
ಶ್ಯಾಮಲ ಕೃಷ್ಣನ ಪ್ರೇಮಕೆ ಸೀಮೆಯ ಮೀರಿಸಿ ೩

ಶ್ರೀಮತ ಕೃಷ್ಣನ ಅಂತರಂಗದಲಿ
ಕಾಮರಹಿತ ಭಕ್ತಿಗಳಿಂ ಮೆಚ್ಚಿಸಿ
ಪ್ರೇಮದ ಫಲವಿದು ನೋಡಿರೆಂದು ಜನ
ಸ್ತೋಮಕೆ ತಿಳುಹಿದ ಭೀಮ ಮಹಾತ್ಮಾ ೪

ಭೂಸುರ ಮಧ್ವರ ಹೆಸರಿಲಿ ಶಾಟಿಲಿ ರಾಜಿಸಿ
ವ್ಯಾಸರ ಶಾಸನ ಸಾರಸ ನ್ಯಾಸವ ಯೋಜಿಸಿ
ಸಾಸಿರನಾಮದ ಶ್ರೀಶನ ದಾಸ್ಯವನಾರ್ಜಿಸಿ
ಭಾಸುರ ಗದುಗಿನ ವೀರನಾರಾಯಣ
ನ್ಯಾಸದಿಂ ಬಹುಸರಳ ಭಾಷೆಯಲಿ
ಈಶ ಜೀವಿಗಳ ತರತಮ ತಿಳಿಸುತ
ಲೇಸಿದು ಮೋಕ್ಷಕ್ಕೆಂದು ತಿಳುಹಿದಿ ೫

## ೩೯೪

ಹರಿಯನ್ನು ಒಲಿಸಿಕೊಡೋ ಮಾರುತಿರಾಯಾ
ಹರಿಯನ್ನು ಒಲಿಸಿಕೊಡೊ ಪ

ಹರಿಯನ್ನು ನಿನ್ನದೆ ಪರಿ ಮುಖದಿಂದಲೆ
ಸರುವರು ಕಾಣಬೇಕೆಂಬರು ನೋಡೋ ಅ.ಪ.

ಪರಮಭಕ್ತ ನೀನೆಂದೂ ಎಂದೆಂದೂ
ಹರಿಯ ಮೀರನೆಂದು ಒರೆವರು ಮನದಂದು

ಮೊರೆಯು ನನ್ನದು ಇಂದು
ಹರಿಗೆ ನಿವೇದಿಸು ಕರುಣಾಸಿಂಧು ೧

ಒಡೆಯ ರಾಮಗೆ ನೀ ದೂತ ಎಂದಿಗೂ ಆತ
ನಡೆಸುವ ನಿನ್ನ ಮಾತ
ಬಡವ ನಾನೊಬ್ಬನು ಕಡು ಕರುಣೆಯ ಭಿಕ್ಷೆ
ಕೊಡು ಎಂದು ಬೇಡುವೆನೆಂದು ನೀ ತಿಳಿಸುತ ೨

ಹಾಯಗೊಡರು ಜೀಯಾ ಬಾಗಿಲದಲಿ
ಕಾಯುವ ಜಯ ವಿಜಯಾ
ಶ್ರೀಯರಸನ ಕಾಂಬುಪಾಯವ ಕಲಿಸಿ
ಬಡಪಾಯೆನಗೆ ನೀ ನೀಡುತ ಕಯ್ಯಾ ೩

ಸದಯನೆ ಕರುಣ ಬಂತೆ ಸಂಸಾರದಿ
ಕುದಿಸುವದೆನ್ನ ಚಿಂತೆ
ಗದುಗಿನ ವೀರನಾರಾಯಣನೆನ್ನೊಳು
ಸದಾಕಾಲದಿ ಹೃದಯದಿ ನಿಲುವಂತೆ ೪

## ೩೯೫

## ಹನುಮ

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಅಂಜನೆಯ ಕುವರಂಗೆ ಭಿಂಜನನ ಪುತ್ರಂಗೆ
ಪಂಜುಗದಿರನ ನುಂಗೆ ಅಂಜದಲೆ ಜಿಗಿದಂಗೆ
ಕಂಜಾಕ್ಷ ಶ್ರೀರಾಮ ದೂತಂಗೆ ಹನುಮಂಗೆ
ಸಂಜೀವಿನಿಗೆ ಮುಖ್ಯ ಪ್ರಾಣ ದೇವಂಗೆ ೧

ಕಾನನದಿ ರಾಮನಿಗೆ ತಾನಾದ ಭೃತ್ಯಂಗೆ
ದಾನವನ ಲಂಕೆಯನು ಸೂರೆಗೊಂಡವಗೆ

ಜಾನಕಿಯ ಸುದ್ದಿಯನು ತಂದುರುಹಿದಾತಂಗೆ
ವಾನರ ಪ್ರಮುಖನಿಗೆ ಧೀರ ಮಾರುತಿಗೆ ೨

ದುಷ್ಟರನು ಶಿಕ್ಷಿಸುತ ಕಷ್ಟಗಳ ಪರಿಹರಿಸಿ
ತುಷ್ಟಿಕೊಡುವಾತನಿಗೆ
ಸೃಷ್ಟಿಯಲಿ ಸಕಲ ಜನ ಪೂಜ್ಯನಿಗೆ ಮಹಿಮನಿಗೆ
ಶ್ರೇಷ್ಠ ಗದುಗಿನ ವೀರನಾರಾಯಣನ ಪ್ರೀಯಂಗೆ ೩

## ೩೯೬

### ಸರಸ್ವತಿ

ಕಮಲಭವನ ಪ್ರಿಯ ರಾಣಿ ಪ

ವಿಮಲಮತಿಯ ನೀ ಕರುಣಿಸು ಜಾಣೆ ಅ.ಪ.

ಅಂತರಂಗದ ತಂತಿಯ ಮಿಡಿಸೌ
ನಿಂತು ಜಿಹ್ವೆಯಲಿ ಹರಿ ಗುಣ ನುಡಿಸೌ
ಕಂತುಜನಕನ ದಯವನು ಕೊಡಿಸೌ
ಸಂತತ ಶಾರದೆ ವೀಣಾ ಪಾಣಿ ೧

ವಿವಿಧ ಭಾಷೆಗಳೊಡತಿಯಾಗಿ ಬಲು
ವಿವಿಧ ಬಣ್ಣಗಳ ಕಣ್ಣೊಳು ಹೊಳೆಯಲು
ಪವಣಿಸಿ ಗರಿಗಳ ಪಸರಿಸಿ ಕುಣಿಯಲು
ನವಿಲನೇರುವ ಪನ್ನಗ ವೇಣಿ ೨

ಪ್ರೇರೆರಿಸರ್ಥಗರ್ಭದ ನುಡಿಗಳನು
ತೋರಿಸು ಪದ್ಯವ ರಚಿಪ ರೀತಿಯನು
ಚಾರು ಚರಣಗಳಿಗೆರಗುವೆ ಗದುಗಿನ
ವೀರನಾರಾಯಣನ ಸೊಸೆಯೆ ಸುವಾಣಿ ೩

## ೩೯೭

### ಶಿವ

ಕರುಣಿಸಯ್ಯ ಚಂದ್ರಶೇಖರ ನೀನೆನ್ನೊಳೊಲಿದು ಪ

ಕರುಣಿಸಯ್ಯ ಭವದ ತಾಪ ಹರಣ ಮಾಡು ನಿನ್ನ ದಿವ್ಯ
ಚರಣಗಳಿಗೆ ನಮಿಪೆನುರಗಾಭರಣ ಶರಣು ಶರಣು ಶರಣು ಅ.ಪ.

ಕಾಳಭೈರವ ಶಂಭು ಶಂಕರ ಗಿರಿಜೆಯಾಣ್ಮ
ಕೇಳು ಕೇಳು ನಿನ್ನ ಕಿಂಕರ
ಹೂಳಿ ಷಡ್ರಿಪುಗಳನು ಮನದಲಿ
ಊಳಿ ನಿಜಜ್ಞಾನವನು ಸಜ್ಜನ
ರೋಳಿಯಲಿ ನಿಲಿಸುತ್ತ ನಿತ್ಯದಿ
ಬಾಳಿ ತಾಳಿ ಎನುವಂತೆ ೧

ನಂಟನಯ್ಯ ಭಕ್ತ ಜನಕೆ ಇನ್ನು ಮಿತಿ
ಯುಂಟೆ ನಿನ್ನಯ ಕರುಣಲಹರಿಂಗೆ
ಎಂಟು ದಿಕ್ಕನು ಸುಡುವ ವಿಷವನು
ಕಂಠದಲಿ ಧರಿಸಿ ಜಗತ್ತಿನ
ಕಂಟಕವನು ಪರಿಹರಿಸಿದಂಥ
ಬಂಟ ನೀನೈ ಮಹಾದೇವಾ ೨

ಮೂರು ಊರುಗಳನು ಸಂಹಾರಾಮಾಡಿ ಉಳಿಸಿದಿ
ಘೋರ ಸಂಕಟದಿಂದ ಜಗಪೂರ
ಸೂರಿ ಬೊಮ್ಮನ ಮತ್ತೆ ಗದುಗಿನ
ವೀರನಾರಾಯಣನ ಕೂಡಿ
ನಾರಿ ಸತಿಯನಸೂಯಳನ್ನು
ದ್ಧಾರ ಮಾಡಿದ ರೀತಿಯಲ್ಲಿ ೩

## ೩೯೮

ಚಂದಲಾ ಪರಮೇಶ್ವರಿ ವಂದಿಸುವೆನು ಚಂದಲಾ ಪರಮೇಶ್ವರಿ ಪ

ಚೆಂದಾಗಿ ಮನಸಿಗಾನಂದ ನೀಡುವ ನಿನ್ನ
ಮುಂದೆಯೆ ಕಂದ ತಾ ಬಂದು ನಿಂದಿಹೆನವ್ವ ಅ.ಪ.

ಘನದಯಾವಂತೆ ಕಾಯೆ ಇದು ನಿನ್ನ
ಅನುಗ್ರಹವೆಂಬೆ ತಾಯೆ
ಕನಸಿನೊಳಿರಲಿಲ್ಲ ಮನಸಿನೊಳಿರಲಿಲ್ಲ
ಜನನಿ ನೀನೆ ಕರೆಸಿ ದರುಶನವಿತ್ತವ್ವ ೧

ಸನಿತೆಯೊಳ್ಬಂದು ನಿಂತು ದಯಾಮೃತವ
ಹನಿಸುವಿ ಜನರಿಂಗಿತು
ಜನರ ಪಾವನ ಮಾಡಿ ಘನ ಸಂತಸ ನೀಡಿ
ಅನುದಿನ ಜನ ಪಾಡಿ ಕುಣಿಯುವಂತೆ ಕೃಪೆ ಮಾಡೆ ೨

ಸದಯಾಮೂರ್ತಿಯು ನೀ ಸತ್ಯ ನಿನ್ನಯ ಪಾದ
ಪದುಮಕೆ ಮಣಿಯುವೆ ನಿತ್ಯ
ಗದುಗಿನ ವೀರನಾರಾಯಣನೆನ್ನಯ
ಹೃದಯದಿ ಸತತ ನಿಲುವಂತೆ ಕರುಣಿಸೌ ೩

# (ಉ) ಗುರುನಮನ

## ೩೯೯

### ಶ್ರೀ ರಾಘವೇಂದ್ರರು

ಕೋಪವೇತಕೆ ಬಂದಿತೆನ್ನೊಳು ರಾಯರೇ
ಗುರುರಾಯರೇ ಪ

ತಾಪವಿನ್ನಿದು ಮನವು ಹಿಡಿದುದು
ಪಾಪಿಯೆನ್ನನು ಕ್ಷಮಿಸಲಾರಿರ ಅ.ಪ

ಕರುವು ತಾಯನು ನೋಡಬರಲೊಡೆ
ಕರೆದುಕೊಳ್ಳದೆ ದೂಡಬಹುದೆ
ಭರದಿ ದರುಶನಕೆಂದು ಧಾವಿಸೆ
ಬರಲು ಬರಗೊಡದಂತೆ ಮಾಡಿದೆ ೧

ದ್ರೋಹ ಮಾಡಿದೆನೇನು ನಿಮ್ಮೊಳು
ದ್ರೋಹ ಮಾಡಿದುದನ್ನು ತಿಳಿಯೆನು
ದ್ರೋಹಿಯಾದಡೆ ಕ್ಷಮಿಸದೆನ್ನನು
ಸ್ನೇಹದಿಂದೆನ್ನೆತ್ತಿಕೊಳ್ಳದೆ ೨

ಹಣದೊಳಾಕೆಯನಿಟ್ಟೆನೆಂದೊಡೆ
ಹಣವು ಸಂಸಾರಿಗಗೆ ಬೇಡವೆ
ಸೆಣಸಿ ಗದುಗಿನ ವೀರನಾರಾಯಣ
ಭಕುತರ ಸಲಹದೆ ೩

## ೪೦೦

ಧನ್ಯಧನ್ಯನೊ ಶ್ರೀ ಗುರುರಾಯಾ
ಧನ್ಯ ಶ್ರೀ ರಾಘವೇಂದ್ರ ಯತಿವರ್ಯಾ ಪ

ವೀಣಾಪಾಣಿಯ ಆಣತಿಯಂತೆ
ಮಾಣದೆ ಸನ್ಯಾಸವ ಗ್ರಹಿಸಿದೆ
ವೇಣುಗೋಪಾಲನು ತಪದ ಕಾಣಿಕೆಗೆ
ಕಾಣಿಸಿಕೊಂಡನೆ ಓ ಮಾರಾಯಾ ೧

ಆ ಸುಧೆಯ ಹೊತ್ತಿಗೆಯ ಪರಿಮಳದ
ವಾಸನೆಗೆ ಬೆರಗಾದ ಸುಧೀಂದ್ರರ
ಭಾಸುರ ಕರ ಕಮಲಾಸಂಜಾತನೆ
ಏಸು ಜನ್ಮದ ಸುಕೃತವೊ ಜೀಯಾ ೨

ಉನ್ನತ ಗದುಗಿನ ವೀರನಾರಾಯಣ
ಸನ್ನಿಧಿಯೊಳು ನರಸಿಂಹನೆದುರಿನಲಿ
ಸನ್ನಿಹಿತನು ನೀನಾಗಿ ಕುಳಿತೆಯೋ
ಆದರಿಸಿನ್ನು ಸಲಿಸಲು ನಿನ್ನ ಭಕ್ತಿಯಾ ೩

## ೪೦೧

ನಾಲಗೆ ಬರದಯ್ಯಾ ಶ್ರೀ ಗುರುವರರಾಯಾ
ಪಾಲಿಸೆನ್ನೊಳು ನಿನ್ನ ಪೂರ್ಣದಯ ಪ

ನಾಲಿಗೆ ಮತಿಗಳು ತಡೆದು ನಿಂತಿಹವಯ್ಯ
ಮೇಲು ನಿಮ್ಮಯ್ಯ ನಾಮಾ ನಾ ಪೇಳೆನೆಂದರೆ ಅ.ಪ.

ಕಥೆಯ ಕಟ್ಟಿದೆ ನಾಟಕ ಪದ್ಯವ ರಚಿಸಿದೆ
ನೆಂಬಿ ಹೆಮ್ಮೆಯೊಳಿದ್ದೆ ಯತಿರಾಯಾ
ನಿನ್ನ ಸುಚರಿತೆಯ ಕಥಿಸಲು
ಗತಿಕಾಣದೆ ನಿಂತು ಬಾಯ್ಬಿಡುವೆ ಪೊರೆಯಯ್ಯಾ ೧

ಬಡವನು ಮತಿಯೊಳು ಸಿರಿಯೊಳು ಸಹ ಎನ್ನ
ಪಡಿಪಾಟಲನು ಕಡಿದು ಕಾಪಾಡೊ
ಕಡಿದೆನ್ನ ಚಿತ್ತದ ದುಗುಡವ ಕಳೆಯೆಂದು
ಪಿಡಿದು ನಿನ್ನಯ ಪಾದ ತುತಿಸುವೆನೆಂದರೆ ೨

ಸ್ಮರಿಸುವೆ ಮನದೊಳು ನಿರುತದಿ ಯತಿವರ್ಯಾ
ಶ್ರೀ ರಾಘವೇಂದ್ರರಾಯಾ
ಧರೆಯೊಳು ಪರಮ ದಾನಿಗಳ ಹಿರಿಯನೆಂದು
ಅರಿತು ನಾ ಬಂದೆನೊ ಮೂಕನಾಗಿರುವೆನೊ ೩

ಮನದೊಳಗಿರುತಿರ್ದ ಭಕುತಿ ಭಾವಗಳು
ಏನಿತೆಂಬುದನು ನೀನೇ ನೋಡಿ
ಮನಸಿನಭೀಷ್ಟವನಿತ್ತು ಕಾಯುವದಯ್ಯಾ
ಮನದೊಳು ನೆನೆಯುವೆ ಹೊರಗಾಡಲಾರದೆ ೪

ಕರುಣಾಳು ಗದುಗಿನ ವೀರನಾರಾಯಣ
ಹರನೆ ಕಳುಹಿಸಿದನೆಂದು ನಾನಿಲ್ಲಿ ಬಂದೇ
ವರ ನಿನ್ನ ಚರಣವೂ ದೊರೆಯೆ ನಾ ತುತಿಸಲು
ಸರಿಯಾದ ನುಡುಗಳ ಕರುಣಿಸು ೫

## ೪೦೨

### ಕುಮಾರವ್ಯಾಸ

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ

ಮಂಗಳಂ ವೀರನಾರಾಯಣನ ಭಕ್ತಂಗೆ
ಮಂಗಳಂ ಶಿವನಂಶ ದ್ರೋಣಸುತ ಶಿಷ್ಯಂಗೆ
ಮಂಗಳಂ ಕನ್ನಡದೆ ಭಾರತವನೊರೆದವಗೆ
ಮಂಗಳಂ ಯೋಗೀಂದ್ರ ಕುವರವ್ಯಾಸಂಗೆ ೧

ಶ್ರೀ ವರನ ವರದಿಂದ ಧೀರವನಶ್ವತ್ಥಾಮ
ದೆವನಾಶೀರ್ವಾದದಿಂದೆ ಸ್ಫೂರ್ತಿಯ ತಾಳ್ದು
ಭಾವಪೂರಿತ ಪದದ ಪ್ರೌಢಿಯಲಿ ಕನ್ನಡದೆ
ಓವಿ ಭಾರತ ಬರೆದ ಕವಿ ಪುಂಗವಂಗೆ ೨

ಭಾರತದ ಶಾಸ್ತ್ರಾರ್ಥದೊಗಟವನು ಬಿಡಿಸುತಲಿ
ಸಾರಿಜನರಿಗೆ ರಮ್ಯಗಮಕದಲಿ ಹೇಳಲಿಕೆ
ಭಾರತದ ಶ್ರೀ ಬಿಂದುರಾಯರನು ಪ್ರೇರಿಸಿದ
ತೋರ ಗದುಗಿನ ವೀರ ನಾರಾಯಣಂಗೆ ೩

## ೪೦೩

### ಪುರಂದರದಾಸರು

ಜಿಪುಣರ್‍ಯೆ ನೀವೆಂದು ಹೇಳಿದುದು ಸುಳ್ಳಲ್ಲ ಪ

ನಿಪುಣಮತಿ ಪುರಂದರ ದಾಸಮಲ್ಲ ಅ.ಪ.

ಘನತರದ ವೈರಾಗ್ಯ ತಳೆದು ದ್ವಿಜರಿಗೆಲ್ಲ
ಧನಕನಕ ಸಂಪತ್ತು ದಾನ ಮಾಡಿದರೆಲ್ಲ
ವನಜನಾಭನ ಸ್ತುತಿಗೆ ಶಬ್ದ ಸಂಪತ್ತೆಲ್ಲ
ಒಸೆದು ನೀವೇ ಬಳಸಿ ನನಗೇನು ಕೊಡಲಿಲ್ಲ ೧

ಖಂಜೂತನದ ಕಥೆಯನು ಹೇಳಲಾಸಲ್ಲ
ಕಂಜನಾಭನ ಮಹಿಮೆ ಬಣ್ಣಿಸುವ ನೆವದಲ್ಲಿ
ರಂಜನೆಯ ಶಬ್ದಗಳ ಸವಿದುಂಡೆಯಲ್ಲಿ
ಎಂಜಲವನುಳಿದೆನಗೆ ಕಿಂಚಿತ್ತು ಬಿಡಲಿಲ್ಲ ೨

ಕೃಪೆಮಾಡಿ ಕ್ಷಮಿಸುವುದು ವಿಮಲ ಭಕ್ತಿಗಳಿಂದ
ಜಪತಪದಿ ಕನ್ನಡದ ನಿಮ್ಮ ಭಾರತಮಲ್ಲ
ಕೃಪಣವತ್ಸಲ ಗದುಗು ವೀರನಾರಾಯಣನ
ಸಫಲ ಜ್ಞಾನವ ಗಳಿಸಿ ನಮಗೇನು ಕೊಡಲಿಲ್ಲ ೩

## ೪೦೪

### ಕನಕದಾಸರು

ಕನಕಾ ನಿನ್ನ ಕೆಣಕಿ ನಾನು ತಿಣಕಲಾರೆನೊ
ಕ್ಷಣಕು ಕ್ಷಣಕು ತಿಣಿಕಿ ತಿಣಿಕಿ ದಣಕೊಲಾರೆನೊ
ಅಡಿಗಡಿಗೊಗೆದ ಮುಂಡಿಗೆಯನು ಒಡಿಯಲಾರೆನೊ
ಒಡೆಯಲು ದುಡುಕಿ ದುಡುಕಿ ದಣಿವನು ತಡಕೊಲಾರೆನೊ ೧

ಒಡೆಯ ದೇವನೆಂದಟ್ಟಿದ ಕುನಕವ ಮುಟ್ಟಿಲಾರೆನೋ
ಮಡಿಯ ದೇವರೆಂದೊದಗಿಸಿದುರಗನ ಬಳಿಯ ಸಾರೆನೋ

ಪಾತ್ರೆಯ ಒಳ ಮೈಯ್ಯ ಮಾತ್ರ ತೊಳೆದುದು ತಿಳಿಯಲಾರೆನೋ
ಗೋತ್ರವ ಕೇಳಿ ಸುಸೂತ್ರದೊಳುತ್ತರ ಪಡೆಯಲಾರೆನೋ ೨

ಅದಕೊ ಇದಕೊ ಯಾವುದಕೊ ನಾ ಕೆದಕಲಾರೆನೊ
ಗದುಗಿನ ವೀರನಾರಾಣನ ಮರೆಯಲಾರೆನೊ ೩

## (ಊ) ಆತ್ಮನಿವೇದನೆ

### ೪೦೫

ಇಟ್ಟಂತೆ ಇರುವೆನೊ ಹರಿಯೇ ನೀನು
ಕೊಟ್ಟಿದ್ದನ್ನುಣ್ಣುವೆ ಮತ್ತೇನು ಧೊರೆಯೇ ಪ

ಪಟ್ಟೆಪೀತಾಂಬರ ಕೊಟ್ಟರೆ ಉಡುವೆನು
ಬಟ್ಟೆಯಿಲ್ಲದಿರೆ ಚಿಂದಿತೊಟ್ಟು ನಾನಿರುವೆನೊ
ಮೃಷ್ಟಾನ್ನ ಭೋಜನವಿತ್ತರೆ ಉಣ್ಣುವೆ ಉ–
ಚ್ಛಿಷ್ಟಾನ್ನವನಿತ್ತನೆ ತುಷ್ಟಿಲೆ ತಿನ್ನುವೆ ೧

ಹಾಸಿಗೆ ಕೊಟ್ಟರೆ ನಾ ಮಲಗುವೆ
ಭೂಶಯನವಿತ್ತರೆ ಅಲ್ಲಿಯೆ ಒರಗುವೆ
ಆ ಶಾಲು ಕೊಟ್ಟರೆ ಹೊದೆಯದೆ ಬಿಡದಾ
ಕಾಶವ ಹೊದಿಯೆಂದರೆ ಹೊದೆಯುವೆ ಬರಿಯೆ ೨

ನೀಕೊಟ್ಟರುಂಟು ಕೊಡದಿದ್ದರೇನುಂಟು
ಬೇಕು ಬೇಡಗಳು ನಿನ್ನಿಚ್ಛೆಯಾಧೀನ
ಲೋಕೇಶ ಗದುಗಿನ ವೀರನಾರಾಯಣ
ಸಾಕು ಬಿಡಿಸಯ್ಯ ನರಜನ್ಮದ ಗಂಟು ೩

### ೪೦೬

ಈಸಲು ಬಿಡು ನನ್ನ ಹರಿ ಘನ್ನ ಪ

ಮೀಸಲು ಭಕುತಿಯ ರಸಜಲ ನಿಧಿಯಲಿ ಅ.ಪ.

ಏನು ತಿಳಿಯದವನಾಗಿ ನೀಗುಟ್ಟು
ಜ್ಞಾನದ ಸಿಂಗಡಿ ಸಂಗಡ ಕೊಟ್ಟು
ಧ್ಯಾನದ ಪಾಶದ ಬಿಗಿಲಿಯಲಿ ಕಟ್ಟು
ಶ್ರೀನಿವಾಸನೇ ನೀ ದಯವಿಟ್ಟು ೧

ಭವಸಾಗರವನು ದಾಟಿಸಬಲ್ಲ
ನಾವಿಕ ನೀನಿಲ್ಲದೆ ಯಾರಿಲ್ಲ
ಹವಣಿಸಿ ನಿನ್ನನೆ ನಂಬಿಹೆನಲ್ಲ
ತವಕದಿ ಮನ್ನಿಸಿ ದೀನನ ಸೊಲ್ಲ ೨

ಬಿನ್ನಪ ನನ್ನನು ದಯದಿಂದಾಲಿಸು
ಸನ್ನುತ ಗದುಗಿನ ವೀರನಾರಾಯಣ
ಎನ್ನೊಳು ನೀ ದಯಪಾಲಿಸು ೩

## ೪೦೭

ಎಂಥ ಪಾಪವನು ಮಾಡಿರುವೆನೋ ಶ್ರೀಹರಿಯೇ
ಇಂಥ ದುರ್ದೆಸೆಗೆನ್ನ ಎಳೆತಂದು ಬಿಡಲಿಕ್ಕೆ ಪ

ಉದಯ ಕಾಲದೊಳೆದ್ದು ಉದರ ಪೋಷಣೆಗಾಗಿ
ಹದವನರಿಯದೆ ಬಳಲಿ ಅಂತಿಂತು ಬಡೆದಾಡಿ
ಬದುಕು ತಂದೊಡಲ ಹೊರಕೊಂಡು ಸಲೆನನ್ನ
ಪದವ ನೆನೆಯಲು ಸ್ವಲ್ಪ ಸಹ ವೇಳೆ ಸಿಗದಂತೆ ೧

ಹಿಡಿದ ಕಾರ್ಯಗಳೆಲ್ಲ ಬಿಡದೆ ನಿಷ್ಫಲವಾಗಿ
ಒಡವೆ ಇಲ್ಲದ ಬರಿಯ ಒಡೆತನಕೆ ಅಣಿಮಾಡಿ
ಮಡದಿ ಮಕ್ಕಳ ಬಿರುಸು ನುಡಿಗೇಳಿ ಮನನೊಂದು
ಸುಡುಬಾಳ್ವೆ ಇದನೆಂದು ಮುಡುಕುವಂದದು ಗೈಸಿ ೨

ನಂಬಿದವರನು ಹರಿಯು ಬೆಂಬಿಡನು ಎಂದೆಂದು
ಎಂಬ ಬಿರುದನು ತೊರೆದು ಇಂಬುಗೊಡದಿರಲಿಕ್ಕೆ
ಅಂಬುಜಾಕ್ಷನೆ ನಿನಗೆ ಸಂಬಂಧವಿರದೇನು
ಹಂಬಲಿಪ ದುಃಸ್ಥಿತಿಗೆ ತುಂಬ ತಂದಿಡಲಿಕ್ಕೆ ೩

ಅಣುಗರಿಗೆ ಉಣಿಸಲಿಕೆ ಹಣವೆತ್ತ ಗಳಿಸಲಿ
ಫಣಿಶಯನ ನಿನಗಿನ್ನು ಗುಣವೆತ್ತ ತೋರಿಸಲಿ

ಮಣಿಗಳನು ಎಣಿಸುತ್ತ ಪ್ರಣವೆತ್ತ ಧೇನಿಸಲಿ
ಹಣಿವ ಭವದೊಳು ಸಿಲುಕಿ ಕ್ಷಣವು ಸಹ ಸಿಗದಾಯ್ತು ೪

ಬಾಳಿನೊಳು ಸೌಖ್ಯವೇ ಆಳವೈಶ್ವರ್ಯವೆ
ತೋಳಿನೊಳು ದಾರ್ಢ್ಯವೆ ಚಿತ್ತದೊಳು ಸ್ಥೈರ್ಯವೆ
ಹೇಳು ಗದುಗಿನ ವೀರನಾರಾಯಣನೆ ಮಣಿವೆ ೫

## ೪೦೮

ಏನು ಮಾಡಿದೆ ಮೂಢಮನುಜಾ
ಮಾನವ ಜನುಮದಿ ಬಂದೀ ಜಗದೀ ಪ

ದೇಶದ ಸೇವೆಗೆ ತನು ನೀಡಿದೆಯಾ
ಭಾಷೆಯ ಏಳ್ಗೆಗೆ ಮನ ಮಾಡಿದೆಯಾ
ಕಾಸಿಗಾಗಿ ವಂಚಿಸಿ ನಿನ್ನೊಡಲಿನ
ಪೋಷಣೆಗಾಗಿ ದುಡಿದೆಯಲ್ಲದೆ ೧

ಆರ್ತರ ದುಃಖವನೀಡಾಡಿದೆಯಾ
ಸ್ವಾರ್ಥದ ಹಂಬಲ ಬಿಟ್ಟು ನಡೆದೆಯಾ
ಪೂರ್ತಿಯಾಗಿ ಜನಹಿತ ನೋಡಿದೆಯಾ
ಧೂರ್ತತನವ ಬರಿದೆ ತೋರಿದೆಯಲ್ಲದೆ ೨

ಮದಮತ್ಸರಗಳ ನೆಲಕೆ ಬಡೆದೆಯಾ
ಹೃದಯ ನಿರ್ಮಲಗೊಳಿಸಿ ನುಡಿದೆಯಾ
ಮುದದಿ ಗದುಗಿನ ವೀರನಾರಾಯಣನ
ಪದವನೊಮ್ಮೆಯಾದರೂ ಸ್ಮರಿಸಿದೆಯಾ ೩

## ೪೦೯

### ಲಾವಣಿ

ಖೋಡಿಮನಸು ಇದು ಓಡಿ ಹೋಗುತದ
ಬೇಡೆಂದರು ಕೇಳದು ಹರಿಯೆ

ಜೋಡಿಸಿ ಕೈಗಳ ಬೇಡಿಕೊಂಬೆ ದಯಮಾಡಿ
ಹಿಡಿದು ಕೊಡು ನರಹರಿಯೆ ಪ

ಗಾಡಿಕಾರ ನಿನ್ನ ಮೋಡಿಯ ಮೂರ್ತಿಯ
ಕೂಡಿಸಿ ಪೂಜಿಸಲಘ ಹರಿಯೆ
ದೂಡುತ ಹೃದಯದ ಗೂಡಿನೊಳಗೆ ಸ್ಥಿರ
ಮಾಡಲು ಹದವನು ನಾನರಿಯೆ
ನೋಡಿಂದ್ರಿಯಗಳ ತೀಡಬಲ್ಲೆ ಮನ
ತೀಡುವ ಯತ್ನವು ಬರೆಬರೆಯೆ
ಬೇಡಬೇಡವೆಂದಾಡುವೆನೆ ನಿನ್ನ
ನೋಡುವುದೆಂತೈ ಜಗದೊರೆಯೆ
ಕೋಡಗನಂತಿದು ಕಿಡಿಗೇಡಿ ಜಿಗಿ
ದಾಡಿ ಪೋಗುವುದು ತ್ವರೆಮಾಡಿ
ಕೂಡಿಸದದು ಬಹುಕಾಡಿ ದಿಟಿ
ಸ್ಯಾಡಿ ನೋಡಲದು ಅಡನಾಡಿ
ಕಾಡಿಕಾಡಿ ಬಲು ಪೀಡಿಸುತಿರುವದು
ಕಾಡುವುದೇನಿದು ಈ ಪರಿಯಾ
ಜೋಡಿಸಿ ಕೈಗಳ ೧

ತುಣುಕು ತುಣುಕು ಮನಸು ಇದು ಕ್ಷಣದೊಳು ಹಿಡಿವುದು
ತಿಣಿಕಿ ತಿಣಿಕಿ ಗಡ ಇದನ್ಹಿಡಿಯೆ ಹೆಣಗಲ್ಯಾತಕೆಂದು
ಗೊಣಗುತಿಹರು
ಜನ ಗುಣ ಗೊತ್ತಿಲ್ಲಿದೆ ಗುಣ ಖಣಿಯೆ
ಗುಣರಹಿತನೆ ನಿನ್ನ ಗುಣ ನಾಮಂಗಳ
ನೆಣಿಸುತೆ ನಾಲಗೆ ತಾ
ದಣಿಯೆ ಟೊಣೆದು ನಿಮ್ಮನು ಕ್ಷಣಕ್ಷಣಕೊಂದು
ಕಣಕೆ ಹಾರುವುದು ಸುರಧರಣಿಯೆ
ಇಣಚಿಹಾಂಗೆ ಚಪಲವೋಧಣಿಯೆ
ಅಣಕಿಸಿದ್ದಾಂಗ ಕುಣಿಕುಣಿಯೆ

ಬಣಗು ಜನರು ನಮಗದು ಹೊಣಿಯೆ
ಒಣ ಮಾತಿದು ಕೇಳ್ ನಿರ್ಗುಣಿಯೆ
ಮಣಿಯದು ದಣಿಯದು ಹಣಿಯದು ತಣಿಯದು
ಟೊಣಿಯಲು ನಿನ್ನದು ಅದರಣಿಯೆ ೨

ಸ್ಪಷ್ಟ ಹೇಳುವೆನು ಚೇಷ್ಟೆಗಳದರರದುಯ
ಥೇಷ್ಟವಾಗಿ ಕಣಾ ಕಣಾ
ಶಿಷ್ಯರನೆಲ್ಲಾ ಭ್ರಷ್ಟ ಮಾಡುವುದು
ದೃಷ್ಟಿ ಇಂದೊಂದೇ ಕಾರಣ
ಎಷ್ಟು ಮಾತ್ರಕಿವರಿಷ್ಟ ನಡೆಸದಿಂದಿಷ್ಟೇ ಇದರದು ಧೋರಣಾ
ಕಷ್ಟದಿ ಹಿಡಿದಿಟ್ಟ ಅಷ್ಟು ಇಂದಿಯಕಿದೆ
ದುಷ್ಟರುಪದೇಶದ ಪ್ರೇರಣಾ
ನಷ್ಟಮಾಡೋ ಈ ಚೇಷ್ಟೆಗುಣ ಸು
ಪುಷ್ಟ ಮತಿಯ ಕೊಡೊ ಪೂರಣ
ಮುಷ್ಠಿಯೊಳಗಿಸೊ ತನುಹರಣ
ಸೃಷ್ಟಿಸ್ಥಿತಿಲಯ ಕಾರಣ
ಸೃಷ್ಟಿಯೊಳಗೆ ಉತ್ಕೃಷ್ಟ ಗದುಗಿನ
ಶ್ರೇಷ್ಠ ವೀರನಾರಾಯಣ ೩

## ೪೧೦

ನಿನ್ನವನಲ್ಲವೇನೋ ಶ್ರೀಹರಿಯೆ ನೀ
ನೆನ್ನೊಳಗಿಲ್ಲವೇನೊ ಪ

ನಿನ್ನವನಲ್ಲವೆ ನೀ ನೆನ್ನೊಳಗಿಲ್ಲವೆ
ನಿನ್ನ ಭಕುತನೆಂದು ಮನ್ನಿಸಲೊಲ್ಲೇನೊ ಅ.ಪ.

ಹೃದಯದೊಳೆಂಟುದಳ ಪದುಮವು
ಮುದದಿ ನೀನಿರುವ ಸ್ಥಳ

ಹದನವನರಿತು ನಾ ಸದಾವಕಾಲದಿ
ಸದಮಲ ಭಕುತಿಯನ್ನೊದವಿಸಿ ಸೇವಿಸೆ ೧

ಎಂಭತ್ತುನಾಲ್ಕು ಲಕ್ಷ ಜೀವನರಾಶೀ-
ಗಿಂಬಿತ್ತು ಕಾಯ್ವದ ಗೊಂಬೆಯ ಮಾಡುವ
ಬಿಂಬ ಮೂರುತಿ ನಿನ್ನ ನಂಬಿದ ನನ್ನನ್ನು
ತುಂಬ ಮರೆತೆಯೇನೋ ೨

ಗದುಗಿನನೊಳ್ಮೆರೆವ ವೀರನಾರಾಯಣ
ಪದವ ನಂಬಿರುವೆ ಪೂರಾ
ವಿಧವಿಧ ಪರಿಕಿಸು ಬದುಕಿಸು ಮುಳುಗಿಸು
ಬೆದರಿಸು ಕರುಣಿಸು ಕದಲಲೊಲ್ಲೆನು ದೇವಾ ೩

## ೪೧೧

ಬುಗುರಿ ಆಡೋ ತಮ್ಮ ಬುಗುರಿ ಆಡೊ ಪ

ಬಗೆ ಬಗೆ ಜನುಮದಿ ತಿರುಗಿ ತಿರುಗಿ ಬಂ
ದೊದಗತನದನುಭವ ಪರಿಕಿಸಿ ನೋಡೊ ಅ.ಪ.

ತನುವೆಂಬುದೆ ಕೊರಡಿನ ತುಂಡು
ದಿನದ ಕರ್ಮವೆ ಕೊನೇರು ದುಂಡು
ಮನವೆಂಬುವ ಮೊಳೆಯನು ಚುಚ್ಚಿಕೊಂಡು
ಘನ ಹರುಷದಿ ಕರದಲಿ ಕೊಂಡು ೧

ಭವವೆಂಬುದೆ ನಿನ್ನ ಜಾಳಿಗೆ ನೋಡೋ
ತವಕದಿ ಬಿಡದಲೆ ಬಿಗಿಗಿಸುತ್ತ್ಯಾಡೋ
ಸವಿಯನುಂಡು ನೀ ಹರಿಯನು ಬೇಡೊ
ಜವದಲಿ ಝಾಡಿಸಿ ಭರದಿ ಬೀಸಾಡೊ ೨

ಧರೆಯ ಗದುಗಿನ ವೀರನಾರಾಯಣನ
ಚರಣದಿ ಮೊಳೆಯೂರಿ ತಿರುಗುತಲಾಡೊ
ಕರಣಗಳಳೆದು ಏಕ ಚಿತ್ತದಿ
ಸ್ಮರಿಸುತ ನಿಂತು ನಿದ್ದೆಮಾಡೊ ೩

## ೪೧೨

ಬೇಡೆಲೊ ಜೀವಾ ಜನಿಸಲೆ ಬೇಡೋ ಪ

ಬೇಡ ನಿಜಸುಖ ದೊರೆಯದು ನೋಡೋ ಅ.ಪ

ಹೆಣ್ಣೋ ಗಂಡೋ ಆಗಿ ಮೆರೆಯುವೆ
ಮಣ್ಣು ಹೊನ್ನಿಗೆ ನೀ ಹಾತೊರೆಯುವೆ
ಉಣ್ಣುತ ಪ್ರಾರಬ್ಧವ ಬಾಯ್ದೆರೆಯುವೆ
ಹಣ್ಣಾಗುವೆ ನೀ ಪರೀಕ್ಷೆ ಮಾಡೊ ೧

ಆರು ಹಗೆಗಳು ಗಡ ಮುತ್ತುವವೊ
ಮೂರು ತಾಪಗಳು ಕಡು ಹೊತ್ತುವವೊ
ನೂರೊಂದೊಗಟಗಳಿರದೊತ್ತುವವೊ
ಪಾರಾಗಲು ಬಿಡವೆಂದಿಗು ಕೇಡೋ ೨

ಹುಟ್ಟು ಸಾವುಗಳ ಸುಳಿಯಲಿ ಸುತ್ತುವೆ
ಒಟ್ಟು ಮರಳಿ ಸಂಚಿತವನು ಬಿತ್ತುವೆ
ಗಟ್ಟಿಸಿ ಗದುಗಿನ ವೀರನಾರಾಯಣನೆ
ಹುಟ್ಟಿಸಬೇಡೆಂದಿಚ್ಛಿಸಿ ಬೇಡೋ ೩

## ೪೧೩

ಮದಾಂಧನೋ ನಾನು ಮಧುಸೂದನ ಪ

ಜಗವನು ತುಂಬಿದ ತ್ರಿಗುಣಾತ್ಮಕನೆ
ತೆಗೆದು ಕಣ್ಗಳ ನೋಡದ ನಾನು ೧

ಪವನನೊಡೆಯ ನಿನ್ನ ಸವಿಸವಿ ಸ್ತವಕೆ
ಕಿವಿಗೊಡದೆ ಕಿವುಡನಾದೆನಾ ೨

ಎಡೆಗಿದ್ದರು ಗಡ ಅಡಗಿಹನಿಲ್ಲೆಂದು
ಹುಡುಕುತ ಕೇಳುವ ಜಡಮತಿ ನಾನು ೩

ಗದುಗಿನ ವೀರನಾರಾಯಣನೆ ಎನ್ನ
ಎದೆಯೊಳು ನಿಂತಿರೆ ನೋಡದ ನಾನು ೪

## ೪೧೪

ಮನವೆ ನೀ ಸ್ಥಿರವಾಗಿ ಹರಿಯ ಪಾದಾಂಬುಜ_
ವನು ಸೇರಿ ಅಲ್ಲಿಯೆ ನಿಲ್ಲಯ್ಯ ಬಿಡದೆ ಪ

ಅನುದಿನ ಸೇವಿಸಲನುವಾಗುದಯ್ಯಾ
ಘನ ಚಂಚಲ ನೀನು ಎಚ್ಚರ ಎಚ್ಚರ ಅ.ಪ.

ಅಲ್ಲಲ್ಲಿ ಇಲ್ಲೆಂದು ಎಲ್ಲೂ ಹುಡುಕಲು ಬೇಡ
ಎಲ್ಲೆಲ್ಲ್ಯೂ ಇರುವ ಶ್ರೀವಲ್ಲಭನು
ಬಲ್ಲವರಾಡುವ ಸೊಲ್ಲನು ಲಾಲಿಸು
ಖುಲ್ಲನೆಂಬುವ ನಿಂದೆಗೀಡಾಗಬೇಡಾ ೧

ಸದುಗತಿಯ ಕೊಡುವ ಶ್ರೀ ಪದುಮನಾಭನ ಪಾದ
ಪದುಮದಿ ಮಧುರ ನಾಮಾಮೃತ ಸವಿಯುತ
ಮುದದಿ
ಸದನವ ಬಿಡದೆ ಸುತ್ತಾಡುತ್ತಲಿರು ನಿತ್ಯ ೨

ಧ್ಯಾನದ ದಾರದಿಂ ಜಪವೆಂಬ ಗಂಟಿರಲಿ
ಶ್ರೀನಿವಾಸನ ಪಾದವೆಂಬ ಗೂಟಕೆ ಕಟ್ಟಿ
ಮೌನದಿಂ ಕಟ್ಟಿಸಿಕೊಂಡಲ್ಲೇ ಸುಳಿದಾಡು
ಸ್ಥಾನವ ಬಿಟ್ಟನ್ಯನಿಟ್ಟಿಗೆ ಪೋಗದೆ ೩

ಸಕಲರ ಪಾಪವ ತೊಳೆದು ಪಾವನಗೈದು
ಮುಕುತಿಯ ದಾರಿಯ ತೋರುವ ನದಿಗಂಗೆ
ಪ್ರಕಟವಾಗಿರುವಂತೆ ಚರಣದೊಳುರುಳಾಡು
ಭಕುತಿಯ ಬೇಡು ನೀ ಪ್ರತಿದಿನ ನೋಡು ೪

ಗದುಗಿನ ವೀರನಾರಾಯಣಗೂ ನಿನಗೂ
ಹೃದಯವೆ ಮಂದಿರವಲ್ಲವೆ ದೀಪದ
ಕದಿರಂತ ಚಾಚುತ ಪೋಗಿಬರುವದೇತಕೆ
ಸದನವ ಬಿಡದಲ್ಲೇ ಹರಿಯನು ಸೇವಿಸು ೫

## ೪೧೫

ರತ್ನವ ದೊರಕಿಸಿರೊ ಬಹಳ ಪ್ರಯತ್ನದಿಂದ ರಕ್ಷಿಸಿರೊ ಪ

ಕತ್ತಲೆ ತುಂಬಿದ ಕತ್ತಲೆಗೂಡೊಳು
ಸುತ್ತಲು ಬೆಳಗಿಸಿ ಝುಗಝುಗಝುಗಿಸುವ ಅ.ಪ.

ಜ್ಞಾನದ ಖಣಿಯಿಂದಲಗೆದು ಮನಸಿನ
ಹೀನ ಕಸವನೆಲ್ಲ ತೆಗೆದು
ಧ್ಯಾನ ಕುಂದಣದಿಂದ ಘಟ್ಯಾಗಿ ಬಿಗಿದು
ಮಾನಸ ಭಾಂಢಾರದೊಳಗಿಡಲು ಬಗೆದು ೧

ಬೆಲೆ ಇದಕೆ ಒಂದೇ ಲಕ್ಷ ಕೊಟ್ಟರೆ
ಸುಲಭವೊ ನಿಮಗೆ ಪರೋಕ್ಷ
ಒಲಿದೊಗೆವುದು ತಾನು ಕಿರಣಕಟಾಕ್ಷ
ನಿಲುವಿಗೆ ಬೇಕಾದ ಅಳತೆಗೆ ಬರುವ ೨

ತೇಜದಿ ಕೋಟಿಸೂರ್ಯರ ಮಿಕ್ಕುವ ನಿತ್ಯ
ಭಾಜಕ ಜನರಘರಾಶಿಯ ಮುಕ್ಕುವ
ಓಜದೆ ಮನಕಾನಂದವನಿಕ್ಕುವ
ಗದುಗಿನ ವೀರ ನಾರಾಯಣನೆಂಬುವ ೩

## ೪೧೭

ರಾಯ ಕೇಶವ ಚರಣಕೆರಗುವೆನು ಕಾಯೊ ಮಾಧವ ಪ

ಮಾಯಾ ಪ್ರಪಂಚದಿ ಬಾಯಾರಿ ಬಳಲುತಿಹೆ
ತೋಯಜಾಕ್ಷನೆ ನೀ ಕಾಯೊ ಮಾಧವ ಅ.ಪ.

ಪಾರುಗಾಣೆನಯ್ಯ ಸಂಸಾರ ಬಂಧನದಿಂದ ನಾನು
ಸಾರಾಸಾರಾ ವಿಚಾರವಿಲ್ಲವೊ ಗಡ ತೀರ ಅಲ್ಪನು ತಿಳಿ ೧

ಜ್ಞಾನಹೀನನಾಗಿ ನಿನ್ನ ಧ್ಯಾನಮಾಡದಾದೆ ನಾನು
ಮಾನಾಪಮಾನಕ್ಕೆ ನೀ ಹೊಣೆಗಾರನು ದೀನಜನಪಾಲಕನೆ ೨

ಆರು ಹಗೆಗಳೆನ್ನ ಮೈಯ್ಯ ಸೇರಿ ನಿನ್ನ ಭಜಿಸಗೊಡರು
ಬಾರೊ ನೀ ದಯವನು ತೋರೊ ಗದುಗಿನ ವೀರನಾರಾಯಣನೆ ೩

## ೪೧೮

ಶರಣು ಬಂದೆನೊ ಹರಿಯೆ ಶರಣು ಬಂದೆನೊ ಪ

ಕರುಣದಿ ನೋಡೆನ್ನ ಸಲಹು ಎಂದೆನೊ ಅ.ಪ.

ಜನನ ಮರಣ ಸುಳಿಗಳಲಿ ತೊನೆದು ಬಳಲಿ ನೊಂದೆನೊ
ಘನಭವದಲಿ ಮೂರುತಾಪಗಳಲಿ ಸಿಲುಕಿ ಬೆಂದೆನೊ ೧

ಧನಕೆ ಮೆಚ್ಚಿ ನಿನ್ನ ಮರೆತು ಕಹಿಯ ಫಲವ ತಿಂದೆನೊ
ಅನುದಿನ ಘನ ಚಿಂತೆಯಿಂದ ಮನದ ಶಾಂತಿ ಹೊಂದೆನೊ ೨

ವನಿತೆ ಸುತರು ಪೊರೆವರೆಂಬ ಭ್ರಮದೊಳಾತ್ಮ ಕೊಂದೆನೊ
ಕೊನೆಗೆ ಗದುಗು ವೀರನಾರಾಯಣನೆ ಗತಿಯೆಂದೆನೊ ೩

## ೪೧೯

ಹೊಸಕಣ್ಣು ಎನಗೆ ಹಚ್ಚಲಿಬೇಕು ಜಗದಂಬ  ವಸುದೇವ ಸುತನ
ಕಾಂಬುವೆನು  ಘಸಣಿಯಾಗುವೆ ಭವ ವಿಷಮ ವಾರಿಧಿಯೊಳಗೆ
ಶಶಿಮುಖಿಯೆ ಕರುಣದಿ ಕಾಯೆ
ಪ

ಪರರ ಅನ್ನವನುಂಡು ಪರರ ಧನವನು ಕಂಡು  ಪರಿಪರಿ
ಕ್ಲೇಶಗಳುಂಡು  ವರಲಕ್ಷ್ಮೀ ನಿನ್ನ ಚಾರುಚರಣವ ಮೊರೆ ಪೊಕ್ಕೆ
ಕರುಣದಿ ಕಣ್ಣೆತ್ತಿ ನೋಡೆ
೧

ಮಂದಹಾಸಿಯೇ ಭವಸಿಂಧುವಿನೊಳಗಿಟ್ಟು  ಛಂದವೇ ಎನ್ನ
ನೋಡುವದು  ಕಂದನಂದದಿ ಬಾಲ್ಯದಿಂದ ಸೇರಿದೆ ನಿನ್ನ
ಮಂದರಧರನ ತೋರಮ್ಮ
೨

ಅಂದಛಂದಗಳೊಲ್ಲೆ ಬಂಧು ಬಳಗವ ವಲ್ಲೆ ಬಂಧನಕೆಲ್ಲ ಇವು
ಕಾರಣವು  ಇಂದಿರೇಶನ ಪಾದದ್ವಂದ್ವವಾ ತೋರಿ ಹೃನ್ಮಂದಿರದೊಳು
ಬಂದು ಬೇಗ ೩

## ೪೨೦

ನಂಬಿದೆ ನಮ್ಮಮ್ಮನ  ನಂಬಿದೆ ನಂಬಿದೆ ನಮ್ಮಮ್ಮ  ಅಂಬುಜಾಸನ
ವಾಯು ಶಂಭುಮುಖಾಮರ ಕದಂಬಕರಾರ್ಚಿತೆ ನಂಬಿದೆ ನಮ್ಮಮ್ಮನ ಪ

ಕರವೀರದೊಳಗಿರುತಿಹಳು  ದಿವ್ಯ  ಕಿರಣ ಕಾಂಚನ ಪೀಠ ಸ್ಥಿತಳು
ಸುರತರುಣಿ ಸಂಘದಿ ಸೇವಿತಳು  ಅಹ  ಹರಿಯ ವಕ್ಷದಿ ಕೂತು
ಕರುಣ ಕಟಾಕ್ಷದಿ  ಪರಿವಾರಜಗಕೆಲ್ಲ ಸುರಿಸುವಳು ಸುಖವನ್ನು ೧

ಕರದಿ ಕಂಕಣ ತೋಡೆ ಬಳೆಯು ನಾಗ ಮುರಿಗಿ ವಂಕಿಯು ಶುಭ
ಸಿರಿಯು ಪಾದಾಭರಣದ ಕಲ ಕಲ ಧ್ವನಿಯು ಆಹ ಕರುಣದಿ ವಾಲಿ
ಕಂಠದ ಸರ ಸರಿಗಿಯು ಪರಮ ಮೇಖಳಕಟಿ ೨

ಮುಖವ ನೋಡಲು ಸೋಮ ಬಿಂಬ ದಿವ್ಯ ಚಿಕುರವು ಭ್ರಮರ
ಕದಂಬ ನಾಸ ಮುಖರ ಮಣಿಯು ರವಿ ಡಿಂಬ ಅಹ ವಿಕಸಿತ
ಸುಮಾಲೆ ವಿಕ ಸರ ಫಣಿವೇಣಿ ಚಕಚಕಿತಾಭರಣ ವಿಕಳಂಕ
ಚಲಿವಿಯ ನಂಬಿದೆ ೩

ನವನಿಧಿನಾಥನ ಮಗಳು ಸರ್ವ ಭುವನಾಧಿಪತಿಯ ಸುಪ್ರಿಯಳು
ಅನುಸವನ ದುರ್ಭವ ವಿರಹಿತಳು ಅಹ ಪವನ ಮುಖಾ ಮರ
ಸ್ವಭವನ ದಾಯಕಳಾತ್ಮ ಕವನ ಮಾಡುವ ಕವಿ
ಭವನದೊಳಿರುವಳ ೪

ದೇಶಕಾಲಗಳಿಂದ ಸಮಳು ಹರಿಗಾಶುಗುಣಗಳಿಂದ ಅಸಮಳು ಸುಖ
ರಾಶಿ ಸೌಂದರ್ಯಳು ಸೌಭಳು ಅಹ ವಾಸುದೇವನ ಪುನರಾಸಿ
ಪುರೀಸಿತಿಂದಿರೇಸಶನುತ್ತಮಾಂಗದಿ ತಾ ಸುಖಿಸುವಳಂಬ
ನಂಬಿದೆ ೫

(ಪ್ರತಿ ಶುಕ್ರವಾರ ಪೂಜಾ, ಭಜನೆಗೆ ಯೋಗ್ಯವಾದ ಇಂದಿರೇಶಕೃತ)

## ೪೨೧

ಶುಕ್ಕುರವಾರದಿ ಭಕ್ತಿಲಿ ಭಜಿಸುವೆ ಲಕ್ಕುಮಿ ದೇವಿಯನು ರುಕ್ಮಾಭರಣ
ವಿ ಲಕ್ಷಣ ಶೋಭಿಸು ಲಕ್ಷಣ ಮೂರ್ತಿಯನು ರಕ್ಕಸ ರಿಪುಬಲ
ಪಕ್ಕದಿ ಕೂತಿಹ ರುಕ್ಮಿಣಿ ದೇವಿಯನು ಪ

ಸಂತತ ಭಜಿಸುವ ಸಂತರ ಹತ್ತರ ನಿಂತು ರಕ್ಷಿಸುತಿಹಳು
ಶಾಂತಳು ಸದ್ಗುಣವಂತಳು ಕಮಲಾಕಾಂತನ ಸುಪ್ರಿಯಳೂ
ಕರವೀರ ಪ್ರಾಂತದೊಳಿರುತಿಹಳು ಹೃತ್ಕಮ ಲಂತಳ
ಸಂಸ್ಥಿತಳು ೧

ಸೀತೆಯು ತ್ರಿಜಗನ್ಮಾತೆಯು ಕ್ಷೀರಧಿ ಜಾತೆಯು ಪರಮ ಶ್ರೀ ಧಾತೆಯು
ಮಾಧವ ಭೂತಿಯು ಮಂಗಳ ಮೂರ್ತಿಯು ಸುಖರಾಶಿ ೨

ಆಸ್ಯಾಂಬುಜತನು ಹಾಸ ಕುಂತಳ ಭೂಷಿತಬಿಂಬೋಷ್ಠೀ ಕೂಸಿಗೆ
ಕೊಡು ಇಂದಿರೇಶನ ಸಹ ತವ ಭೆಟ್ಟಿ ೩

## ೪೨೨

ಭೃಗುವಾರ ಬರಲಿಬೇಕು ಭಾರ್ಗವಿದೇವಿ ಭೃಗುವಾರ ಬರಲಿಬೇಕು
ಭೃಗುವಾರ ಬರಲಿಬೇಕ್ಹಗಲು ಪಾಯಸವುಂಡು ನಗುತ ರಾತ್ರಿಲಿ
ತಾಂಬೂಲಗಳ ಮೆಲ್ಲುವದಕ್ಕೆ ಪ

ನೂಪೂರ ಮುಖಭೂಷ ನೀ ಪದ ಕುಣಿಸುತ್ತ ಶ್ರೀಪತಿ ಸಹ
ಸುಖಲಾಪಗಳಾಡುತ ೧

ಕಂಕಣಮುಖ ರತ್ನಾ ಲಂಕಾರಗಳನ್ನಿಟ್ಟು ಕಿಂಕರರಿಗೆ
ಮುಖಾಲಂಕಾರತೋರುತ ೨

ಕಂಕಣರಮುಖ ಸುರಪುಂಖ ಮಧ್ಯದಿಶ್ರೀ ಮದ್ವೇಂಕಟೇಶನ
ದಿವ್ಯ ಟೊಂಕದೊಳಗೆ ಕೂತು ೩

ಪಕ್ಷಿವಾಹನದಿವ್ಯವಕ್ಷಸ್ಥಳಾಶ್ರಿತೆ ಲಕ್ಷ್ಮೀ ಲೀಲಾಮೃತ
ಲಕ್ಷ್ಮೀಕೇಳುವದಕ್ಕೆ ೪

ಇಂದಿರೇಶನ ಮೃದುಸುಂದರೋತ್ಸಂಗದಿ ಪೊಂದಿ
ಭಕ್ತರಪೂಜಾನಂದ ಭುಂಜಿಪುದಕ್ಕೆ ೫

## ೪೨೩

ಶರಣು ಶರಣಮ್ಮಾ ಶರಣು ತವ ಜಾನಕಿಯೆ ಶರಣು
ಸತ್ಯಾಭಾಮಿನಿ ಶರಣು ಲಕ್ಷ್ಮಾಂಭ್ರಣಿಯೆ ಪದ್ಮಿನಿ ಶರಣು ಶರಧಿ
ಸುಖಾತ್ಮಜೆ ಪ

ಶರಣು ತವ ಚರಣಾರವಿಂದಕೆ ಶರಣು ಸುರನುತ ಜಂಘಕೆ
ಶರಣು ಕರಿಕರಭೋರು ಯುಗಳಕೆ ಶರಣು ಸಣ್ಣ ಸು
ಟೊಂಕಕೆ ೧

ಶರಣು ಬಹು ಗಂಭೀರ ನಾಭಿಗೆ ಶರಣು ಸುಸ್ತನ ಕಂಠಕೇ
ಶರಣು ಕರ ಕಣ್ಣು ಮೂಗು ಭ್ರೂಲತೆ ಶರಣು ಕರಣಾಭರಣಕೆ ೨

ಶರಣು ಸಾಲಕ ಬಿಂಬ ಭಾ (ಫಾ) ಲಕೆ ಶರಣು ಕುಸುಮಿತವೇಣಿಗೆ
ಶರಣು ಮಾಧವನಂಕ ಬಿಂಬದಿ ಮೆರೆವ ಸುಖ ಮುತ್ತೈದಿಗೆ ೩

ನಿತ್ಯಮುಕ್ತಳೆ ದೇಶಕಾಲ ಸ್ವ ಭರ್ತೃ ಸಮಜಿತೆ ಭಕ್ತಪೋಷಣೆ
ಕೃತ್ಯಕರಣಾ ಸಾರಸಾಂಡಸುಪಾಸ್ತ ಸಂಸ್ಥಿತಳೆ ನೀ ೪

ಬಲ್ಲವಳು ಮೊದಲ್ಹಿಡಿದು ನೀನತಿ ಸೊಲ್ಲು ಪೇಳುವೆ ಸ್ನೇಹದಿಂದಲಿ
ಫುಲ್ಲನಾಭನ ಪರಿಚೆ ಈಗವನಲ್ಲಿ ನೀ ಪೇಳೆ ೫

ದೇವಶರ್ಮನು ನಿನ್ನ ಚರ್ಮಾಧ್ಯಾಯದಲಿ ಸನ್ನುತಿಸಿ ಕರುಣಾ
ತೋಯಜಾಕ್ಷನ ಕಂಡು ಸುಖಿಸಿ ದುಪಾಯವ ಬಲ್ಲವನು ೬

ಸುಂದರಾಂಗಿಯೇ ಸಾರಸಾಕ್ಷಿಯೆ ಮಂದಹಾಸಿನಿ ಮಾರಮೋಹಿನಿ
ಇಂದಿರೇಶನ ಮಾನಿನಿಯೇ ತವ ಮುಂದೆ ನಿಂತಿಹೆನು ೭

## ೪೨೪

ಪೇಳುವೆ ನಿನ್ನಯ ಭಾಳು (ಬಹಳ) ಮಹಿಮೆಗಳ
ಬಾಲ ಕೃಷ್ಣನ ಹೃದಯಾಲಯದೊಳಗಿಟ್ಟು
ಆಳುವೋ ಅಗಲಾದೆ ನೀಲ ಸಾರಸ ನೇತ್ರ
ಏಳು ಎರಡು ಜಗದಾಲಯದಿ ೧

ನಾನು ನಿನ್ನಯ ತುತಿ ಏನು ಮಾಡಲಿ ತಾಯೆ
ಧೇನು ಪಾಲನು ನಿನ್ನಾಧೀನನಾಗುತ ತನ್ನ
ಧ್ಯಾನದೊಳಗೆ ನಿನ್ನ ಧ್ಯಾನ ನೀಡುತಲಿಹ
ತಾನು ನಿನ್ನನು ಬಿಟ್ಟು ಏನು ಮಾಡ ೨

ಬೇರೆ ನಿನ್ನಯ ತುತಿ ಬಾರದೋ ಮನಸಿಗೆ
ನೀರಜಾಕ್ಷನು ತನ್ನ ಸಾರ ತುತಿಗಳಲ್ಲೆ
ಮಾರ ಜನನಿ ನಿನ್ನ ಸೇರಿಸಿ ನುಡಿಸುವ
ಸಾರುವ ಮನ್ಮನೋಗಾರದಲಿ ೩

ಶ್ರೀಲಕ್ಷ್ಮೀಪತಿ ನೀನು ಆಲದೆಲಿಯ ಮ್ಯಾಲೆ
ಲೋಲನೇತ್ರಯ ಕೂಡಿ ಲೀಲೆಯ ಮಾಡುತ್ತ
ಮೂಲ ಪ್ರಕೃತಿಯಿಂದ ಬಹಳ ಸೃಷ್ಟಿಸಿ ಜಗ
ಪಾಲಿಸಿ ಹರಿಸುವಿ ಕಾಲ ರೂಪ ೪

ವರಲಕ್ಷ್ಮಿ ಹರಿಯನು ವರಣಿಸೆ ಈ ಪರಿ
ಮುರಹರ ತುತಿಯೊಳು ಇರುವುದು ತುತಿ ನಿನ್ನ
ಕರುಣನಿಧಿಯೇ ನಾನು ಮರೆಯೆನು ಎಂದಿಗೂ
ಹರಿಯ ಮುಂದೆನ್ನ ನೀನರುಹು ದೇವಿ ೫

ಅರ್ಧನಾರಾಯಣ ಅರ್ಧ ಲಕ್ಷುಮಿ ಹೀ
ಗಿದ್ದರೂಪವು ಪೂಜ್ಯ ಯಜ್ಞದೊಳಗೆ ನಿನ್ನ
ಮುದ್ದು ದಕ್ಷಿಣೆಯೆಂದು ಶ್ರದ್ಧೆಯಿಂದಲಿ ನಮ್ಮ
ವೃದ್ಧಾರು ಪೇಳ್ವರು ಶುದ್ಧಾಂತರಾಗಿ ೬

ಹರಿಯ ಎಡಕೆ ಬಲಕಿರುವಿ ನಿನ್ನೊಳು ಸ್ನೇಹ
ಬೆರಿಸುವನತಿಶಯ ಪರಮ ಪುರುಷ ಕೃಷ್ಣ
ವರುಣ ತನಯೆ ಬರುವಂತೆ ಮಾಡೆನ್ನ
ಗುರುಳು ಮುಖೆ ಚಿತ್ತ ಸರಸಿಜದಿ ೭

ದೇಶ ಕಾಲಗಳಿಂದ ನೀ ಸಮಳೀಶಗೇ
ವಾಸಮಾಡಿದಿ ವಕ್ಷದೇಶದೊಳಗೆ ಭವ
ಕ್ಲೇಶವೆಂದಿಗು ಇಲ್ಲ ವಾಸುದೇವನ ದಯ
ವೇಸು ಪೇಳಲಿ ನಿನ್ನೋಳ್ ಭೇಶ (ಚಂದ್ರ) ಮುಖಿ ೮

ಇಂದಿರೆ ನಿನ್ನಯ ಮಂದಿರ ದ್ವಾರದಿ
ಮಂದಜಾಸನ ಮುಖ ವೃಂದಾರಕರು ಎಲ್ಲ

ಸುಂದರಾಪಾಂಗದಿ ಬಂದೊಮ್ಮೆ
ನಿಂದು ಮುಗಿದು ಕರ ನಿಂದಿಹರು ೯

ನಿನ್ನ ತುತಿಸೆ ಆತನನ್ನ ತುತಿಸಿದಂತೆ
ಧನ್ಯನ ತುತಿಸಲು ನಿನ್ನ ತುತಿಸಿದಂತೆ
ಚಿನ್ನದೊಳಗೆ ರನ್ನವನ್ನು ಕೂಡಿಸೆ ಕುಂದ
ಣೆನ್ನುವರದರಂತೆ ಮನ್ನಿಪುದು ೧೦

ಸುರಮುನಿ ನೀಡಿದ ವರಪಾರಿಜಾತವ
ಕರದು ತೊಡೆಯೊಳಿಟ್ಟು ಸರಸಿಜಾಕ್ಷಿಯೆ ನಿನ್ನ
ಹರುಷದಿಂದಲಿ ಕೃಷ್ಣ ಹೆರಳಿಗೆ ಮುಡಿಸಿ ತಾ
ಸರಿಯಾರು ನಿನಗಿನ್ನು ತರುಳೆಯರು ೧೧

ಹರಿಯ ವಿಯೋಗವು ಸಿರಿಯೆ ನಿನ್ನೊಳಗಿಲ್ಲ
ಹರಿಯು ತೋರುವ ಹೀಗೆ ದುರುಳ ಮಾನ್ನವರಿಗೆ
ಸರುವ ವ್ಯಾಪಿಗಳಿಗೆ ಬರುವೊಧ್ಯಾಂಗಿದು ದೇವಿ
ಪರಮಾವಿಯೋಗಿನಿ ಹರಿಗೆ ನೀನು ೧೨

ವಾರಿಜಾಸನದೊಳು ನಾರಾಯಣನು ಸು ಕೇ
ಯೂರ ಕಂಕಣ ಸುಕೀರಿಟ ಕುಂಡಲ
ಹಾರಿ ಸೂರ್ಯ ಮಂಡಲದೊಳು ಸೇರಿ ನಿನ್ನಯ ಕೂಡಿ
ಭೂರಿ ಪ್ರಕಾಶಿಪ ಮೂರು ಲೋಕ ೧೩

ಇಂಥು ತೀರದಿ ಬಹು ಸೌಂದರ್ಯ ಸೌಭಾಗ್ಯ
ಮಂದ ಮಾದರಿ ನಿಂತ ಸುಂದರಿ ನಿನ್ನ ನೋಡೆ
ಕಂದರ್ಪ ಜನಕನು ಬಂದು ಪಾಣಿಯ ಪಿಡಿ
ದಂದು ಕೊಟ್ಟನೇ ವಕ್ಷೊಮಂದಿರವ ೧೪

ಸರುವ ಜೀವರ ಹೃತ್ಸರಸಿಜದೊಳಿಹ
ಉರು ಸೂಕ್ಷ್ಮಾಕಾಶದಿ ಬೆರಸಿ ಕೃಷ್ಣನು ನಿನ್ನ
ಎರಡಾರು ಕರಣಗಳ್ ಪರಿಚೋಧಿಪ ಇಂಥ
ಮರುಳುಗೊಂಡಿಹನಲ್ಲೆ ಪುರುಷಮಣಿ ೧೫

ಪತ್ರವ ಬರೆದಿಲ್ಲ ಮಿತ್ರತ್ವ ಮೊದಲಿಲ್ಲ
ಹತ್ತಿದಣ್ಣಗೆ ಎತ್ತೊ ವಾರ್ತೆಗಳಿಲ್ಲ
ಹಸ್ತದಕ್ಷರ ನೋಡಿ ಚಿತ್ತ ಭ್ರಮಿಸಿ ಕರ
ವೆತ್ತಿ ರಥದಿ ನಿನ್ನ ಹತ್ತಿಸಿದ ೧೬

ದುಷ್ಟ ರಾಜರು ಸೈನ್ಯ ಕಟ್ಟಿ ನಿನ್ನಯ ಬೆ
ನ್ನಟ್ಟಿ ಬರಲು ದೇವಿ ಘ ಭೆಟ್ಟಿ ಹೋಗುವಾಗೆ
ಅಷ್ಟು ರಾಜರ ಲಕ್ಷಿಲಿಟ್ಟು ನೋಡದೆ ಕರ
ಮುಟ್ಟಿದ ಹರಿ ನಿನ್ನೊಳೆಷ್ಟು ಪ್ರೀತೆ ೧೭

ಮಿಂದು ಹೇಮಾಂಬರ ಸುಂದರಾಭರಣಿಟ್ಟು
ಬಂದ ಹರಿಗೆ ತನ್ನ ಸೌಂದರ್ಯ ತೋರುತ್ತ
ನಂದ ನಂದನ ಮುಖವಿಂದು ನೋಡುವದೆಂದು
ಬಂದು ರುಕ್ಮಿಣಿ ಸಭೆ ಮುಂದೆ ನಿಂದು ೧೮

ಇಂದು ವದನದೊಳು ಬಂದು ಗುರುಳು ನಖ
ದಿಂದ ಮೇಲಕತಿದ್ದಿ ಸುಂದರ ಹರಿ ನೋಡು
ಬಂದ ರಾಜರು ಯೆಲ್ಲ ಕಂದರ್ಪವಶರಾಗಿ
ಮುಂದೆ ಬಿದ್ದರು ಮೂರ್ಛೆ ಪೊಂದುತಲೆ ೧೯

ಶತ್ರುಗಣವು ಬೆನ್ಹತ್ತಿ ಬರಲು ಗೆದ್ದ
ಮಿತ್ರನಂದದಿ ರುಗ್ಮಿ ಮತ್ತು ಬರಲು ಕರ
ಕತ್ತಿಯಿಂದಲಿ ಕೇಶ ಕತ್ತರಿಸುತ ನಿಜ
ಪತ್ತಿನ ಪೊಕ್ಕನು ತ್ವತ್ಸಹಿತ ೨೦

ದ್ವಾರಕ ಪುರದೊಲು ಮಾರಜನಕ ಪರಿ
ವಾರ ಸಹಿತ ನಿನ್ನ ಸೇರಿ ಉತ್ಸವಗಳು
ತೋರಿಸೆ ಅಂಬರವೇರಿದ ಸುರರೆಲ್ಲ
ನಾರೇ ಸಹ ಪುಷ್ಪ ತೂರಿದರು ೨೧

ತರುಳ ರಾಮನು ಮುನಿ ಬೆರಸಿ ಮಿಥಿಲನಾಮ
ಪುರದೊಳು ಬರುತಲೆ ಹರನ ಚಾಪವ ನೋಡಿ

ಗುರುಳು ಮೇಲಕೆ ಮಾಡಿ ಮುರಿದು ನಿನ್ನನು ಕೂಡಿ
ಸುರಿದು ಸುಖವ ದಿವ್ಯ ಸರಯುನಲ್ಲೇ ೨೨

ಸತ್ರಾಜಿತನು ತನ್ನೊಳು ರತ್ನದ ಕಳವಿಡೆ
ಚಿತ್ತದೊಳು ತಾರದೆ ಮತ್ತೆ ದ್ವಾರಕಿಯಲ್ಲಿ
ಹಸ್ತವ ಪಿಡಿದನು ಮಿತ್ರತ್ವ ನಿನ್ನಲ್ಲೆ
ವಿಸ್ತರಿಸಲಿ ಎಷ್ಟು ಸತ್ಯಭಾಮೆ ೨೩

ಅಂತರಂಗದ ಪ್ರಿಯ ಕಂತುಪಿತನು ಮಹಾ
ನಂತ ಕಾಲದಿ ನಿನ್ನೊಳೆಂಥವರಲಿಲ್ಲ
ದಂತೆ ಸ್ನೇಹವ ಮಾಳ್ಪಚಿಂತ್ಯ ಮಹಿಮೆಗಳ
ಚಿಂತಿಸಿದರು ವಿಧಿ ಪ್ರಾಂತಗಾಣಾ ೨೪

ಇಂದಿರಾದೇವಿಯ ನಂದನ ಸತಿಯೊಳು
ಬಂದು ಪುಟ್ಟಲು ನೀನು ಬಂದಾನು ವಸುದೇವ
ಕಂದನವನ ನೋಡಿ ಸುಂದರಾಗಿಯೆ ನಾಚಿ
ಛಂದವಲ್ಲವು ಇದು ನಮಗೊಂದೆ ಮನಿ ೨೫

ಎಂದು ಸಾ(ಸೌ)ಧರ್ಮ್ಯದ ಚಂದ್ರ ತೋರುವ ಫಲ
ದಿಂದ ಶೌರಿಯ ಕರ ಪೊಂದಿ ರಾತ್ರಿಲಿ ಮಹ
ನಂದದಿಂದಲಿ ರವಿನಂದನೆದಾಟುತ್ತ
ಬಂದಿಯೇ (ಹೇ) ದೇವಕಿ ಮಂದಿರದಿ ೨೬

ಬಂಧಿಕೆ ಇವಳೆಂಬೋದಿಂದೆ ತಿಳಿದೆವವು
ಬಂದಾಕ್ಷಣವೆ ಕಾಲಿಲಿಂದ ಬಿಚ್ಚಿದ ಬೇಡಿ
ಬಂದಿತು ಪುನರಪಿ ನಿಂದೆ ದ್ವಾರಗಳೆಲ್ಲ
ಪೊಂದಿಕೊಂಡವು ಕೀಲಿ ಬಂಧಿತಾಗೆ ೨೭

ದೋಷವೆಲ್ಲಿವೆ ? ನಿನಗೀಶಾನುಗ್ರಹದಿ ವೇದ
ರಾಶಿಯಿಂದಲಿ ತುತಿ ಪೋಷಿಸಿ ಸಂಸಾರ
ಪಾಶ ಬಿಡಿಸು ದೇವ ಜೀವರು ಯೆಂದು ಬ
ಭಾಷಿ ಭಾಷಿಗೆ ಹರಿತೋಷಿಸುವಿ ೨೮

ಅಂದಲ್ಲಾ ಕಾಶದಿ ನಿಂದು ದೇವಿಯೆ ನೀನು
ಮಂದಾತ್ಮ ನಿನ್ನನು ಕೊಂದು ಹಾಕುವ ಕೂಸು
ಬಂದಿಲ್ಲೆ ಪುಟ್ಟಿಹನೆಂದು ವಾಕ್ಚಾತುರ್ಯ
ದಿಂದಲಿ ಪೇಳ್ದಿ ಸುರವಂದಿತಳೆ ೨೯

ಎರಡು ಹತ್ತುವರುಷ ಚರಿಸುತ್ತ ವನದೊಳು
ವರ ಮತ್ಸ್ಯದೇಶಕ್ಕೆ ಬರುವಾಗ್ಗೆ ಮಾರ್ಗದಿ
ಸಿರಿದೇವಿ ನಿನ್ನಯ ಚರಣಗಳಿಗೆ ನಮ
ಸ್ಕರಿಸುತ್ತ ತುತಿಗಳ ಸುರಸಿದರು ೩೦

ಸರಸಿಜಾಕ್ಷಿಯೆ ನಾವು ವಿರುವೆ ವೀಪುರದಲ್ಲಿ
ಪರರು ತಿಳಿಯದಂತೆ ವರವು ಕೊಡೆನ್ನಲು
ಕುರು ಕುಲಾಧಿಪ ಪಂಚ ಧರ್ಮ ಭೀಮಾರ್ಜುನ
ಪರಮ ಸುಂದರ ಮಾದ್ರಿ ತರುಳರಾಗೆ ೩೧

ಕರುಣಾ ನಿಧಿಯೆ ಕಣ್ಣು ತೆರೆದು ಅವರ ನೋಡಿ
ಪರಮ ಸ್ನೇಹದಿ ನೀವು ಇರುವುದೀ ಪುರದಲ್ಲಿ
ಪರರು ತಿಳಿಯರಾರು ವರವ ನೀಡುತ ಹೀಗೆ
ಎರಡ್ಹತ್ತು ಮಾಸದಿ ಪೊರದೆವರ ೩೨

ಬಂದು ಮನದಿ ಹರಿಸುಂದರಾಮೃತ ಲೀಲಾ
ವೃಂದವ ಸ್ಮೃತಿಯೊಳು ತಂದು ನೀಡುತ ಭಕ್ತ
ಸಂದೋಹಕನುದಿನನಂದ ಬಾಷ್ಪವನಿತ್ತಾ
ಮಂದ ಸುಖವನೀವೆ ಸುಂದರಾಂಗಿ ೩೩

ಪ್ರಳಯ ಕಾಲದಿ ವಟದೆಲಿಯ ಮ್ಯಾಲ್ಪುರುಷದಿ
ನಳಿನ ನಯನ ತನ್ನಂಗುಲಿಯನು ಮುಖದಿಂದ
ಬಲು ರುಚಿ ಚೀಪುತ್ತ ಚಲುವ ಬಾಲಕನಾಗಿ
ಲಲನೆ ನಿನ್ನನು ಕೂಡಿ ಮಲಗುವನು ೩೪

ಸೃಷ್ಟಿ ಕಾಲವು ಬರೆ ವಿಷ್ಟರಶ್ರವನರ್ಥ
ವಿಷ್ಟಾರದಲಿ ನಿಂತು ಭೀಷ್ಟ ಶ್ರೀ ಭೂ ದುರ್ಗಾ

ಶ್ರೇಷ್ಠ ರೂಪಗಳಿಂದ ಧಿಟ್ಟತನದಿ ವೇದ
ವೆಷ್ಟು ಪಠಿಸಿ ಹರಿಯ ತುಷ್ಟಿಸುವಿ ೩೫

ಬಿಲ್ಲು ಪಿಡಿದು ಪಥದಲ್ಲಿ ಕುಳಿತು ಪಾರ್ಥ
ಗಲ್ಲೆರಣದಿ ಸಿರಿ ವಲ್ಲಭ ಕೃಷ್ಣನು
ಇಳಿದು ಭೂಮಿ ವಲ್ಲಭಿ ದುರ್ಗಿಯ
ಒಳ್ಳೆ ತುತಿಸುಯೆಂದು ಸಲ್ಲಾಡಿದ ೩೬

ಹಾಗೆ ಆಗಲಿಯೆಂದು ಸಾಗುತ್ತ ರಥದಿಂದ
ಪೋಗಿ ಭೂಮಿಲಿ ಶಿರಬಾಗಿ ನಮಿಸಿ ಪಾರ್ಥ
ಯೋಗನಿದ್ರೆಯು ಜಯಯೋಗ ನೀಡೆಮಗೆಂದು
ನಾಗಶಯನ ತಂಗಿಗ್ಹಾಗಾಡಿದಾ (ಹಾಗೆ ಆಡಿದಾ) ೩೭

ನಿಂದು ತುತಿಪ ಪಾರ್ಥನಂದು ನೋಡುತ ದೇವಿ
ಸುಂದರ ಕರವಿಟ್ಟು ಮುಂದಾಲಿಯೊಳು ಜಯ
ವಿಂದು ಆಗಲಿ ರಾಜ್ಯ ಪೊಂದಿ ಸುಖಿಸು ಕುಂತಿ
ನಂದನಾ ನೀ ನಂದಿ ನಂದ ಸುತ ೩೮

ಕನಡಿಯೊಳಗೆ ನೀನು ಇರುವಿಯಂದವಳಿಗೆ
ಹಿರಿಯನಂದದಿ ಕೃಷ್ಣ ಮರಿಯಾದಿ ಮಾಡುವ
ಸರಿಯಾರು (ರಿ) ಪರ ಸಮಳಿರುವಳಾದೇವಿಯು
ಸಿರಿಯೆ ನಿನ್ನೊಳು ಹರಿಹರುಷಾವೆಷ್ಟು ೩೯

ಮದುವಿ ಆಗಿರುವಂಥ ಹದಿನಾರು ಸಾವಿರ
ಸದಮಲ ನೂರಾರು ಸುದತಿಯರೊಳು ನೀನು
ಮದನನಯ್ಯನ ಕೂಡಿ ಮುದವನುಂಬುವಿ ಇನ್ನು
ಹೃದಯದೊಳಾಡ್ಹರಿ ಬಿದಿಗನಾಗೆ ೪೦

ಫುಲ್ಲಲೋಚನೆ ನೀನು ಕಲ್ಲಿಲೆ ಒಗೆದಾರು
ಸಲ್ಲನಾಡದೆ ವಂದು ಚಲ್ವಿಕಿ ಮರುಳಾಗಿ
ಸುಲ್ಲಲಿತಾಂಗಿಯೆ ಎಲ್ಲದೊರೆದು ಚಿತ್ತ
ದಲ್ಲಿ ನಿನ್ನ ಸ್ಮರಿಸುತ್ತ ಮಲಗಿದಾ ೪೧

ಕನ್ಯಾಮಣಿಯೆ ನಿಜ ಚಿನ್ಮಯ ರೂಪವಾ
ಚ್ಛನ್ನಿಸಿ ಕೊರವಂಜಿ ತನ್ನುವ ಧರಿಸುತ್ತ
ವನ್ನಜ ಜಾಂಡೆಂಬ ಘನ್ನ ಬುಟ್ಟಿಯ ಪೊತ್ತು
ನಿನ್ನಗೋಸುಗ ಪುರವನ್ನೇ ಪೊಕ್ಕಾ ೪೨

ಚಿನ್ನ ಗರ್ಭವ ಹರಿ ತನ್ನ ಕೂಸಿನ ಮಾಡಿ
ಸಣ್ಣ ಉಡಿಯೊಳಾತನ್ನ ತಾ ಕಟ್ಟುತಾ
ಧನ್ಯ ಧರಣೀದೇವಿ ಮನ್ನಿಯೊಳಗೆ ಬಂದು
ನಿನ್ನ ಯಾಚಿಸಿದನು ವನ್ಹಿಯಂತೆ ೪೩

ನಿನ್ನ ಮದುವೆಯಾಗಿ ಪನ್ನಗ ಶೈಲದೊ
ಳಿನ್ನು ವಾಸವ ಮಾಡಿ ತನ್ನ ಜನಗಳಿಗೆ
ಘನ್ನ ದರ್ಶನದಿಂದ ಧನ್ಯರ ಮಾಡುವಾ
ಪನ್ನ ಪಾಲನ ತೋರೆ ಎನ್ನೊಳಗೆ ೪೪

ಹರಿಯೊಳಗಿರುವಂಥ ಪರಿ ಪರಿ ಸುವಿಶೇಷ
ಬೆರಗಾಗಿ ನೋಡುತ್ತ ಹರುಷಸಾಗರದಲ್ಲೆ
ಪರ ತೀರ ಕಾಣದೆ ಮರುಳುಗೊಂಡಿಹ ದೇವಿ
ಪರ ಜನರಿಗೆ ಇಂಥ ಹರಿಷವುಂಟೆ ೪೫

ಮೂರು ರೂಪಗಳಿಂದ ಮೂರು ಗುಣಗಳಲ್ಲಿ
ಸೇರಿ ಸಂತಸ ಹರಿ ಕಾರ್ಯವ ಮಾಡುವಿ
ನಾರಿಮಣಿಯೆ ನಿನ್ನ ಮೀರಿ ಪೋಗುವರುಂಟೆ
ತಾರತಮ್ಯದಿ ದೇವಿ ಮೂರ್ಜಗದಿ ೪೬

ಮೂರು ರೂಪಗಳಲ್ಲೆ ಆರು ನೇತ್ರಗಳಿಂದ
ಮಾರನಯ್ಯನ ರೂಪ ಸಾರವ ನೋಡುತ್ತ
ಸೇರಿ ಸುಖಾಬ್ಧಿಯೋಳ್ ಪಾರು (ರ) ಗಾಣದೆ ನಿಂತಿ
ಆರಮ್ಮ ನಿನ ಸಮನಾರಿಯರು ೪೭

ದೋಲ ಮಂಚದಿ ಮುಕ್ತಮಾಲ ಮಾಣಿಕ್ಯದ
ಜೋಲ್ಯಾರೊ ಗೊಂಡ್ಯಾವು ಶಾಲು ಶಯಾ ಛತ್ರ

ಭಾಳು ಭೋಗಿಪ ದ್ರವ್ಯಳಾಗಿ ಪತಿಯ ಸೇವೆ
ಲಾಲಿಸುತಿಹ ದಿವ್ಯ ನೀಲ ನೇತ್ರೆ ೪೮

ಭಾನು ನಂದನೆ ದಿವ್ಯ ಕಾನನದೊಳು ನಿಂತು
ಗಾನ ಮಾಡುವ ರನ್ನೆ ವೇಣು ನೀನಾಗುತ್ತ
ಧೇನುಪಾಧರಸುಧೆ ಪಾನ ಮಾಡುವಿ ಸುಖ
ವೇನು ಪೇಳಲಿ ಶೇಷ ತಾನು ಪೇಳಾ ೪೯

ಹರಿಯ ನಂತರದಲ್ಲಿ ಸರಸ್ವತಿ ಮೊದಲಾದ
ಸರುವ ಶಬ್ದಗಳಿಂದ ಪರಮ ವಾಚ್ಯಳು ವೇದ
ಅರುಹುವದೀಪರಿ ಸರುವ ಶಕ್ತಳೆ ನಿನ್ನ
ಸರಿಯಾರೊ ಸಂಸಾರ ಪರಿಮುಕ್ತಳೆ ೫೦

ಇಂದು ಮುಖದಿ ಮಾಳ್ಪ ಮಂದ ಹಾಸನ ಬೆಳ
ಕಿಂದತಿ ದೇಹದಿ ಪೊಂದಿದ ಮಣಿ ಭೂಪ
ವಂದಾಗಿ ಥಳ ಥಳವೆಂದು ಶೋಭಿಸುವವು
ಮಂದಗಮನೆ ಕೋಟಿ ಚಂದ್ರರಂತೆ ೫೧

ಕಂದನಲ್ಲವೆ ಎನ್ನೊಳೊಂದು ಮಾತಾಡದ
ಬಂದಾ ಕೋಪವದಾವದೆಂದು ತಿಳಿಯೆ ನಾನು
ಇಂದಿರೆ ನಿರ್ದೋಷವೆಂದು ಪೇಳುವ ವೇದ
ವೃಂದಾವುಸುಳ್ಳೆನೆ ಸುಂದರಾಂಗಿ ೫೨

ಥಳಥಳಿಸುವಾಮೃತ ಜಲಶೋಭೆ ವಾಪಿಯು
ಚಲುವ ವಿದ್ರುಮ ತಟ ವಲಯಾತ್ಮ ವನದೊಳು
ಹಲವು ಸಖಿಯರಿಂದ ನಳಿನಾಕ್ಷಿ ಹರಿಯನು
ತುಳಸಿ ದಳಗಳಿಂದ ವೊಲಿಸುತಲೆ ೫೩

ಸ್ವಲಕ ಮುನ್ನಸ ವಕ್ತ್ರ ವಲಯಾ ನೋಡುತ ತನ್ನ
ಜಲಜ ನೇತ್ರನು ಚುಂಬಿಸಲಿಹ ಸುಖವನುಂಬ
ನಿಳೆಯೊಳು ಎನ ಸಮ ಲಲನೆಯರ್ಯಾರಿಲ್ಲೆಂದು
ತಿಳಿದು ಸುಖಾಂಬುಧಿ ಮುಳುಗಿದಿಯೆ ೫೪

ಏಕಪತ್ನಿಯ ಕೂಡಿ ಲೋಕನಾಯಕ ರಾಜಾ
ಪಾಕ ಜನ್ಮದಿ ನಿನ್ನ ತಾ ಕಳದ್ದುಡುಕುತ್ತ
ಸಾಕಿದುವ್ರತ ನಂದ ಲೋಕ ಜನ್ಮದಿ ನಾನಾ
ನೇಕ ಪತ್ನಿಯರಾಳಬೇಕು ಯೆಂದಾ ೫೫

ನಾಥನಾಡಿದ ಮಾತು ಸೀತೆ ನೀ ಕೇಳುತ್ತ
ಭೀತಳಾದಿಯೆ ಚಾರ ನೀತನಾಗುವೆನೆಂದು
ಆತ ತಂದಿಹ ಸರ್ವ ಸ್ತ್ರೀ ತನುವಿನಲಿ ರೂಪ
ಜಾತ ಪೊಂದುತ ಸಂಘ ಶಾತ ಉಂಡೆ ೫೬

ತರುಣಿಯ ಮುಖದಿಂದ ಪುರುಷನುತ್ಸವ ಕೇಳಿ
ಕರವೀರಪುರದಿಂದ ಪೊರಟು ರಥದಿ ಕೂತು
ಬರುವ ಸೌಂದರ್ಯವ ಗುರುಳು ಮುಖಿಯೆ ಎನ್ನ
ಎರಡು ಕಣ್ಣಿಗೆ ತೋರೆ ಸರಸಿಜಾಕ್ಷಿ ೫೭

ಬಂದು ಶೇಷಾದ್ರಿಯ ಕಂದರದೊಳು ಮಹ
ನಂದದಿಂದಲಿ ಪತಿ ಪೊಂದಿ ಪಾದಗಳಲ್ಲಿ
ಸುಂದರ ಚಂಪಕ ವೃಂದವ ಸುರಿದಂಥ
ದ್ವಂದ್ವ ಕರವ ತೋರೆ ಸಿಂಧು ಪೂತೇ ೫೮

ಹರಿಯ ಎದುರ ನಿಂತು ಕರದಿ ತೈಲದ ಪಾತ್ರಿ
ಧರಿಸಿ ಶಿರದಿ ಎಣ್ಣೆ ಇರಿಸಿ ಆಶೀರ್ವಾದ
ಹರಿಸಿದ ಸುಂದರಾಭರಣ ಭೂಷಿತ ವಪು
ಸಿರಿಯ ತೋರಿಸೆ ನಿನ್ನ ಕರುಣಾನಿಧೆ ೫೯

ರಾಮನಂಸದಿ ದಿವ್ಯ ಹೇಮ ಕಮಲ ಮಾಲೆ
ಪ್ರೇಮದಿಂದಲಿ ಹಾಕಿ ನಾಮಭಾಗದಿ ನಿಂತ
ಶ್ರೀಮನೋಹರಿ ನಿನ್ನ ಕೌಮಾರ ಸೌಭಾಗ್ಯ
ಶಾಮ ಸುಂದರಿ ತೋರೆ ಸೋಮ ಮುಖಿ ೬೦

ದ್ವಾರಕಾಪುರದಲ್ಲಿ ಪಾರಿಜಾತದ ತಳ
ಸೇರಿ ಶೋಭಿಪ ಕಾಂಚನೂರು ಪೀಠದಿ ಕೂತು

ಮಾರನಯ್ಯನ ಕೂಡಿ ತೂರಿ ಲೆತ್ತವನಾಡ
ಸಾರಸಕರ ತೋರೆ ಮಾರಮೋಹೆ ೬೧

ತಾರಾ ರುಮಾದಿಕ ನಾರೇರ ಒಡಗೂಡಿ
ಸೇರಿ ಪುಷ್ಪಕದೊಳು ರಾಮನಂಕದಿ ಕೂತು
ಹೀರ ಮೌಕ್ತಿಕ ಹೇಮ ಭೂರಿಭೂಷಣ ಶೋಭಿ
ಚಾರು ಶುಭರ ಮುದ ತೋರೆ ದೇವೀ ೬೨

ಕುಂದ ಮಲ್ಲಿಗೆ ಚಂಪಕ ದಿರವಾಶೋಕ
ಮಂದಾರ ಸುಮಮಾಲ ವೃಂದಾದಿಂದೊಪ್ಪುವ
ಸುಂದರ ವೇಣಿಯೆ ಹಿಂದಾಲಿಸುತ ಬಾಹೊ
ಸೌಂದರ್ಯ ತೋರಿಸೆ ಚಂದ್ರಮುಖಿ ೬೩

ಘಿಲ್ಲು ಘಿಲ್ಲುಕುಯೆಂಬೋಲುಲ್ಲುಕಾಲುಂಗುರ
ಪಿಲ್ಯಾಪೈಜಣ ರುಳಿ ಸುಳ್ಳಿ ಪಾಡಗ ಮೀನ
ನಲ್ಲಲ್ಲೆ ತುಣಿಸುತ ನೆಲ್ಲೆ ಪೋಗುವ ಪಾರ
ಪಲ್ಲವ ತೋರಮ್ಮ ಫುಲ್ಲ ನೇತ್ರೆ ೬೪

ಧರೆಯೊಳಗಲವೂವ ಜರದ ಪೀತಾಂಬರ
ಕರದಿಂದ ಮೇಲಕ್ಕೆ ಧರಿಸುತ ಹರಿಯಂತ
ಸೊರಗಿದ ಕಟಿಯಲ್ಲಿ ಪರಿಶೋಭಿಸುವ ಕಾಂಚಿ
ಸಿರಿಯು ನೂರಪುರದಲ್ಲೆ ಬೆರಸಿಹದು ೬೫

ಕೊರಳಲ್ಲಿ ಶೋಭಿಪ ಸರಗಿ ಪದಕ ಹಾರ
ತರಳ ಗೆಜ್ಜೆಯು ಟೀಕಿ ಹರಳು ಕೆಚ್ಚಿದ ದಿವ್ಯ
ಪುರಟ ಪುತ್ಥಳಿ ಮಾಲೆ ಬೆರೆದು ಕಾಂಚಿಯ ಮೇಲೆ
ಹರುಷ ನೀಡುತಲಿದೆ ಹರಿಣ ನೇತ್ರೆ ೬೬

ಎರಡೈದು ಬೆರಳಲ್ಲೆ ಥರಥರದುಂಗುರ
ಕರದಿ ಕಂಕಣ ದುಂಡು ಹರಡಿ ಪಾಟಲಿ ತೋಡೆ
ಜರದ ಕಂಚುಕ ಮೇಲೆ ಉರಗಭೂಷಣ ವಂಕಿ
ತರುಳ ತಾಯಿತ ಗೊಂಡೆ ಸಿರಿಯು ತೋರೆ ೬೭

ಗುರುಳು ಕೇಶದ ಮಧ್ಯ ಮೆರೆವ ತಿಲಕ ಕಣ್ಣೋಳ್
ಕರಿಯ ಕಾಡಿಗೆ ಕೆಂಪು ಹರಳು ಕೆತ್ತಿದ ವಾಲೆ
ಸರಸದ್ರಾಕ್ಷದ ಲತಿ ಅರಿಷಿಣ ಗಲ್ಲದಿ
ಪರಮ ಮುಖದ ಕಾಂತಿ ಹರಿವಿಹದು ೬೮

ಇಂದಿರೆ ನಿನವಪು ಸೌಂದರ್ಯ ಸೌಭಾಗ್ಯ
ವೆಂದಿಗಾದರು ಮುಖದಿಂದ ಪೇಳುವದುಂಟೆ
ಒಂದು ಸಾವಿರ ಮುಖದಿಂದ ಪೇಳಿದರಿದು
ಎಂದಿಗೂ ತೀರದಹೀಂದ್ರನಲ್ಲೆ ೬೯

ನಿನ್ನಂಥ ಪತಿವ್ರತೆಯನು ಕಾಣೆನೆ ಮೀನ
ಜನ್ಮದೊಳಿಹ ಪತಿಯನ್ನು ನೋಡಿದವಳಾಗಿ
ಧನ್ಯ ವೇದಾಖ್ಯದಿ ಜನ್ಯಳಾಗುತ ಹರಿ
ಯನ್ನ ಭಜಿಸಿ ಸುಖವನ್ನು ಉಂಡೆ ೭೦

ಕರ್ಮಿ ಮಾನವನಂತೆ ಶರ್ಮಚಿದಾತ್ಮಕ
ಪರಮ ಪುರುಷ ಕೂರ್ಮ ವರುಷದೊಳಿರುತಿರೆ
ಸಿರಿ ವೇದವತಿ ಯೆಂಬೊ ಪರಮನಾಮದ ಲವ
ತರಿಸಿ ಸುಖವನುಂಡೆ ಹರಿಯೊಡನೆ ೭೧

ಕನಕನೇತ್ರನು ತನ್ನ ವನಿತೆಯ ಕದ್ದೋಯ್ದು
ವನಧಿಯೋಳ್ ಹಾಕಿರೆ ವನಜಜ ನುತಿಸಲು
ದನುಜದಲ್ಲಣ ಕೋಲ ತನುವ ಧರಿಸೆ ಧಾತ್ರಿ
ಯೆನಿಸೆ ವರಾಹನ ವನಿತೆಯಾದೆ ೭೨

ಸುಳಮುನಿಯುಪದೇಶ ಧರಿಸಿ ಪ್ರಹ್ಲಾದನು
ಹರಿಯ ಚರಣಗಳ ಸ್ಮರಿಸೆ ಮಾಧವ ಖಂಬ
ಬಿರಿದು ಬರಲು ನೀನು ವರ ಮಹಾಲಕ್ಷ್ಮಿಯೆ
ತರುಣಿ ಯಾದಿಯೆ ದೇವಿ ನರಸಿಂಹಗೆ ೭೩

ಬಲಿಯು ದೇವತೆಗಳ ವಲಯಜಯಿಸಿ ಶಕ್ರ
ಹಲವು ವ್ಯಾಜವ ಕೊಂಡು ಬಲು ಮತ್ತನಾಗಲು

ನಳಿನ ನಯನ ಪುಟ್ಟೀ ಇಳೆಯೊಳು ಸುಖಿಯಂಬೊ
ಚಲುವ ನಾಮದಿ ವಟು ಲಲನೆಯಾದೆ ೭೪

ಕೃತವೀರ್ಯಸುತ ಸಮಿಹಿತ ಧೇನು ವಯ್ಯಲು
ಹತನ ಮಾಡೆವನನ್ನ ಪಿತರನುದ್ಧರಿಸುವಿ ವಿಪ್ರ
ಸತಿಯಿಂದ ಮಾಧವ ಕ್ಷಿತಿಯೊಳು ಹುಟ್ಟಲು ಹರಿ
ಣಿತಿ ನಾಮದಲಿ ರಾಮ ಸತಿಯಾದಿಯ್ಯೆ ೭೫

ಮುನಿಜನರೆಲ್ಲರು ಮನದಿ ದುಃಖಿಸುತಿರೆ
ವನಜಾದಿಗಳೆಲ್ಲ ವನಧಿಯೋಳ್ ಪ್ರಾರ್ಥಿಸೆ
ದನುಜ ದಮನ ರಾಜತನುಜನಾಗಲು ನೀನು
ವನಿತೆಯಾದಿಯೆ ಸೀತೆ ಎನಿಸಿ ದೇವಿ ೭೬

ತಂದಿ ತಾಯಿಗಳನ್ನ ಬಂಧಿಯೋಳ್ ಹಾಕಿದ
ಮಂದಾತ್ಮ ಕಂಸನ್ನ ಕೊಂದು ಹಾಕುವೆನೆಂದು
ನಂದ ಬಾಲನು ಶೌರಿ ಮಂದಿರದೊಳು ಪುಟ್ಟೆ
ಪೊಂದಿರವನ ಭೈಷ್ಮಿ ಎಂದುದಿಸಿ ೭೭

ದೇವರಿಪುಗಳೆಲ್ಲ ಭೂವಲಯದಿ ಕರ್ಮ
ಭಾವಿಸೆ ಸಂತತ ಪಾವನಾತ್ಮರಾಗೆ
ಕಾವನಯ್ಯನು ಬುದ್ಧ ದೇವನಾಗಲು ನೀನು
ರೇವತಿ ನಾಮದಿ ಸೇವಿಸಿದಿ ೭೮

ತುರುಕರೆಲ್ಲರು ಪುಟ್ಟಿ ಧರೆಯೊಳು ವಿಪ್ರರ
ಪರಿಬಾಧಿಸಲು ತಾಮ್ರ ಪರಣಿ ತೀರದಿ ಭೂಮಿ
ಸುರರಲ್ಲೇರು ಹರಿ ಪುಟ್ಟೆ ರುಣಿಯಾದೆ ಕಲ್ಕಿ
ವರನಿಗೆ ಪ್ರಭೆಯೆಂದು ಪುರುಟ ಪ್ರಭೆ ೭೯

ಕಲಿದಿತಿಜನು ಬಂದು ಹಲವು ಶಾಸ್ತ್ರಗಳಿಂದ
ಬಲರಿಪು ಮುಖಸುರ ವಲಯದೊಳಗೆ ಪೊಕ್ಕು
ಬಲು ಬಾಧಿಸಲು ಹರಿ ಇಳಿಯೋಳ್ ಉದಿಸೆ ವ್ಯಾಸ
ನೊಲಿಸಿದಂಭೃಣಿಯಾಗಿ ಜಲಜ ನೇತ್ರೆ ೮೦

ಸನಕಾದಿಗಳು ಎಲ್ಲ ವನಜಾ ವಿಷ್ಟರನಲ್ಲೆ
ಮನದಂತೆ ಪ್ರಶ್ನವಕ್ಷಣಶ ಮಾಡುತಲಿರೆ
ತನುಜನ ಸಭೆಯೊಳುಜನಿಸೆ ಹರಿಯ ಹಂಸ
ವನತೆ ಯಾದಿಯೆ ವರಟಿಳೆನಿಸಿ ದೇವಿ ೮೧

ತರುಣಿ ಕಲಹ ಮಾಡಿ ಕರವೀರಕ್ಹೋಗಲು
ಪರಮ ಪುರುಷ ತನ್ನ ಇರುವ ಸ್ಥಳವ ಬಿಟ್ಟು
ಗಿರಿಯೊಳಗಿರುತಿರೆ ಸರಸಿಜ (ಸರಸಿಯೊಳಗೆ)ದೊಳು ಪುಟ್ಟಿ
ಸಿರಿವೆಂಕಟೇಶಗೆ ಅರಸಿಯಾದೆ ೮೨

ಯಜ್ಞ ನಾಮಕ ಸರ್ವಜ್ಞಗೆ ದಕ್ಷಿಣ
ದುರ್ಗಾ ನಾಮದಿ ಹರಿ ಭಾರ್ಗವನರಸಿ ಸ
ನ್ಮಾರ್ಗದೊಳಿರುತಿಹ ಸುಜ್ಞ ತವಕ ಜನ
ವರ್ಗಕ್ಕೆ ಸ್ವರ್ಗಾಪವರ್ಗ ದಾತ್ರಿ ೮೩

ವಾಸುದೇವಗೆ ಮಾಯಾ ಶ್ರೀ ಸಂಕರುಷಣ
ಗಾಸಖಿ ಜಯ ಯೆಂಬಿರಾ ಶಾಂತಿಗನಿರುದ್ಧ
ಗೀಶ ಪ್ರದ್ಯುಮ್ನ ಸುವಾಸಿ ಕೃತಿದೇವಿ
ಈಸು ರೂಪದಿ ಜಗ ಪೋಷಿಸುವಿ ೮೪

ಸಿರಿಕೇಶವಾಂಗನ ಶರನಿಲಯಗ ಲಕ್ಷ್ಮಿ
ಸರಸಿಜೆ ಮಾಧವ ಗರಸಿ ಪದ್ಮಾದೇವಿ
ಪರಮ ಗೋವಿಂದಗೆ ಸರಸಿ ಕಾಮಿನಿ ವಿಷ್ಣು
ಹರುಷ ಮಧುಷಾಗೆ ಸರಸಿ ಜಾಸ್ಯಾ ೮೫

ರಮೆಯು ತ್ರಿವಿಕ್ರಮ ಪ್ರಮದ ವೃಷಾಕಪಿ
ಪ್ರಮದ ವಟುಗೆ ಧನ್ಯ ಪ್ರಮದ ಶ್ರೀಧರನಿಗೆ
ಪ್ರಮದ ಹೃಷಿಕಪಗಮಲ ಮಂಗಳೆ ಬುದ್ಧಿ
ಪ್ರಮದೆಯು ಪದುಮನಾಭಗೆ ದೇವಿ ೮೬

ದಾಮೋದರಗೆ ಪ್ರಿಯೆ ಕಾಮಿನಿಂದಿರೆ ದೇವಿ
ಶ್ಯಾಮ ಹಿರಣ್ಮಯೆ ಕಾಮ ಸಂಕರುಷಣ

ಭಾಮಿನಿ ದಕ್ಷಣೆ ವಾಸುದೇವಗೆ ನಿತ್ಯ
ಆ ಮಹಾ ಪ್ರದ್ಯುಮ್ನ ಕಾಮಿನಿಯು ೮೭

ನಿತ್ಯಾನಿರುದ್ಧನ ಪತ್ನಿಯಾನಂದ ಪುರು
ಷೋತ್ತಮ ಪ್ರಿಯೆ ಸದಾಶ್ರಯಾಧೋಕ್ಷಜ
ಗುತ್ತಮ ಶುಭ ದೇವಿ ಮತ್ತೆ ಯಜ್ಞೆಯು
ಮರ್ತ್ಯ ಮಗಗೆ ಸಖಿ ಅಚ್ಯುತನಿಗೆ ಸಖಿಯು ೮೮

ಮುದ್ದು ಸೌಗಂಧಿ ಜನಾರ್ದನನೋಪೇಂದ್ರಗೆ
ಹೃದ್ಯ ಸುಂದರಿ ಹರಿಗೆ ವಿದ್ಯಾದೇವಿ ನಿಜ
ಹೃದ್ಯಳಾದಿಯೆ ಸುಶೀಲೇ ಕೃಷ್ಣನಿಗೆ
ಭದ್ರ ಸಂಕಾಯಸೀ ಪದ್ಮ ಚರ್ಮಾತ್ಮಿಕೆಯೆ ೮೯

**ಪ್ರಾರ್ಥನಾ**

ನಿತ್ಯ ಮುಕ್ತಳೆ ಸರ್ವ ಚಿತ್ತ ನಿಯಾಮಕೆ
ಭಕ್ತವತ್ಸಲೆ ಭೈಷ್ಮಿ ಸತ್ಯ ಎನ್ನಯ ಮನೋ
ವೃತ್ತಿಯೊಳೆಶೋದೆ ಪುತ್ರನಾಗಿಹ ದಿವ್ಯ
ಮುತ್ತಿನಂಥಾ ಕೂಸು ಎತ್ತಿ ತೋರೆ ೯೦

ಭಾನು ಮಂಡಲ ಮುಖಿ ಧೇನು ಪಾಲನ ರಾಣಿ
ಪಾಣಿ ಜೋಡಿಸಿ ನಿಂತು ಗಾನ ಮಾಡುವೆ ನಿತ್ಯ
ವೇಣು ಬಾಲನ ಎನ್ನ ಮಾನಸದೊಳು ತಂದು
ನೀನು ತೋರಿಸಬೇಕು ವೇಣು ರೂಪೆ ೯೧

ಭಾಳು ದಿವಸ ನಿನ್ನ ಆಲಯದೊಳು ನಿಂತು
ಆಳಿನಂದದಿ ತಪ ಲೋಲಾಕ್ಷಿ ಮಾಡಿದೆ
ನೀಲವೇಣಿಯೆ ಹೃದಯಾಲಯದೊಳು ಎನ್ನ
ಬಾಲ ಕೃಷ್ಣನ ತೋರೆ ಲೀಲಾ ರೂಪೆ ೯೨

ತೊಟ್ಟಿಲಿಂದಲಿ ಎದ್ದು ಬಿಟ್ಟು ಕರವ ಭೂಮಿ
ಲಿಟ್ಟು ತಪ್ಪೆ‌‌‌‌ಜ್ಜೆಯ ಮುಟ್ಟಿ ಭಿತ್ತಿಲೆ ಬಂದು

ಬಟ್ಟಲೊಳಗೆ ಬೆಣ್ಣೆ ಇಟ್ಟು ಕೊಡೆಂಬುವ
ಪುಟ್ಟ ಕೃಷ್ಣನ ಭೆಟ್ಟಿ ನೀಡೆ ೯೩

ಶಂಬವಾದಿ ದೈವ ಕದಂಬ ವಂದಿತೆ ಲಿನ್ನೊಳ್
ತುಂಬ ಸ್ನೇಹದಿ ಹೀಗೆ ಹಂಬಲಿಸುವೆ ನಿತ್ಯ
ಶಂಬರರಿಯ ಪಿತನಂಬುಜ ವದನ ಹೃ
ದಂಬರದೊಳು ತೋರೆ ಕಂಬು ಪಾಣೆ ೯೪

ದುಷ್ಟ ದಮನೆ ಸರ್ವ ಶಿಷ್ಟಪಾಲನೆ ಭವ
ಕಷ್ಟಮುಕ್ತಳೆ ಭಕ್ತಭೀಷ್ಟದಾಯಕೆ ಎನ್ನೋಳ್
ಸಿಟ್ಟು ಬಂದಿಹುದೇನೆ ? ಎಷ್ಟು ಪೇಳಿ ದೊಂ
ದಿಷ್ಟು ಕೇಳಲಿವಲ್ಲೆ ಕೃಷ್ಣ ಸಖೀ ೯೫

ಕರುಣ ಸಮುದ್ರಳೆ ಶರಧಿತನಯ ಕೃಷ್ಣ
ನರಸಿ ರುಕ್ಮಿಣಿ ಸತ್ಯ ತರುಣಿ ಶತಪ್ರಭೆ
ಇರುವದೆ ಸಿಟ್ಟಿಂಥ ಪರಿಪೂರ್ಣ ಸಿರಿವಂತಿ
ಗುರುಹೂವನತಿ ಮೂರ್ಖ ವರನು ದೇವಿ ೯೬

ಚಂದ್ರ ಸಹೋದರಿ ಗಂಧ ವಸನ ಮಾಲ
ಸುಂದರಾಭರಣಗಳ್ ಹೊಂದಿನಿನ್ನಂಗ ಸಂ
ಬಂಧದಿಂದಲೆ ಬಹು ಸೌಂದರ್ಯ ಗುಣವನ್ನು
ಪೊಂದಿಕೊಂಡೆ ಕ್ಷೀರ ಸಿಂಧು ಪುತ್ರೀ ೯೭

ಸಿಂಧು ತೀರದಿ ನಿಂತು ಒಂದೆ ಕ್ಷಣವೆ ಕಣ್ಣಿ
ನಿಂದಾ ದೇವತಿಳಿಗಳಾ ವೃಂದವ ನೋಡಿದಿ
ಅಂದಲ್ಲೆ ಸ್ವರ್ಗ ಸುಂದರ ಪದದೊಳ್ ಅ
ಮಂದ ಸುಖಾಬ್ಧಿಯೊಳು ಮಿಂದಿಹರೂ ೯೮

ಕರವೀರಳು ದೇವ ತರುಣೆರೆಲ್ಲರು ನಿನ್ನ
ಪರಿಚರ್ಯ ಮಾಡುತ್ತ ಇರುವರದ್ಯಾಪಿ ಹೆ
ಶರಣು ಬಂದಿಹೆ ತಾಯಿ ಕರುಣದಲಿ ಚಿತ್ತದೋಳ್
ಹರಿಯ ಮೂರುತಿ ತೋರೆ ತರುಣಿ ಮಣಿ ೯೯

ನೀಲಕಮಲ ಕರದೊಳು ಪಿಡಿದು ನಿನ್ನ
ಯಾಲಯದೊಳು ಸುತ್ತು (ತ್ತಿ) ಲೀಲೆ ಮಾಡುತಲಿರೆ
ಬೀಳೆ ಛಾಯವು ಮಣಿಯಾಲಯದೊಳು
ಶ್ರೀ ಲಲನೆಯ (ಯು) ಉಡಗೋಳೆಂಬೋರು ೧೦೦

ನಿನ್ನ ಮಹಿಮೆ ಸ್ತುತಿಯನ್ನೆ ಮಾಡುವದಕ್ಕೆ
ಎನ್ನಗಳವೆ ತಾಯಿ ಸಣ್ಣ ಬಲಕ ಬುದ್ಧಿ
ಲಿನ್ನಿಷ್ಟು ಮಾಡಿದೆ ನಿನ್ನ ಪ್ರೇರಣೆಯಿಂದ
ಮನ್ನಿಸಬೇಕಮ್ಮ ಎನ್ನ ತುತಿ ೧೦೧

ಶಂಬರಂಜಾಸನ ಶಂಬ (ಭು) ವದಿಸುತರರೆಲ್ಲ
ಹಂಬಲಿಸುತ ಪಾದ ವಂಬುಜಲೋಚನೆ
ಮುಂಬಾಗಿಲಲಿ ನಿಂತು ಕಂಬುಕಂಧರೆ ಮುಖ
ಬಿಂಬಾ ನಿರೀಕ್ಷಿಪ ರಂಬರಸ್ತೆ(ಸ್ಥೆ) ೧೦೨

ನಿನ್ನ ಪ್ರೇರಣೆಯಿಂದ ಚನ್ನ ಬುದ್ಧಿಯ ಪೊಕ್ಕು
ಕನ್ಯಾ ಮಣಿಯೆ ತುತಿಯನ್ನು ಮಾಡಿಸಿದಂಥ
ಚಿನ್ನವಡಲ ಮುಖ ನಿನ್ನ ಮಕ್ಕಳ ಪಾದ
ವನ್ನು ನಮಿಪೆ ಅವರನ್ನ ಬಿಡೆ ೧೦೩

ಮಂದ ಜನರು ಎನ್ನ ಮುಂದೆ ಬಂದತಿಶಯ
ನಿಂದು ಮಾಡುವ ಮಹ ನಿಂದಾ ತುತಿಗಳ
ಒಂದು ತಾರದೆ ಮನಮಂದಿರದೊಳು ಗೋಪಿ
ನಂದನ ಪಾಡುವಾ ನಂದನೀಡೆ ೧೦೪

ನಗುವ ಸನ್ಮುಖಿ ಹರಿ ಅಗಣಿತ ಗುಣಗಳ
ಪೊಗಳುತ್ತ ಹರುಷದಿ ಬಿಗಿದು ಕಂಠವ ಬಾಷ್ಪ
ಒಗಿದು ಕಣ್ಣಲಿ ಬಹು ನಗುತ ಅಳುತ ದೇವೀ
ಹಗಲಿರಳ್ ನೆಗದಾಡೊ ಸುಗುಣ ನೀಡೆ ೧೦೫

ನಿನ್ನುಪಕಾರಗಳ್‌ಳಿನ್ನೆಷ್ಟು ಸ್ಮರಿಸಾ ಸಾಲೆ
ಎನ್ನ ಮನದೊಳಿದ್ದು ನಿನ್ನ ಮಹಿಮೆ ತುತಿ

ಯನ್ನು ನುಡಿಸಿದಿದ ಕನ್ಯುಪಕಾರ ಇ
ದನ್ನೆ ಪಠಿಸುವದೆ ಅನ್ಯವಿಲ್ಲ ೧೦೬

ನಿನ್ನ ಬೇಡಿ ಮತ್ತನ್ಯರಾ ಬೇಡಿದ ರಿ
ನ್ನಿಂಥ ಸೌಭಾಗ್ಯವನ್ನು ಕೊಡುವರುಂಟೆ
ನಿನ್ನನ್ನೇ ಸೇವಿಸಿ ಧನ್ಯರಾಗಿಹರೆಲ್ಲ
ನಿನ್ನಂಥ ಹರಿ ಪ್ರಿಯಳನ್ನ ಕಾಣೆ ೧೦೭

ಭಕ್ತಿಯಿಂದಲಿ ದಾವ ಮತ್ಯಾರು ಪಠಿಸೋರು
ಲಕ್ಷ್ಮೀಲೀಲಾಮೃತ ಚಿತ್ತದೊಳವರಿಗೆ
ಸತ್ಯ ಭೈಷ್ಮೇರ ಕೂಡಿ ಮರ್ತ್ಯ ಮೃಗೇಂದ್ರ
ಯದುತ್ತಮ ಪೊಳೆವಾನು ನಿತ್ಯದಲ್ಲಿ ೧೦೮

ಸುಂದರ ಸೌಭಾಗ್ಯ ಮಂದಿರ ತಟತುತಿ
ಗೊಂದೆ ಫಲವ ನೀಡೋ ಬಂದಾರೆ ಮನಸಿಗೆ
ಇಂದಿರೇಶನ ಸಖಿ ನಂದ ಬಾಲನ ವದನಿಂದು
ಮಂಡಲ ತೋರೆ ಚಂದ್ರಮುಖಿ ೧೦೯

ಶ್ರೀ ಗುರು ಮಧ್ವೇಶ

ಶ್ರೀ ಕೃಷ್ಣಾರ್ಪಣಮಸ್ತು

## ೪೨೫

**ಶ್ರೀ ಗುರು ಇಂದಿರೇಶ**

**ಶ್ರೀ ಗುರುಕಥಾಮೃತ ಸಾರ**

ಶ್ರೀರಮಣ ನರಹರಿಯ ಪದಪಂಕೇ
ರುಹಂಗಳ ನಮಿಸಿ ಸಂತತ
ಭಾರತೀರಾಧ್ಯರಿಗೆ ವಂದಿಪೆ ಭೂರಿ ಭಕುತಿಯಲಿ
ಧೀರ ಕೃಷ್ಣಾರ್ಯರ ಕಥಾಮೃತ

ಸಾರ ಜನರಿಗೆ ತಿಳಿಯುವಂದದಿ
ಚಾರು ಭಾಮಿನಿ ಪದ್ಯದೊಳು ವಿಸ್ತಾರ ಪೇಳುವನು ೧

ಸೂರಿಗಳು ವಾಗ್ದೋಷವೆಣಿಸದೆ ಅ-
ಪಾರ ಮಹಿಮನ ಗುಣಗಳನು ಸ್ವೀ-
ಕಾರ ಮಾಡಲಿ ಕರುಣದಿಂದಲಿ ತೋರಿದವನು
ಪರಮಗುರು ಕೃಷ್ಣಾರ್ಯರಡಿಗಳಿ-
ಗೆರಗಿ ಬಿನ್ನೈಸುವೆನು ಪ್ರತಿದಿನ
ಕರುಣದಲಿ ಪಾಮರನ ನೀ ಉದ್ಧರಿಸಬೇಕೆಂದು ೨

ವಿರಚಿಸುವೆ ಪ್ರಾಕೃತದಿ ಈ ಕಥೆ
ಸರಸವಾಗಲಿ ನುಡಿಗಳಿದರೊಳು
ಕರವ ಮುಗಿವೆನು ಮಂಗಳವ ಸದ್ಗುರುವೆ ಕೊಡು ಎಂದು
ಧರಣಿಯೊಳಗಾವಾವ ದೇಶದಿ
ತಿರುಗಿ ನೋಡಲು ಈ ವಿಧದ ಮಹಿ
ಮರಿಗೆ ಸಮರಿಲ್ಲೆನುತ ಶಾಸ್ತ್ರಗಳರಿತ ಪಂಡಿತರು ೩

ಆವ ದೇವಾಂಶರು ಜಗ
ತೀವಲಯದೊಳಗೆಲ್ಲ
ಭಾವಿಸುತ ನೋಡಲ್ಕೆ ಬಗೆಬಗೆ ಭಾ ತೋರಿದನು
ಕೋವಿದಾಗ್ರಣಿ ಸತತ ತನ್ನನು
ಸೇವಿಸುವ ಭಕ್ತರಿಗೆ ಸೌಖ್ಯ
ಳೀವ ಈತನಲಿರುತಿಹನು ಶ್ರೀದೇವಿವಲ್ಲಭನು ೪

ಅರುಹಿದಾ ನುಡಿಗಳನು ಯೋಚಿಸು
ತಿರಲು ಸ್ವಪ್ನದಿ ಬಂದು ಯನಗೆ ನಿ-
ದರುಶನವ ತೋರಿಸಲು ಪೇಳ್ವೆನು ವರ ಮಹಾತ್ಮ್ಯಗಳನು
ಬಾದರಾಯಣ ದೇವರ ಚಿಸಿದ-
ಗಾಧ ಶಾಸ್ತ್ರ ಪುರಾಣ ತತ್ವಗಳಾ-
ದರದಿ ಗುರುಗಳಿಗಾನು ವಂದಿಸಿ ಓದಿದವರೆಲ್ಲಾ ೫

ಭೃತ್ಯಜನರಿಗೆ ಬಂದಿರುವ ಅಪ-
ಮೃತ್ಯುಗಳ ಪರಿಹರಿಸಿ ಗುರುಗಳ
ಮೃತ್ತಿಕೆಯ ಪಾದೋದಕಂಗಳನಿತ್ತು ಸಲಹಿದನು
ವ್ಯತ್ಯಯಾ ಇನಿತಿಲ್ಲ ಇವರೊಳು
ಮಿಥ್ಯದ ಮಾತುಗಳಿಲ್ಲ ಈತನ
ಕೃತ್ಯ ಗೋಚರಿಸುವುದೆ ಬುಧರಿಗೆ ಸತ್ಯ ಪೇಳುವೆನು ೬

ಭೂತ ಪ್ರೇತ ಪಿಶಾಚಿ ಕಡುಭಯ
ವ್ರತಗಳ ದೂರೋಡಿಸುವ ಜೀ-
ಮೂತಗಳ ವ್ಯೂಹದಲಿ ಝಂಝಾವಾತ ಪೊಕ್ಕಂತೆ
ಈತನಂ ವಾಲೈಸುತಿರುವರೊ-
ಳೀ ಬಾಧೆಗಳ್ ಇನ್ನುಂಟೆ ಜ್ವರ
ಸಂಘಾಪಕತ್ವವು ಹೋಗುವುದು ಹಿಮ ಖದ್ಯೋತ ಬಂದಂತೆ ೭

ಯಷ್ಟು ಪೊಗಳಲಿ ಇವರ ಪರಮೋ-
ತ್ಕೃಷ್ಟ ಮಹಿಮೆಯ ವರ್ಣಿಪೆ ತಿಳಿ
ದಷ್ಟು ನುಡಿಯುವೆನಲ್ಲದಲೆ ಮತಿಯಿಟ್ಟು ಸಲಹಿದನು
ಕುಷ್ಟ ಮೊದಲಾದ ವ್ಯಾಧಿಯ
ಸುಟ್ಟು ಬಿಸುಟುವ ಕಲುಷರಹಿತನು
ಹುಟ್ಟು ಬಂಜೆಗೆ ಪುತ್ರ ಪೌತ್ರರ ಕೊಟ್ಟು ರಕ್ಷಿಪನು ೮

ಮಂಗಳಾತ್ಮಕನಂಘ್ರಿ ಭಜಿಸಲು
ಹಿಂಗಿಸುವ ಹೃತ್ತಾಪ ದುರಿತಂ-
ಗಳನು ತಾ ತರಿದು ಸಜ್ಜನ ಸಂಘದೊಳಿಡುವಾ
ಇಂಗಿತಜ್ಞರು ಈ ಮಹಾತ್ಮರ
ತುಂಗ ಚರಿತೆಯ ನೋಡಿ ನೋಡಿ ನಲಿವರು
ರಂಗು ಪದುಮದ ಸಾರ ಗ್ರಹಿಸುವ ಭೃಂಗದಂದದಲಿ ೯

ಭಾಸುರಾಂಗನ ದೇಹ ಜನ್ಯ
ಸುವಾಸನೆಯು ದಶದಿಕಶದಿ ಮೊಳಗುತ್ತ
ಸೂಸಿ ಪರಿಯಲು ನೋಡಿ ತೆರಳಿದ ಶೇಷ ಭೂತಳಕೆ

ಈ ಶರೀರದೊಳಾವನದರು
ದೋಷ ಕಲ್ಪಿಸೆ ಹಾನಿ ತಪ್ಪದು
ದೂಷಿಸುವ ದುರ್ಜನರ ನಿರಯದಿ ವಾಸ ಮಡಿಸುವಾ ೧೦

ದೀನಜನ ಮಂದಾರ ಸುರತರು–
ಧೇನು ಚಿಂತಾಮಣಿಗಳಿಂದದಿ
ಧೇನಿಪರಿಗಿತ್ತಾಲಿಪನು ಸುಜ್ಞಾನ ಸಂಪದವಾ
ಏನು ಧನ್ಯನೋ ದಯದಿ ಶ್ರೀ ಪವ–
ಮಾನರಾಯನು ನಿಲಿಸಿಹನು ಈ–
ತನ ಒಲುಮೆ ದಿವ್ಯಸೋಪಾನವೆನಿಸುವದು ೧೧

ಪಂಚಭೇದಗಳಿಂದ ಇರುವ ಪ್ರ–
ಪಂಚದೊಳು ತಾ ಜನಿಸಿ ಜನರೊಳು
ವಂಚಿತನು ಎಂದೆನಿಸಿಕೊಂಡಾ ನಿಷ್ಕಿಂಚನ ಪ್ರಿಯನೂ
ಮಿಂಚಿನಂದದಿ ಪೊಳೆದುಸರ್ವರ
ಸಂಚಿತಾಗಾಮಿಗಳದನುರಹದ
ವಂಚಿಸುತ ನಿಜಸ್ಥಿತಿಯು ತಿಳಿಸದೆ ಸಂಚರಿಸಿದನು ೧೨

ಪುರುಷಲೋಷ್ಟದವೆನಿಸುತಲಿ
ಅರಿತು ಮನದೊಳು ಮಾನವರ ಉ–
ದ್ಧರಿಪಗೋಸುಗ ಧನವ ಘಳಿಸಿದ ಚಾತುರ್ಯ ಬೇರಿಲ್ಲ
ತ್ವರಿಸದಲೆ ಸರ್ವತ್ರದಲಿ ಹರಿಯ ಭಕ್ತಾಗ್ರಣಿಯೊಳಗೆ ಮಾ–
ಅನುಪಮ ಋಷಿಗಳಿವರೆಂದು ತಿಳಿವುದು ಪರಮ ಕೋವಿದರು ೧೩

ಸೃಷ್ಟಿಯೊಳು ತಾ ಬಂದು ಅಣಿಮಾ–
ದ್ದಷ್ಟಯೋಗಗಳೆಲ್ಲ ಸಾಧಿಸಿ
ಮುಟ್ಟಿ ಭಜಿಸಲು ಅವರವರ ಮನದಿಷ್ಟ ಸಲಿಸುವನು
ದುಷ್ಟರನು ನಿಗ್ರಹಿಸಿ ಭಗವ–
ನ್ನಿಷ್ಟರನು ಸಂತೈಸುತನುದಿನ
ವಿಠ್ಠಲನ ನಿಜದಾಸರೊಳು ಬಲು ಶ್ರೇಷ್ಠನೆನಿಸಿದನು ೧೪

ಕಾಸುಕಾಂಚನ ಘಳಿಸಬೇಕೆನು-
ತಾಸೆ ಉಳ್ಳವರಲ್ಲಿ ಸಜ್ಜನ
ದ್ವೇಷ ಬಯಸುವರಲ್ಲ ವಿಷಯದ ಆಶೆ ಮೊದಲಿಲ್ಲಾ
ಬ್ಯಾಸರದೆ ಭಗವದ್ದು-
ಪಾಸನೆಯ ಮಾಡುವರೊ-
ಳೆಂದಿಗಾದರೂ ದೋಷಗಳಿರಬಲ್ಲವೇ ಫಣಿವಿಶೇಷನಲ್ಲಹದೇ ೧೫

ಶ್ರೀಪತಿಯನನುದಿನವು ಭಜಿಸುತ
ತಾಪಸೋತ್ತುಮನೆನಿಸಿ ಈ ಭವ-
ಕೂಪದೊಳು ತಾನಿದ್ದೆನುತಲಿ ಲೇಪವಿಲ್ಲದಲೆ
ವಾಪಿಯೊಳು ಬಂಧುಗಳು ಸಮ-
ದಾಪರಣದೊಳಗಿದ್ದರೆಯು
ಪೋಪವಲ್ಲದೆ ಉದಕ ಜಲಜಕೆ ಲೇಪಿಸುವದುಂಟೆ ೧೬

ತರಣಿಯಂದದಿ ರಾಜಿಸುತ ಸಂ-
ಚರಿಸಿ ಪ್ರೇಮದಿ ದೀನಜನರು
ದ್ಧರಿಸುವರು ಮಹಿಯೊಳಗೆ ಇನ್ನಿಂಥ ಗುರುಗಳನ್ನಿಂಟ
ನಿರುತದಲಿ ತನ್ನನು ಭಕುತಿಯಲಿ
ಸ್ಮರಿಸಲವರಿಗೆ ದುರಿತಗಳು ಸಂ-
ಧಿಸೆ ಸ್ವಪ್ನದಿ ಬಂದು ಕಳೆಯುವ ಪರಮ ಕರುಣಾಳು ೧೭

ಲೋಕದಲಿ ಕೃಷ್ಣಾರ್ಯರಡಿಯೊಳ-
ಗೇಕ ಮಾನಸರಾಗಿ ಸಂತತ
ಕಪಟ ಇಲ್ಲದೆ ಇರುತಿಹರು ವಿವೇಕರೆನಿಸುವರು
ಶ್ರೀಕಳತ್ರನು ಒಲಿದು ಅವರನು
ಸಾಕುವನು ಸಂಪದವ ಸಲ್ಲಿಸುತ
ಸ್ವೀಕರಿಸದಲೆ ಇರುವವರೆ ಕಾಕುಮಾನವರು ೧೮

ಪತಿತಪಾವನರಿರುವ ಕಾಲಕೆ
ಕೆಲವುದಿನ ವಿವಿಧ ಬಲಿಯೊಳು
ಘೃತ ಸುಪಾಯಸ ಭಕ್ಷಗಳ ಸಂತಸದಿ ಸವಿದುಂಡು

ಶ್ರದ್ಧೆಯಲಿ ಶಿರಬಾಗಿ ಪ್ರಾರ್ಥಿಸ-
ಲುದ್ಧರಿಪ ಮಹಾನುಭಾವರು
ತಿದ್ದಿ ಪೇಳಿದರೆನಗೆ ಯೆರಡು ಪ್ರಸಿದ್ಧ ಶ್ಲೋಕಗಳಾ ೧೯

ಪದ್ಧತಿಯನರುಹಲ್ಕೆ ಪಾದಕೆ
ಬಿದ್ದು ಬಿನ್ನೈಸುವೆನು ಮಹತರ
ಪದ್ಯಗಳ ರಹಸ್ಯವೆನಿಪ ಅಪದ್ಧ ಮಾತಲ್ಲಾ
ವಿಧಾತ ಮೊದಲಾದ ಈ ವ-
ಸುಧಿ ಪಾತಾಳ ಲೋಕದೊಳಗಿಹ
ಜೀವಗಣ ಪ್ರತಿದಿನದಿ ಮಾಡುವ ಭಾವ ತಿಳಿದವರು ೨೦

ಈ ವಿಧದಿ ಅಪರೋಕ್ಷಿಗಳು ಮ-
ತ್ತಾವ ದೇಶದೊಳಗಿಲ್ಲ ಶ್ರೀ-
ಹರಿಯ ಸೇವಿಸುವ ಭಕ್ತರೊಳಗಿವರಾರೋ ಕಾಣೆ ೨೧

ಏಸು ದಿನದಲಿ ತನ್ನ ಸೇವಿಪ
ಭೂಸುರಗೆ ಪೇಳಿದನು ನಿನ್ನ ಮನ-
ದಾಸೆ ಪೂರೈಸುವೆನುವೆನುತಾ ಆಶೆ ತೋರುವನು
ಬ್ಯಾಸರಿಲ್ಲದೆ ಹರಿಯ ದಿನದುಪ-
ತ್ರಸದಲೆ ತಿರುಗಿರುಗಿ ಸ್ವಪ್ನಾದಿ
ಕಾಶಿ ಮೊದಲಾದ ಯಾತ್ರೆ ಮಾಡಿಸಿ ತೋಷಪಡಿಸಿದನು ೨೨

ಓದನವೆ ಶ್ರಮಿಯಾಗಿ ತೋರುತ
ಬಾಧಿಸಲು ಬಲು ಬಳಲಿ ಬಾಯ್ಬಿಡು-
ತಾದರದಿ ಶಿರಬಾಗಿ ಬೇಡಲಗಾಧ ಮಹಿಮರನು
ಪಾದಪದುಮವ ಭಜಿಸುತನುದಿನ
ಸಾದರದಿ ಉಚ್ಛಿಷ್ಟದಿಂದಲಿ
ವ್ಯಾಧಿಯನು ಪರಿಹರಿಸಿ ಸಲಹಿದ ಸಾಧು ಸಜ್ಜನರಾ ೨೩

ಕಲಿ ಮಲಾಹಪರೆನಿಪ ಗುರಗಳ
ಪೊಳೆವ ಗಾತ್ರದ ರಜವ ಪೂಜಿಸೆ
ಕೆಲವು ಕಾಲ ಪೋದ ಬಳಿಕ ಥಳಥಳಿಸುತಲೀ

ಚಲುವ ಸಾಲಿಗ್ರಾಮವೆನಿಸಿತು
ತಿಳಿಯದಿವರುತ್ಕೃಷ್ಟ ಮಹಿಮೆಯು
ಜಲರುಹೇಕ್ಷಣ ತಾನೆ ಬಲ್ಲದು ಇಳೆಯೊಳಚ್ಚರಿಯು ೨೪

ಮುರ ವಿರೋಧಿಯು ದ್ವಾಪರದೊಳವ-
ತರಿಸಿ ಯಾದವರೊಡನೆ ಆಡುತ
ಕರವರೋದ್ಧಾರ ಭಕ್ತಜನರುದ್ಧರಿಸುವಂದದಲಿ
ನರನ ನಟನೆಯ ಮಾಡಿ ತೋರಿದ
ದ್ವಿರದ ರಾಘವ ಪುರದ ಪ್ರಭು ಸಂ-
ತರಿಗೆ ಸದ್ಗತಿಯನಿತ್ತನು ಮಂಗಳ ಚರಿತ ಸುಖಭರಿತಾ ೨೫

ಭವನದೊಳೊಗೀ ಗುರುಕಥಾಮೃತ
ಸವಿಯ ಸುಜ್ಞಾನಿಗಳಿಗಲ್ಲದೆ
ಭವದೊಳಗೆ ಮುಣುಗುವ ಮಾನವರಿಗಿದು ರುಚಿಯೇ
ನವವಿಚಿತ್ರದ ಚಾರುವೀಣೆಯ ರ-
ಸವು ಗಾಯಕರಿಗಲ್ಲದೆ ಕಿವಿ-
ಯೊಳಗೆ ಬಾರಿಸಲು ವಾಯಸ ಸವಿಯ ತಿಳಿಯುವದೇ ೨೬

ಸಿಂಧುಶಯನರವಿಂದ ಲೋಚನ
ಅಂದಜಾಮಿಳ ವರ ವಿಭೀಷಣ
ಇಂದುಮುಖಿಯಳ ಮಾನರಕ್ಷಕ ಕಂದ ಧ್ರುವಗೊಲಿದ
ಒಂದಿ ಮಾಗಧ ಸನಕಸ-
ನಂದನಾರ್ಚಿತ ಪಾದಶ್ರೀಗುರು
ಇಂದಿರೇಶನ ದಯದಿ ಮಹಿಮಾ ಸಂಧಿ ಪೇಳಿದನು ೨೭

ಅಂತು ಸಂಧಿ ೧ಕ್ಕೆ ಪದ್ಯ ೨೭ಕ್ಕೆ ಮಂಗಳಂ.

## ೪೨೬

### ಶೃಂಗಾರವರ್ಣನ ಸಂಧಿ

ಸುಂದರಾಂಗನ ವದನ ರುಚಿಕರ-
ದಿಂದು ಮಂಡಲ ಘನಸುಕಾಂತಿಯ

ಅಂದ ಕುಂದಿಸುತ ಜಗದೊಳಗೆ ಸಮವಿಲ್ಲೆಂದು ರಾಜಿಸಿತು
ವಂದಿಸುವೆನನವರತ ಗುರುಪದ
ದ್ವಂದ್ವ ಭಕುತಿಯಲಿ ಮನದಿ ಸು-
ಗಂಧ ತನು ಶೃಂಗಾರವರ್ಣನೆ ಪೇಳುವೆ ಮಂದಮತಿ ನಾನು ೧

ಪದುಮದಂದದಿ ನಯನ ಸಂಪಿಗೆ
ತುದಿಯ ತೆರನಾಶಿಕವು ಪೊಳೆಯುವ
ವದನ ದಾಡಿಮದ ಬೀಜವು ಹೃದಯ ವಿಸ್ತರವು
ಉದರ ಕದಳಿಯ ವರ್ಣ ವಾಪೀ
ಸದೃಶನಾಭಿ ಸುಮಧ್ಯ ಮೃದು
ಪದುಮ ತಾತ್ವಿಕನವಯವಗಳೀವಿಧದಿ ತೋರಿದವು ೨

ಶಿರದಿ ಶೋಭಿಪ ಶಾಲು ಭರ್ಜರಿ
ವರಮಹೀಶರು ಒಲಿದು ಕೊಟ್ಟಿಹ
ಹಿರಿದುಬೆಳಗಲು ಉಳಿದ ವಜ್ರದ ಕರ್ಣಭೂಷಣವು
ಕೊರಳೊಳಗೆ ನಲಿನಲಿವ ಮೌಕ್ತಿಕ
ಸರದ ಎಳಿಗಳು ಅನುಪಮಥರ
ಥರದ ಮಣಿಖಚಿತ ತುಳಸಿಯ ಸರವು ಶೋಭಿಸಿತು ೩

ಥೋರ ಮುತ್ತಿನ ಹಾರದೊಳಗಿಹ-
ಪಾರ ಕಲ್ಹಾರ ಪದಕದ ಚಾರು
ಚಿದ್ಯುತಿ ನೋಡಿ ಶಶಿ ತಾ ಶೇರಿದಾಕಾಶಕೆ
ಭಾರಿ ವಜ್ರದ ಹರಳು ಕೆಚ್ಚಿದ
ಮೋರೆಯಂಚಿನ ತೆರದಿ ಮಿನುಗುವ
ಮೂರೆಳೆಯ ಉಡುದಾರ ಕಂಠಿ ಶೃಂಗಾರವೆಂತಿಹುದು ೪

ಯತ್ತ ನೋಡಿದರತ್ತ ಝುಗಝುಗಿ
ಸುತ್ತ ಕಂಠದಿ ಶೋಭಿಸುವ ವಂ-
ಒತ್ತು ಎಳೆಗಳ ಚಂದ್ರಹಾರವು ಮತ್ತೆ ಪೇಳುವೆನು
ತಪ್ತ ಕಾಂಚನದಿಂದ ರಚಿಸಿದ

ಜತ್ತಿನಿಂದಲಿ ಇರುವ ಕಂಠಿಯು
ರತ್ನಪದಕದ ಪುತ್ಥಳಿಯ ಸರವು ಶೋಭಿಪುದು ೫

ಧಾತ ದಕ್ಷಿಣಕರದಿ ಧರಿಸಿದ
ಜಾತರೂಪದ ಪಾಂಚದೊಳು
ಮಾರೇಶ್ವರ ಮೂರ್ತಿ ನಲಿಯುತ ಪ್ರೀತಿಲಿಂದಿಹನೂ
ಭೂತಳದೊಳಾವಲ್ಲಿ ಕಾಣೆನು
ಈ ತೆರದ ವೈಭವಾತಿಶಯ ಪುರು-
ಹೂತ ನಂದನ ಕಲ್ಪಕನುದ್ಭವಿಸಿದ ಆ ಖ್ಯಾತ ಕೃಷ್ಣಾರ್ಯಾ ೬

ಎರಡನೇ ಬೆರಳೊಳಗೆ ರಾಜಿಪ-
ಚರಿತಿಕೆತ್ತಿದ ರತ್ನದುಂಗುರ
ಪಚ್ಚದ ಮುದ್ರಿಕೆಯು ನಡುತರದ ಬೆರಳಿನೊಲು
ಅರುಣನಂ ಧಿಕ್ಕರಿಪ ಕೆಂಪಿನ
ಹರಳಿನುಂಗುರ ನಾಮಿಕಾದೊಲು
ಕಿರಿಬೆರಳಿಗೆ ಭಾರತೀಶನ ಗುರುತಿನುಂಗುರವೂ ೭

ಚಾರುತರ ಮೈಸೂರುಪುರದೊಳು-
ದಾರ ಮಹಿಮನು ಮೆರೆದ ವೈಭವ
ಸಾರಲೆನ್ನೊಶವಲ್ಲ ಯಂದಿಗಪಾರವಾಗಿಹುದು
ಪೌರಜನಸಂದಣಿಯು ಅದ್ಭುತದಿ
ಭೋರಿಡುವ ವಾರಿತ್ರಗಲ್ಲಿ ಹೂಂ-
ಕಾರ ಮಾಡುವ ವಾಜಿಗಟ ಶೃಂಗಾರವೇನೆಂಬೆ ೮

ನಾಟಕರು ನರ್ತಕರು ವಾರಿ ವ-
ಧೂಟಿಯರು ಅಲ್ಲಲ್ಲಿ ವೀಣೆಯ
ಮೀಟುತಲಿ ಸಂಗೀತ ಮಾಳ್ಪರು ಧಾಟಿ ವೀಯೊಳು
ಹಾಟಕದ ಛಡಿಯವರು ವಿಭವಕೆ
ಸಾಟಿ ಈ ಜಗದೊಳಗೆ ಕಾಣೆನು
ಬೂಟಕದ ಮಾತಲ್ಲ ದೈಶಿಕರಾಟಸೋಜಿಗವು ೯

ಉತ್ತುಮೋತ್ತುಮವೆನಿಪ ಶ್ವೇತ
ಛತ್ರಗಳು ಎಡಬಲದಿ ಬೀಸುವ
ವಿಚಿತ್ರ ಚಾಮರವು....
ಮುತ್ತಿನಾರತಿ ತಂದು ಎದುರಿಗೆ
ಎತ್ತಿ ಬೆಳಗುವ ಸುದತಿಯರು ಬಹು
ವತ್ತಡಿಯ ಮಹಿಮೆಯ ಸ್ತುತಿಸುವ ಭಕ್ತರೆಂತಿಹರು ೧೦

ನೀಲ ಮೌಕ್ತಿಕ ಮಣಿಗಣಂಗಳ
ಝಾಲರಿಯ ಕಟ್ಟಿರುವ ವಿಚಿತ್ರ
ಮೇಲು ಮಂಡಿಯೊಳಮಿತ ಕಾಂತಿಯ ಸಾಲು ಕನ್ನಡಿಯು
ಇಲ್ಲೆ ವಿಧವಿಧ ತೋರುತಲಿ ಕರು–
ಣಾಲವಾಲನು ಶೋಭಿಸಲು ಭೂ–
ಪಾಲನರಮನ ರಾಜಿಸಿತು ತ್ರಿದಿಶಾಲಯದ ಪರಿಯಾ ೧೧

ಈ ಪರಿಯ ವೈಭವದಿಂದಲವ–
ನೀಇಪತಿಯು ಕರೆತರಲು ಸದನದಿ
ವ್ಯಾಪಿಸಿದ ಪರಿಮಳವ ನೋದಡುತ ಭೂಪ ಬೆರಗಾಗಿ
ತಾಪಸೋತ್ತುಮರಡಿಗೆ ವಂದಿಸಿ
ಶ್ರೀಪತಿಯ ಭಕ್ತರೊಳು ಬಿಂ–
ಬಾಪರೋಕ್ಷಗಳರ್ಚಿಸಿದ ಸಕಲೋಪಚಾರದಲಿ ೧೨

ಕುಂದಣಾಭರಣಂಗಳಿಂದ ವಸ್ತ್ರಗ–
ಳಿಂದ ಪೂಜಿಸಿ ಕೃಷ್ಣಭೂಪತಿ
ಇಂದಿಗೆನ್ನನು ಧನ್ಯರೆನಿಸಿದರೆಂದು ಪ್ರಾರ್ಥಿಸಿದಾ ೧೩

ಏನು ಧನ್ಯರು ಕ್ಷಿತಿಪರಿವರಿ–
ನ್ನೇನು ಮಾನ್ಯರು ಲೋಕದೊಳೆಣೆಗಾಣೆ
ಇವರಿಗೇ ಸುಜ್ಞಾನ ನಿಧಿಗಳಿಗೆ
ಪ್ರಾಣದೇವರ ಪ್ರೀತಿಪಡೆದಿಹ
ದಾನಿ ಕೃಷ್ಣಾರ್ಯರಿಗೆ ಬಹುಮಾನ
ಸುಲಭಲ್ಲಿದಲೆ ಪೂರ್ಣರಿಗೇನು ದುಸ್ತರವು ೧೪

ಕಲ್ಲು ಕನಕವ ಮಾಡುವರು ಮೃದು
ಮಲ್ಲಿಗೆಯ ಮೇಲದ್ರಿ ಭಾರವ ನಿಲ್ಲಿಪರು
ಜಲಕಡೆದು ಬೆಣ್ಣೆಯ ತೆಗಿಯಬಲ್ಲವರು
ಬಲ್ಲಿರೀತನ ಪಿಡಿದು ಪೀಡಿಸುವ–
ನಲ್ಲೆದರಲ್ಲಿ ತೈಲವ ತೆಗೆಯಬಲ್ಲವರು ೧೫

ಬಲ್ಲಿದ ಪ್ರಾಜ್ಞರಿಗಸಾಧ್ಯವಲ್ಲ
ಜಗದೊಳಗೆ ಎಲ್ಲಿ ನೋಡಿದರಲ್ಲಿ ಇವ–
ರೊಲುಮೆಯಿಂದಲಿ ಭಜಿಸುತಿಹ ಭಕ್ತರೊಳಗಿವರಾವರೋ ಕಾಣೆ
ಕ್ಷೋಣಿಪತಿಗಿಷ್ಟಾರ್ಥ ಸಲಿಸಿದ
ಮಹಾನುಭಾವರು ರಾಜಿಸುತ
ಸನ್ಮಾನವನು ಸ್ವೀಕರಿಸುತಲೆ ಕೈಗಾಣಿಕೆಯ ಕೊಂಡು ೧೬

ಮಾನ ಅಪಮಾನಗಳು ಭಗವದ–
ಧೀನ ವೆನಿಸುತಲಿ ತಿಳಿದು ಹಿಗ್ಗದೆ
ಯೇನು ಆದದ್ದೆಲ್ಲ ಶ್ರೀ ಪವಮಾನಗರ್ಪಿಸಿದಾ
ಪುಂಡರೀಕದಳಾಯತಾಕ್ಷನ
ಹಿಂಡೊಲಿದು ಹಿರಿದೆನಿಸುತಲಿ ಭೂ–
ಮಂಡಲದಿ ದಿಗ್ವಿಜಯಗೈಸಿದ ಪಂಡಿತಾಗ್ರಣಿಯ ೧೭

ಕಂಡು ಕೂಗ್ಯಾಡಿದರೆ ಪರಮೊ
ದ್ದಂಡ ಮಹಿಮೆಗೆ ಕೊರತೆ ಬಾರದು
ಕೆಂಡ ಉಡಿಗಟ್ಟಿದವನ ತೆರ ಉಂಡುತೀರಿಸುವ ೧೮

ಕಂತು ಜನಕನು ನಲಿದು ನಲಿಯುತ
ಅಂತರಂಗದೊಳಟ್ಟವರದೀ
ನಾಂತರದೋಳ್ ವಿದ್ವಾಂಸರೆನಿಸಿದಚಿಂತಮಹಿಮರನಾ
ಇಂತು ಕರುಣವ ಪಡೆದ ಭಕುತರ
ಚಿಂತಿತಾದ್ಯಗಳಿತ್ತ ಸದ್ಗುಣ–
ವಂತ ಗುರುವರ ರಮ್ಯರದ್ಯಾ ಶ್ರೀಮಂತಾ ದಯವಂತಾ ೧೯

ಸದಮಲಾಂಗನ ಪಾದ ಸ್ಮರಿಸಲೀ–
ವಿಧದಿ ಶೃಂಗಾರ ಸುಪದ್ಯಗಳು–
ದಯಕಾಲದಿ ಪಠಿಸಲಿಹ ಪರತ್ರದಲಿ ಸೌಖ್ಯಗಳಾ
ಪದುಮನಾಭನು ಸಕಲಸಂಪದ
ಒದಗಿಸುವ ಅನುಮಾನ ಸಲ್ಲದು
ಹೃದಯ ನಿರ್ಮಲರಾಗಿ ಕೇಳುತ ಬುಧರು ನಲಿಯುವರು ೨೦

ಒಂದು ಅರಿತವರನಲ್ಲ ನಾ ಮನ
ಬಂದ ತೆರ ಶೃಂಗಾರ ವರ್ಣನೆ
ಸಂಧಿ ಪೇಳಿದೆ ಸಜ್ಜನರು ಕೃಪೆಯಿಂದಾಲಿಪುದು
ವಂದನೆಯ ಮಾಡುತ ಪದೋಪದಿಗೆ
ಮುಂದೆ ಸಾದರದಿಂದ ಶ್ರೀ ಗುರು
ಇಂದಿರೇಶನ ದಯದಿ ಮಹಿಮಾ ಸಂಧಿ ಪೇಳುವೆನು ೨೧

ಅಂತು ಸಂಧಿ ೨ಕ್ಕೆ ೨೧ಕ್ಕೆ ಪದ್ಯಗಳು ಮಂಗಳ ಮತ್ತು.

## ೪೨೭

**ಮಹಿಮಾ ಸಂಧಿ ಪ್ರಾರಂಭ**

ಕಾಮ ಕ್ರೋಧಾದಿಗಳ ಜಯಿಸಿದ
ಕಾಮಿತಪ್ರದ ಕರುಣಿ ಸದ್ಗುಣ
ಧಾಮ ಸಂತತ ಪಠಿಸುತಲಿಹ ಶ್ರೀರಾಮ ಮಂತ್ರವನು
ಯಾಮ ಯಾಮಕೆ ಭಾವಶುದ್ಧದಿ
ಈ ಮಹಾತ್ಮನ ವಿಮಲ ತಳಿರಡಿ
ನೇಮದಿಂದರ್ಚಿಸಲು ಒಲಿಯುವ ಶ್ರೀ ಮನೋಹರನು ೧

ಸ್ನಾನ ಜಪತಪ ಮಾಡಿದರೇನು ಫಲ
ಶಾಸ್ತ್ರಗಳ ಪಠಿಸಿದರೇನು ಫಲ
ಡಾಂಭಿಕದಿಂದೆಲ್ಲ ಅನುಸಂಧಾನವಿಲ್ಲದಲೆ
ಸಾನುರಾಗದಿ ಇವರ ಮಹಿಮೆಯ

ಗಾನ ಮಾಡುತ ಕುಣಿದು ಹಿಗ್ಗಲು
ಶ್ರೀನಿವಾಸನ ಪೂಜೆ ಸುರನದಿ ಸ್ನಾನವೆನಿಸುವದು ೨

ಈತ ಧರಿಸಿದ ಮಾಲೆ ಲಕ್ಷ್ಮೀ
ನಾಥಗದು ಉಯ್ಯಾಲವೆನಿಸಿತು
ಈತನೂರ್ಜಿತ ನಾಮಾ ಸುಮನಸ ವ್ರಾತಗತಿ ಪ್ರೇಮಾ
ಈತ ಮಾಡಿದ ಕೃತ್ಯ ಸಂತತ
ಮಾತರಿಶ್ವನ ಮನಕೆ ಸಮ್ಮತ
ಈತನಡಿಗಳ ಧ್ಯಾನ ಸುಖವಿನ್ಯಾತಕನುಮಾನಾ ೩

ವನಜನಾಭನ ದಾಸರಿಗೆ ನಿಜ
ಮನೆಯೆನಿಸಿಕೊಳಿಸುವರ ಪರ–
ಘನ ಮಹಾತ್ಮರ ಸೇವೆ ದೊರೆವುದೆ ಜನಕೆ ದುರ್ಲಭವು
ಪ್ರಣತ ಕಾದರೆನಿಪ ಗುರುಪದ
ವನರುಹಂಗಳ ಸ್ಮರಿಸುವಂದದಿ
ಮನಸುಕೊಡು ಎಂದ್ವರಿಗೆ ಪ್ರಾರ್ಥಿಪೆ ಜನುಮ ಜನುಮದಲಿ ೪

ಸೂರಿ ಕೃಷ್ಣಾರ್ಯರ ಕಥಾಮೃತ
ಸಾರ ಪಾನದಿ ಸಂಸಾರ ಸುಖ
ರುಚಿಯೆಂದು ಮನದೊಳಗೆ ಪೂರ ತಿಳಿಯದವನು
ನೀರಡಿಸಿ ತಿರುತಿರುಗಿ ಗಂಗಾ
ತೀರದಲಿ ತಾಬಂದು ವರ್ತಿಯ
ನೀರು ಕುಡಿದವನಂತೆ ಪಶುಪರಿವಾರನೆನಿಸುವನು ೫

ಅರವಿದೂರನ ಕರುಣಪಾತ್ರಗೆ
ದುರಿತಗಳ ಭಯವಿಲ್ಲ ಜಗದೊಳು
ತಿರುಕನೆಂ ಭಯ ಉಂಟೆ ಸಿಂಹನ ನೆರೆಯಲಿದ್ದವಗೆ
ಅರಗಳಿಗೆ ಬೆಂಬಿಡದೆ ಭಕುತರ
ಪೊರೆವ ಕರುಣಾ ಶರಧಿ ಎನಿಪರ
ಚರಣ ಪಂಕಜಕೆ ನಮಿಪೆನು ನಿರುತ ಶಿರಬಾಗಿ ೬

ರವಿಯ ಮಂಡಲಕೆಸೆದು ಮಿರ್ತಿಕ (?)
ಸ್ರವಿಯ ನೋಡಿದರೆ ಅವರ ಕಾಣಲು
ಕವಿಯ ಬಲ್ಲವೆ ಹಾನಿಯಾಗದು ಪವಿತ್ರ ಮಂಡಲಕೆ
ಕವಿವರೇಣ್ಯರ ನಿಂದಿಸಲು
ಅವರಿಗಾಗುವದೇನು ಕೊರತೆಯು
ಜವನ ಭಟರೆಳೆದೊಯ್ದು ನರಕದೊಳವನ ಬಾಧಿಪರು ೭

ಕಲುಷಿತಹಿತರ ಕೀರ್ತಿಯಲಿ ಭೂ–
ವಲಯ ದಶದಿಶವೆಲ್ಲ ರಾಜಿಪೆ
ತಿಳಿಯದಲೆ ಪುಡಕಿದರು ವಾಹನ ಸ್ಥಳದಿ ಪಾಕಸರು
ಕುಲಶಧರ ಕರಿವರನ ಚಲುವೆ
ಧರಿಯ ರಜತಾಚಲವೆ ಬೆಡಗಿಸಿದ
ಹಂಸನಾಚ್ಛನ ಛಲದಿ ಶರ್ಭಾನು ೮

ಕಾಂತ್ಯನ ಮಿತ್ರ ನಿರಾಗ ಸಂವೃತ
ದ್ವಿಜ ನಿಶ್ಲಾಘನೀಯ
ಸಂತತ ನಿಜವೆನಿಪ ರತ್ನಾಕರ ಸುಜನತಾಪಹರಾ
ವಿಜಯ ಸಾರಥಿ ಪದ ನಿರಾಶ್ರಯ
ದ್ವಿಜ ನಿಕರ ಪರಿಪಾಲಿಸು ಮಹಿತ
ವೃಜನಹಾರ ಕೃಷ್ಣ ವಿಧುಪದ ಭಜಿಸಿ ಪ್ರಾರ್ಥಿಸುವೆ ೯

ನಿಗಮವೇದ್ಯ ನಿರತಿಶಯ ಮಹಿಮೆ
ಗಳ ಕೊಂಡಾಡುತಲಿ ಪನ್ನಗ
ಗಗನದೊಳಿಗೆ ಏಕಾಗ್ರಚಿತ್ತದಿ ಮಿಗೆ ಹರುಷದಿಂದಾ
ಚಿಗಿದು ಶ್ವಾಶೋಚ್ಛ್ವಾಸ ಸಹಸ್ರ
ಮತ ಪದ್ಯಗಳ ತಪದಿ
ಕೈವಲ್ಯ ಸುಸಾಧನದಿ ಜಗದಿ ಜನಿಸಿದನು ೧೦

ದ್ವೇಷದಿಂದಲಿ ಅಹಿಕ ಸುಖಗಳ–
ಪೇಕ್ಷಿಸದೆ ಗುರುಪದಕೆ ವರ ಗಂ–
ಧಾಕ್ಷತೆಗಳಿಂದರ್ಚಿಸದೆ ರಾಕ್ಷಸಾಂತಕನಾ

ಮೋಕ್ಷದಯಕರೆನಿಪರಿವರ ಕ–
ಟಾಕ್ಷ ಈಕ್ಷಣ ಮೋಕ್ಷ ಸಾಧನ
ಸಾಕ್ಷರಾಹ್ಯರು ಯೋಗಿಗಳಾಕ್ಷ ಮಾಧ್ವಿಗಳು ೧೧

ಕಡು ದಯಾಂಬುಧಿ ರಾಮನಾಮಕ
ರೊಡೆಯಾ ಕೃಷ್ಣಾರ್ಯ ಗುರುಗಳ
ಪೊಡವಿ ಬಿಡದೆ ಪಾತಾಳಲೋಕದಿ ಬಿಡದೆ ಗಡಬಡಿಸಿ
ಪುಡುಕಿದರೆ ಮೈಸೂರು ಗ್ರಾಮದಿ
ಒಡಿಯ ನಿಜ ಭಕ್ತರನು ನೋಡುತ
ಸಾದರದಿ ಗುರುಪದವ ಭಜಿಸುತ ದೃಢದಿ ನಿಲಿಸಿದನು ೧೨

ಉದರಗೋಸುಗ ವಿವಿಧ ಕರ್ಮವ
ಉದಕತಾವಕರೊಡನೆ ಮಾಡದೆ
ಹೃದಯ ನಿರ್ಮಲರಾಗಿ ದಶಮತಿ ಮೃದು ಸುಶಾಸ್ತ್ರಗಳ
ಮೊದಲಿನಂತೆ ಓದಿ ಬರೆಯದೆ
ಮದಡ ಮತಿಯೆಂದೆನಿಸಿ ಮದ್ಗುರು
ವದನದೊಳು ತಾನಿಂತು ನುಡಿಸಿದ ಸದಯನೀ ಕೃತಿಯಾ ೧೩

ಚಾರುವರ ಗಂಭೀರ ಕವಿತದ
ಸಾರವನು ನಾನರಿಯೆ ಜಡಮತಿ
ಸೂರಿಗಳು ತಾತ್ಪಾರಿಸುವಗದು ಥರವಲ್ಲ
ಯೇರಿಬರ ಓರ್ಮಿಗಳ ಶಬ್ದಗಂ
ಭೀರ ವಾರಿಧಿ ಮಿತಿಯು ಮಂದರ
ಪೂರ ತಿಳಿವರು ದಾಂಟಿರುವ ಕರಪಿಡಿ ತರವೇ ೧೪

ಒಲಿವ ಸಾಲಿಗ್ರಾಮ ಮೊದಲಾದ
ಧವಳ ಪವಳಗಳಲ್ಲಿರುವ
ಜಲಜನಾಭನ ರೂಪಗುಣಗಳ ತಿಳಿದುಪಾಸನೆಯಾಯಾ
ನಲಿದು ಮಾಡುವ ಉದಧಿ ಶಯನನ
ಒಲಿಸಿ ವ್ಯಾಪ್ತೋಪಾಸಕರು
ಯನಿಸಲೀಯೋಗ ಸಂಚರಿಪರಿವರೊಳು ಕಲುಷಗಳಿನ್ನುಂಟೆ ೧೫

ಭರತ ಖಂಡದಿ ಜನಿಸಿ ಸೌಖ್ಯವ
ಸುರಿಸುತಲಿ ಸದ್ಭಕ್ತಿ ಭಾವದಿ
ನಿರುತ ಮಾಡಿದ ಕರ್ಮಗಳು ಹರಿಗುರುಗಳಾ ಪೂಜೆ
ಪರ್ವತದ ಓಲ್ಲರಿದು ಪುಣ್ಯಕೆ
ಪರಿಮಿತಿಯ ಇಲ್ಲೆಂದೆನಿಸಿಕೊ-
ಬರು ಅರುಹಿದೆನು ಶಾಸ್ತ್ರಗಳು ಭಕುತಿಗೆ ಸರಿಯು ಇಲ್ಲೆನುತಾ ೧೬

ಧ್ಯಾನ ಮಹಾತ್ಮರ ಸಜ್ಜನರು
ಬಗೆಯು ತಿಳಿಯದಲೆ ಕುಹಕಗ-
ಳೆಣಿಸುತಲಿ ಕೆಲಜನ ಸೇವಕರೆನಿಸಿಕೊಂಬುವರು
ಮನದಿ ಭಕುತಿಯ ತೊರೆದು ತಾರಕ
ನನುಸರಿಸಿ ಮಾಡಿಸುತ ಕರ್ಮವು
ಘನಗಿರಿಗೆ ಪಾಷಾಣ ಮಿರ್ತಿಕೆ ದಣಿದು ಪೊತ್ತಂತೆ ೧೭

ನಿತ್ಯ ಜಪತಪ ಹೋಮಗಳು
ಪ್ರತ್ಯಪಥಿಗಳ ಬಿಡದೆ ಮಾಡಲು ಸತ್ಯ ತಿಳಿಯುವುದು
ಹರಿಯು ಮುನಿದೊಡೆ ಭೃತ್ಯರನು ಪಾಲಿಪ ಗುರುವರ
ಮುಕ್ತಿದಾಯಕ ಮುನಿಯೆ ಹರಿ ಕಣ್ಣೆತ್ತಿ ನೋಡಿವನಾ ೧೮

ನಿರುತ ಮಾತಾಪಿತೃಗಳಲಿ ವರ
ಗುರುಗಳಲಿ ಸದ್ಭಕ್ತಿ ಭಾವದಲಿ-
ರುವ ಹರಿಬ್ಯಾರಿಲ್ಲೆನುತ ಅರಿತವನವನೆ ಮಾನವನು
ಪರಿಪರಿಯ ದುಃಖಗಳನನುಸರಿ
ಹೊರಳಿ ದುಸ್ತರವೆನಿಸಿ ತೋರುವ
ನರಕಮಯ ಸಂಸಾರವೆಂಬುವ ಶರಧಿ ದಾಟುವನು ೧೯

ಮರುತ ಶಾಸ್ತ್ರಗಳೋದಿ ಅದರೊಳ
ಗಿರುವ ಸಾರವ ತಿಳಿದು ಹರಿಗುರು
ಗಳಲಿ ದೃಢಭಕ್ತಿ ಮಾಡದೆ ಜರಿದು ಸತ್ಕಾರ್ಯ
ದುರುಳ ಜನರನನುಸರಿಸಿ ಸಂತತ
ವ್ಯರ್ಥಾಯುಗಳೆದೆನು ಗುರು ತಲ್ಪಕ-
ನ ಕರಪಿಡಿದು ಸಂತೈಸಬೇಕೆಂದು ೨೦

ನೀಲನೀರದ ಲಕ್ಷ್ಮೀಲೋಲನಂ–
ಪ್ರಿಯ ಭಜಿಸುತಲಿ ಸತ್ಶೀಲ–
ರೆನಿಸುವ ಸುಜನರ ಕಂಡ್ಹೇಳನವ (ಅವಹೇಳನವ) ಮಾಡಿದೆ
ಕೂಳಿನೋಸುಗ ಪೋಗಿ ಪರರನು
ಓಲಯಿಸಿ ಮನೆಮನೆಯ ಚರಿಸುತ
ಹಾಳು ಹರಟೆಯ ಹರಟುತಲೆ ಸದಾ ಕೀಳ ಮಾನವರಾ ೨೧

ಭೂತಳದ ನಾಥನೆ ಆ ಸಕಲ
ಭೂಮಿಗೆ ಭಾರನೆನಿಸುತ
ಈ ತೆರದಿ ಕಡುಪಾತಕಕೆ ಒಳಗಾಗಿ
ಆತುರದಿ ಬಳಬಳಲಿ ಪುಡುಕಿದರೆ
ಅನಾಥರಿಗೆ ಆಧಾರ ಈತನೇ
ಪ್ರೀತಿಯು ಉದ್ಧರಿಸಿಸಲಹುವ ದಾತರನು ಕಾಣೆ ೨೨

ಸಾದರದಿ ಶಾಸ್ತ್ರಗಳ ಸಂಶೋ
ಧಿಸುತ ನೋಡಲ್ಕೆ ಮಹಿಯೊಳ
ಗಾದಿ ಗುರು ಕೃಷ್ಣಾರ್ಯರೆನಿಸುತಲಿ ಸಾಧುಯೋಗಿಗಳು
ಬೋಧಿಸಿದ ಗ್ರಂಥಗಳೊಳಗೆ
ಪ್ರತಿವಾದಿಗಳಿಗೊಂದಿಸುವೆ
ದೃಢವಾದ ಭಕುತಿಯನಿತ್ತು ಸಲಹಲಿ ಪಾದ ಪದುಮದಲಿ ೨೩

ಈ ವಸುಧೆಯೊಳಗುಳ್ಳ ಜೀವಿಗಳು
ಸತ್ಕರ್ಮವ ಮಾಡಲಿ ಭಾವ
ಶುದ್ಧದಿ ತಿಳಿದ್ದರಿಗುರುಸೇವೆಯೆನುತಲಿ
ಕೋವಿದರು ಎಂದೆನಿಸುವರು
ಪಾವನಾತ್ಮಕರೆನಿ ಪರಿವರಿಗೆ
ಕಾವನಯ್ಯನೆ ಒಲಿಒಲಿದೀವ ಪುರುಷಾರ್ಥ ೨೪

ಘನಕಥಾಮೃತಸಾರ ದಿನದಿನದಿ ಭಕುತಿಯಲಿಂದ ಸ್ಮರಿಸಲು
ಜನುಮ ಜನುಮದ ಪಾತಕವು ತಕ್ಷಣದಿ ಪೋಗುವುದು

ಅನುದಿನದಿ ಸೌಖ್ಯಗಳನನುಭವಿಸಿ ಇಹಪರ ಲೋಕದಲಿ ಸ-
ಜ್ಜನರೆನಿಸಿ ಸತ್ಕೀರ್ತಿಯನು ಪಡೆಯುತ ಮನದಿ ಹಿಗ್ಗುವರು ೨೫

ಸತತ ಸಂಧ್ಯಾಕಾಲದಲಿ ಈ ಕಥೆಯ ಕಿವಿಗೊಟ್ಟಾಲಿಸುವ ತೆರದಿ
ಭಯವಿಲ್ಲ ಮುಕುತಿ ಸುಸಾಧಕವು
ಸತಿಸುತರು ಸುಜ್ಞಾನ ಪಡೆವರು
ಮತಿವಿಹೀನನು ಮತಿಯನೈದುವ
ಪತಿತ ಪಾವನರಡಿಯೊಳಗೆ ಸದ್ಗತಿಯು ಹುಟ್ಟುವುದು ೨೬

ಚಾರು ಹರಪನಹಳ್ಳಿ ವರ ಮಧ್ವಾಚಾರ್ಯರ
ಸುತ ವೆಂಕಟ ಸುನಾಮಕ
ಧೀರ ಕವಿಯೆಂದೆನಿಸಿ ಹರಿಯ ಪ್ರೇರಣೆಯ ಕೊಂಡು
ಭಾರತೀಶನ ಭಜಕರೆನಿಸುವ ಸೂರಿವರ ಕೃಷ್ಣಾರ್ಯರ ಶೃಂ-
ಗಾರ ಮಹಿಮೆ ಭಕುತಿ ಪೇಳಿದೆ ಮೂರು ಸಂಧಿಗಳು
ಕೋಮಲಾಂಗ ಕೃಪಾಳು ದನುಜ ಸ್ತೋಮ ಕವಿಭಿರೀಡಿತ
ಈ ಮಹಾತ್ಮರಿಗೊಲಿದ ಸದ್ಗುಣ ಧಾಮಗೊಂದಿಸುವೆ
ಸಾಮಗಾನ ಪ್ರೀಯ ಗುರುಗಳಂತರ್ಯಾಮಿ ಶ್ರೀಗುರು ಇಂದಿರೇಶನು
ಪ್ರೇಮದಿಂದಲಿ ಸಲಿಸಲೆನ್ನಗೆ ಕಾಮಿತಾರ್ಥಗಳ ೨೭

ಗುರುಕಥಾಮೃತಸಾರ ಸಮಾಪ್ತಿ.

## ೪೨೮

ಬೇಡುವೆ ವಂದನೆ ಮಾಡುವೆ ಪ

ಮೂಡಲಾದ್ರಿನಿವಾಸನೇ ಹೃನೀಡದೊಳು
ನೀ ನಿಂತು ಶ್ರೀಶನೆ
ಮಾಡಿಸುವ ಪದ್ಯಕ್ಕೆ ಪದನವ ಜೋಡಿಸಿ
ಸವಿಮಾಡೊ ಬಗೆಯನೆ ಅ.ಪ.

ಶ್ರೀಶ ವೇದವ್ಯಾಸಮುಖ ಮಧ್ವೇಶ–
ಪದಯುಗ ದಾಸರೊಳು
ವಿಶೇಷ ಜೈಮಿನಿವರ್ಯಗೆರಗುತೆ
ವ್ಯಾಸರಾಯರು ರಾಘವೇಂದ್ರರು ಭೂಸುರೋತ್ತಮ ವರ್ಗಕೆ
ಕರುಣಾಸಮುದ್ರ ಶ್ರೀ ಸತ್ಯಬೋಧರ ೧

ಧಾತ್ರಿಯೊಳು ವಿಚಿತ್ರಗಾಲವ ಕ್ಷೇತ್ರದಲ್ಲಿಹ ಮುದ್ಗಲಾರ್ಯರ
ಪುತ್ರ ಪೌತ್ರ ಪ್ರಪೌತ್ರ ಮೊದಲು ಕಳತ್ರ ಮಿತ್ರರು ಛಾತ್ರವರ್ಗಕೆ ಪಾತ್ರ
ಪದಶತಪತ್ರಕೆ ವರ
ಗಾತ್ರದಿಂದಭಿನಮಿಸಿ ವರಗಳ ೨

ಕಾಮಿತಾರ್ಥದ ರಾಜಗೋಪಾಲ ಆ ಮಹಿಮೆಯೊಳು ಮಗ್ನರಾಗಿಹ
ಪ್ರೇಮಿ ಗುರುಗೋಪಾಲ ಕೃಷ್ಣರ
ನಾಮ ನಿಜ ಇಹಪರಕೆ ಸಾಧನ ಸ್ವಾಮಿ ಪಿತರಮಾತಾಮಹರ ಪದ
ಕಾಮರಸ ಮನಸಾ ಸ್ಮರಿಸಿ ವರ ೩

## ೪೨೯

ಬಾಗಿ ಬೇಡುವೆ ಸರ್ವಾಘವಳಿಯಿರೆಂದು ಪ

ರಾಘವೇಂದ್ರನೆಂಬಾ ಗುರುಪಾದ ಪ
ರಾಗ ಪೊರೆಯಲೆಂದು ಹೀಗೆ ಮನದಲಿ ೧

ದೋಷಹಾರಿ ವಿಘ್ನೇಶಾಂತರ್ಗತ
ಶ್ರೀಶ ಈಶ ಅಭಿಲಾಷೆ ಪೂರಿಸೆಂದು ೨

ಪಾಲಕ ರಾಜಗೋಪಾಲ ಬ್ರಹ್ಮನ ಆ
ಲಲನೆಯು ಎನ್ನ ನಾಲಿಗಿರಲೆಂದು ೩

## ೪೩೦

### ವಚನ

ನಾಚಿಸಲು ಮತಿಯು ಸುವಿರಾಟಪರ್ವದ ಕಥೆಯು
ಮೂಟಾದ ಪದವು ಬಹು ಧಾಟಿ ವಿಧವಿಧವು
ಆಟ ನಿನ್ನದು ಕಪಟನಾಟಕವೇ ಶ್ರೀಕೃಷ್ಣ
ಕೋಟಿ ಮಾತಿಗೆ ಒಂದು ಮಾತು ನಂದು
ಕುರುರಾಜ ದ್ಯೂತಕೆದೊಳು ಬರಿದೆ ಗೆದ್ದಿರಲು
ಹೊರಗ್ಹಾಕೆ ಪಾಂಡವರು ಹರದಿ ಸಹ ಬರಲು ೧

ವರುಷವೆರಡಾರು ಸಂಚರಿಸಿ ವನದೊಳು
ಮರುವರ್ಷವಿರೆ ಚಿಂತೆ ಬೆರೆಯೆ ಮನದೊಳು ೨

ಶ್ರೀಶ ರಾಜಗೋಪಾಲ ದಾಸರೈವರು ನಿರ್
ದೋಷದಿ ವಿರಾಟನ ದೇಶ ಕಂಡರು ೩

## ೪೩೧

### ವಚನ

ಮಡದಿ ಮಾರ್ಗವ ಬಹಳ ನಡೆನಡೆದು ಶ್ರಮಬಟ್ಟು
ನಡೆಯಲಾರದೆ ತನ ಒಡೆಯರನು ಕಂಡಾಗ ನುಡಿದಳಿಂತೆಂದು

ನೆಲವು ಬಹಳ ಕಲ್ಲೊಳು ನಡೆಯಲಾರೆನು ಕಾಲುನೋವು
ಉಳಿದು ಇಂದಿಗೆ ನಾಳೆ ಬೆಳಗಾಗೆ ಹೋಗೋಣ ಪ್ರಾಣನಾಥ ೧

ನಮಿಸಿ ಪೇಳುವೆನೀಗ ಶ್ರಮವು ಬಹಳಾಯಿತು ಮಾಡಲೇನು
ರಮಣ ಎನ್ನಪರಾಧ ಕ್ಷಮಿಸಿ ವಹಿಸಬೇಕು ಬ್ಯಾಗ ನೀನು ೨

ಸ್ವಾಮಿ ರಾಜಗೋಪನ ಧ್ಯಾನದೊಳಿರುವಂಥ ಕಾಮಿನಿಯ
ಆ ಮಹಾಬಲಶಾಲಿ ಪ್ರೇಮದಿ ವಹಿಸಿದ ಭೀಮರಾಯ ೩

## ೪೩೨

ಬಿಡುಮನ ಚಿಂತೆ ಪಿಡಿವೊರೆ ಕಾಂತೆ ಪ

ತುರಗಗಜರಥ ಸ್ಮರಿಸೋರೆ ವ್ಯರ್ಥ
ಚರಣದಿ ನಡೆವೋದೆ ಸಾರ್ಥ ೧

ಹಿಂದಿನ ಸಂಪತ್ತು ಇಂದು ಹೋಯಿತೆಂದು
ತಂದ ಶ್ರೀಹರಿ ಇಂಥ ಹೊತ್ತು ೨

ಬಿಡು ಮನ ಕೋಪ ಓಡಿಸು ತಾಪ
ನೀಡುವ ಶ್ರೀರಾಜಗೋಪ ೩

## ೪೩೩

ಮಚ್ಚನ ದೇಶ ಬಂದಿತು ಕಾಣೆ
ಸ್ವೇಚ್ಛೆಯಿಂದಿರುವಾ ಬಾ ಇಳಿ ಜಾಣೆ ೧

ಮುಚ್ಚಬೇಕೀಗಲೆಮ್ಮಯ ರೂಪ
ಬೆಚ್ಚಿ ಬೀಳುವನು ಕಂಡರೆ ಭೂಪ ೨

ಪುರದ ಗೋಪುರ ಕಾಂಬುವದೀಗ
ಹರದೆ ಕಣ್ದೆರೆದು ನೋಡೆಲೆ ಬೇಗ ೩
ಶಮೇ ಶಮಯ ಎನ್ನುವ ಭೂಪ
ನಮಿಸಿ ಇಟ್ಟನು ಗದಾಶರ ಚಾಪಾ ೪

ಬಾಗಿಲೋಳಿದ್ದ ದೇವಿಯ ಸ್ತೋತ್ರ
ಬಾಗಿ ಮಾಡಿದನು ಧರ್ಮನ ಪುತ್ರ ೫

## ೪೩೪

ಆನಮಿಸಿ ಬೇಡುವೆನು ನಿನ್ನ
ಮಾನದಿಂದಲಿ ರಕ್ಷಿಸಬೇಕು ಎನ್ನ ಪ

ಇಭವರಾರೂಢೆ ನಿನ್ನ ಪ್ರಭೆಯ ಕೊಂಡಾಡುವೆನೆ
ಶುಭ ಇಹದಿ ಪರದಿ ನೀಡೆ ಕುರುನರ
ಪ್ರಭುಗಳಿಗೆ ತಿಳಿಸಬ್ಯಾಡೆ ಈ ವಿಧದಿ
ಅಭಯವೆನಗಿಂದು ನೀಡೆ ದೇವಿ ೧

ಭುಜಗಳಷ್ಟಗಳು ಪಂಕಜ ಪತ್ರ ಘಂಟಾ
ನಿಜ ಚರ್ಮ ಶೂಲಡಮರು ಧಾರೆ
ಭಜಕ ಭೂಭುಜರ ಘೋರಾ ಬಿಡಿಸೆನ್ನ
ಪ್ರಜರಂತೆ ಮಾಡೆ ಪೂರಾ ದೇವಿ ೨

ಶ್ರೀಪತಿ ಶ್ರೀರಾಜಗೋಪಾಲ ಕೃಷ್ಣ ಕರು
ಣಾ ಪಾತ್ರಳಾಗಿ ನೀನೆ ನಮ್ಮನ್ನು
ಕಾಪಾಡದಿರಲು ಮಾನೆ ಈಗ
ನೀ ಪರೀಕ್ಷಿಪರೇ ಜಾಣೇ ದೇವಿ ೩

### ಶ್ಲೋಕ

ಸೂರ್ಯನಂತ್ಹೊಳೆಯುತ್ತೈವರು ಆಗ
ಧೈರ್ಯದಿಂದ್ಹೋಗಿ ರಾಜನ ಬಳಿಗೆ
ಆರ್ಯಧರ್ಮಜನಲ್ಲಿದ್ದೆವು ಹಿಂದೆ
ಕಾರ್ಯವಿತ್ತು ಪರಿಪಾಲಿಸು ಮುಂದೆ

## ೪೩೫

ನಡೆದು ಬಂದಳು ಕಾಮಿನಿಯಾಗ ಬಂದು
ನುಡಿದಳು ರಾಜನ ಮಡದಿ ಹೀಗೆ ಪ

ಹಿಂದೆ ದ್ರೌಪದಿ ಬಳಿಯಲಿದ್ದೆ ಅವರಿಗೆ
ಬಂದ ಶ್ರಮವ ನೋಡಿ ಭರದಿಂದಲೆದ್ದೆ
ಗಂಧ ಹಿಕ್ಕುವ ಕಾರ್ಯ ಸಿದ್ಧೆ ಸೈ
ರಂಧ್ರಿಯೆಂಬುವದು ಲೋಕ ಪ್ರಸಿದ್ಧೆ ೧

ಇರುವೆ ಇಂದಿಗೆ ಬಳಿಯೆ ನಿನ್ನ ಬಲು
ಮರಿಯಾದೆಯಿಂದ ಸಲಹಬೇಕೆ ಎನ್ನ
ಮರೆಯಿಂದ ಇರುವೆ ಚೆನ್ನಾಗಿ ಎನ್ನ
ಕರದಿಂದ ಚರುಮಾಡಿ ಭುಂಜಿಪೆ ಭೋಗಿ ೨

ಅತ್ತಿತ್ತ ಹೋಗುವಳಲ್ಲೆ ನಿನ್ನ
ಹೊತ್ತಿಗೆ ಬಂದೊದಗುವೆ ರಾಜನಲ್ಲೆ
ವಿತ್ತವ ಬೇಡುವದಿಲ್ಲ ಎನ್ನ
ಚಿತ್ತವ ಶ್ರೀರಾಜಗೋಪಾಲನೆ ಬಲ್ಲಾ ೩

## ೪೩೬

ಒಂದೇ ಚಿಂತೆಯು ಬಂದಿತಲ್ಲೆ ಸುಂದರಿನಲ್ಲೆ ಪ

ಸುಂದರಾಂಗಿ ಅರವಿಂದ ನಯನೆ ವದ
ನೇಂದು ನೋಡಿ ನೃಪ ಹಂಬಲಿಸುವನೆಂಬದೊಂದೇ ಅ.ಪ.

ಕಂಬುಸಮಾನ ನಿನ್ನ ಕೊರಳು ಮಾನಿನಿ ಮರಿ
ದುಂಬಿಯಂತಿರೆ ನಿನ್ನ ಮುಂಗುರುಳು ದೇಹವು ಪುತ್ಥಳಿ
ಗೊಂಬೆಯಂತಿರೆ ಜನ ಮರುಳು ಆಗುವರೊಳು
ಕುಂಭಿಣಿಯೊಳಗಿಂಥ ರಂಭೆಯ ಕಾಣದೆ
ಸಂಭ್ರಮದಿಂ ನೃಪ ಹಂಬಲಿಸುವನೆಂಬದೊಂದೇ ೧

ಕಟಿಯು ನಿನ್ನಯ ಬಲು ಸಣ್ಣ ಕಾಮಿನಿ ಕೆಳ
ದುಟಿಯು ನೋಡಲು ತೊಂಡಿಯ ಹಂಣ ಸುರನರ ಲೋಕಕೆ
ಪಟಿಸಲಿ ಸಮವರ ಹೆಣ್ಣ ಕಾಣದೀ ಕಣ್ಣ

ಪಟು ಸಂಘಟಿಸಿದ ಬಟುಕುಚತಟ ನೋಡಿ
ವಟು ವೃದ್ಧರು ನವವಿಟರಾಗುವರೆಂಬೊದೊಂದೇ ೨

ಸಾಕಿ ಸಲಹುವ ಚಿಂತೆಯಾಕೆ ನಿನ್ನ ಕರದಿಂದ
ಪಾಕವ ಮಾಡಿಸಿಕೊಂಡುಣಬೇಕೆ ನಿನ್ನಯ ಮನಕೆ
ಬೇಕಾದ್ದು ಬೇಡು ಕೊಡುವೆ ಜೋಕೆ ಸಂಶಯವ್ಯಾಕೆ
ಶ್ರೀಕರರಾಜಗೋಪನು ಕಲ್ಪಿಸಿದ ಶುಭಾ
ಕಾರಕೆ ಕಣ್ಣ ಹಾಕದೆ ಬಿಡರೆಂಬೊದೊಂದೇ ೩

### ಶ್ಲೋಕ

ಸರ್ವ ಮಾತಿಗೆ ಸಂಶಯ ಬ್ಯಾಡಾ
ಸರ್ವಥಾ ಹರಿಯು ಎಂದಿಗೆ ಮಾಡಾ
ಗರ್ವದಿಂದಿರಲಿ ಆಗೊಂದು ಶಿಕ್ಷಾ ಗಂ
ಧರ್ವರಿಂದಲಿ ಎನ್ನಯ ರಕ್ಷಾ
ಅನುದಿನ ಮನೆಯೊಳಗಿರಲಾಗ
ಖಿನಗ ಕೀಚಕನು ಬಂದನು ಬ್ಯಾಗ
ನೋಡಿದಾನಾಕೆಯ ಲಾವಣ್ಯಾ
ಆಡಿದ ಮಾತು ಆಗಲೆ ಟೊಣ್ಯಾ

## ೪೩೭

ಅಕ್ಕ ಇವಳು ಸಿಕ್ಕಳ್ಯಾಂಗೆಲೆ ಪ

ಅಕ್ಕಯ್ಯ ಕೇಳೆಲೆ ಚಿಕ್ಕವಳಿವಳ್ ಹೆಣ್ಣು ಮಕ್ಕಳೊಳ್ ಮೇಲು ಮಾ-
ಣಿಕ್ಯದಂತೆ ದಶದಿಕ್ಕು ಬೆಳಗುವದುಕ್ಕುವ
ಮೇಲ್ಗಳೆಯಕ್ಕರವೇ ಸರ್ವಧಿಕ್ಕರವೇ
ಓಕ್ಕುವ ಕಾರ್ಯದೊಳಕ್ಕುವದಕ್ಕಿವಳ್
ತಕ್ಕವಳೆನೆಲೆ ನಕ್ಕಾರು ಮಂದಿಯು
ಗಕ್ಕನೆ ತೆಗೆದನ್ಯಳಿಕ್ಕು ಇವಳು ಎನ್ನ
ತಕ್ಕವಳೇ ಹ್ಯಾಗೆದಕ್ಕುವಳೇ ೧

ತಾವರೆಗಂಧೆ ವಿಭಾವರಿಶಾನನೆ ಪವಳಕೆಂದುಟಿ ಹವಳದಂತೆ ಸಾ
ಲಾವಳ ತ್ರಿವಳಿ ಈ ವಧುರೂಪಕ್ಕೆ ದೇವಾಂಗನೇರಸು ನೀವಾಳೀಸು
ಕಾವುವನ್ಯಾವದಿಂದರಿಲಊರಿಗಾ ವನದೇವಿಯೋ
ಬಂದಳೇನಾವಳೆಂತಾಡಲಿ
ಭಾವಜಸತಿ ವಾಸಕನ ರಾಣಿ ಪ್ರಭಾವತಿಯೋ
ಆವ ದೇವತೆಯೋ ೨

ಅಮ್ಮಯ್ಯ ಕೇಳೆಲೆ ದಮ್ಮಯ್ಯ ಕಾಲ್ಬೀಳ್ವೆ
ತಮ್ಮ ನಾನಲ್ಲವೇ ನಿಮ್ಮವನೇ ಸರಿ
ಸುಮ್ಮನೇ ಪೇಳೀಗ ರಮ್ಮಿಸಿ ಬಹುವಿಧ
ಒಮ್ಮ್ಯಾರೆ ಕಳಿಸೀಗ ಎಮ್ಮನೆಗೆ
ಧರ್ಮರಾಜಗೋಪಜ ಬ್ರಹ್ಮ ಇಂಥವಳ
ನಿರ್ಮಿಸದನೆನ್ನ ಕರ್ಮ ಬಲವೆಂತೊ
ಊರ್ಮಿಳೋರ್ವಶಿರಂಭೇರ್ ನಿರ್ಮಲ ರೂಪಿದು
ದುರ್ಮಿಳವೆಂಬೋರು ನಮಾಗೋರು ೩

## ಶ್ಲೋಕ

ಕನ್ಯೆ ತಾರೆಲೆ ನಾ ಉಣಬೇಕು
ತಮ್ಮನ ಮನೆಯೊಳಿಹ ಮಧುಜೋಕೆ
ಇನ್ನು ಈ ಕಾರ್ಯ ಬ್ಯಾಡೆಲೆ ಸಾಕೆ
ಇನ್ನೊಂದು ಆದರೆ ಹೇಳಲೆ ವಾಕೆ

## ೪೩೮

ಮಧು ತರಬೇಕೆ ಮಾನಿನಿ ಮಣಿ ಪ

ಇದು ಬಿಟ್ಟು ಇನ್ಯಾವದು ಹೇಳಬೇಕೆ ನಾ
ವಿಧಿಸಿದ ಮಾತಿಗೆ ಎದುರುತ್ತರೇಕೆ ಅ.ಪ.

ಹಿಡಿ ಸ್ವರ್ಣಪಾತ್ರೆ ಹಾದಿಯ ಹಿಡಿ
ನಡೆ ಮೃದುಗಾತ್ರೆ ಅಂತರಚಿಂತೆ ಬಿಡುಕಂಜನೇತ್ರೆ

ಒಡೆಯಳ ಮಾತಿಗೆ ಬಿಡಿನುಡಿ ನುಡಿದರೆ
ಕಡು ಕೋಪದಿ ಗಲ್ಲ ಬಡಿಬಡಿಸುವೆನಲ್ಲೆ ೧

ಸಿಟ್ಟು ಇದೇನೇ ಕಾಮಿನಿ ನಿನ್ನ
ದೃಷ್ಟಿಂದ ತಾನೆ ನೋಡಲು ಅಂಥಾ ಭ್ರಷ್ಟನು ಏನೇ
ಇಷ್ಟೊಂದು ಎನ್ನೊಳು ನಿಷ್ಠುರ ಮಾತೇಕೆ
ದೃಷ್ಟಿಂದ ನೋಡಲು ಸ್ಪಷ್ಟವಾಗುವದಲ್ಲೆ ೨

ಸುಂದರಿ ನಲ್ಲೆ ರಕ್ಷಿಸುವಂಥ
ಗಂಧರ್ವರೆಲ್ಲೆ ನೀನೆ ಎನ್ನ ಮುಂದ್ಹೇಳಿದಲ್ಲೇ
ತಂದೆ ರಾಜಗೋಪ ಹಿಂದೆ ರಕ್ಷಿಸಿದವ
ಮುಂದಾದರು ನಿನ್ನ ಬಂದು ರಕ್ಷಿಸುವನು ೩

## ಶ್ಲೋಕ

ಅಂದ ಮಾತಿಗೆ ತಾ ಬಳಲುತ
ನೊಂದು ಮನದೊಳಗೆ ತಾ ಮಿಡುಕುತ
ಸಿಂಧುಶಯನನ್ನ ತಾ ಸ್ತುತಿಸುತಾ
ಮಂದನ ಮನೆಗೆ ಬಂದಳು ಭಾಮೆ ತಾ

## ೪೩೬

ಸೇವನದಿಂದುಪಜೀವನ ಮಾಡೋದೆ
ಸಾವೇ ಸೌಖ್ಯವೇ ಸಲ್ಲದೇ ಪ

ಪಾವು ಹರಿಯದು ಭೂದೇವಿ ಮಂಗಳು ಕೆರೆ
ಭಾವಿ ತೋರದು ಧಿಗ್ಜೀವನ ಸುಡು ಪರ ಅ.ಪ.

ನಗರೇನೆ ಇರುಳೆ ಕಂಡಿರುವ ಭಾವಿಯೋಳು
ಹಗಲ್ಹೋಗಿ ಬೀಳ್ವರೇನೆ
ಬಗೆ ಬಗೆ ನಾ ಕರ ಮುಗಿದು ಪೇಳಿದರೆ
ಸುಗುಣೆ ಎನ್ನೊಳು ಇಂಥ ಹಗೆಯ ಮಾಡುವರೇನೆ ೧

ಜುಲುಮಿಲಿ ಹೆರರ ಮಕ್ಕಳ ನೀರೊಳು ನೂಕಿ
ನೆಲೆಯ ನೋಡುವಳಿವಳು
ತಿಳಿದು ತಿಳಿದು ಇಂಥ ಖಳನ ಮನೆಗೆ ಎನ್ನ
ಕಳಿಸಿದ ಮೇಲಿನ್ನು ಉಳಿಸುರಾರಮ್ಮ ೨

ಬೆನ್ನಿಲಿ ಬಿದ್ದಂಥ ತಮ್ಮನ ಮಮತೆಯು
ಎನ್ನೊಳಗೇಕಿಹುದೆ
ಘನ್ನರಾಜಗೋಪ ಬಿನ್ನಹ ಲಾಲಿಸು
ಇನ್ನಾದರು ಬಂದು ಎನ್ನ ರಕ್ಷಿಸು ನೀನು ೩

## ೪೪೦

ಬಂದ್ಯಾ ಬಾರೆಲೆ ಭಾಮೆ ಬಹಳಾನಂದವಾಯಿತು ಕಾಣೆ ಪ

ಬಂದಕಾರ್ಯವನನ್ಯಳಿಂದೆ ಮಾಡಿಸುವೆನು
ಮಂದಿರದೊಳು ಎನ್ನ ಹೊಂದಿಕೊಂಡಿರು ಇಂದು ೧

ಬಂಧುರ ಹಯಗಳು ಅಂದಣ ಸಿಂಧೂರೆ
ಅಂದಚೆಂದಗಳೆಲ್ಲ ನಿಂದೆ ಆಗುವುದಲ್ಲೆ ೨

ನಿಜವಾಗಿ ರಾಜಗೋಪಜನ ಬಾಧೆಯ ಕಳಿ
ಯಜಮಾನಳಾಗಿರು ಭಜಿಸುವರೆಲ್ಲರು ೩

## ೪೪೧

ನೋಡ ಬಂದಿಲ್ಲವೋ ದುರುಳಮಾತು ಆಡುವುದು ಸಲ್ಲದೂ ಪ

ಕೊಡುಗನಂತೆ ಮಾತಾಡಲು ಶ್ರೀ ಹರಿ
ನೀಡನೆ ನಿನಗೆ ನರಕಾ ಏ ಮೂರ್ಖಾ ಅ.ಪ.

ಒಡೆಯನ ಮಾತು ಕೇಳಿ ಮಧು ಒಯ್ದು
ಕೊಡಬೇಕು ಎಂದು ಬಂದೇ

ಕಡುಮೂರ್ಖಾ ನೀನಿಂಥ ಬಿಡುನುಡಿ ನುಡಿದರೆ
ಕಡಿದು ಬೀಳದೆ ನಾಲಿಗಿ ಏಕಾಗಿ ೧

ರೊಕ್ಕದ ಮದವೇರಿತೆ ಅಥವಾ ನಿನ
ಗಕ್ಕನ ಬಲವಾದೀತೇ
ಮಕ್ಕಳ್ಹೆತ್ತವರುಥೂಯಿಕ್ಕರೆ ಮುಖದೊಳು
ಸೊಕ್ಕಿನ ಮಾತು ಎತ್ತೇ ಏ ಕತ್ತೆ ೨

ಎಷ್ಟು ಧೈರ್ಯವು ನಿನ್ನದು ಹೆರವರಿಗೆ
ನಿಷ್ಠುರ ನುಡಿ ನುಡಿವರು
ನಿಷ್ಠುರ ಮಾತಿಗೆ ಧಿಟ್ಟರಾಜಗೋಪ
ಕೊಟ್ಟಿಹನೇನೋ ಬಾಯಿ ಏ ನಾಯಿ ೩

## ಶ್ಲೋಕ

ಖಳನು ಕೈ ಪಿಡಿಯ ಬೇಕೆನಲಾಗ
ತಿಳಿದು ಓಡಿದಳು ಮಾನಿನಿ ಬ್ಯಾಗ

## ಆರ್ಯಾ

ತಾಪಿಸಿ ಓಡಲು ಆ ಸತಿ ಆ
ಪಾಪಿಯು ಇಕ್ಷುಚಾಪತಾಪಧರ
ರೂಪಕೆ ಮೋಹಿನಿ ಬೇಗನೆ
ಕೋಪದಿ ಪಿಡಿದೆಳೆದನಾಗ ತಾ ಪದರ

## ಶ್ಲೋಕ

ಬುದ್ಧಿ ಹೀನನು ಲೋಕ ಪ್ರಸಿದ್ಧ
ಬದ್ಧ ವೈರದಲಿ ಕಾಲಿಲಿ ಒದ್ದಾ
ನಳಿನ ಮಿತ್ರನು ತಿಳಿದು ಕಳಿಸಿದ್ದ
ಬಲದಿ ಭಟರೊದೆಯೆ ಹಿಂದಕ್ಕೆ ಬಿದ್ದ

## ೪೪೨

ಖಳನು ಕಾಲಿಲೆ ಒದ್ದನು ಮಾಡಲಿನ್ನೇನು ಪ

ಖಳನು ಕಾಲಿಲಿ ಒದ್ದ ಬಲವು ಎನಗಾರಿಲ್ಲ
ತಿಳಿದ ಜನರು ನೋಡಿ ತಿಳಿದು ತಿಳಿಯದಂತಿಹರು ಅ.ಪ.

ಸೋತು ಪೂರ್ವದಿ ಪಲಾಶಾ ನಿಲ್ಲಲು ಎಂದೂ
ಪ್ರೇತವೆಂಬುವುದೇ ಭಾಷೆ
ಆತನಾಡಿರುವಂತಹ ಮಾತನೇ ನಿಜಮಾಡಿ
ರೀತಿ ಮಧ್ಯದಿ ಶರಘಾತ ಮಾಡಿದ್ಯೋ ನಾಥ ೧

ಬೆನ್ನು ಬಿದ್ದವರಿಲ್ಲದೇ ಎನ್ನನು ಪೋಲ್ವ
ಹೆಣ್ಣು ಹೆತ್ತವರಿಲ್ಲವೇ
ಎನ್ನ ನೋಯಿಸಿದವ ಅಣ್ಣತಮ್ಮರು ಸಹ
ಮಣ್ಣ ಕೂಡುವದು ಈ ಕಣ್ಣಿಂದ ಕಾಂಬೋದೆ ೨

ರಜಪದಕೆ ವ್ಯತ್ಯಾಸ ಮಾಡಿದವಗೆ
ಸಹಜೆ ಶಿಕ್ಷಿಪುದೇ ನ್ಯಾಯ
ರಾಜಗೋಪನೇ ಕೇಳು ರಾಜರ ಸಭೆಯಿದು
ರಾಜರಸಭವಾದೀತ್ಯಾಕ ಎನ್ನಯಭಾಕ್ಕ ೩

### ಶ್ಲೋಕ

ಎನ್ನಗಾದರು ಮೀರಿತುಪಾಯ
ಹೆಣ್ಣಿಗ್ಯಾಕಿರಬಾರದು ಬಾಯ
ಅಂದ ಮಾತಿಗೆ ಆಕೆ ಬಳಲುತಾ
ಬಂದಳು ನಡೆದು ಭೀಮನ ಬಳಿಗೆ ತಾ

### ವಚನ

ಮಾನ ರಕ್ಷಿಪರನ್ನ ಕಾಣದಲೆ ಕಮಲಾಕ್ಷಿ ಪ್ರಾಣನಾಥನು ಭೀಮನಿದ್ದೆಡೆಗೆ ಬಂದು ನುಡಿದಳಿಂತೆಂದು

ಪಾಕ ಎನ ಕರದಿ ಮಾಡ್ಹಾಕಿಲ್ಲ ನಿಜವೆ ಸರಿ ನೀ ಕಲಿತು ಉಂಬುದಕೆ
ಯಾಕೆ ಕೋಪ

## ಶ್ಲೋಕ

ಅಸಮ ಪಾಪಿಯೆಂಬೊ ಹೊಸ ಪಾವಿಗೆ ಮಹಾ
ನಸ ಸೇವೆಗೆ ನಾನುಸಿರುವೆನೊ

ಪಾಕಶಾಸನನ ಅಶನಿಯ ಬಹು ಚಾ
ರ್ವಾಕ ಗರ್ವಪರ್ವತದ ಹಾಳಾ

ವಾತಜ ನೀನಿರೆ ಈ ದುರ್ಜಿ
ಮೂತಗಣದ ಮಾರಿ ಮುಸುಕುವದುಂಟೆ

ನೀ ಸಲಹಿದ ದಾಸಿಯು ನಾ
ಈ ಸಮಯಕೆ ಮಾಳ್ಪುದೇನುದಾಸೀನಾ

ಎನ್ನಲ್ಲಿಹುದವನಾ ತಾ
ನಿನ್ನಿಂದಲೇ ಆಗಬೇಕು ಅವನಾತಾ

## ವಚನ

ಕೆಳದಿ ಬಳಲುವದು ಕೇಳಿ ಕಳವಳಿಸಿ ತಾನೆದ್ದು
ಕಳೆಹೀನವಾದಂಥ ನಳಿನ ಮುಖವನೆ ನೋಡಿ
ಜಡಜಾಕ್ಷಿಯನ್ನೆಡದ ತೊಡೆಯ ಮೇಲಿರಿಸಿ
ಕಡು ಮಮತೆಯಿಂದ ನೇತ್ರ ಜಲಗಳನೆಲ್ಲ ಧೋತ್ರದಿಂದೊರೆಸುತ್ತ
ಬಲಭೀಮ ನುಡಿದನಿಂತೆಂದು

## ೪೪೩

ಮನದ ಮಾತೇನೆ ಸಖೀ ಸಖೀ
ಅನುವಿಗಾಗಿರುವಂಥ ಇನಿಯ ನಾನಿರಲಿಕ್ಕೆ

ಪರರ ಸೇವೆ ಪರಿಪರಿಯ ಮಾಡಿರುವುದು
ಸರಸಿಜಾಕ್ಷಿ ಬ್ಯಾಸರವಾದಿತೆ ಅದು ೧

ಹೆಚ್ಚಿನ ರೂಪಕ್ಕೆ ಮೆಚ್ಚಿ ಬಾಧಿಸೆ ಖಳ
ಉಚ್ಚರಿಸದೆ ಅದ ಮುಚ್ಚಬೇಡಲೆ ೨

ಪಾಲಕ ರಾಜಗೋಪಾಲನ ದಯವಿರೆ ಈ
ಕೇಳು ಲೋಕ ಬಲ ತಾಳದು ಎನ್ನಯ ೩

### ಶ್ಲೋಕ

ಖಳನು ಕಾಡುತ ಬಾಧಿಪನೀಗ
ಅಳಿದು ನೀನುಳಿಸು ಎನ್ನಯ ಬೇಗ

### ೪೪೪

ಇದಕ್ಯಾಕಿಷ್ಟೊಂದು ಚಿಂತೆ ಭಾಮಿನಿ ಪ

ಯಾತಕಿಷ್ಟೊಂದು ಚಿಂತೆ
ಪ್ರೀತಿಗೊಲಿದ ಪ್ರಾಣನಾಥ ನಾನಿರಲಿಕ್ಕೆ ಭಾಮಿನಿ ಅ.ಪ.

ಕೀಚಕನ ಭಯ ಮೋಚನೆ ಮಾಡುವೆ
ಯೋಚನೆ ನಿನಗಿಷ್ಟು ಬೇಡವೆ ಎಳ್ಳಷ್ಟು ಯೋಚನೆ ೧

ಪಾಚಕ ರೂಪದಿಂದಾಚರಿಸುವನಿಗೆ
ಕೀಚಕನ ದಹನಾ ಸಹಜವೇ ದುಷ್ಟ ಕೀಚಕನ ೨

ಬಾಲೆ ಕೇಳೆಲೆ ಶಿಖಿಜ್ವಾಲೆಯೊಳಗೆ ಬಿದ್ದ
ಶೂಲವು ದಹಿಸದೆ ನಿಲ್ಲೋದೇ ಮತ್ತೆ ಶೂಲವು ೩

ಚಿತ್ತವಿಭ್ರಮೆ ಬೇಡ ಮತ್ತವನ ಬಳಿಗ್ಹೋಗಿ
ಗೊತ್ತು ತೋರಿಸಿ ಹೀಂಗೆಂದ್ಹೇಳಲೆ ಅವಗೆ ಗೊತ್ತು ೪

ಹತ್ತಿಲಿ ಇರುವಂಥ ನರ್ತನಗಾರಕೆ
ಹೊತ್ತಿಗೊಬ್ಬನ ಬಾಯೆಂತ್ಹೇಳಲೆ ಸಂಜೆ ಹೊತ್ತಿ ೫

ಪಾಲಕ ರಾಜಗೋಪಾಲನ ದಯವಿರೆ
ಗಾಳಿ ಗುಂಡಾಳಿಯು ನಿಲ್ಲೊದೆ ಬಿರುಗಾಳಿ ೬

## ೪೪೫

ಇಂದೆಲಾ ಬಾರೊ ಗದ್ದಲಾ ಬೇಡ ಮನದೊಳಿರಲೊ ಮಾತು ಪ

ಒಂದು ಸಂಶಯವು ಉಳಿಯಗೊಡದೆ ಅಂದಚಂದ ಬಿಟ್ಟು
ಬಂದಮ್ಯಾಲೆ ನಾ ಹಿಂದಕೆ ಬಿಡೆ ನಿನ್ನ ಇಂದಿಗೆ ತಿಳಿಯಷ್ಟು ೧

ಜನಶೂನ್ಯವು ನರ್ತನಗೃಹದೊಳಗಿಂದಿನ ದಿನ ನಿಶಿಯೋಳು
ತನುಮನಧನದಾಶೆಯ ಬಿಡು ನಿನ್ನಯ ತನುವ ಸೂರೆಗೊಂಬೆ ೨

ಪಾಲಕ ರಾಜಗೋಪಾಲನ ದಯವಿರೆ ಬಹಳ ಮಾತು ಯಾಕೊ
ಕಾಲಕ್ಲಪ್ತ ನಿನಗಾಯಿತು ಇಂದಿಗೆ ನಾಳೆ ತಿಳಿದೀತು ಜೋಕೆ ೩

## ೪೪೬

ಉಬ್ಬಿ ಬಿದ್ದನು ಖಳನು ಉಬ್ಬಿ ಬಿದ್ದನು ಪ

ಅಬ್ಬರದೊಳು ಎಡಿಯ ಗರ್ಭಬೆಳೆದಂತೆ ಮೂರ್ಖ ಅ.ಪ.

ಒಬ್ಬರ ಹೃದಯ ಸಂದರ್ಭ ತಿಳಿಯದಂತೆ ಮೂರ್ಖಾ
ಕಬ್ಬಿಗೆ ಹಿಗ್ಗಿದ ಮಾರಿಹಬ್ಬಕಿಟ್ಟ ಕೋಣನಂತೆ ೧

ಬಲವೊ ಪೂರ್ವಕನ್ಯಾದಾನಫಲವೊ ಎನ್ನ ಜುಲುಮೆ ಭಯವೊ
ಕೆಲದೆರೆನಗೆ ಒಲಿದು ಬಹರು ಚೆಲುವಿಕೆಯೊ ಎನ್ನದೆಂದು ೨

ಶ್ರೀಶ ರಾಜಗೋಪಜ ಕುಸುಮೇಷು ಬಾಧೆಗಾದ ತನ್ನ
ಕ್ಲೇಶರಾಶಿಗಿಂದಿಗೆ ಪ್ರದೋಷಕಾಲ ಬಂದಿತೆಂದು ೩

## ೪೪೭

ಕೇಳೆಲೆ ಕಾಮಿನಿ ಮಾತು ಕೇಳೆಲೆ ಪ

ಕೇಳೆಲೆ ಪರಕೀಯರ ಬಾಲೇರು ಎನ್ನ ಮ್ಯಾಲೆ
ದಾಳಿ ಹೆಚ್ಚಲು ಅನುಕೂಲಿಸಿ ಬರುವರು ಅ.ಪ.

ದೆಸೆಯುಳ್ಳ ಗಂಡನ ತರುಣಿ ಎನ್ನ
ವಶವಾಗಿ ಹೋತೆಲ್ಲ ಧರಣಿ ಮ
ನಸಿಗೆ ಬಂದಂತೆ ಆಚರಣಿ ಅಹಾ
ಅಸಮಸೌಂದರ್ಯದ ಹೊಸಹೆಣ್ಣ ತರುವೆನೆ
ದುಸುಮುಸು ಮಾಡೆ ಸೈರಿಸದೆ ಶಿಕ್ಷಿಸುವೆನೆ ೧

ಹಸಿಮೊಬ್ರಿ ಬ್ಯಾಳಿಂಗು ಕರಣಿ ನಿಂಬಿ
ರಸಹಿಂಡಿ ತುಪ್ಪದೊಗ್ಗರಣಿ ಕೊಟ್ಟು
ರಸಬಾಳಿ ಹಣ್ಣು ಸೀಕರಣಿ ಅಹಾ
ರಸವಡಿ ಬಾನ ಬಸಿದ ಶಾವಿಗೆ ಮಾಡೆ ೨

ನಿಲುವುಗನ್ನಡಿ ತಂದು ನೋಡಿ ಎಡ
ಬಲದ ಮೀಸೆಯ ಹುರಿಮಾಡಿ ತನ್ನ
ಚೆಲುವಿಕೆ ತಾನೆ ಕೊಂಡಾಡಿ ಅಹಾ
ಬಲಿ ರಾಜಗೋಪಜ ನಳಿನಶರನ ಬಾಧೆ
ಯೊಳಗೆ ಸಿಲುಕಿ ಘಳಿಘಳಿಗಳಕುವೆನಲ್ಲೆ ೩

## ೪೪೮

ಯತಕ್ಹೋಗುವದು ಛಲಾನಾಥನೆ ದುಷ್ಟ
ಮಾತಿನಿಂದೇನು ಫಲಾ ಪ

ಪಾತ್ರರಾರಭ್ಯ ನೋಡು ಹೋಗುವೆನೆಂದು ಹಾತೊರೆಬ್ಯಾಡೊ ನೀನು
ಹಾತೊರೆದು ಹೊರಗ್ಹೋಗುತೊಂಟಿ ಸೀತನೋ ಯಾವಾತನೊಬ್ಬನು
ಪ್ರೀತಿಯಿಂದ್ಹೊರಗ್ಹೋಗಲು ಉಪನೀತನೊಬ್ಬನು ಯಾತನಾದ ೧

ಅರಳ್ವಂಚು ಹುರಿಕಡ್ಡಿಯು ಬೆರಣಿ ಬೆಂಕಿ ಕರದಿ ಕಟ್ಟಿಗೆ ಹೊರಿಯು
ಶರಗ್ಹರಿದ ಪಟ ಹೆರೆದ ಬೋಳ್ದಲೆ ಒರಗ ಮೋರೆ ತೆರೆದ ಬಾಯಿ
ಕುರುಡಿ ಕುಂಟಿ ಸುರಿವ ಸುಂಬಳ ಭರದಿ
ಬರುವಳು ಮುರಡ ಮುಂಡೆ ೨

ಶ್ರೀಪನು ರಾಜಗೋಪಾ ನಿನ್ನ ಮೇಲೆ ತಾಕರುಣಿಸನು ಕೋಪಾ
ಆಖ ಭುಗ್ ಅಡ್ಡಾ ಹೋಯಿತು ಕಾಕ ಒಂಟಿಡ ಭಾಕ್ಕೆ ಕೂತಿತು
ಯಾಕೋ ಏನೊ ವಿವೇಕ ತೋರದು ಸಾಕುಬಿಡು ತಿರಿಗ್ಹಾಕು
ಹಿಂದಕೆ ೩

## ಲಾವಣಿ

ಎಲೆ ನಲ್ಲೆ ಕೇಳು ಧರೆಮಲ್ಲಿಯೊಳಗೆ
ಸರಿಯಿಲ್ಲ ಯಾರು ಎನಗೊಬ್ಬ
ಈ ಹುಲ್ಲು ಜನರು ಎನ ಮ್ಯಾಲೆ ಬರಲಿ ಕಣ್ಣಬ್ಬ
ಅಜಭವೇಂದ್ರ ಎನ್ನ ಮ್ಯಾಲೆ ಬರಲಿ ಕೈಲಾಸೆ ಈ
ಭುಜದ ಬಲದ ಗೋಪಾಲಬಾಲಗಿದು ಭಾಷೆ
ದಿಗ್ಗಜಗಳೆಲ್ಲ ನಿಜಭುಜದಿ ಹಾಕಿ ಹುರಿ ಮೀಸೆ
ಭೂಭುಜರ ಪಾಡು ಎನಗೇನು ಬಿಡೆಲೆ ಪರದೇಶೆ
ಆ ಭೂಪ ರಾವಣಗೆ ಸೀತೆಯಿಂದ ಬಲುಕೇಡು
ಸುಂದೋಪಸುಂದರಿಗೇನು ಆಯಿತು ನೋಡು
ಮನ ಕೋಪಬಿಡು ಈ ಇಂದ್ರ ಚಂದ್ರ ಸ್ಮೃತಿ ಮಾಡು
ಸ್ಮರ ತಾಪ ಹೆಚ್ಚೆ ಅನರೂಪಿ ಎನ್ನನೇ ಕೂಡು
ನಾ ಹೋಗೊ ಕಾರ್ಯಕಡ್ಡಾಗಬೇಡ ಬಡಿದೇನು
ಅತಿ ಬ್ಯಾಗ ಸಾಗಿಪೋಗನ್ಯಾಕ ಈ ಭಾನು
ಚೆನ್ನಾಗಿ ನೀರಡಿಕೆ ಎನ ಪಾಲಿಗ್ಹೋಗುವದೇನು
ಮನದಾಗ ಬಾಧಿಪನು ರಾಜಗೋಪಜನು ತಾನು

## ೪೪೯

### ಆರ್ಯಾ

ಬಂಟತ್ವವೇ ಪರಿಸತಿಯೊಳ್ ಕಂಟಕ
ದಶಕಂಠಗುಂಟು ಸೀತಿಂದೆ
ಹೊಂಟ್ಹೋಗುವದಿದು ಚೆಂದೆ ಕಂಟಕದಶ
ಕಂಠಕುಂಟು ಸೀತಿಂದೆ ೧

ಸರಿ ಬಂದದಕ್ಹಿಂದ್ಹೋಗುವದೆ.......
ಹರಿದಾಡುವರಿದಿದು ಮಾತೆ ಪರಸತಿಯರ
ಸಂಗ ವಿಷದ ಸಮಾನ ೨

ಬುಧಜನರಿಂದ್ಹೇಳಿದರೀ ವಿಧವಾಗಲು
ಸೈರಿಸಲಾರೆನೋ ಕಾಂತಾ
ಇದು ಲಿಖಿತವೇ ಹೀಂಗಿಹೋದೆ ವಿಧವಾಗಲು
ಸೈರಿಸಲಾರೆನೋ ಕಾಂತಾ ೩

### ಆರ್ಯಾ

ಈ ಪರಿಯಿಂದಲಿ ಕೋಪದಿ ಕೀಚಕಸಲ್ಲಾಪಕಲಹ ಮಾಡಿದ ಭರದಿ
ಆ ಶ್ರೀಪತಿ ಸೇವಕ ಭೀಮನು ಕೋಪದಿ ಸ್ತ್ರೀರೂಪವದನು ತ್ವರದಿ

## ೪೫೦

ಭೀಮನು ಸರ್ವಜನ ಮೋಹಿಸುವಂಥ
ಕಾಮಿನಿಯ ರೂಪವ ತೊಟ್ಟನು ಪ

ಸೋಮಸಮಾನನ ತಾಮರಸಾಂಬಕ
ಹೇಮಾಂಬರ ಕಂಠೀಮಣಿಗಣ ಸು
ತ್ರಾಮ ಕಾಮಿನಿಯ ವ್ಯಾಮೋಹಿಪ
ಅಭಿರಾಮರೂಪ ನಿಸ್ಸೀಮ ಗುಣಾಢ್ಯ ಅ.ಪ.

ಚಟುಕುಚಪಟ ಕರಪುಟದಿಂದ್ಹಿಗ್ಗಿಸಿ ತೀಡುವ ಅಂ
ಗುಟತುದಿಲೆಳೆದೆಳೆದುಟಿರಕ್ತಿಮೆಯನು ನೋಡುತ
ಕುಟಿಲಾಳಕ ನ್ಯಾವರಿಸುತ ಪಟು ಮಾತಾಡುತ
ವಿಟರಿಗೆ ಸ್ಮರಸಂಗಟವನು ಹೃದಯದಲ್ಹಾಡುತ
ಪುಟ ಚಂಡ್ಹಾರಿಸಿ ನಟನೆ ಮಾಡುವಾ
ಭರ್ಟಕಂಜಿಹ ವಿಟಪಟಲ್ಹಾಂಗಿರಲದು
ವಟು ವೃದ್ಧರು ಯತಿ ಮಠಮಂದಿರ ಲಂ
ಪಟವ ಬಿಟ್ಟು ಮಿಟಿಮಿಟಿ ನೋಡುವರೋ ೧

ಕರಿಕಲಭಗಮನ ಸೊರಗಿದ ಕಟಿಕಂಠೀರವು
ವಿರಲನಯನಜಿತ ಎರಳೆಯು ಮನೆಯನು ಸೇರಲು
ಸರಸುಸ್ವರದಿಂ ಪರಿಭ್ರಮಿಸಿತು ಕಲಕೀರವು
ಸುರನರವರ ಸುಂದರಿಯರ ಚೆಲುವಿಕೆ ಮಾರವು
ಹೆರಳ್ ಭಂಗಾರವು ಸರಳ್ಸರಗೀ ಸರ
ಹರಳ್ಕಂಕಣ ಬಳೆ ಸರಳ್ಬೆರಳುಂಗುರ
ಅರಳ್ಮಲ್ಲಿಗೆ ಸರ ಕೊರಳ್ಗಂಧವ ಕಂಡು
ಮರುಳ್ಗೊಂಡ ಮನ ಹಗಲಿರುಳ್ದೇನಿಪರೋ ೨

ಮೃಗಮದ ತಿಲಕವು ಮುಗುಳ್ನಗೆ ಮೊಗ ಬಿಂಬಾಧರ
ಯುಗಖಗದಂದದಿ ಝಗಝಗಿಸುತಿಹ ಪಯೋಧರ
ಅಘಹರರಾಜಗೋಪಾಲ್ಸಖಪಾರ್ಥ ಸಹೋದರ
ಬಗೆ ಬಗೆಯಲಿ ಮನದ್ಯಘಹರನ ಕೃತಾದರ
ಮುಗುಳ್ಮಲ್ಲಿಗೆ ಸರ ತೆಗೆತೆಗೆದ್ಹಾಕುತ
ಸೊಗಸು ಸುಗುಣರೂಪ ತನುಬುಗಿಲೆನುತಿರೆ
ಜಗದ ಜನರ ಮನ ಭುಗಿಭುಗಿಲೆನುತಿರೆ
ಬಗೆ ಬಗೆಯಲಿ ಬಂದ್ಹಗಲ್ಯುಗವಾಗೆ ೩

## ಶ್ಲೋಕ

ಬಂದ ಭೀಮ ಆನಂದದಿಂದ ಅಲ್ಲಿಂದ ಗರಡಿಮನೆಯಲ್ಲಿ
ಛಂದದಿಂದ ಮುಸುಗ್ಹಾಕಿ ಮಲಗಿದ ಇಂದಿರೇಶನ ನೆನೆಯುತಲಿ

ಮಂದ ಪೋದನು ನರ್ತನಾಗಾರೆ ಹಿಂದೆ ನಕ್ಕಿತು ಮೃತ್ಯುನಗಾರೆ
ಅಂದು ಕೀಚಕನು ಪೋದನು ಬ್ಯಾಗ
ಮಂದಿರದೊಳಿರುವ ಭೀಮನ ಬಳಿಗೆ
ಅಂಧಕಾರದಲಿ ಎಬ್ಬಿಸಿದನು
ಮಂದಗುತ್ತರವ ಕೊಡದಿರೆ ತಾನು

## ೪೫೧

ಮುನಿವರೇನೆ ರಮಣಿ ಎನ್ನೊಳು ಮುನಿ... ಪ.

ವನಿತೆ ಮಣಿಯೆ ನಿನ್ನ ನೂತನತನುವನು
ಖನಗ ಕಾಲಿಲೊದ್ದು ದಣಿದಣಿಸಿದನೆಂದು ಅ.ಪ.

ಬಂದೆ ನಿನ್ನಯೊಸುಕೆ ಮಾನಿನಿ
ಚೆಂದವೇನೆ ಮುಸುಕೆ ಎನ್ನೊಳು
ಒಂದು ಮಾತು ಮಿಸುಕೆ ಮಾನಿನಿ
ಚೆಂದದಿ ತಾಂಬೂಲ ತಿಂದುಗಿ ಮುಖದೊಳು ಆ
ನಂದಬಟ್ಟು ಪದಕೊಂದಿಸಿ ನಲಿವೆನೆ ೧

ಕ್ರೋಧ ಮಾಡಬ್ಯಾಡೆ ಎನ್ನಪ
ರಾಧ ಸಹನ ಮಾಡೆ ನಾ ನಿನ್ನ
ಹಾದಿಗೆ ಬರೆ ನೋಡೆ ಮಾನಿನಿ
ಕ್ರೋಧ ಮೋದ ವಿನೋದವಾಗಿ ಎಡ
ಪಾದದಲೊದೆ ಶಿರಸಾ ಧರಿಸುವೆನಲ್ಲೆ ೨

ದೂರನೋಡೊರೇನೆ ರಾಜಗೋಪಜ
ಮಾರಬಾಣಗಾನೆ ಎನ್ನಯ
ಹಾರುವೋದೆ ಪ್ರಾಣೆ ಮಾನಿನಿ
ಕ್ಷೀರದೊಳೆದ್ದು ನೀ ನೀರಿನೊಳಿಡು ವಿ
ಚಾರು ಬ್ಯಾಡ ಶರೀರ ನಿನ್ನದಲ್ಲೆ ೩

## ಆರ್ಯಾ

ಭಂಡಾರದಿ ತರಿಸುವೆನಾ ಖಂಡಿತ ನವರತ್ನರತ್ನದಾಭರಣ
ಚಂಡಾಡುವೆ ನಿನ್ನ ಶಿರವ ಖಂಡಿತ ನವರತ್ನದಾಭರಣ

ಕಾಮಿನಿ ಪೋಗುವುದೆ ಪೇಳ್ ನೀ ಮಡಿ
ಬೇಕಾದರ್ಹೇಳು ತರಿಸುವೆ ನಾ
ನೇಮದ ಮಾತಿದು ನಿಜವೇ ನೀ
ಮಡಿಬೇಕೆಂಬುದಂಗಿಕರಿಸುವೆ ನಾ
ಒಳ ಹೊರಗೊಂದೆ ಸಮವೆ ಶರಗಂಚು
ನೋಡಲಾ ಜರಾಮಯವೇ

..............................

ತಿಳಿಯದಿದರ ಸಂದರ್ಭ ತಿಳಿಸುವೆ
ತರಿಸೇಳು ತಿಲದರ್ಭಾ

..............................

ಇದುರುತ್ತರ ಕ್ರಿಯವೆ ವಧಿಸಲು
ಬೆಳಗಾದರುತ್ತರಕ್ರಿಯವೆ

..............................

ಮೋಹಿಸಿತೆನಗಿದು ರೂಪ ನಾಳೆಗೇ
ಆಗೊಂದು ವಿಚಿತ್ರರೂಪ

..............................

ತಿಳಿಪರಬಲವಿಲ್ಲೆನಗೆ ಕಳವೇ
ಎನಗ್ಯಾಕೊ ಮೊಗದಾಧಾರ

..............................

ಇರುವವ ಬಲ ನಿನಗ್ಯಾರು ಕರತಾ ಬರಲಾ ಜರಾಸುತರ ಜೈಪೆ
ಮುರಿದೊತ್ತುವೆ ನಿನ್ನೀದಿನ ಮರುದಿನ ನಿನ್ನನುಜರನಾ ಸುತರ ಜೈಪೆ
(ಇಲ್ಲಿ ಆರ್ಯಾದ ಐದು ಚರಣಗಳು ಸಿಕ್ಕಿಲ್ಲ)

## ೪೫೨

ಭಲೆರೆ ಭಾಪುರ ಭೀಮ ಸಿದ್ಧ ಆಗ
ಮಲಗಿದ್ದ ಸ್ಥಳದಿಂದ್ದೆಬ್ಬುಲಿಯಂತೆ ಎದ್ದ ಪ

ಖಳನ ತುಳಿದು ಮುಂದಕೆಳೆದು ಜುಟ್ಟಲ ಜಗ್ಗಿ
ತಲೆಯಿಂದ ತಲೆಗ್ಹಾದು ಕುಲುಕುಲು ನಗುತಲಿ
ಬಲಎಡಭುಜಗಳ ಬಲದಿಂದಲೊತ್ತುತ ಬಲ ನಿನ್ನದೆಲ್ಲೆನುತ
ಎಲ್ಲ ತಿಳಿಸುವೆ ಬಾರೆನುತ ಭೀಮನು ತಾನು
ಹುಳಿಯ ರಕ್ತದಲೆ ಓಕುಳಿಯನಾಡುವೆನೆಂದ ೧

ಹೊಡೆ ಮಗ್ಗುಲಾಗೆದ್ದು ಹುಡಿಹಚ್ಚಿ ನಿಲ್ಲಲಾ
ತೊಡೆಯ ಚಪ್ಪರಿಸಿ ಕೈಪಿಡಿ ಎನ್ನಲಾ ಖಳ ಪ
ಲ್ಗಡಿಯುತ ಕಣ್ಣಿಂದ ಕಿಡಿಗಳು ಬೀಳುತಿರೆ ಅಂಬರದಲಿ
ಉಡುಗಣ ಅದುರುತಿರೆ ಪಾಲ್ಗಡಲುಕ್ಕಿ
ಬಿಡದಲ್ಲೆ ಪೋಗುತಿರೆ ಸುರರೋಡೆ
ಹಿಡಿದು ಮ್ಯಾಲಕೆ ಎತ್ತಿ ಹೊಡೆದು ಪ್ರಾಣವ ಕಳೆದ ೨

ಕತ್ತು ಕೈಯಲಿ ಪಿಡಿದೊತ್ತಿದನಾಕ್ಷಣ
ನೆತ್ತರು ಕಾರುತ ಸತ್ತನು ಪಾಪಿಯು
ಕೆತ್ತಿ ಕೈಕಾಲ್ಹೊಟ್ಟೆಲೊತ್ತಿ ಮುದ್ದೆಯ ಮಾಡಿ ಹತ್ತರಿದ್ದ ಸತಿ
ಗಿತ್ತಲೆ ಬಾರೆನ್ನುತ ಮತ್ತವನ ನೋಡೆನ್ನುತ ಕಾಮಿನೀಯಳ
ಚಿತ್ತಾನಂದವ ಮಾಡುತ ಭೀಮನು ತಾನು
ಅರ್ಥಿ ರಾಜಗೋಪಗಿತ್ತು ತಾ ನಲಿದನು ೩

## ೪೫೩

ನೋಡಬಾರೆ ನೋಡಬಾರೆ
ಗಾಢನೆದ್ದು ನೀ ಓಡಿ ಬ್ಯಾಗನೆ ಪ

ಒದ್ದು ತುಳಿದು ಒಂದು ಮುದ್ದೆಯ ಮಾಡಿನಿ
ನಿದ್ದೆಯ ಬಿಟ್ಟು ನೀ ಎದ್ದು ಬ್ಯಾಗನೆ ೧

ಟೊಂಕ ಮುರಿದು ಮೈಡೊಂಕು ತಿದ್ದೆನಿ
ಕೊಂಕುಬಿಟ್ಟು ಮನ ಶಂಕಿಸದತಿಬ್ಯಾಗ ೨

ಶ್ರೀ ರಾಜಗೋಪನೀ ಪರಿ ದಯವಿರೆ
ಪಾಪಿಯ ಕೊಂದೆನಿ ದೀಪ ತೆಗೆದುಕೊಂಡು ೩

### ಶ್ಲೋಕ

ಸತ್ತುಬಿದ್ದನು ಕೀಚಕನಾಗ ಹತ್ತರಿದ್ದವರು ಬಂದರು ಬ್ಯಾಗ
ಎತ್ತಿಕೊಳ್ಳಿಯ ಪಿಡಿದಾತನ ನೋಡಿ ಚಿತ್ತಕಾಶ್ಚರ್ಯವಾದಿತು ನೋಡಿ

### ೪೫೪

ಇದು ನೋಡಿ ಇದು ನೋಡಿ ಪ

ವಧದ ಕಾರಣಾವುದು ತಿಳಿಯದು ನಮಗಿ ಅ.ಪ.

ಕರವಿಲ್ಲ ಚರಣಿಲ್ಲ ಶಿರವೇ ಮೊದಲಿಲ್ಲ
ಪರಮಾಶ್ಚರ್ಯದ ಮರಣ ತೋರುತಿದೆ ೧

ಉದ್ದಾನವನು ಪ್ರಸಿದ್ಧನು ಯುದ್ಧದಿ
ಮುದ್ದ್ಯಾಗಿ ಮೂಲಿಲಿ ಬಿದ್ದಿಹ ಸುಮ್ಮನೆ ೨

ಪಾಲಕ ರಾಜಗೋಪಾಲನೆ ಬಲ್ಲನು
ಕಾಲ ಮೃತ್ಯುವಿನ ಮೂಲ ತಿಳಿಯದು ೩

### ೪೫೫

ಕಟ್ಟಬೇಕೆಲಾ ಇವಳ ಕಟ್ಟಬೇಕೆಲಾ ಪ

ಇಷ್ಟುಕಾರ್ಯ ಇವಳದೇ ಕುಚೇಷ್ಟೆ ಕಾಣುತಿದೆ ಮುಂಚೆ ಅ.ಪ.

ನಾರಿಯಲ್ಲ ಇವಳು ಮಕ್ಕಮಾರಿಯಾಗಿ ಬಂದಿಹಳು
ಸೇರಿಸಿವಳ ಅಣನಾಶೆ ಪೂರಗೈಸಬೇಕೆ ಮುಂಚೆ ೧

ಕಣ್ಣಿಗೇನು ಅರಿಯದಂತೆ ಹೆಣ್ಣು ಹೆಗ್ಗಳಿಯು ಮೃತ್ಯು
ಅಣ್ಣನ ಕೂಡ ಇವಳ ಸುಣ್ಣ ಸುಟ್ಟ ಪರಿಯೆ ಸುಡುವಾ ೨

ಹಿತದಿ ರಾಜಗೋಪಾಲನ್ನ ಸ್ತುತಿಯ ಮಾಡುತಿಹಳು ಬಿಡದೆ
ಹತಿಲೆ ಹಾಕಿ ಅಣ್ಣಗೆ ಸದ್ಗತಿಯ ಕೊಡಲೆಬೇಕು ಮುಂಚೆ ૩

## ಆರ್ಯಾ

ಕುಪಿತದುಪಕೀಚಕರು ದ್ರುಪದತನಯಳ
ಕಟ್ಟಿ ಒಯ್ದರೋ ಕಾಲ
ಅಪರೂಪ ಹೆಣ್ಣಿನ ಅಟ್ಟಿಹ ಅಪರಾಧಕೆ
ಕಟ್ಟಿ ಒಯ್ದರೋ ಕಾಲ ೧೪

ಪರದಾರ ಪರರ ಪೋರಿ ಮೀರಿ
ಬರಲು ಎನ್ನ ಶಪಥ
ಬರುವದೇನೋ ಸುಯ್ಯುದೇನೋ
ಶ್ರಾವ್ಯ ವಿನಾಶಪಥ ೧೫

ಹೀನಾತ್ಮರು ಬಂದೊಯ್ವರೆನ್ನ ಹಾ
ನಾಥ ಪಾಲಿಸೋ ಗಾಢಾ
ಮಾನಿನಿ ದನಿಯನು ಕೇಳಿದನಾದೀನಾತ್ಮ
ಭೀಮ ಹಾರಿದನಾ ಗೋಡೆ ೧೬

## ೪೫೬

ಹಿಂದೆ ಯಾವ ಬಂದ ನೋಡೆಲಾ ಒಯ್ಯ ಬೇಡೆಲಾ ಪ

ವಟಬಿಲ್ವಶ್ವತ್ಥ ಚಟಚಟನೆ ಕರಪುಟದಿ ಮುರಿವುತ
ಕಟಕಟನೆ ಪಲ್ಕಟಿಯುತಾರ್ಭಟದಿ ಹಾರಿ ಚಿರುತಿಲ್ಲಿ ೧

ಇಷ್ಟು ಇಲ್ಲೆ ಬಿದ್ದ ಕ್ಷಣದಿ ದೃಷ್ಟಿಗೆ ಬಿದ್ದ ಕ್ಷಣದಿ
ಸುಟ್ಟು ಬೂದಿಮಾಡುವಂಥ ಸಿಟ್ಟು ಬಹಳ ತೋರುತಿದೆ ೨

ಹಿಡಿದು ಎಲ್ಲರ ಕೆಡಹಿ ಕೋಪಕಿಡಿಲಿ ಬೂದಿ ಮಾಡಿ ಲಿಗೆ
ಒಡೆಯ ರಾಜಗೋಪಾಲಗೆರಗಿ ಮಡದಿ ಬಿಡಿಸಿ ನಡೆದ ಮನೆಗೆ ೩

ಶುದ್ಧ ಸ್ನಾನವ ಮಾಡಿದಳಾಗ ಒದ್ದೆಯಿಂದಲಿ ಬಂದಳು ನೀರೆ
ವೃದ್ಧರು ಬಾಲಾ ಅಬಲೆಯರು ಸುದ್ದಿ ಎತ್ತರು ನೋಡರು
ಮೋರೆ ೪

## ೪೫೭

ನೋಡಬ್ಯಾಡಿರೊ ಮಾತನಾಡಬ್ಯಾಡಿರೊ
ಮೂಢಮತಿಗಳೇ ನಿಮಗೆ ಕೇಡುಬಾಹೋದು ೧

ದೂರ ನಿಲ್ಲಿರೋ ಅವಳ ದಾರಿಬ್ಯಾಡಿರೋ
ಮೋರೆಯೆತ್ತಿ ನೀವ್ ಬೆರಳು ತೋರಬೇಡಿರೊ ೨

ರಾಜಗೋಪನ ದಯವು ಸಹಜ ಅವಳಿಗೆ
ಮೋಜು ಮಾತಿನ ಅವಳ ಗೋಜು ಬ್ಯಾಡಿರೋ ೩

### ಶ್ಲೋಕ

ಗುಲ್ಲು ಮಾಡದೆ ಮಾನಿನಿ ಬ್ಯಾಗ
ಮಲ್ಲನೈದಲು ಸುಧೇಷ್ಣೆಯ ಬಳಿಗೆ ೪೦

ಬಂದು ನಿಂದಿರ್ದ ದೂತೆಯ ಕಂಡು
ಅಂದಳೀಪರಿ ನಿಷ್ಠುರವೊಂದು ೪೧

ಸಾಕು ನಮ್ಮವ್ವ ಮಾರಿಯೇ ನಮ್ಮಲ್ಲಿರಬೇಡವ್ವಾ ಹೊರಟು
ಹೋಗು ಇಲ್ಲಿಂದ ಎಂದು ಸುಧೇಷ್ಣೆಯು ಸೈರಂಧ್ರಿಗೆ ದುಡುಕುತ್ತಾಳೆ

## ೪೫೮

ಮುಗಿವೆ ಕೈಯ್ಯ ನಿಮಗೆ ಅಮ್ಮಮ್ಮ ಎ
ನ್ನುಗುಳಿಬಿಟ್ಟು ಪೋಗೆ ಪ

ನಗುವ ಬೆಕ್ಕಿನ ಬಾಯಿಯೊಳು ಬಿದ್ದಿಲಿಯಂತೆ
ತಗಲಿಗಂಜಿ ಎದೆ ಭುಗುಭುಗಿಲೆನುತಿದೆ ಅ.ಪ.

ನಾರಿ ಇಲ್ಲಿ ಹೋದ್ಯಾಕೆ ಹೊರಟ್ಹೋಗಿ ಬೇರೆ ಸೇರಬೇಕೆ
ಮಾರಿಯ ನೋಡಲು ಕ್ರೂರವಾಗಿಹುದಲ್ಲೆ
ಊರಜನರು ಹಲ್ಲಣ್ಣಾರಿ ಕುಳಿತಿಹರು ೧

ಕೆಟ್ಟೆ ಕೈಯೆ ಎಂದು ನಾ ಸಲಹಿದಕಿಷ್ಟು ಕಂಡೆನಿಂದು
ದೃಷ್ಟಿಂದ ನೋಡಲು ನಷ್ಟವಾಗಿಹೋದಲ್ಲೆ
ಪಟ್ಟಣಜನ ಕಂಗೆಟ್ಟು ಕುಳಿತಿಹರು ೨

ಭಾಳಮಾತ ಯಾಕೆ ಅಮ್ಮಮ್ಮ ಎನ್ನಾಲಿಯ ಬಿಡಬೇಕೆ
ಪಾಲಕ ರಾಜಗೋಪಾಲನೆ ಬಲ್ಲನು
ಬಾಲೆ ಇದ್ದಲ್ಲೆಲ್ಲ ಪಾಲಿಪನವನು ೩

## ೪೫೯

ಯಾತಕಿಂಥಾಮಾತು ನಿಷ್ಠುರ
ನೀತಿಯ ತಿಳಿಯದ ಭಾಮಿನಿ ಪ

ಕೋತಿ ಮುಂಚೆ ಮತ್ತೆ ಮದಿರವು ಭೂತವೃಶ್ಚಿಕವಂಶವೆ
ಹಾತೊರೆದು ಹಾರಾಡಿ ತನ್ನಯ ಪಾತತಾನೇ ಹೊಂದಿದ ೧

ಹೆಚ್ಚಿನ ಮಾತ್ಯಾಕ ನಿನಗೆ ಮುಚ್ಚೆಬಾಯ ಜನ ಮೆಚ್ಚೋರೆ
ಹುಚ್ಚುನಾಯಿಗೆ ಕಚ್ಚು ಕಲಿಸಿದ ಕಿಚ್ಚು ಅವನನೇ ಕೊಲಿಸಿತು ೨

ಎನ್ನ ಕಣ್ಣೊಳು ನಿನ್ನ ಬಚ್ಚಿಟ್ಟು ಎನ್ನಗಂಬೋದು ನೀತಿಯೇ
ಮನ್ನಿಸನು ಈ ಮಾತು ಗುಣಸಂಪನ್ನ ಶ್ರೀ ರಾಜಗೋಪನು ೩

### ವಚನ ೭

ನಾಲ್ಕು ದಿವಸದ ಮಾತಿಗೆ ಇಂಥ ವಾಕು ನಿಷ್ಠುರವು
ಬೇಡವೇ ಕಾಂತೆ ಇರಲಿ ಎಂದರೆ ನಾವು ಇರುವವರೇ
ವರ್ಷ ಪೂರೈಸಿ ನಾವು ತೆರಳೋಕೆ

### ವಚನ ೮

ಇಷ್ಟು ಮಾತಿಗಾ ದಿಟ್ಟ ಸೈರಂಧ್ರಿಯು ಸ್ಪಷ್ಟ ನುಡಿದದ್ದು ಕೇಳುತಲೆ
ಘಟ್ಯಾಗಿ ಎನ್ನ ಬಾಯಿ ಮುಚ್ಚಿದಳು ಎನ್ನುತ ಸುಧೇಷ್ಣೆ ಸುಮ್ಮನಿರಲು

### ವಚನ ೯

ಫುಲ್ಲನಯನೆ ತಾ ಅಲ್ಲಿಂದ್ಹೊರಟು ನಲ್ಲ ಭೀಮನ ಬಳಿಗೆ ಬಂದು
ಅಲ್ಲಿ ಆದ ವೃತ್ತಾಂತಗಳೆಲ್ಲ ಚೆಲ್ವೆಯು ನುಡಿದಳು ಹೀಗೆಂದ

### ವಚನ ೧೦

ಪತ್ನಿಯ ಮುಖವನು ಮತ್ತೆ ಭೀಮನು ನೋಡಿ
ಅತ್ಯಂತ ಹರುಷದಲಿ ಹೀಗೆಂದ
ಹತ್ತು ಮೂರು ದಿನ ಕಳೆದರಾದೀತೆಂದು
ಚಿತ್ತದಿ ಹರುಷವ ಬಿಡುತಲಿ

### ವಚನ ೩೧

ಅಜ್ಞಾತವಾಸದ ದಿನಗಳು ಮುಗಿಯಲು ಪಾಂಡವರು ಎರೆದು ಕೊಂಡು
ಆ ದಿನ ವಿರಾಟನ ಪಟ್ಟದ ಮೇಲೆ ಕುಳಿತಿದ್ದನ್ನು ನೋಡಿ ರಾಜನು
ಎಲ್ಲವನ್ನು ಉತ್ತರನಿಂದ ತಿಳಿದು ತನ್ನ ಮಗಳಾದ ಉತ್ತರೆ ಯನ್ನು
ಅಭಿಮನ್ಯುವಿಗೆ ಕೊಟ್ಟು ಪಾಂಡವರನ್ನು ಮನ್ನಿಸಿದರು

## ೪೬೦

ಗೆದ್ದರು ಪಾಂಡವರು ಅಜ್ಞಾತವಾಸವ ಅನಿ
ರುದ್ಧನ ದಯ ಅವರಲ್ಲಿದ್ದ ಕಾರಣದಿ ಪ

ಹರುಷ ತುಂಬಲು ನೋಡಿ ತೀರ್ಥದಿ ಬಂದು
ಹರುಷದಿ ಸ್ನಾನವ ಮಾಡಿ
ಜರದ ದುಕೂಲ ದಿವ್ಯಾಭರಣಭೂಷಿತರಾಗಿ
ಸರಸ ಸಿಂಹಾಸನ ಪದಾರೂಢರಾಗಿ ೧

ಬಂದನು ರಾಜ ಸಭೆಗೆ ಸಿಂಹಾಸನೇರೋದು
ಚೆಂದೇನೋ ಕಂಕ ನಿನಗೆ
ತಂದೆಯ ಮಾತಿಗೆ ಚಂದ ಉತ್ತರ ನುಡಿದಾ
ಇಂದು ಪಾಂಡವರಿವರೆಂದು ಪೇಳಿದನು ೨

ರಾಜರಾಜರೆನಿಸಿ ಅಭಿಮನ್ಯು ಸಹಿತ
ರಾಜಗೋಪನ್ನ ಕರಿಸಿ ಮೂರ್ಜಗದಿ ವಿ
ರಾಜಿಸುವ ಕನ್ಯಾ ಕೊಟ್ಟು
ಮೋಜಿಲೆ ಮದುವೆ ಮಾಡಿದರವರು ೩

## ೪೬೧

### ವಚನ ೧೧

ಇಂದು ಪಾಂಡವರು ಬಂಧನ ಬಿಟ್ಟ ಚೆಂದಾದ ಕಥೆಯನ್ನು ಕೇಳಿದರೆ
ಕಂದರಾಗುವರು ಬಂಧನ ಕಡಿಯುವದು ಮುಂದಕೆ ಆಗೂದು
ಬಹಳಾನಂದ
ನಿತ್ಯ ಬಿಡದೆ ಈ ಶ್ರೇಷ್ಠ ಕಥೆಯನ್ನು ಅತ್ಯಂತ ಹರುಷದಿ
ಕೇಳಿದರೆ ಅಚ್ಯುತ ಅವರ ಭಕ್ತಿಗೆ ಮೆಚ್ಚಿ ಮುಕ್ತಿಯ ಕೊಡುವ
ತಾ ಕಡೆಗೆ

ಜಯ ಮತ್ಸ್ಯ ಕೂರ್ಮನಿಗೆ ಜಯ ವರಹ ನರಹರಿಗೆ
ಜಯ ಜಯ ವಾಮನ ಭಾರ್ಗವನಿಗೆ
ಜಯ ಜಯತು ದಶರಥಸುತ ರಘುರಾಮನಿಗೆ
ಜಯ ಕೃಷ್ಣ ಬುದ್ಧ ಕಲ್ಕ್ಯವತಾರಗೆ ೧

ಜಯ ಪ್ರಾಣನಾಥಗೆ ಜಯಭೀಮಸೇನಗೆ
ಜಯ ಜಯತು ಜಯ ಮಧ್ವ ಮುನಿರಾಯಗೆ
ಜಯ ತ್ರಿಮೂರ್ತಿಗಳ ಹೃದ್ಗುಹದಿ ನಲಿದಾಡುವಗೆ
ಜಯ ರಾಮಕೃಷ್ಣ ವೇದವ್ಯಾಸಗೆ ೨

ಜಯತು ಗಂಗಾ ಸರಸ್ವತಿ ಗೋದೆ ಯಮುನೆಗೆ
ಜಯ ಮಂಗಳಾತ್ಮೆ ಶ್ರೀಕೃಷ್ಣವೇಣೀ
ಜಯತು ಕಾವೇರಿ ಕಪಿಲಾ ತುಂಗಭದ್ರೆಗೆ
ಜಯ ರಾಜಗೋಪನಂಗಜಮೂರ್ತಿಗೆ ೩

## ದೀರ್ಘಕೃತಿ

# ತಂದೆವರದಗೋಪಾಲವಿಠ್ಠಲ ವಿರಚಿತ

# ಪಂಚಭೇದವು (ಗದ್ಯ)

### ಶ್ರೀ ಗುರುಭ್ಯೋನಮಃ

ಅನಾಧ್ಯನಂತ ಕಾಲಗಳಿಂದಲೂ ಕ್ಷರಾಕ್ಷರವು ರುಕ್ಷರುಗಳಿಗೆ ಉತ್ತುಮನಾದಂಥಾ ಮುಕ್ತಾಮುಕ್ತನಿಯಾಮಕನಾದಂಥಾ ಅನಂತ ರೂಪಾತ್ಮಕನಾದಂಥಾ ಪರಮ ಸ್ವತಂತ್ರನಾದ ಶ್ರೀ ನಾರಾಯಣನ ಆದಿಯಲ್ಲಿ ಮನಸಾ ಧ್ಯಾನಮಾಡಬೇಕು. ಜೀವನು ಪ್ರಕೃತಿಬದ್ಧನೆಂದು ತಿಳಿಯಬೇಕು. ಪಂಚಭೇದಜ್ಞಾನ ಇಲ್ಲದೇ ಇದ್ದಂಥವನೂ ಅಂಧ ತಮಸ್ಸು ಹೊಂದುತ್ತಾನೆಂದು ಶ್ರೀ ಸರ್ವಜ್ಞಾಚಾರ್ಯರ ಉಕ್ತಿ ಇರೋಣದರಿಂದ ಮೋಕ್ಷಪೇಕ್ಷೆ ಉಳ್ಳಂಥಾ ಪುರುಷರು ಪ್ರಥಮದಲ್ಲಿ ಅವಶ್ಯವಾಗಿ ಪಂಚಭೇದ ತಿಳಿದು ಮನನಮಾಡಬೇಕು. ಆ ಪಂಚಭೇದ ಯೇನೆಂದರೆ

೧. ಪರಸ್ಪರ ಜೀವಜೀವಕ್ಕೆ ಭೇದ
೨. ಪರಸ್ಪರ ಜೀವ ಜಡಕ್ಕೆ ಭೇದ
೩. ಪರಸ್ಪರ ಜಡ ಜಡಕ್ಕೆ ಭೇದ
೪. ಪರಸ್ಪರ ಜೀವ ಪರಮಾತ್ಮಗೆ ಭೇದ
೫. ಪರಸ್ಪರ ಜಡ ಪರಮಾತ್ಮನಿಗೂ ಭೇದ

ಹೀಗೆ ಪಂಚಭೇದಗಳು ಶಾಸ್ತ್ರಸಿದ್ಧವಾದದ್ದು. ಈ ಪಂಚಭೇದದಲ್ಲಿ ಲಕ್ಷ್ಮೀದೇವಿಯರನ್ನು ಎಲ್ಲಿ ಸೇರಿಸಬೇಕು ಯಂದರೆ ಶ್ರೀಮದ್ ಭಾಗವತದಲ್ಲಿ ಉಕ್ತವಾದ ರೀತ್ಯ ಸೃಷ್ಟ್ಯಾದಿ ವ್ಯಾಪಾರ ಲಕ್ಷಣವಾದಂಥಾ ಲಯವೂ ಸಹ ಶ್ರೀದೇವಿಗೆ ಹೇಳುವದರಿಂದಲೂ, ಅಣುವ್ಯಾಖ್ಯಾನರೀತ್ಯಾ (೧.) ಅಲ್ಪಶಕ್ತಿಯೂ (೨.) ಅಸಾರ ಯಜ್ಞತ್ವವೂ (೩.) ಪಾರತಂತ್ರವೂ (೪.) ಅಪೂರ್ಣತ್ವವೂ (೫.) ಉಪಜೀವಕತ್ವವೂ ಈ ಐದೂ ಜೀವನೋಪಾದಿಯಲ್ಲಿ ಲಕ್ಷ್ಮೀದೇವಿಯಲ್ಲಿ

ಅನ್ವಯಿಸಿರೋಣದರಿಂದ (ಉಪಚಾರಜೀವಗಳೆಂತಲೂ) ಬ್ರಹ್ಮವಾಯುಗಳಿಗಿಂತ ಅನಂತಕೋಟಿ ಗುಣಾಧಿಕಳೆಂತಲೂ ತಿಳಿದು ಪಂಚಭೇದ ಕಾಲದಲ್ಲಿ ಮಾತ್ರ ಜೀವ ಕೋಟಿಯಲ್ಲಿ ಸೇರಿಸಿ ಪಂಚಭೇದಗಳನ್ನು ಚಿಂತಿಸಬೇಕು. ಉಳಿದ ಕಾಲದಲ್ಲಿ ಸೌಪರ್ಣಿ ಶೃತಿ ರೀತ್ಯಾ ನಿತ್ಯಮುಕ್ತಳಾದ ಪ್ರಯುಕ್ತ ಈಶಕೋಟಿ ಪ್ರವಿಷ್ಟಳೆಂದೂ ದೃಢವಾಗಿ ತಿಳಿಯಬೇಕು... ಈ ಪಂಚಭೇದವನ್ನು ಮುಕ್ತಾವಸ್ಥಿತಿಯಲ್ಲಿಯೂ ಸಂಸಾರಾವಸ್ಥೆಯಲ್ಲಿಯೂ ತನ್ನ ದೇಹದಲ್ಲ್ಯೂ ಚಿಂತಿಸಬೇಕು. ಸಜ್ಜನರೇ ಪರಿಗ್ರಹಿಸಲೆಂದು ಈ ಪಂಚಭೇದದ ವಿಸ್ತಾರ ಹೇಳಲ್ಪಡುವದು. ಯೇನೆಂದರೆ ತತ್ವದ ಸಂಖ್ಯಾನರೀತ್ಯಾ ಸ್ವತಂತ್ರತತ್ವ ಅಸ್ವತಂತ್ರ ತತ್ವವೆಂದು ಎರಡು ಪ್ರಕಾರ.

೧. ಸ್ವತಂತ್ರ ತತ್ವ ಯಂಥಾದ್ದೂ ಅಂದರೆ ತನ್ನಲ್ಲಿದ್ದ ಸತ್ಕಲ್ಯಾಣಾದಾ ಗುಣಗಳ ಜ್ಞಾನವೂ ಪರರ ಯೋಗ್ಯತಾವಾದಿ ಜ್ಞಾನವೂ ಸರ್ವದಾ ನೋಡುತ್ತ ಲೇಶತಾ ಪರಾಪೇಕ್ಷೆಯಿಲ್ಲದಂತೆ ಸರ್ವರಿಗೂ ಸ್ವಾಮಿ ಯಾಗಿರುವಂಥಾ ತತ್ವವೇ ಸ್ವತಂತ್ರ ತತ್ವವೆಂದು ತಿಳಿಯಬೇಕು.

೨. ಅಸ್ವತಂತ್ರತತ್ವ ಯಂಥಾದ್ದೆಂದರೆ ತನ್ನ ಜ್ಞಾನವೂ ಪರರ ಜ್ಞಾನವೂ ಪರಾಪೇಕ್ಷೆಯುಳ್ಳವಳಾಗಿ ಸ್ವಪ್ರಕಾಶದಿಂದ ನೋಡುತ್ತ ಬ್ರಹ್ಮಾದಿ ಸರ್ವಜೀವರಿಂದ ಅತ್ಯಂತ ಶ್ರೇಷ್ಠಳಾದಂಥ ಶ್ರೀ ಲಕ್ಷ್ಮೀದೇವಿಯವರ ಜ್ಞಾನವೆಂದು ತಿಳಿಯಬೇಕು. ಈ ಅಸ್ವತಂತ್ರ ತತ್ವದಲ್ಲಿ ಭಾವತತ್ವ ಅಭಾವತತ್ವವೆಂಬ ಎರಡು ಪ್ರಕಾರಗಳು (೧.) ಭಾವತತ್ವ ಯಂಥಾದ್ದೆಂದರೆ ವಿಧಿ ಪ್ರಮಾಣಕ್ಕನುಸರಿಸಿ ಬ್ರಹ್ಮಾದಿ ಜೀವರು ಯಾವ ತತ್ವದಿಂದ ಸೃಷ್ಟಿಗೆ ಬರುತ್ತಾರೋ ಆ ತತ್ವಕ್ಕೆ ಭಾವತತ್ವವೆಂಬ ಹೆಸರು. (೨.) ಅಭಾವತತ್ವ ಎಂಥಾದ್ದೆಂದರೆ ಯಾವ ತತ್ವದಿಂದ ವಿಧಿ ಪ್ರಮಾಣಕ್ಕೆ ವಿಷಯರಲ್ಲದೆ ಈಗ ಸೃಷ್ಟಿಗೆ ಬರದಲೆ ಬ್ರಹ್ಮಾದಿ ಜೀವರುಗಳು ಇರುತಾರೋ ಆ ತತ್ವಕ್ಕೆ ಅಭಾವತತ್ವವೆಂಬ ಹೆಸರು.

ಭಾವತತ್ವದಲ್ಲಿ (೧.) ಪ್ರಾಗ್ಭಾವ (೨.) ಪ್ರಧ್ವಂಸ ಅಭಾವ (೩.) ಅತ್ಯಂತ ಅಭಾವಾ ಎಂಬ ಮೂರು ಪ್ರಕಾರಗಳು. ಇದರಲ್ಲಿ (೧.) ಪ್ರಾಗ್‌ಭಾವ ಯಂಥಾದ್ದೆಂದರೆ ಬ್ರಹ್ಮಾದಿ ಜೀವರುಗಳನ್ನು ಈಗ ಸೃಷ್ಟಿಗೆ ತಾರದ..........ನ ಕಲ್ಪದಲ್ಲಿ ಸೃಷ್ಟಿಗೆ ತರುವಂಥಾದಕ್ಕೆ ಪ್ರಾಗ್‌ಭಾವವೆಂದು ಹೆಸರು.

(೨.) ಪ್ರಧ್ವಂಸಾಭಾವ ಯಂಥಾದ್ದೆಂದರೆ ಬ್ರಹ್ಮಾದಿ ಜೀವರುಗಳು ಪೂರ್ವ ಕಲ್ಪಗಳಲ್ಲಿ ಸೃಷ್ಟಿಗೆ ಬಂದು ಯೋಗ್ಯತಾನುಗುಣವಾಗಿ ಪೂರ್ಣ ಸಾಧನಮಾಡಿ ಲಿಂಗಭಂಗರಾಗಿ ಮುಕ್ತರಾಗಿರವದಕ್ಕೆ ಪ್ರಧ್ವಂಸಾಭಾವ ಎಂದು ಹೆಸರು. (೩.) ಅತ್ಯಂತಾಭಾವವೆಂದರೆ ಸೌಪರ್ಣಿ ಶೃತಿ ರೀತ್ಯಾ ಯಾವ ಕಲ್ಪದಲ್ಲಿಯೂ ಸೃಷ್ಟಿಗೆ ಬಾರದೆಲೆ ನಿತ್ಯಮುಕ್ತಳಾದಂಥಾ ಶ್ರೀ ಲಕ್ಷ್ಮೀದೇವಿಯಂತಾ ತಿಳಿಯಬೇಕು.

ಭಾವತತ್ತ್ವವು ಚೇತನ ಅಚೇತನ ಭೇದದಿಂದ ಎರಡು ಪ್ರಕಾರವಿದೆ. (೧.) ಚೇತನ ಲಕ್ಷಣ ಯಂಥಾದ್ದೆಂದರೆ ಬ್ರಹ್ಮಾದಿ ಜೀವರುಗಳು, ನಾರದ ಋಷಿಗಳು, ಪಿತೃಗಳು, ಮಾಂಧಾತಾದಿ ರಾಯರುಗಳು, ಮಾನುಷ್ಯೋತ್ತಮರು ಹೀಗೆ ಸಾತ್ವಿಕರು ಪಂಚವಿಧ ಮುಕ್ತರು. ಪಂಚವಿಧ ಮುಕ್ತಿಯೋಗ್ಯರು. (೨.) ರಾಜಸರಾದ ನಿತ್ಯಸಂಸಾರಿಗಳು. (೧.) ಸ್ವರ್ಗಪ್ರಚುರರು (೨.) ಭೂಪ್ರಚುರರು (೩.) ನಿರಯ ಪ್ರಚುರರು ಯಂತಾ ತ್ರಿವಿಧ ರಾಜಸರು.

೩. ತಾಮಸ ಜೀವರಲ್ಲಿ (೧.) ಕಲ್ಯಾದಿ ದೈತ್ಯರು (೨.) ರಾಕ್ಷಸರು (೩.) ಪಿಶಾಚಿಗಳು (೪.) ಮನುಷ್ಯಾಧಮರು. ಇವರು ತಮಸ್ಸಿಗೆ ಸೇರಿದವರು. ಹೀಗೆ ಚತುರ್ವಿಧರು ತಮಸ್ಸಿಗೆ ಯತ್ನಮಾಡತಕ್ಕವರು. ಹೀಗೆ ಇನ್ನೆರಡು ವಿಧ ಜೀವರುಗಳಿಗೆ ಪರಸ್ಪರ ಭೇದ ತಿಳಿಯಬೇಕು.

೪. ಅಚೇತವದಲ್ಲಿ (೧) ನಿತ್ಯ ಅಚೇತನ (೨) ಅನಿತ್ಯ ಅಚೇತನ (೩) ನಿತ್ಯಾನಿತ್ಯ ಅಚೇತನ ಅಥವಾ ನಿತ್ಯಜಡ. (೧.) ನಿತ್ಯಜಡ (೨.) ಅನಿತ್ಯಜಡ (೩.) ನಿತ್ಯಾನಿತ್ಯಜಡ ಹೀಗೆ ಮೂರು ಪ್ರಕಾರ.

೧. ನಿತ್ಯಜಡ : ಸಮಸ್ತ ವೇದಗಳು ಯೆಕೊತ್ರ ಪಂಚಾಶದ್ವರ್ಣಗಳು. ಪರಮಾಕಾಶ ತ್ರಿ ಗುಣಗಳು. ಇವು ಯಾವತ್ತೂ ನಿತ್ಯವಾದದ್ದೆಂದು ತಿಳಿಯಬೇಕು.

೨. ಅನಿತ್ಯಜಡ : ೨೪ ತತ್ವಗಳು ಇದರ ವಿಸ್ತಾರ ಪರಸ್ಪರ ಜಡಗಳ ಭೇದಸ್ಥಾಪನಾ (ವೇದಗಳು) ಅವ್ಯಕ್ತತತ್ವ–ಮಹತ್ತತ್ವ–ಅಹಂಕಾರತತ್ವ–ಮನಸ್ತತ್ವ ಅಥವಾ ಬುದ್ಧಿತತ್ವ ಇವು ನಾಲ್ಕು ಶ್ರೋತ್ರ –ಚಕ್ಷು–ತ್ವಕ್ ಜಿಹ್ವಾ–ಘ್ರಾಣ ಹೀಗೆ ಪಂಚಜ್ಞಾನೇಂದ್ರಿಯ. ವಾಕ್ –ಪಾಣಿ– ಪಾದ– ಪಾಯು– ಉಪಸ್ಥ ಹೀಗೆ

ಪಂಚ ಕರ್ಮೇಂದ್ರಿಯಾ. ಪೃಥವಿ-ಅಪ್-ತೇಜ-ವಾಯು-ಆಕಾಶ-ಹೀಗೆ ಪಂಚಭೂತಗಳು. ಶಬ್ದ-ಸ್ಪರ್ಶ-ರೂಪ-ರಸ-ಗಂಧ ಹೀಗೆ ಪಂಚತನ್ಮಾತ್ರಗಳು ಹೀಗೆ ಅಂತೂ (೨೪) ಇಪ್ಪತ್ತು ನಾಲ್ಕು ತತ್ವಗಳು. ಬೊಮ್ಮಾಂಡದ ಹೊರಗೆ ಅಸಂಸೃಷ್ಟವಾಗಿಯೂ ಬೊಮ್ಮಾಂಡಕ್ಕೂ ಬೊಮ್ಮಾಂಡದ ಒಳಗಿನ ಪದಾರ್ಥಕ್ಕೂ ಸಹ ಸಂಸೃಷ್ಟವಾಗಿಯೂ ಇರುತ್ತದೆ. (ಇಂಥ ಜಡಗಳಿಗೆ ಪರಸ್ಪರ ಭೇದ ತಿಳಿಯಬೇಕು. ಮೇಲ್ಕಂಡ ಹನ್ನೆರಡು ವಿಧ ಜೀವರುಗಳಿಗೂ ಪರಸ್ಪರ ಭೇದ, ಆ ಜೀವರುಗಳಿಗೂ .......... ಪರಸ್ಪರ ಭೇದ. ಜಡಗಳಿಗೂ ಈಶಗೂ ಭೇದ. ಆ ಜೀವರಿಗೂ ಈಶಗೂ ಭೇದ.)

೩. ನಿತ್ಯಾನಿತ್ಯಜಡ ಶಾಂಡಿಲ್ಯ ತತ್ವರೀತ್ಯಾ ಸಮಸ್ತ ಪುರಾಣಗಳು, ಇತಿಹಾಸಾದಿಗಳು ಅರ್ಥತಃ ನಿತ್ಯವಾದದ್ದು. ಆದರೆ ಯುಗಾಂತರ ಭೇದೇನ ಶಬ್ದವ್ಯತ್ಯಾಸದಿಂದ ಅನಿತ್ಯವಾದದ್ದೆಂದು ತಿಳಿಯಬೇಕು. ಹೀಗೆ ಪಂಚಭೇದಗಳನ್ನು ಮನನಕ್ಕೆ ವಿವರವಾಗಿ ತರಬೇಕು. ಇಂಥ ಅಸ್ವತಂತ್ರವಾದಂಥ ಜಡಜೀವರಿಗೂ ಕೂಡಾ ಸೃಷ್ಟಿಸ್ಥಿತಿ ಲಯ ನಿಯಮ ಜ್ಞಾನ ಅಜ್ಞಾನ ಬಂಧ ಮೋಕ್ಷಗಳು ಶ್ರೀ ನಾರಾಯಣನಿಂದಲೇ ಆಗುತ್ತದೆಂದು ನಿಃಸಂಶಯದಿಂದ ಮನಸ್ಸನ್ನು ಸ್ಥಿರಮಾಡಬೇಕು.

ಇನ್ನು ಆದಿಜ್ಞಾನ-ದ್ವಿತೀಯಜ್ಞಾನ-ತೃತೀಯಜ್ಞಾನವೆಂದು ಮೂರು ವಿಧ. ಇದರಲ್ಲಿ (೧.) ಆದಿಜ್ಞಾನ : ಎಂಥಾದ್ದೆಂದರೆ ಅನಂತಾನಂತ ಸೂರ್ಯರು ಏಕವಾ ಉದಿಸಿದ ಕಾಲದಲ್ಲಿ ಭೂಮಿಯಲ್ಲಿದ್ದ ಪದಾರ್ಥಗಳು ಸ್ಫುಟವಾಗಿ ಕರತಲಾಮಲಕದಂತೆ ಚೆನ್ನಾಗಿ ನೋಡುತ್ತ ಇರುವಂಥ ಶ್ರೀ ಪರಮಾತ್ಮನ ಜ್ಞಾನ ಆದಿಜ್ಞಾನವೆಂದು ತಿಳಿಯಬೇಕು.

(೨.) ದ್ವಿತೀಯಜ್ಞಾನ ಯಂಥಾದ್ದೆಂದರೆ ಈಶ್ವರನನ್ನೂ ಸಮಸ್ತ ಜಗತ್ತನ್ನೂ ನೋಡುವ ಕಾಲದಲ್ಲಿ ಜಗತ್ತಿನ ವಿಷಯದಲ್ಲಿ ಬ್ರಹ್ಮ ವಾಯುಗಳಿಗಿಂತ ಕೋಟಿಗುಣ ಅಧಿಕವಾಗಿ ನಿರಾಲೋಚನೆಯಿಂದ ಲೀಲಾಜಾಲವಾಗಿ ತಿಳಿಯುತ್ತಾ ನೋಡುತ್ತಾ ಇರುವದಲ್ಲದೆ ಶ್ರೀ ನಾರಾಯಣನ ವಿಷಯದಲ್ಲಿ ಆಲೋಚನೆಯಿಂದ ಅವನ ರೂಪ ಗುಣ ಕ್ರಿಯಾದಿಗಳನ್ನು ಅನಂತಾನಂತ ವೇದೋಕ್ತ ರೀತ್ಯಾ ದರ್ಶನ ಮಾಡುತ್ತಾ ಮತ್ತು ಅನಂತಾನಂತ ವೇದಗಳನ್ನು

ಅತಿಕ್ರಮಿಸಿ ಇನ್ನೂ ವಿಶೇಷಕಾರೇಣ ಶ್ರೀ ಪರಮಾತ್ಮನ ನೂತನ ನೂತನ ಅನಂತಗುಣಗಳನ್ನು ಪರಿಗಣನ ಮಾಡಲಿಕ್ಕೆ ಶಕ್ತಳಾಗದೆ ಆನಂದಾಬ್ಧಿಯಲ್ಲಿ ಮಗ್ನಳಾಗಿ ಇರುವಂಥ ಶ್ರೀ ಲಕ್ಷ್ಮೀದೇವಿಯವರ ಜ್ಞಾನ ಈ ಜ್ಞಾನಕ್ಕೆ ದ್ವಿತೀಯಜ್ಞಾನವೆಂದು ಹೆಸರು.

೩. ತೃತೀಯಜ್ಞಾನ : ಯಂಥಾದ್ದೆಂದರೆ ಈಶನ ನೋಡುವ ಕಾಲದಲ್ಲಿ ಸಮಸ್ತ ಜಗತ್ತನ್ನು ಭಗವತ್ಪ್ರಸಾದದಿಂದ ಆಲೋಚನೆಯಿಂದನೋಡುತ್ತ ಈಶ್ವರನ ವಿಷಯದಲ್ಲಿ ಅನಂತ ವೇದೋಕ್ತ ರೀತ್ಯಾ ಭಾರತೋಕ್ತ ರೀತ್ಯಾ ಅವನ ಗುಣ-ರೂಪ-ಕ್ರಿಯಾದಿಗಳನ್ನು ಸ್ಥೈರ್ಯ ಮನಸ್ಸಿನಿಂದ ಉಪಾಸನ ಮಾಡತಕ್ಕ ಜ್ಞಾನವೇ ಋಜು ಶ್ರೇಷ್ಠವಾದ ಶ್ರೀ ವಾಯುದೇವರ ಜ್ಞಾನಾ. ಈ ಜ್ಞಾನಕ್ಕೆ ತೃತೀಯ ಜ್ಞಾನವೆಂದು ಹೆಸರು.

ಈ ಋಜುಗಳ ಜ್ಞಾನ-ಸ್ವರೂಪಜ್ಞಾನ-ಬಾಹ್ಯಜ್ಞಾನ ಎರಡು ಪ್ರಕಾರ. ಸ್ವರೂಪ ಜ್ಞಾನ ಇದರಲ್ಲಿ ಸಾಧನ ಕ್ರಮದಿಂದ ಅತಿಶಯ ವೃದ್ಧಿಹೊಂದತಕ್ಕದ್ದು. ಬಾಹ್ಯಜ್ಞಾನ ನಶ್ವರವಾದದ್ದು. ಈ ವಿವರ ಯಾವತ್ತೂ ಆರ್ಯರುಗಳ ಉಕ್ತಿಗನುಸರಿಸಿ ಶ್ರೀಹರಿ ವಾಯುಗಳು ಲೇಖನ ಮಾಡಿಸಿದಂತೆ ಲೇಖನ ಮಾಡಿರುತ್ತದೆ. ಇದನ್ನು ಮನಸ್ಸು ಪರಿಪಕ್ವ ಉಳ್ಳವರು ಸರ್ವದಾ ಉಪಾಸನ ಮಾಡತಕ್ಕದ್ದು. ಸಜ್ಜನರಿಗೆ ವಿರಜಾನದಿ ಸ್ನಾನದಿಂದ ಲಿಂಗಭಂಗವೂ ತಾರಕ ಬ್ರಹ್ಮೋಪದೇಶವೂ ಶ್ವೇತ ದ್ವೀಪಸ್ಥ ಶ್ರೀ ವಾಸುದೇವನ ಸಂದರುಶನವೂ ಸಂತರ ಯೋಗ್ಯತಾನುಗುಣವಾಗಿ ಮುಕ್ತಿಯು ಸಿದ್ಧವಾಗಿ ಆಗುತ್ತದೆಂದು ಶ್ರೀಮದಾನಂದ ತೀರ್ಥಮುನಿ ರಚಿಸಿದ ಸಿದ್ಧಾಂತ ಶಾಸ್ತ್ರ ಪರಮ ನಿರ್ದೋಷದಿಂದ ಹೇಳಿರುವುದನ್ನು ಮನಸ್ಸಿಗೆ ತರಬೇಕು. ಈ ಸತ್ವಂಥಗಳನ್ನು ಏನನ್ನೂ ಅರಿಯದೆ ಪರಮಾತ್ಮನ ದ್ವೇಷವೂ ಭಗವದ್ಭಕ್ತರ ದ್ವೇಷವೂ ಭಗವದ್ಭಕ್ತನಿಂದಾ ಮಾಡುವಂಥವರಿಗೂ ಶ್ರೀ ವಾಯುದೇವರ ಗದಾ ಪ್ರಹರದಿಂದ ಲಿಂಗಭಂಗವಾಗಿ ಉತ್ತುಮ-ಮಾಧ್ಯಮ-ಅಧಮ ರೂಪವಾದಂಥಾ ತಮಸ್ಸನ್ನು ಪ್ರವೇಶಮಾಡಿಸಿ ಅತಿಶಯ ದುಃಖ ಅನುಭೋಗಮಾಡಿಸುತ್ತಿರುತ್ತಾರೆಂತಲೂ ಸರ್ವದಾ ಅಲ್ಲಿ ನನ್ನ ಉಪಾಸನಾ ಮಾಡುತ್ತಿರುತ್ತಾರೆಂತಲೂ ಪ್ರಣವ ಪ್ರತಿಪಾದ್ಯನಾದಂಥಾ ಶ್ರೀಮತ್ ತಂದೆವರದಗೋಪಾಲವಿಠ್ಠಲನು ತನ್ನ ಬಾಹುಗಳೆತ್ತಿ ಪೇಳಿರುವುದನ್ನು ಮನಸ್ಸಿಗೆ ತರಬೇಕು.

ಪಂಚಭೇದ ಸಂಪೂರ್ಣ

## ೪೬೨

### ಶ್ರೀರಾಮ ಪಾರಿಜಾತ

### ಮಂಗಲಾಚರಣ

ಶ್ರೀ ಜಾನಕಿಯ ರಮಣ ಸಾಮ ಸನ್ನುತ ಚರಣ
ರಾಜಕುಲ ಸಂಪ್ವರಣ ರವಿಕೋಟಿ ಶತ ಕಿರಣನೇ
ರಾಜಶೇಖರ ವಿನುತ ಲಲಿತ ಪದ ಪಂಕೇಜ
ಹೇ ಜನಾರ್ದನ ಸಲಹೊ ಮಾಂ ನಿರುತದೀ ೧

ತಾಮರಸ ಸಂಭವನ ಮೊಕ್ಕಳಿಂದಲಿ ಪಡದ
ವ್ಯೋಮಗಂಗಿಯ ಜನಕ ಯೋಗಿ ಹೃದ್ವಾಸಾ
ಸ್ವಾಮಿ ನೀನೆಮಗಾದ ಕಾರಣದಿ ಕರಪುಟದಿ
ನೇಮದಲಿ ಬಿಂನ್ನೈಪೆ ನಿಗಮಗೋಚರನೆ ೨

ಕಲಿಯು ಪ್ರಾಪ್ತಿಸಲಾಗಿ ಸಜ್ಜನರ ಸಲಹುದಕ
ವಲಿದು ವೃಷಭಾಚಲದಿ ನೀ ನಿಲ್ಲುತಾ
ಸಲೆ ಅಯ್ಯ ಹೊಳೆನಿಲಯ ಜೀವರೋತ್ತುಮನೊಡಿಯ
ಚೆಲುವ ವೆಂಕಟನೆನಿಸಿ ಮೆರದೊ ಹರಿಯೇ ೩

## ೪೬೩

### ಲಕ್ಷ್ಮೀದೇವಿಯ ಸ್ತೋತ್ರ

ದೇವಿ ಮಾಲಕುಮಿ ಜನಜೀವ ನೌಪಾಯೆ
ಭಾವಜನ ಹೆತ್ತಾಯೆ ಭಕುತಜನ ಪ್ರೀಯೆ
ತೀವಿದ್ದ ಸ್ಥಿಮಿತ ಮತಿಯನು ಬಿಡಿಸಿ ನೀ ಯಂನ
ಭಾವ ಶುದ್ಧಿಯ ಗಯ್ಯೆ ಭವದುರಿತ ಹರಳೇ ೧

ವಿರಜನಾಮವ ಧರಿಸಿ ಹರಿಯ ಪುರಕೈದುವರೆ
ಮರುಕದಿಂ ಲಿಂಗಾಂಗವನು ನೀಗಿಸೀ

ಎರಡೆರಡು ಮುಕುತಿ ಯೋಗ್ಯರ ಮಾಡಿ ಸಲಹುತಿಹ
ಪರಮ ಕರುಣಾರ್ಣವಳೆ ವೆಂಕಟಾಹ್ವಯಳೆ ೨

ಜಲಪ್ರಳಯದಲಿ ಜಗನ್ನಾಥ ವೆಂಕಟಗ ವಟ
ದೆಲಿಯಾಗಿ ಶೋಭಿಸಿದೆ ವನ ಮಂದಿರೇ
ಹಲವಂಗನುಳ್ಳ ಸಿರಿ ರಮಣೆ ನಿಂನಯ ಚರಣ
ಸಲಿಲಜಂಗಳ ನುತಿಸಿ ಕೃತಿ ಪೇಳ್ವೆನೇ ೩

## ೪೬೪

### ಬ್ರಹ್ಮದೇವರ ಸ್ತೋತ್ರ

ನೀರಜಾಸನ ನಿಖಿಳ ಜಗದೇಕ ಜನಕ ನಿಜ
ಸೂರಿಜನ ಸದ್ವಿನುತ ಸತತ ಶುಭಕರದಾ
ಚಾರು ಹಂಸವನೇರಿ ಚತುರಾಸ್ಯದಿಂದೆಸೆವ
ಶಾರದಿಯ ಮುಖಕಮಲನಿಸಿ ನಗೆಯೆನೆ ೧

ಸತ್ಯಲೋಕವು ಸದನ ಸರಸದಲಿ ನಿನಗಾಗಿ
ಮತ್ತೆ ವಾಣಿಯು ನಿಂನ ಮಡದಿಯನಿಸಿಹಳೂ
ಕ್ರಿತ್ತಿವಾಸನ ಪಿತನೆ ಕ್ರಮವನರಿಯನು ನಾನೂ
ಇತ್ತು ನೀ ಸಲಹೊ ಸನ್ಮತಿಯ ಸಂಪದವಾ ೨

ರಾಜೀವ ಭುರುಜೂಗಣದೊಡಿಯ ರಮಣಿಯ್ಯ
ನೈಜನಿಗಮ ಪ್ರಮದ ಪ್ರಾಯೋಜ್ಜನೇ
ರಾಜ ರವಿಲೋಚನ ಸುತೇಜ ಪಂಚಾವಗದ
ರಾಜ ವೆಂಕಟನ ವರನಾಭಿಜನುಮಾ ೩

## ೪೬೫

### ವಾಯುದೇವರ ಸ್ತೋತ್ರ

ಶರಧಿಯನು ನೆರೆ ದಾಟಿ ಸೀತೆಗುಂಗುರವಿತ್ತು
ದುರುಳ ರಕ್ಕಸರಂನು ಧ್ವಂಸಗೈದು
ಉರಿಯಿಕ್ಕಿದೊಲದಲಿ ತ್ವರದಿ ಲಂಕೆಯ ಸುಟ್ಟು
ತಿರುಗಿ ಚೂಡಾಮಣಿಯ ತಂದಿತ್ತ ಧೀರಾ ೧

ಏಕಚಕ್ರದಿ ನಿಂದು ಆ ಶಕಟವಂನವನು
ಬಾಕುಳಕ ನಂದದಲಿ ನೀ ಭುಂಜಿಸೀ
ಲೋಕ ಕಂಟಕನಾದ ಕಾಕು ಬಕನನು ಮುರಿದು
ಭೂಕಾಂತರನು ಕಾಯ್ದಿ ಭಾಮು ಕುಲದೀಪಾ ೨

ಯತಿವರನೆ ತ್ಯತ್ವದದಿ ರತಿಗೊಳಿಸೊ ಮನ್ಮನವು
ಪ್ರತಿರಹಿತ ಕಮಲ ಗದ್ದುಗೆ ಪದಾರ್ಹಾ
ಕ್ಷಿತಿಗಧಿಕ ಪಂಚತೊರೆನಿಲಯ ವೆಂಕಟನನ್ನು
ಸತತ ಪೂಜಿಸುತಿರ್ದ ಅಪ್ರತಿಮ ಮಹಿಮಾ ೩

## ೪೬೬

### ಸರಸ್ವತೀ ಸ್ತೋತ್ರ

ಶಾರದೆಯೆ ಸಕಲ ಗುಣ ಕಾರಣಾಹ್ವಳೆ
ತೋರಿಸೌ ಕರುಣದಲಿ ಸಾರಸೋಕ್ತಿಗಳಾ
ಕಾರುಣ್ಯನಿಧಿ ಕಮಲ ಸಂಭವನ ನಿಜರಾಣಿ
ಚಾರು ವೀಣಾಪಾಣಿ ವಾಣಿ ಅಹಿವೇಣಿ ೧

ಮೂಲ ರಾಮಾಯಣದ ಸಾರವನು ನಿರ್ಣೈಸಿ
ವಾಲ್ಮೀಕ ಮುನಿಯೊರೆದ ಸಂಗತಿಯೊಳು
ಬಾಲಕಾಂಡದ ಕಥಿಯ ನಾವನಿತು ನಾಪೇಳ್ವೆ
ಆಲಿಸಲಿ ಜನರು ಹೇಳನವು ಮಾಡದಲೆ ೨

ಮೆರೆವ ಕಂನಡವೆಂಬ ವರ ವರ್ನ ಮಣಿಗಳನು
ಸರಸದಲಿ ಸರಗೊಳಿಸಿದೀ ಮಾಲೆಯಾ
ಪರಮ ಕೋವಿದರನ್ನು ಕೊರಳ ಪದಕವು ಮಾಡಿ
ಧರಿಸಿ ಮೆರೆವಂತೆ ಸನ್ಮತಿಯ ನೀ ನೀಯ್ಯಾ ೩

## ೪೬೭

### ಭಾರತೀ ಸ್ತೋತ್ರ

ಭಾರತಿಯೆ ಭಕುತಿ ಗುಣನೀಯ ಶುಭಗೇಯ
ಧೀರಗಂಭೀರ ಪವಮಾನನೊಲ್ಲಭಿಯೆ
ಮಾರಾರಿ ಸಲೆ ಮುಖ್ಯದಿಂದ ವಾಲಗಗೊಂಬ
ವಾರಿಜಾನನೆ ನಿಂನ ಪದಕೊಂದಿಪೆ ೧

ತಾರತಮ್ಯ ಜ್ಞಾನವನು ಕೊಟ್ಟು ಮಧ್ವದನ
ನೀರೇಜ ಪೀಠದಲಿ ನೀ ನಿಲ್ಲುತಾ
ಪ್ರಾರಂಭ ದಂತಿಯಲಿ ಪ್ರೇರಕಳು ನೀನಾಗಿ
ಶ್ರೀರಾಮ ಚಾರಿತ್ರವನು ಪೇಳಿಸಂಮಾ ೨

ಕಲಕೀರವಾಣಿ ಕಂನ್ಯೆದಿಲೆಯ ಸಮನೇತ್ರೆ
ಲಲಿತ ಸಚ್ಚರಿತ ಗುಣಗಣಪೂರ್ಣಳೆ
ಯಲರುಣಿಯ ತಲ್ಪ ಶ್ರೀ ಐಹೊಳೆಯ ವೆಂಕಟನ
ವಲಿಸಿದ್ದ ವಾಯುಪ್ರಿಯೆ ಬಿಡದೆಂನ ಕಾಯೆ ೩

## ೪೬೮

### ಮಹಾದೇವರ ಸ್ತೋತ್ರ

ಹರಿವೆರೆಯ ಜ್ವಾಲಾಕ್ಷ ಶರಣಜನ ನಿಜ ಪಕ್ಷ
ಸುರಗಂಗಿಧರ ಗಜಾಸುರ ಮಥನನೇ
ಪುರಹರ ಪುರಂಧರನು ಪೂಜಿತಾಂಘ್ರಿ ಸರೋಜ
ಪರಮ ಮಂಗಳ ಮೂರ್ತಿ ಪಾಲಿಪುದು ಯಂನಾ ೧

ಕಂದುಗೊರಳಿನ ಸಿವನೆ ಕರದಿ ಡವರುಗವಿಡಿದು
ಛಂದದಲಿ ಶೋಭಿಸುವ ಚಂದ್ರಶೇಖರನೆ
ನಂದಿವಾಹನ ನಾಗಕಂಕಣ ವಿಭೂಷಣನೇ
ಮಂದಮತಿಯನು ಬಿಡಿಸೊ ದಕ್ಷಮದ ವೈರಿ ೨

ಧಾರುಣಿಯೊಳೈಹೊಳಿಯ ಮಲಹರೆಯ ತೀರದಲಿ
ಸಾರವೈಭವದಿಂದ ನೀ ಮೆರೆಯುತಾ
ವಾರಿಜಾಲಯ ವೆಂಕಟನ ಸಖನಾಗಿ ಆ
ರಾಲಿಂಗನೆನಿಸಿದೆಯೋ ಶಂಭೋ ೩

## ೪೬೯

### ವಿಘ್ನೇಶ್ವರನ ಸ್ತೋತ್ರ

ಕರಿಮುಖನೆ ಕರ್ಮಸಾಕ್ಷಿರ ರಕ್ಷ ಸುಚರಿತ್ರ
ಕರಚತುಷ್ಟಯದಭಯಹಸ್ತದ ಪವಿತ್ರಾ
ದುರವಿಘ್ನ ನಿರ್ಧೂತ ನೀನಹುದೊ ತ್ರೈಜಗದಿ
ಪರಮ ಪಾವನ ಪಾರ್ವತಿಯ ನಂದನಾ ೧

ಸುಜನರೊಂದಿತನಾದ ಸರ್ಪಭೂಷಣ ದೇವ
ತೆಜಿಶಂನೊಳಿರುತಿರುವಾ ಮಂಕು ಗುಣವಾ
ಯಜಿಸುವೆ ಯಡರ್ಗೇಡಿ ನೀನೆಂದು ನಿಚ್ಚೆಯದಿ
ಭಜಕಜನ ಸಂಜೀವ ಭಕುತರನು ಕಾವಾ ೨

ಮುಕುಟ ಕುಂಡಲ ರತ್ನಹಾರಗಳು ಕೊರಳಲ್ಲಿ
ಸಕಲ ವೈಭವದಿಂದ ಸತತ ಮೆರವಾ
ಪ್ರಕಟಿತದ ಐಹೊಳಿನಿಲಯ ವೆಂಕಟನೊಲವ
ನಿಕಟದಿಂದರ್ಚಿಸುತ ಪಡದ್ಯೆ ಪ್ರಭಾವಾ ೩

## ೪೭೦

### ಗುರುಗಳ ಸ್ತೋತ್ರ

ಗುರುವರನೆ ನಿನ್ನ ಚರಣಾಂಬುಜವ ನಂಬಿದೆನೊ
ಪರಮಹಂಸೋತ್ತುಂಗ ಮಾಯ ಮದಭಂಗ
ದುರವಾದಿ ತಮಭಾನು ಸುಜ್ಞಾನ ಸುರಧೇನೂ
ನಿರುತ ಸದ್ಗುಣ ಸಾಂದ್ರ ಹೇ ರಾಘವೇಂದ್ರಾ ೧

ಅಂಧಕನ ತನುಭವರ ಕೊಂದವನ ಮತವೆಂಬ
ಸಿಂಧು ಸಚ್ಚರಶಫರನಂತೊಪ್ಪುವಾ
ಕಂದರ್ಪನನು ಗೆದ್ದ ಕಾರೊಡಲನತಿಪ್ರೇಮ
ವೃಂದಾವನಾಗಾರ ನತರ ಮಂದಾರ ೨

ತುಂಗಭದ್ರಿಯ ತೀರ ತುಲಸಿಕಂದರ ಮಾಲ
ಸಂಗೀತ ಶೃತಿ ಕಲಾವಿದ ಜನ ವಿಹಾರ
ಭಂಗಾರಮಯ ವಿಹಗವರನೇರ್ದ ಐಹೊಳಿಯ
ಇಂಗೋಲನೈಯ್ಯ ವೆಂಕಟನ ದಯಪಾತ್ರಾ ೩

## ೪೭೧

### ವಾಲ್ಮೀಕರ ಸ್ತೋತ್ರ

ಮೊದಲು ವ್ಯಾಧನ ರೂಪವನು ತಾಳಿ ಕಾಡಿನಲಿ
ವಧಿಗೆಳಸಿ ಬಲುಜೀವ ಜಂತುಗಳನೂ
ಹುದುಗಿಕೊಂಡಿರುತಿರ್ಪ ಸಮಯದಲಿ ಸುರಮುನಿಯು
ವದಗಿಬಂದುಪದೇಶವಿತ್ತ ಬಳಿಕಾ ೧

ಕ್ಷೀರ ಸಾಗರ ಶಯನನಾರೊಂದು ರೂಪಿನಲಿ
ಧಾರುಣಿಯೊಳವತರಿಸುವದೆ ಪೂರ್ವದೀ
ತೋರಿ ಶತಕೋಟಿ ಗ್ರಂಥವ ರಚಿಸಿ ರಾಜಿಸಿದ
ಧೀರ ಮುನಿಮ್ಯೊಳಿ ಪ್ರಾಚೇತ ಸಂವಂದೇ ೨

ವೇದಗರ್ಭನ ಸುತನ ಕೃಪೆಯಿಂದ ರಘುವರನ
ಮೋದಮಯವಾದ ಸತ್ಕಥೆಯ ಪೇಳಿ
ಸಾದರದಿ ಮೆಚ್ಚಿಸಿದ ಸಕಲ ಕವಿವರ ರಾಜ
ನಾದ ವಲ್ಮೀಕ ಮುನಿ ನಿನಗೊಂದಿಪೆ ३

## ೪೭೨

## ವಾಲ್ಮಿಕಿ ಅಥವಾ ವಾಲ್ಮೀಕಿ

### ಕಥಾ ಪ್ರಾರಂಭ

ವಂದು ದಿನ ವಾಲ್ಮೀಕಿ ಲವಕುಶರೊಂದನಿಯ ಗೈಯುತಲಿ ಕೇಳ್ದರೂ
ತಂದಿ ಯಾವನು ಯಮಗ ಮುಂದನ್ವಯವದೇನೆನುತಾ
ಛಂದದಲಿ ಪೇಳಿದನು ಮುನಿ ಸಾನಂದದಲಿ ಯಮಳರಿಗೆ ಸತ್ಕಥಿ
ಯಂದೆನಿಪ ಶ್ರೀರಾಮ ಚರಿತೆಯನೊಂದು ತಾಬಿಡದೆ ೧

ಮೊದಲು ಪದುಮಾಸನನ ಮನದಿಂದುಸಿದನು ತಾನವ ವಿರಿಂಚನು
ಮುದದಿ ಸೃಷ್ಟಿಯ ಮೂಲ ಕಾಲದಿ ವದಗಿ ತಾನಾಗ
ಹದನವಿದು ನೂತನ ವಿರಿಂಚಿಗೆ ಚದುರನೆನಿವ ಮರೀಚಿ ಪುಟ್ಟಿದ
ಅದರ ಸಂಗತಿವಿಡಿದು ಜನಿಸಿದನಾಗ ಕಶ್ಯಪನೂ ೨

ಆ ಮುನಿಯಗೋಸುಗದಿ ಭೂಮಿಯ ಈ
ಮಹಾವಿಸ್ವರವು ಬಲಿದುದು
ನೇಮವಿದನಾನೊರಿವೆನೈತನ್ಮುನಿಯ ಬಸುರಿನಲಿ
ತಾಮರಸ ಸಖನುದಿಸಿದನು ಬಳಿಕಾಮಹೋತ್ಪಲ ಬಾಂಧವನ್ನಿಗೆ
ಪ್ರೇಮದಲಿ ಜನಿಸಿದನು ಮನುವವರೊಳಗೆ ತಾಕುಕ್ಷಿ ३

ಇತ್ತಲಾಗಿ ವಿಕುಕ್ಷಿ ಕುಕ್ಷಿಗೆ ಮತ್ತಮಾವಿಕ್ಷಾಂಕು ಜನಿಸಿದ
ಚಿತ್ತವಿದು ಚಂಚಲಿಕೆ ಬ್ಯಾಡೆಲೆ ಮಗನೆ ಕೇಳಿದನೂ
ಸತ್ಯನೆನಿಪಿಕ್ಷ್ವಾಂಕು ಭೂಪಗ ಉತ್ತಮೋತ್ತುಮ ದಿಲೀಪ ಸೃಜಿಸಿದ
ತಥ್ಯವಿದು ದಿಲೀಪಂಗೆ ಸಂಭವಿಸಿದನು ರಘುರಾಜಾ ೪

ಆ ರಘುದ್ವಹನಿಂದ ಧೀರನಜ ಭೂಪಲನೆಂಬನು
ದಾರ ಗುಣಯುತನಾಗಿ ಮೆರದನು ಬಾಹಳ ತೇಜದಲಿ
ಧಾರುಣೇಶನೆ ನಿಜ ಮಹಿಷಿಯಲಿ ಕಾರಣಿಕ ದಶರಥನು ಜನಿಸಿದ
ಭೂರಿ ಸಂಭ್ರಮವೆಂದಸಿ ತನಯನ ಮ್ಯಾರಲಿನಕ್ಕರದೀ ೫

ಬಳಿಕವನಿಗುಪನಯನ ಮಾಡಿಸಿ ಲಲನೆ ಕೌಂಸಲೆ ಸಲೆ ಸುಮಿತ್ರಿಯು
ಚೆಲುವ ಕೈಕಿಯರೆಂಬ ಮೂವರ ಮದುವೆಯನೆ ಮಾಡಿ
ಇಳಿಯ ಪಟ್ಟವಗಟ್ಟಿ ಸಾರ್ದನು ಪಲವುಗಣ್ಣನ ಗದ್ದುಗಿಗೆ ಕೇಳ್
ವಿಲಸದಭಿನವ ಪ್ರಸರವಾಯಿತು ಕುಲಪರಂಪರಿಗೆ ೬

ಪಾಕಶಾಸನನಖಿಳ ವೈಭವ ಕಾಕುಗೈಸುವ ಸೊಬಗ ಬೀರುತ
ಜೋಕೆ ಮಿಗೆ ಸಂತೈಸಿ ಪ್ರಜಗಳ ಬಯಕೆ ಸಲಿಸುತಲೀ
ಶ್ರೀಕರದ ಸೌಖ್ಯದಲಿ ಪುಣ್ಯಶ್ಲೋಕ ಸಾಕೇತಾಖ್ಯೆಪುರದೊಳು
ಲೋಕಬಾಂಧವನನ್ವಯದಿ ದಶರಥನು ರಂಜಿಸಿದಾ ೭

## ೪೭೩

### ಸೀಸಪದ್ಯ

ಬರುವಂಥ ಜನರಿಂಗೆ ಬಂಧುರದಿ
    ಸಾಕೇತಪುರವು ಮುಂದೋರುವದು
ಪಿರಿದಾದ ಪಂಜರದ ಕೋಟಿಕೊತ್ತಲ
    ರಜಿತ ಪರಿಧಿ ಪರಿವೃತ ನೋಡೆ
ರವಿಶಸಿ ಪ್ರಭೆಯಂತೆ ಬೆರಳಂದವನು
    ಪೊಂದಿದಾಳುವೇರಿಯ ತೆನಿಯು
ಮುರಿಮುರಿದ ಹೊರಳಿಕಿಯೊಳಿದ್ದ
    ಪದುಗಡ ಚೆಲ್ವ ಮರಕತದ ಮಾಣಿಕದ
ವಜ್ರವೈಡೂರ್ಯಗಳ ಪರಿಪರಿಯ ಮುತ್ತುಗಳ
    ಗುಚ್ಚು ಗೋಪುರದಿಂದ
ಮೆರವ ಮೇಲ್ ಸೌಧಗಳು ಮುಗಿಲಟ್ಟಿ
    ಬರುವಂತೆ ಗಿರಿಶಿಖರವನು ಪೋಲ್ದು

ಮಕರತೋರಣ ಪ್ರಕರಮಯವಾಗಿ ಸತ್ತಿಗೆಯ
ನೆಳಲಿನೊಳಗೊಳಮೊಗುವ
ಪೊರಮಡುವ ಜನರೆಂತೊ ಇರುವದೀ ವಿಸ್ತರದಿ
ಇಂದ್ರವಮರಾವತಿಯು
ಸರಿಯಲ್ಲವೆನಗೆಂದು ಅಣಕವಡುತಲಿಹುದು
ಸಂಧ್ಯಾವತೀನಗರವು ೧

ಸರಸಾದ ಪಟ್ಟಣಕ ಧೊರಿಯಾಗಿ
ಮೆರುವಂಥ ತರಣಿ ಕುಲದಜಭೂಪ
ಜಾತನೆಂದೆನಿಸುವಗ ಎರಡೈದು ರಥನೆಂಬ
ನಾಮವಾದುದು ಪೇಳ್ವೆ ಚರಿಸುವದು
ರಥಸುರವ ಅನಲ ಯಮ ನೈರತಿಯ
ವರುಣ ಮಾರುತ ನರನ ವಾಹನ ನಿಶಾನ್ಯೆ ನೈ
ರುತದ ಪುಷ್ಕರವು ಪಾತಾಳವನು
ತಾಬಿಡದೆ ಭರದಿ ದಶದಿಕ್ಕಿನಲಿ ನೂಕುತಿದ್ದುದರಿಂದ
ಕರಿವರೀತನ ಜನರು ದಶರಥನು
ತಾನೆಂದು ಪರಮಕೋವಿದನಾಗಿ ಸಚಿವನು
ಸುಮಂತನಲಿ ಇರಿಸಿ ಧೊರೆ ಕಾರ್ಯವನು
ಚಿರಕಾಲವೀ ಪರಿಯು ಧರಿಯ ಪಾಲಿಸುತ್ತಿದ್ದನು ೨

ಒಂದು ದಿನ ಭೂಪನಾರೋಗಿಸಿದ ಬಳಿಕ
ಸಾನಂದದಲಿ ಕುಳ್ಳಿರ್ದು ನಯದಿ
ವಿಳ್ಯವ ಮೆಲುತ ಮಂದ ದರ್ಪಣವಿಡಿದು
ಮುಖವು ನೋಡುತ್ತಲಿರೆ ಬಂದುದೈ
ಮನದೊಳಗೆ ಪರಿಭವದ ಸೊಗಡಿಂನು
ಇಂನೆನಗೆ ಮುಪ್ಪಡರಿ ತನ್ವಯದ ಬಾಳುವಿಗೆ
ನಂದನನ ಕಾಣದಲೆ ನಾಕೆಟ್ಟೆನಯ್ಯಯ್ಯೋ
ಬೆಂದುದೆಂನೊಡಲಕಟ ಬರದನೇ ವಿಧಿ
ಇನಿತು ಛಂದಾದ ವೈಭವಕ ಚರ್ಚವಾಡುವ
ಪರಿಯು ಕುಂದು ವ್ಯಾಪಿಸಿತಲ್ಲಾ

ಕುಗ್ಗಿರಿಸಿತ್ತೈ ಕೀರ್ತಿ ಮಂದೆವಾಳಿಗನಾದಿನೆಂದು
ನಿಟ್ಟುಸರಿನಲಿ ನೊಂದು ಹಿರಿಯರಸಿಯಳೆ
ಕರದು ಭೂಪತಿಯಾಗ ಮುಂದೇನು
ಗತಿಯೆನುತ ಮಮ್ಮಲನೆ ಮರುಗುತಲಿ
ಅಂದ ಬಗೆಯನು ಪೇಳ್ವೆ ಆಲಿಪುದು ಸುಜನರಿದನೂ ೩

## ೪೭೪

ದಶರಥರಾಯನು ತಂನ ಹಿರೆ ಪಟ್ಟದರಸಿಯಾದ
ಕೌಂಸಲ್ಯಾದೇವಿಯೊಡನೆ ಚಿಂತೆ ಮಾಡಿದ ಬಗಿ

ಅರಸೀ ಕೌಂಸಲೆ ಗೂಡಾ ಆಗಾ ದಶರಥನೂ
ತರುಳಾರೆನಗಿಲ್ಲೆಂದು ಮನದೀ ಚಿಂತಿಸುತಾ
ಸರಿಬಾರಾದೆನಗಿಂನೀ ಧೊರೆತಾನಾವೆನುತಾ
ವಿರಸಾದಿ ಫಣಿಯಾ ಲೇಖನವಾ ಹಳಿವುತ್ತಾ ೧

ತೋಕಾನಿಲ್ಲದನೆಂದು ನಾಕಾದವರೆಂ ನಾ
ಜೀಕಾಗೀ ಕರೆಯಾರೋಬಾಪೂ ವಿಧಿಯೆಂದೂ
ಶೋಕಾ ವಿಂಹ್ವಲನಾಗಿ ಸಿರಕಂಠ ಬಿಗಿದೂ
ಭೂಕಾಂತಳಲೀದಾ ಕಂಬಾನೆದುಂಬಿ ೨

ವ್ಯಾಪೀಸೀ ಶ್ರುತಿ ಅರ್ಥ ಜಗದೀ ಸಾರುವದು
ನಾವೂ ತ್ರೈಲೋಕ್ಯಾಲೋಕೋ ಆಸ್ತಿಯಂದೂ
ಈ ಪರಿ ತಾಪಾದೊಳಿರುವ ಸಮಯದಲಿ
ತಾಪಾಸೋತ್ತುಮ ವಸಿಷ್ಟನಾಗಲು ಬಂದಾ ೩

ಬರಲಾ ಮುನಿವರನಾ ಪದ ಸರೋರುಹಗಳಿಗೆ
ವಿರಗೂವಾ ಮಕುಟಾದಿ ನರಪಾನೆರಗುತಲಿ
ಪರಮಾ ದಾವನನಾ ಸತ್ಕಕರಿಸಿ ಪೀಠವನೂ
ತರಿಸೀ ಸರಸದಲಿ ಕುಳ್ಳಿರಿಸೀ ಮಂನಿಸಿದಾ ೪

ತರಣೀ ತಾಪದಿ ಬೆಂದ ಯಳಬಾಳೆಯ ತೆರದಾ
ಪರಿಯಾದಾ ನೃಪನಾ ಮುಖದಿರವಾ ಕಾಣುತ್ತಾ
ಸುರ ಕಲ್ಪಾತರು ನೀನು ಸಕಲ ಸಜ್ಜನಕಾ
ಇರಲಿಂತೀ ಜಂಜ್ಯಾಡಾ ಮೊರೆಗೊಂಡಿಹದ್ಯಾಕ ೫

ಹಗೆಗಳ್ಯಾರಿಲ್ಲಾವೊ ಹರಿಬಾದಿಮಲಿವಾ
ಮಿಗೆ ಧೀರಾರನು ಕಾಣೆನೆಲೆ ಭೂಪಾ ತಿಲಕಾ
ಮೊಗದಾ ದುಗುಡವಿದೇನೂ ಮನದಾ ಯೋಚನೆಯೇನೂ
ಬಗಿಯೂ ತಿಳಿಯದು ಬ್ಯಾಗ ವಿವರೀಶನಗೆಂದೂ ೬

ಮುನಿವರಾನಾಡಿದ ನುಡಿಗೆ ಸಿರಬಾಗಿ
ಜನನಾಥಾ ಝುಕ್ಕಾನೆ ಜರಿದೂ ಮಬ್ಬಿನಲೀ
ಅನುವಾರಾದಂಜಿಕೆ ಯನಗಿಲ್ಲವಯ್ಯಾ
ಮನುಕುಲಾಂತಕನಾದೆ ಕೇಳ್ಳೆ ಮದ್ಗುರುವೇ ೭

## ೪೭೫

### ಸೀಸಪದ್ಯ

ದಿನಕರನ ವಂಶದಲಿ ಜನಿಸಿರುವ ರಾಜರೋಳ್
ಇನಿತು ಸಂತತಿ ನಡದು ಇಂದಿ
ಗೆನ್ನೋಳ್ ನಿಂದುದನು ನೋಡಿದರೆ ಮುಂದೆ
ಘನತರದ ಸಂತಾನ ಲತೆಗುಡಿಯ
ನಾನಳಿದು ಶುನಕ ಶೂಕರನಂತೆ ಜನಿಸಿದ್ದು
ಫಲವೇನು ಜಗದೊಳಗೆ ಶಿವಶಿವಾ
ಅನುನಯದ ಕಾಸಾರಕರವಿಂದವಿಲ್ಲದಲೆ
ತನುಸೊಬಗು ಜವ್ವನಿಗೆ ಇನನೊರ್ವನಿಲ್ಲದಲೆ
ಘನವಾದ ಸಂಪದಕ ಸಂತಾನವಿಲ್ಲದಲೆ
ಸನುಮತವೆ ಜನಕವನ ಬಾಳುವಿಯು ಭವದ ಸುಖಕೇ ೧

ಮಕ್ಕಳಿಲ್ಲದ ಸದನ ವಿಧವಾಂಗ ನಾವದನ
ಮಕ್ಕಳಿಲ್ಲದ ಶಿರಿಯು ವಕ್ಕಲಿಲ್ಲದ ಮನಿಯು
ಮಕ್ಕಳಿಲ್ಲದ ನಿರವು ತಳಿರಲ್ಲದಾ ಮರವು
ಮಕ್ಕಳಿಲ್ಲದ ಬಾಳು ಲೋಕದಲಿ ಬಲುಕೀಳು
ಮಕ್ಕಳಿಲ್ಲದ ಮನುಜ ಸುರಪುರದೊಳಪ್ಪೂಜ್ಯಾ
ಮಕ್ಕಳಿಲ್ಲದ ವೆಥೆಯು ಮನುಜರಿಗೆ ಬಲು ಘನವು
ಮಕ್ಕಳಿಲ್ಲದನೆಂದು ಲೆಕ್ಕಿಸರೊ ನಿರ್ಜರರೂ
ಮಕ್ಕಳಿಂದಲಿ ಗತಿಯು ಮನುಜರಿಗೆ ಇಹಪರದಿ
ಮಕ್ಕಳಂಗದ ಲೀಲೆ ಮನದಣಿಯೆ ನಾನೋಡಿ
ಅಕ್ಕರವು ಬಡಲಿಲ್ಲ ಅಯ್ಯಯ್ಯೋ ಗುರುವರನೆ
ದೀಪವಿಲ್ಲದ ವೋಲಾಯಿತೇನ್ಹೇಳ್ವನೊ ೨

ಇಂತು ಅರಸಾಡುತಿಹ ಸಂತಾಪದುಕ್ತಿಯನು
ಅಂತರಂಗದಿ ತಿಳಿದನಾಗ ಗುರು ವಶಿಷ್ಠ
ಸಂತೈಸೊ ರಾಜೇಂದ್ರ ಚಿಂತಿಮಾಡಲಿ ಬ್ಯಾಡ
ಸಂತತಿಯ ವರ್ಧನಿಗೆ ಸತ್ಯವಿದು ನಾಪೇಳ್ವೆ
ತಂತುಸಪ್ತಗಳಿಂದ ಸುತಕಾಮೇಕಧ್ವರದ
ಅಂತರಿಸದೆಸಗಿದರೆ ಸುತರಾಗುವರು ಮುಂದೆ
ಅಂತ್ಯಕಾಲದಿ ನಿನಗೆ ಅಂತಕನ ಭಯವಿಲ್ಲ ಸ್ವಂತ
ಸುಖವನು ಪಡಿವಿ ಸಂದೇಹವೇನುಂಟೊ
ಬ್ರಾಂತನಾಗಲಿ ಬ್ಯಾಡ ಭಾವಶುದ್ಧಿಯಲಿಂದ
ಮಾಡೆನುತ ಮುನಿ ಪೇಳಿ ಪೋದನಾಶ್ರಮಕಿತ್ತ
ಯಂತಿದನು ಮಾಡುವದು ಯನುತಾಗ ಮಂತ್ರಿಯನು
ಕರದು ಕೇಳಿದನಾಗ ಧರಣಿಪನು ೩

## ೪೭೬

ದಶರಥನು ತನ್ನ ಮಂತ್ರಿಯಾದ ಸುಮಂತನಂನು ಕೇಳುವ ಬಗೆ

ನೀನೆಂಬುದೆನಿದಕ ಮಂತ್ರೀ ಸುತರ
ಧ್ಯಾನ ಬಿಡದಲ್ಲೋ ಅಹೋ ರಾತ್ರೀ

ರಾಜ ಸಂಪದವು ಬೇಕಿಲ್ಲೋ ಎನಗ
ಭೋಜನವು ವಿಷವಾಗೊದಲ್ಲೊ
ಮಾಜದಲೆ ಪೇಳಿಂನು ಮತ್ತದಿಕುಪಾಯವನು
ತೇಜಗುಂದಿದೆನೊ ಇಂನಾ ಮುಂನಾ ೧

ನವಯೌವ್ವನದ ಸಿರಿಯು ಸಾಗಿ ಪೋಗಿ
ಅವನಿಯಲಿ ನಿಂದೆಗೊಳಗಾಗಿ
ನವದುದೆಂನಾಯುಷ್ಯ ನಾನಾಡಲಿಂನೆಷ್ಟೊ
ಲವಲವಿಕೆ ಬಿಡದೊ ಎನಗ ಬ್ಯಾಗ ೨

ಇಷ್ಟು ಯೋಚನೆ ಯಾಕೋ ಭೂಪಾ ನಿಂನ
ಕಷ್ಟ ಕಡಿಗಾಯಿತೊ ಕುಲದೀಪಾ
ಸೃಷ್ಟಿಕರ್ತನ ಸಭೆಯೊಳಂದು ಸನಕಾದಿಗಳು
ಕಟ್ಟು ಮಾಡಿಹರೊ ಕೇಳೊ ತಾಳೊ ೩

## ೪೭೭

ಬಿಂನೈಪೆ ಕೇಳೆಂನ ಮಾತಾ ಸಕಲವಂನು
ಬಲ್ಲಂಥ ಸಾಕೇತ ಪುರನಾಥಾ

ದಿನಪನನ್ವಯದ ರಾಜರಿಗೆ ಇದೇ
ಮಣಿಮುಖದಿ ನೆಲೆ ಅಹುದು ಕುಲಪರಂಪರೆಗೆ
ಮುನಿವಚನವೇ ಮುಖ್ಯವೆಮಗ
ಇದರೊಳನುಮಾನವ್ಯಾಕೆಂದ ಮಂತ್ರಿಭೂಪತಿಗೆ ೧

ಕ್ರತುವ ಕೈಕೊಳ್ಳುವದೆ ನ್ಯಾಯಾ
ಸತ್ಯವ್ರತರ ನುಡಿ ಪುಸಿಯಲ್ಲ ಶುಭನಹುದು ಜೀಯ್ಯಾ
ಸತತ ಮಹಿಮನೆ ವಿಬುಧ ಸ್ನೇಹ ರಾಜ
ಪ್ರತತಿಯನು ಕರಿಸುವೆವು ಕೇಳೂ ಮಹಾರಾಯಾ ೨

ಯಣಕಿಯಾವದು ಮನದಿ ಧೊರೆಯು ಧರ್ಮ
ಖಣಿಯೆಣಿಸಿ ಮೆರೆವುತಿದಿ ನಿನಗಾರು ಸರಿಯ

ಮಣಿದು ಹೇಳುವೆನು ನೀನರಿಯ ಸದಾ
ವಿನುತಿ ಪರ ಮಂದಾರನೆನಿಪ ಗುಣಮಣಿಯೆ ೩

ವನಜಸಂಭವನ ಸಭೆಯಲ್ಲೆ ಹಿಂದೆ
ಸನತಕುವರನು ಪೇಳ್ದ ನಿನ್ನುದರದಂಲ್ಲೇ
ದ್ಯುನದಿ ಜನಕನ ಸೃಜಿಸುವಿಲ್ಲೆ ಮುಂನ
ನೆನದೆಣಿಕೆ ಕೈಸೇರುವುದು ನಾನು ಬಲ್ಲೆ ೪

ವರ ವಿಭಾಂಡುಕನೆ ಸುತನಿಂದ ಮಖದ
ಪರಿವಿಡಿದು ನುಡಿಸುವದು ಕೇಳೊ ಮುದದಿಂದ
ಪರಶುರಾಮನ ಪ್ರೀತಿಯಿಂದ ಸುತರು
ದೊರಕುವರು ಸಂದೇಹ ಮಾಣೊ ಅರುವಿಂದ ೫

## ೪೭೮

ದಶರಥರಾಯನು ಪ್ರಧಾನಿಯಾದ ಸುಮಂತನೆಂಬುವಗ ವಿಭಾಂಡುಕ ಋಷಿಯ ವಿವರವಂನು ಕೇಳಿದ ಬಗೆ

ಮುನಿಯಾವನು ತಿಳಿಸೊ ಮನ್ಮನ
ಘನ ಹರುಷವ ಬಡಿಸೊ
ಅನುಪಮ ಚರಿತೆಯ ಬಲ್ಲನಾದರೆ
ಜನನ ವಾರಲಿಂದಿನಿತು ನಿ ವಿವರಿಸಿ ೦

ಇರುವನು ತಾನೆಲ್ಲೇ ತನ್ಮುನಿ
ಬರುವನೊ ಹ್ಯಾಗಿಲ್ಲೆ
ಪರಿವಾರದ ಜನಕಾರನ ಕಳುಹಲಿ
ಮರಿಯಾದಿಯು ಪೇಳೆಲೆವರ ಮಂತ್ರೀ ೧

ದಯೆಗೈಯುವದೆಂತೊ ಸದ್ಗುಣ
ಮಯ ಯಂನಲಿ ನಿಂತೂ
ನಯನುಡಿ ಬಳಿಸಲು ಸಲೆಮುದ ಪೊಣ್ಮುತಾ
ಪ್ರಿಯಕರನಾಗುವದೆನಿತೊ ತಪೋಧನ ೨

ಮಾಜ ಬ್ಯಾಡವೆನಗ ಮನಿಯಲ್ಲಿರುವದು ತಾ ನವಗ
ಭ್ರಾಜಿತ ಕಮಲನ ಭೂರಿ ಗುಣವುವೀ
ರಾಜಿಸುವದು ಯನಿತೆನಿತೊ ಸುಮಂತಾ ३

## ೪೭೯

ಪ್ರಧಾನಿಯಾದ ಸುಮಂತನು ಶೃಂಗ ಮುನಿಯ ಜನನದ ವಿವರವಂನು ಹೇಳುವ ಬಗ್ಗೆ

### ಸೀಸಪದ್ಯ

ಅರಸ ಕೇಳಾ ಮುನಿಯ ಜನನ ರಹಸ್ಯವ ಪೇಳ್ವೆ
ಸರಸಿಜೋದ್ಭವನ ಮಾನಸ ಪುತ್ರ ಕಶ್ಯಪನು
ಇರಲಿತ್ತಲಾ ಮುನಿಯ ಜಠರದಲಿ ಜನಿಸಿದನು ಪರಮ
ತೇಜೋಮಯದಿ ವರವಿಭಾಂಡುಕನವನು
ಇರುವನಾರಣ್ಯದಲಿ ಘನತಪವು ಗೈಯುತ್ತೆ ಉರುತರದ
ಯೋಗಧಾರಣನಾದ ಸಮಯದಲಿ
ಸುರರ ಯೊಳಿಯೊಳೋರ್ವಸಿಯು ತಾನೆಂಬಳತಿ ರೂಪವತಿ
ಬಂದು ಸುಳಿಯಲಾತನ ಮುಂದೆ
ತರಹರಿಸದಲೆ ಮನವು ಕರಗಿ ಜಿಗಳಿತು ವೀರ್ಯ
ಸರಸಿಯೊಳಗಾ ವಿಭಾಂಡುಕ ಮುನಿಪನಾ ೧

ಚರಿಸುತಲಿ ಬಂದಾದು ಸಮಯದಲಿ ಒಂದ್ಹರಿಣಿ
ತರಣಿ ತಾಪದಿ ಬೆಂದು ತೃಷಿಯ
ಕರಕರಿಗಾಗಿ ಪರಮ ಪಾವನನ ಇಂದ್ರಿಯವು
ಬೆರಸಿರುವ ಜಲತ್ವರದಿ ಕುಡಿದಾಕ್ಷಣವೆ
ಧರಿಸಿತ್ತೈ ಗರ್ಭವನು ಅವಧಿ ತೀರಿದ ಬಳಿಕ
ಇರಿಸಿತವನಿಗೆ ಮುಂದ ಸಿರದಲ್ಲಿ ಶೃಂಗಗಳು
ಇರಲಾಗ ಮುನಿ ಕಂಡು ವರ ಶೃಂಗಋಷಿಯಂಬ ನಾವವನು
ತಾನಿಟ್ಟು ಮರುಕದಿಂ ಸಲಹಿ ಕೊಂಡಿರುತಿರ್ದ ಬಳಿತ್ತಲೂ

ಕರುಣದಿಂತಾತನಿಗೆ ಕಂದುಗೊರಳನು ಕರದು
ವರವು ಕೊಟ್ಟಾರಂಭವಾಗಿಲ್ಲಿ ಪರಿಯಂತಾ ೨

ಆತನೆಲ್ಲಿರುವಲ್ಲಿ ಬರಡು ಹಯನಾಗುವವು
ಕೊರಡು ಚಿಗಿಯುತಲಿಹವು
ಉರುಬಂಜೆ ಗರ್ಭವನು ಧರಿಸುವಳು ಹುಸಿ
ಅಲ್ಲಾ ಬರದಲ್ಲಿ ದುರ್ಭಿಕ್ಷ
ಬರಿಯ ಮಾತೇನರಸ ಸರಸಗುಣ ಸಂಪಂನ
ಇರುವತಾ ರೋಮಾಂಘ್ರಿ
ಧರಣಿಪನ ತನುಜಾತೆ ವರಶಾಂತಿ ಪತಿಯಾಗಿ
ವಿರಚಿಸಿದೆ ನಿನಗವನ
ವಿವರವನು ರಜೇಂದ್ರ ಇಂನಾ ಮುನೀಂದ್ರನನು
ಕರಸಿಕೊಂಡಧ್ವರವು ನುಡಿಸೊ ಸಂದೇಹ ಬ್ಯಾಡನಲು ೩

## ೪೮೦

ಅರಸನಾದ ದಶರಥನು ಶೃಂಗಋಷಿಯಂನು
ಕರಿಯಲಿಕ್ಕೆ ಹೋಗುವ ಬಗೆ

ವರಮಂತ್ರೀ ನುಡಿಗೇಳಿ ಹರಿದಶ್ಯಾಕುಲ ತಿಲಕಾ
ಪರಮಾ ಋಷಿ ಶೃಂಗನಧ್ವರಕ ತಾಹುದಕ
ಗುರುವಸಿಷ್ಟನಿಗರುಹಿ ಹರುಷದಲಿ ರೋಮಾಂಘ್ರಿ
ಧರಣಿಪಾ ಗುಡುಗುರಿಯಾ ಕೊಟ್ಟೊ ಕಳುಹಿದನೂ ೧

ಸುಳಿದವಾ ರತಿ ಮುಂದ ಶುಭಲಗ್ನಾ ತಾರಿಯಲಿ
ನೆಲದಾಮರರಾ ಕಯ್ಯಾ ಹರಿಕೆಗೊಳ್ಳುತಲಿ
ಕಳಕಳದಾ ಜನರವದಾ ಬಲುವಾದಾ ಘೋಷದೊಳು
ಪೊಳಲಾ ಪೊರಗೈತಂದಾ ಸತಿಯಾರೊಡಗೂಡಿ ೨

ಮಣಮಯಾ ಮುತ್ತೂಲ್ಯಾ ವಣದಿ ಬಿಗಿದಂದಣವ
ಯಣಿಕೆ ದೊರದೇರಿದರೂ ನೃಪನಾ ರಾಣಿಯರೂ

ಕುಣಿವಾ ಕುದುರಿಗಳಾ ವಾರಣದಾ ತೋರುಗಳಾ ತಿಂ
ಥಿಣಿಯಿಂದ ತೆರಳಿದಾನಾಗಾ ಭೂಪಾಲ ೩

ಹೇಳಾಲೇನದನಂಗಾ ಧರಣೀಪಾಲನ ಸಿರಿಯಾ
ಲೀಲೆಗಿದು ನೆಲೆಯೆಂಬಾ ತೆರನಾವಾಗಿಹದೂ
ಶೈಲಾವೇ ಸುರಶೈಲ ಭೂರೂಹಂಗಳ ಜಾಲಾ
ಲಾಲೀತಾ ಸುರಕೂಜಾ ಧೇನು ಸುರಧೇನೂ ೪

ವರ ವಸಂತನ ಬೀಡೊ ಸ್ಮರನಾ ಸೌರಂಭಾವೊ
ಪರಿಮಳಿತಾ ಪವನನಾ ಆಡುಂಬೊ ಹೊಲನೊ
ಸರಿಗಾಣೆ ರೋಮಾಂಘ್ರಿ ಧರಣೀ ಭೂಪಾಲಾನಾ
ಸಿರಿ ಮೆರೆಯುದು ಶೃಂಗಾಋಷಿಯಾ ಮಹಿಮಿಯಲಿ ೫

ರಾಯ ದಶರಥನಾ ಕಟಕಾವು ಬಿಟ್ಟುದು ಬಂದು
ಲಾಯಾ ಗುಡಿಗಳು ಸಹಿತಾ ಪುರದಾ ಬಾಹ್ಯೆಯಲಿ
ಆಯೇಶ್ಯಃ ಪರಿಪೂರ್ಣ ತೇಜಾನಾಮೇಯನನಾ
ಜಾಯಾ ಪತಿಗಳನ ರಾಮನಿಗೆ ಕರದ್ವೊದೂ ೬

ಉಪಚರೀಸಿದನಾಗ ವಿಪುಲ ಸತ್ಕಾರದಲಿ
ಅಪರಾಮಿತ ರಾಜೋಪಾಚಾರ ವಿಧಿಯಿಂದ
ತಪನಾ ಕುಲಜನು ಬಂದಾ ಅಪುರೂಪೋಕ್ತಿಯ ಕೇಳಿ
ತಪೋಧನಾನಿರುವಲ್ಲಿ ನೃಪನಾ ಕಾಣಿಸಿದಾ ೭

## ೪೮೧

ದಶರಥನು ಶೃಂಗ ಋಷಿಯ ಮುಂದ ತಂನ ಅನುತಾಪವಂನು
ಹೇಳಿಕೊಂಬುವ ಬಗೆ

ಯೇನೂ ಹೇಳಲಿ ಮುನಿಯೆ ಯಂನಾ ಸಂತಾಪವನೂ
ಹೀನಾನಾದೆನೊ ಇಹದಿ ಪರಕ ದೂರಾದೆ

ರಜನೀಕುಲ ರಿಪುವಂಶಾದಜಭೂಪಾನುದರದಲಿ
ಸೃಜಿಸೀ ಬಂದುದಕೆಂನಾ ಭುಜಕೀರ್ತಿಯು ಮೆರೆಯೆ
ತ್ರಿಜಗಾದೊಳಗೆನಗಾರೂ ಸರಿ ಮಿಗಾಲಲ್ಲೆನಿಸಿ
ನಿಜವಾಗಿ ಬಾಳಿದೆನ್ನೈರುರೆ ಯನಗಾವರಿಸಿ ೧

ಧೊರೆ ತಾನಾವೆಂನಲ್ಲೀ ನೆಲೆಗೊಂಡೀಹುದರಿಂದ
ಸರಿಯಾದಾ ವೈಭವಕ ಸುತರೆನಾಗಿಲ್ಲೊ
ಅರಿಯೇನ್ನೈ ಮುಂನಾಕಾ ಶಿಸುವಾಧೆಗಳಸಿದಿನೊ
ಪರಮಾ ಪಾವನ ನಿದಕಾಪರಿ ನೀನೆ ಬಲ್ಲಿ ೨

ಜಯವೇನಿಸುವ ಪುತ್ರಾ ಸತ್ರಾವಾ ಮಾಳ್ಪುದಕ
ನಯದಲ್ಲಿ ಗುರುವಸಿಷ್ಠನು ತಾ ಬೋಧಿಸಿದಾ
ಪ್ರಿಯದೋಳಂನಲ್ಲಿಗೇ ತಾವೇ ಬಿಜಯಂಗೈದೂ
ದಯ ಮಾಡಾಬೇಕೆಂದೇ ಮನದೀ ಬಲುನೊಂದೇ ೩

## ೪೮೨

### ದ್ವಿಪದಿ

ಸಾಕೇತ ಪುರದರಸ ನೀ ಕೇಳೋ ಎನ ಮಾತ
ಸಾಕೊ ಚಿಂತಿಸಬ್ಯಾಡ ಸಾವಧಾನದಲಿರೂ
ವದಗುವೆನು ನಾನೆಂಬಾ ವಚನವನು ನೃಪಕೇಳಿ
ಮುದದಿ ಮನದಲಿ ಹಿಗ್ಗಿ ಮುನಿಯ ಪಾದಕ್ಕೆರಗಿ
ರೋಮಾಂಘ್ರಿ ಪಾದನಿಗೆ ಮಂತ್ರಿ ಮಿಕ್ಕವರಿಂಗೆ
ಪ್ರೇಮದಿಂದುಡುಗುರಿಯನಿತ್ತು ಮಂನಿಸಿ ಬಳಿಕ
ಸಕಲ ವೈಭವದಿಂದ ಸದಮಲ ತಪೋಧನನ
ಅಕಳಂಕ ಭದ್ರಗಜ ಮಸ್ತಕದಿ ಕುಳ್ಳಿರಿಸಿ
ಕಲಕೀರ ವಾಣಿಯರು ಕಲಶಗಳನೆತ್ತುತಿರೆ
ಬಲು ಮಂಗಳೋತ್ಸವದಿ ಭೋರಿಡುವ ಜೈಭೇರಿ
ಸಾರುತಿಹ ಪಾಠಕರ ಸಕಲ ಸಂದದೋಹದಲಿ

ಧಾರುಣೀಶನು ತನ್ನ ರಾಣಿಯತರನೊಡಗೂಡಿ
ಋಷಿಸಹಿತ ಬಂದಾನಾಯೋದ್ಯಾಪುರಕ ೧

## ೪೮೩

ದಶರಥರಾಯನು ಯಜ್ಞದಗೋಸ್ಕರ ಮಂದಿರ ಮುಂತಾದವು ನಿರ್ಮಿಸಿದ ಬಗೆ.

ಹಸನಾದವರಾಮ ಖಾದುಸಕಾದ ದಶರಥಾ
ರಚಿಸಿದಾ ಪರೀಪರೀಯಾ ಭವನಗಳಾ ೦

ಸರಯೂವೀನ ತೀರದಿ ಯರಡು ಯೋಜನದಲಿ
ವರ ವಿಶ್ವಾಕರ್ಮ ತಾನೂ ನಿರ್ಮಿಸಿದಾನೂ
ಪರಮ ಅಧ್ವರರಮ್ಯಾಗಾರಾದಿ ಭೂಪತಿ
ಇರಿಸಿದಾಸೂವಸ್ತುಗಳು ತರಸುತಾಗಳೂ ೧

ತೆಗಸಿದಾನಿನಕುಲಾ ಪಾರಂಪಾರಾದಿ ಬಂದಾ
ಯುಗಯುಗದಾರ್ಜಿತದಾ ನಾಣಿಯವನೂ
ಬಗಿಬಗಿಯಲಿ ಭಂಡೀಗಳನೂ ತುಂಬಿಸಿತಾಗ
ಅಗಣಿತಾಮಣೀ ರತ್ನಾವಾನೋಡಿ ಛಂದವಾ ೨

ಪರಿಪರಿಯ ಧಾನ್ಯ ಗುಡವು ಮೇಲುಸಕ್ಕರಿ
ಹರುವಾ ಮಾಡಿಸೀದಾನಾಗ ಯಂಟರಳತಿಗೆ
ಹೊರದ ಹೊಕ್ಕರಣೀಯಾ ಸಾಲಾಗಳೆರಡಕ್ಕ
ಇರಿಸಿದಾ ಘ್ರತದುಗ್ಧವಾಖ್ಯಾರೆ ಮತ್ತಾವಾ ೩

ಈರೆರಡು ಯೋಜನಾ ಭೋಜನದ ಶಾಲೆ ವಿ
ಸ್ತಾರವಾದವೂ ಬಾಣಸೀ ಭವನವಾಗಲೆ
ಮ್ಯಾರೆಗಾಣದ ಮಧೂರಸವು ಮೇಲೋಗರಾ
ಸಾರಗಳನು ಸರಸೀ ಬಿಡದೆರಚಿಸೀ ೪

ಬರಸೀದಾನುವಾಲಿಯ ಹಾರಾವರಿಗಾಗಲೆ
ಕರಸೀದಾ ಗುರುವರನಾ ವಸಿಷ್ಠನಾ
ವರರವಿಸುತ ಕಳುಹಿದನು ಪಾವುಡವಿತ್ತು
ಪರಮ ಪಾರ್ಥಿವರಾ ಪುರಕ ಬರುವುದಕೆ ೫

## ೪೮೪

ಯಜ್ಞಕ್ಕೆ ಮುನಿಗಳು ರಾಜರು ಬಂದ ಬಗೆ

ಕೇಳಿಬಂದರಖಿಳಮುನಿ ನೃಪಾಲರೊಗ್ಗಿಲಿ
ಪೇಳಲೇನೊ ಜಲದಿವುಕ್ಕಿ ಪರಿವ ತೆರದಲೀ ೧

ಜನಕನಂಗಧೀಶ ಕಾಶಿರಾಜ ಮಗಧನೂ
ಜನಪ ಕೈಕೇಯ ಮಾದ್ರೇಶನೆಂಬನೂ ೨

ವಿನುತ ಗುರ್ಜರನು ಗೌಳವಾಮರಾವರೂ
ಘನ ಸಮೂಹದೊಡನೆ ಬಂದ ರೋಮಪಾದನೂ ೩

ಲಾಳ ಜೋಳ್ವರಾಳ ಬಂಗಾಳ ಬಾಲ್ಹೀಕಾ
ಪೇಳಲೇನೊ ಭೂಟ ಪಾಂಚಾಲ ಪುಷ್ಪಕಾ ೪

ಏರಿ ಬರುವ ಪಾರಿಯಾತ್ರಕರು ಕಾಂಭೋಜ
ತೋರುತಿರ್ಪನಾಗ ಕಾಳಿಂಗ ಭೂಭುಜಾ ೫

ಕುರುನೆಪಾಳ ವಿಷಯದಾ ವಿದರ್ಭ ಧರಣಿಪಾ
ಕರದೆ ಬಂದರಾಗ ರಾಜರೆಲ್ಲ ಕೂಡುತಾ ೬

ಮೆರೆದರತ್ರಿ ಕಣ್ವ ಭರದ್ವಾಜ ಕಶ್ಯಪಾ
ಪರಮ ಕುಶಿಕ ಸುತನು ಗಾರ್ಗೇಯ ಗೌತಮಾ ೭

ಜನ್ಹುಜಬಾಲಿ ಹರಿತ ಮಾರ್ಕಂಡೆಯಾ
ಇಂನು ಮೈತ್ರಾವರುಣಿ ಮುದದಿ ದುದ್ಗಲಾ ೮

ಚವನ ದತ್ತಾತ್ರೇಯನು ಭೃಗು ಸುಗಾಲವಾ
ವಿವರಿಸುವೆನು ಅಂಗಿರಸ ಮತಂಗ ಪುಂಗವಾ ೯

ರವಿಪಿತಾ ಮಹಾಮೃಕುಂಡು ಪ್ರವರ ಶೌನಕಾ
ಸವಟ್ಟ ಜೈಮಿನಿಯು ಕಂಕನುಪಾಮನ್ಯುತಾ ೧೦

ಇನಿತು ನೆರೆದರಾಗ ಋಷಿ ಭೂಪಾಲರ್ಧರುಷದಿ
ಮನುಕುಲಾಗ್ರಣಿ ಸಾಕೇತನಗರದೀ ೧೧

## ೪೮೫

### ಯಜ್ಞಶಾಲಾ ಶ್ರಿಂಗಾರ (ಸೀಸಪದ್ಯ)

ನೆಲನ ಶೋಧಿಸಿದರ‍್ಯೆ ತೊರದಿ ಸರ್ವರುಗೂಡಿ
ವಿಲಸದೌದಿಕ ಸಾರ ಸೂತ್ರವನು ನೆರೆವಹಿಸಿ
ಲಲಿತ ಶಾಸ್ತ್ರ ವಿಚಾರಗಳನೊಂದು ತಾವು ಬಿಡದೆ
ಚೆಲುವಾಯಿತುದ್ಧರದ ಶಾಲೆ ಬಹು ರಚನೆಯಲಿ
ವಳಿಗೊಂಡು ತೋರುತಿಹ ವಜ್ರ ವೈಡೂರ್ಯಗಳ
ತೊಲೆಗಳಿಂದಲಿಗೂಡಿ ಬಲುಕನಕ ಭಿತ್ತಿಗಳು
ತೊಳಗಿ ಬೆಳಗುತಲಿಹವೊ ಇನಶಸಿಯ ಪ್ರಭೆಯಂತೆ
ಇಳಿಗೆ ಸಾರಣೆ ಆಯಿತು ಮೃಗನಾಭಿಕರ್ದಮದಿ
ವಲಿವುತಿಹ ತೋರಣದ ವರಣದ ಶ್ರಿಂಗರದಿ
ಒಪ್ಪಿತಾ ಸುರನದಿಯ ತೀರದಲ್ಲೀ ೧

ನೆರೆದ ನೃಪವರ್ಗವನು ನ್ಯಾವರಿಸಿ ಕರಿಕರಿದು
ಪರಿಪರಿಯೊಳಾದರಿಸುವುದು ಜಾಬಾಲಿ ಮುನಿಗಾಯಿತು
ಧರಣಿಸಂರುಪಚಾರ ಮಂತ್ರಿಯು ಸುಮಂತನಿಗೆ
ಹಿಂದಾಗಿ ಸರ್ವರಸು ಭೋಜನದಿ ವಣಿಸುವದು
ಶೇರಿತು ಜೈಯಂತನಿಗೆ ಪರಿಮಳ ಸುಗಂಧವನು
ನಿಖಿಳರಿಗೆ ನೀಡುವದು
ಗುರು ವಸಿಷ್ಠನಿಗಾಗಿ ವುಳದ ಸಚಿವರಿಗೆಲ್ಲ

ವರಯಜ್ಞ ಶಾಲೆಯಲಿ ತರತಮದೊಳೊಂದೊಂದು
ಕಾರ್ಯಗಳು ನೇಮಿಸಿರೆ
ಧರಣೀಶ ಬಳಿಕಿತ್ತ ಮಜ್ಜನವಗೈಯ್ಯುತಲಿ
ಪರಮ ಪುರುಷೋತ್ತಮನ ತಂನರ ಮುನಿಯೊಳಂದು ಪೂಜಿಸಿದಾ ೨

ಮರಿದಿವಸವಾಗಲಂಮೃತೋತ್ಕರದಿ ವಿಸ್ತರಿಸಿ
ವರಶಭಾಂಕಿತ ಲಗ್ನದೋಳ್ ಬಳಸಿಧರಣೀಶ
ಪರಮಹಾ ಮಂತ್ರಾದಿ ಮೋರಿತ ಧ್ವನಿಯಿಂದ
ಸರಸಿಜಾಕ್ಷಿಯರು ಬಲ ಸಂದಟಿಸಿ ಸಾಲಾಗಿ
ವರಕಲಸ ಕಂನಡಿಗಳಿಂದ ಪಾಡುತಲಿರಲು
ಸರಸವೈಭವದಿಂದ ಸಾರುವರ ಘಡಣದೊಳ್
ಅರಸಿಯರ ಕೈಪಿಡಿದು ಅಜರಾಜನಂದನನು
ಮೆರೆವುತ್ತಲಿಷ್ಟಾರ್ಥ ಕರವುತ್ತ ತಾನಾಗ
ಬಂದು ಹೊಕ್ಕನು ಬ್ಯಾಗ ಯಾಗ ಮಂಟಪವಾ ೩

ಒಂದು ಗೂಡಿದ ಸಕಲ ಮುನಿಜನ ಸ್ತೋಮದಲಿ
ಛಂದ ಸಾಮಗ ಶಾಸ್ತ್ರ ಪರಿಣತರು ಬಂದಾಗ
ಹೊಂದು ಹೊಂವಳಿಯಿಂದ ಸಕಲ ಸಾಧನದೊಡನೆ
ಸಂನದ್ಧರಾಗುತಿರೆ ಛಂದಾಮದದ್ವರವು ತೊಡವುಗಳ ಮೈಗಿಟ್ಟು
ಸುಂದರಾಗಿಯರು ಸುವರ್ಣಮಯ ಪಾತ್ರಿಗಳ
ಲಿಂಗದಗ್ರೋದಕವು ಸಂಗೀತಕೃತಿಯಿಂದ ಸಕಲಗುಣ
ಸಂಪಂನರಾದ ಇಭಗಮನಿಯರು ಪರಮ ವೈಯ್ಯಾರದಲಿ
ತಂದಿಟ್ಟರೊಲವಿನಲಿ ಯಜ್ಞೋಪಕಂಠದಲ್ಲೀ ೪

ವರಕುಶಸ್ತಂಡುಲವು ದರ್ಭಾಂಕುರವು ಸ್ವರ್ಣ
ಚರುಪುರೋಡಾಶ್ಯಾಜ್ಯಾ ದ್ರೋಣ ಶ್ರುಕುತಿಲ ಸಹಿತ
ಬರುಹಿ ಯುಗ್ಮ ಸಮಿಧಾ ಪ್ರಣಿತಾ ವರಣ ಹುತವು
ಸರಸ ಪಾತ್ರಿಗಳಲ್ಲಿ ಪರಮಾಂನ ಪೂತಹುತ
ಪ್ರಾಪ್ಯಸ್ಥಿತವೆನಿಸಿರುವ ಪ್ರಕ್ಷುದಾಜ್ಯ ಚೋಪಮಿತ
ವೆನಿಪವು ಸಚರ್ಯಾಗ್ನಿ ಪ್ರಾಗ್ವಂಶಜಾದ್ವರಕ

ಮ್ಯಾಳೈಸಿ ಮುನಿನಿಕರವಿರಲಿತ್ತ ದಶರಥನು
ಧರಣಿಪಾಲಕರಂನು ಗುರು ವಸಿಷ್ಠನು ೫

ಶೃಂಗ ಋಷಿಗಳೆಲ್ಲರ ಕರಿಸಿ ದೀಕ್ಷೆಗೆಳಲನುವಾದನೂ
ಸುಳಿದು ಬಂದುದು ವಾಜಿ ಭೂಮಂಡಲವನಾ
ಲಲನೆ ಕೌಂಸಲೆ ದೇವಿ ನಿರ್ಮಳಾತ್ಮಕಳೆನಿಸಿ
ಬಳಿಯಲಿದ್ದಳು ಬಿಡದೆ ಹಯದೆಡಿಯ ಶ್ರೀಹರಿಯ
ಸಂಸ್ತುತಿಯ ಮಾಡುತಲಿ ಜಾಗರದೊಳಿರುತಿರಲು
ಬಳಿಕ ಮಾರ್ಕಂಡೇಯ ಕಶ್ಯಪನು ಅಂಗಿರಸ
ಕಳಸಭವಚವನಾದಿ ಮುನಿಯಾದ ಕೌಂಸಿಕನ
ಸಲೆಯಾಗ್ನೆ ವಲ್ಕಿಯರು ಪ್ರಮುಖರೆಲ್ಲನಾಗ
ನಿಲಿಸಿದನು ಋತ್ವಿಕ್ಕೆ ಚಲುವ ಶ್ರೀಂಗಾಹ್ವಯನ
ಪುತ್ರಕಾಂಮ್ಯಧ್ವರದಿ ನೆಲೆಗೊಳಿಸಿ ತಾನಾಗ
ತುರಗಮೇಧದಿ ನಿಂಧನೂ ೬

ರಾಜಋಷಿ ಜನಕಂನ ಯಾಜಮಾನ್ಯದಿ ಮೆರುವಾ ಅಗ್ರ
ಪೂಜೆಯೊಳಿರಿಸಿ ಆ ಜನೇಶ್ವರನಾಗ ನಿಂದು ಮಖ ಶಾಲಿಯಲಿ
ಪೂಜಿಸಿದನವರುಗಳ ಪೂರ್ವಪದ್ಧತಿಯಂತೆ
ರಾಜೀವಭವಭವಕ ರಮಣೀಯ್ಯ ಪದಗಳಿಗೆ
ರಾಜಿಸುವ ಮಣಿವಯದ ಮಸ್ತಕವ ಚಾಚುತಿರೆ
ರಾಜಕುಲತಂಸಂನ ಮಣಿದೆತ್ತಿ ಹರಸಿದರು
ಸೋಜಿಗವಲಾಜಗದಿ ಚೈತ್ರ ಶುಕ್ಲ ಪಂಚಮಿಯ ದಿನದೊಳಾಗಂದು
ನೈಜವುತ್ತರ ಪೂರ್ವ ಬೀದಿಯನು ವಿಸ್ತರಿಸುತಾ ೭

ವಿಮಲ ಹರಿಣಾಂಜನದಿ ನವನೀತ ಲೇಪನದಿ
ಕ್ರಮದಿ ಋಷಿ ಶೃಂಗನನ ಸೂಕ್ತದ ವಿಧಾನದಲಿ
ತಮ ಕುಲಾರಿಯ ವಂಶದರಸಾಗ ಮಂಟಪದಿ
ಅಮಲ ಮಖ ಪುರುಷನ ಪ್ರತಿಷ್ಠಿತವ ಮಾಡಿದನು
ಸುಮನ ಗಂಧಾಕ್ಷಿತಿಯು ಶುಚಿತಾಗಮೋಕ್ತದಲಿ
ಕ್ರಮವು ಬಡದರ್ಚಿಸಿದರಾಗ ವೈಶ್ವಾನರನ

ಅಮಿತ ಮಂತ್ರಾವಳಿಯ ಬಂಧುರದೊಳಿಂಧನದಿ
ಯಮಿಕುಲೋತ್ತಮರಾಗ ಪುಟಗೊಳಿಸಿ ಹುತವಹನ
ಕ್ರತು ಮುಖ ಸ್ವಾಹಾಯನಲು ಸುಮನಸರು ತ್ರಪ್ತಿಯಲಿ
ತೇಗಿದರದೇನೆಂಬೆ ದಶರಥನ ಸುಕೃತವೆಂತೋ ೮

ಬೀಳುವಾಹುತಿಗಳನು ಪಾವಕನು ಸವಿಸವಿದು
ನಾಲಗೆಯ ಕೊಬ್ಬೇರಿ ನಟನೆ ಮಾಡುತಲಿರಲು
ಮೇಲುಹನಗವ್ವಳಿಸದುದದಿ ಕ್ರಶಾನುವಿನ
ಸೋಲಿಸಿದ ತಾನಾಗ ಸಕಲ ವಿಷಯಯಂಗಳಲಿ
ಕಾಲಪಿತನನ್ವಯದ ನೃಪನ ಪುಣ್ಯವದೆಂತೊ
ಕೇಳಿಸಿದವ್ಯೆಜನಕ ಛಟಛಟಿಸಿ ಶಬ್ದಗಳು
ಧಾಳಾಧಳಿಸುತಿದ್ದ ಮುಖದಕೋಳಾಹಳದಿ
ಬೀಳುವಿಯ ಸಂಭ್ರಮವು ಬಿತ್ತರಿಸಲಳವಲ್ಲ
ಬಹುಪರಿಯ ಕ್ರತುವಪ್ಪಲೂ ೯

ಅಸಮ ಪೂರ್ಣಹುತಿಯ ನಂತರದಿ ಕುಂಡದಲಿ
ಬಿಸಿಜಾಲಯ ಕಳತ್ರಬೇಕೆಂದು ತಾನೀಗ
ಬಿಸಿಗದಿರನನ್ವಯದಿ ಬರುವ ನೇಮದ ಪರಿಯ
ತೋರಿಸುತನೆಂಬಂತೆ ಹಸನಾದ ಪರಬೊಂಮ
ರಸದ ಪರಿಪೂರ್ಣವನು ಯಶವ ತೇಜೋಮೂರ್ತಿ
ಯಜ್ಞಪುರುಷನು ಬ್ಯಾಗ ಮಿಸುವ ಕಾಂಚನ ಪಾತ್ರಿ
ಯಲ್ಲಿ ಪರಮಾಂನವನು ದಶರಥನ ಕರಕಮಲ
ಯುಗ್ಮದಲಿ ತಂದಿಟ್ಟು ಅಡಗಿತ್ಯೆ ತತ್ಕುಂಡ
ವಳಯದಲಿ ಸುರನಿಕರ ಕಂಡಿದಕ ಬೆರಗಾದರೂ ೧೦

## ೪೮೬

ಯಜ್ಞಮುಖದಿಂದ ಬಂದ ಪರಮಾಂನವಂನು ಗುರುಗಳಾದ ವಸಿಷ್ಠರು ಅರಸಿನ ಹೆಂಡರಿಗೆ ವಿಭಾಗ ಮಾಡಿ ಕೊಟ್ಟ ಬಗೆ.

ಹರುಷಾದಿಂದ ದಶರಥಗ ಸರ್ವ್ವೆವಾಹನನು ಕೊಟ್ಟಾ
ಪರಮಾ ಪಾವಂನಾಗಿಹ ವರಮೋದನವಾ
ಗುರು ವಶಿಷ್ಠಾರನು ಕರದು ಅರಸಿಯರಾದಾ ಮೂವರಾ
ಕರದೀ ನೀಡೂವೇನೆಂದಾಗ ಅರಸೂ ಪೇಳಿದಾ ೧

ಹಿರಿಯಾರಾಸಿ ಕೌಸಲ್ಯಾಗ ಇರಿಸೀದಾನ್ಯೆ ಅರ್ಧಂಶಾವೂ
ಕಿರಿಯಾಳಾದಾ ಕೈಕೆಯಿಗೆ ಉಳಿದರ್ಧಾವಿಡಲೂ
ಇರಲಿತ್ತಾ ಸೂಮಿತ್ರಿಯಳಿಗೆ ಈರ್ವರೂ ತಂಮಂಶವಿತ್ತು
ಪರಿಗತಿಸಿಕೊಂಡಾರೀಪರಿಯಲ್ಲಿ ಬ್ಯಾಗ ೨

ಅನುಪಮಧ್ಯಾರಾದಾ ಕಡಿಯೊಳವಭ್ರತ ಸ್ನಾನಾವು ಮಾಡಿ
ಮುನಿ ಮುಖ್ಯೆ ಯಾಚಕ ವಿಪ್ರರಂನು ಕರಸೂತಾ
ಧನಮಣೀ ಭೂಷಣಧೇನೂ ವಸನ ವಾಹನವಾನಿತ್ತು
ಮನುಕುಲಾಗ್ರಣಿಯು ಮಂನಣೀಯೋಳ್ ದಣಸೀದಾ ೩

ದಿಕ್ಕುದಿಕ್ಕಿಲಿಂದ ಬಂದಾ ಧೀರಾರಾದವನೀಶರೀಗೆ
ತಕ್ಕಾತಕ್ಕಾ ಉಡುಗುರೀಗಳಂನು ಸಲ್ಲಿಸೀ
ಉಕ್ಕಿ ಸೂಸುವಾನಂದಾದಿ ಉಂಳೀಕಿಯಂನು ಕಳದು
ಅಕ್ಕದಾದಿಂದವರಾ ತಂಮ ಪುರಕಳಿಸಿದಾ ೪

ಇನಕುಲ ಸಾರ್ವಭೌಮಾನು ಇತ್ತ ಪೋಕುಳೀಯಾನಾಡಿ
ವನರೂಹಾಲೋಚನಿಯಾರಾಗ ಕಳಸವನೆತ್ತಿ
ಘನಘೋಷಾದಿ ಪಾಡುತಾಲಿ ಜನದಾ ಜಂಗುಳಿಯೊಳಗೆ
ಅನುನಯ ರಾಜಾ ಮಂದಿರ ರಾಜಾ ಪೊಕ್ಕಾನೂ ೫

## ೪೮೭

### ಸೀಸಪದ್ಯ

ಮಂಡಲೇಶ್ವರನಾಗಮರಗೂಳನಲಿ ಬಂದ
ಪಿಂಡವನು ಪ್ರಥಗ್ಯೆಸಿ ಪರಮ ಹರುಷದಿ ತಂನ

ಹೆಂಡರಿಗೆ ಕೊಡಲಾಗ ಹೆಕ್ಕಳಿಸಿ ಬಹುಧನವ
ಕಂಡು ಕಡು ದಾರಿದ್ರ್ಯ ಮನದಿ ಹಿಗ್ಗುವ ಪರಿಯು
ತಂಡ ತಂಡದಿ ತಂನ ಸತಿಯರಿಗೆ ತೋರುತಿಹ
ಛಂದಾದ ಬಯಕಿಯೊಳಗೊಂದೊಂದು ಬಯಸುವಾ
ನಂದದೊಳಗಿರೆ ಕಂಡು ಅರಸಿರಲೂ ಕೇಳಿತ್ತಲೂ ೧

ಕಾಣಿಸಿದವೈಗರ್ಭ ಕೂಡ್ಮಲದಿ ಪರಿಮಳವು
ಮಾಣದಲೆ ಸಿಲೆಗೊಂಡು ಮಾಜದಡಗಿರುವಂತೆ
ರಾಣಿಯರು ಮೂವ್ವರಿಗೆ ರಾಜಿಸಿದವೈ ಚಿನ್ಹೆ
ಪ್ರಾಣನಾಯಕ ಪ್ರಗಲ್ಭಿಯರ ಪರಿಚರಿಯಕಿಡೆ
ಯೇಣಾಂಕ ಲೋಚನದ ಇಭಗಮನಿಯರಿಗಾಗ
ಪಾಣಿಪಲ್ಲವದಿ ಸೈರೇಂಧ್ರಿಯರು ಬಾದುಸ
ತ್ರಾಣಿಯರನೋಲೈಸುತಿರುತಿದ್ದರೇನ್ಹೇಳ್ವನೂ ೨

ತನುಜರೆಮಗಿಲ್ಲೆಂಬ ಕುಂದು ಇವರೆದಿಯೊಳಗ
ಅನುವರ್ತಿಸಿರುವದೀ ಸಮಯದಲಿ ಸೈಗೆಟ್ಟು
ಸ್ತನಮುಖದಿ ಪೊರಮಟ್ಟು ಪೋಗುವದು ತೋರ್ಪಂತೆ
ಘನಪಯೋಧರದ್ವಯದ ಮುಂದೊನೆಯು ಕಪ್ಪಾಗಿ
ತನುಸೊಬಗು ಜಡಪಿಡಿದು ತನಿಗಂಪಿನಂಗನಿಯ
ರೆಡೆಯಾಟಕಳವಡದೆ ಮುಡಿಮುರಿದು ನಿಡಿಗಾಗಿ
ವನುತಿಯರೊಳೊತ್ತರಿಸಿ ವದಗಿ ತೋರಿದವು ಮುಂದ ೩

ಮಿಸುಪ ತೊಡೆವುಗಳು ಮದಗಜಗಮನಿಯರ ಮೈಗೆ
ಕುಸುಮ ಗಂಧಿನಿಯರು ತಂದಿಡಲು ನಿಬ್ಬರವಾಗಿ
ಹಸನಾದ ತೆಳ್ವಸರು ಜಘನಗಳು ವೈಸರಿಸಿ
ಅಸಿತ ಕೊಂಕುಳವಾಗಿ ಅಡಗಿದವು ತ್ರಿವಳಿಗಳು
ಬಿಸಜಾಕ್ಷಿಯರು ಬಿಡದೆ ಧಡಧಡನೆ ನಡೆದು ಬಾಹೆ
ನಡೆಮಂದವಾಗುತಿರೆ ಬಡನಡುವು ಬಳುಕುತ್ತ
ಬಿರಿಮುಗುಳು ಕಬರಿಯರ ನಸುನಗಿಯೊಳೊಂದಿರುವ
ನುಡಿಯು ಬಲು ಸಂಣಾಗಿ ಶಶಿಮೊಗವು ಬಿಳ್ಪೇರಿ
ಸೀಮಂತ ಮಣಿಯರಿಗೆ ನಿಟ್ಟುಸುರು ಭಾರೈಸಲೂ ೪

ಅಂಬುಜಾಕ್ಷಿಯರಿಂಗೆ ಆಗುತ್ತಲೀಪರಿಯು
ತುಂಬಿದವು ನವಮಾಸ ತೋರಿಕೆಯ ಪರಿಜನಕ
ಕಂಬು ಚಕ್ರಾಂಕಿತನು ಕೋಟಿ ರವಿ ತೇಜದಲಿ
ಇಂಬಾಗಿ ಕೌಸಲೆಯಗರ್ಭದೊಳ್ ತಾ ಮೊಳಿಯ
ಸಂಭ್ರಮದೊಳರಸಿಂಗೆ ಆದುದ್ಯೆ ಸೀಮಂತ
ಶಂಬರಾರಿಯು ತಾತ ಕಂಬರನ ಗೆಲದಿರುವ
ಶತಪತ್ರಸಖಿಕುಲದ ರಾಜಗೊಲದಿರವದನು
ವಿಧಿ ಕಂಡು ಬೆರಗಾದನೂ ೫

ಗುರು ನಿರೀಕ್ಷಿಯಲಿಂದ ಶಶಿಯ ಶುಭ ದೃಷ್ಟಿಯಲಿ
ಪರಮಾಂಗಿರಸನೆಂಬ ಸೌಮ್ಯೆರ ಸುಕೇಂದ್ರದಲಿ
ವರಚೈತ್ರಸಿತಪಕ್ಷ ನೌಮಿಯೆಂದೆನಿಪ ತಿಥಿ
ಸರಸದಿ ಪುನರ್ವಸುವ ನಕ್ಷತ್ರವಿರುತಿರಲು
ಹಿರಿಯರಸಿ ಕೌಂಸಲೆಯು ಹೆತ್ತಳ್ಳೆ ತಾನಾಗ
ಶರಣಜನ ವತ್ಸಲನ ಶತಪತ್ರನಾಭನನ
ವಿಶ್ವಮಯ ವ್ಯಾಪಕನ ಜನನ ಸ್ಥಿತಿ ಲಯ ರಹಿತನಾ ೬

ಮರುದಿವಸ ಪುಷ್ಯದಲಿ ವಿಮಲ ವಿಶ್ವಂಭರನ
ಪರಮ ಶಕ್ತಿತ್ರಯಳೊಬ್ಬನನು ಪಡೆದಳಾ
ಕಿರಿ ಅರಸಿ ಕೈಕಿಯಳು ಉಳಿದೆರಡು ಅಂಶಗಳು
ಇರಲಾ ಸುಮಿತ್ರಿಯಳು ಮೆರವ ಮಹಾಮಹಿಮ
ರೆಂಬವರೀರ್ವರನು ಬ್ಯಾಗ ಪಡೆದಳ್ಳೆ ತಾಮಘಾ
ನಕ್ಷತ್ರದುದಯದಲಿ ಪರಮ ಸಂತೋಷದಿಂದಾ ೭

## ೪೮೮

ಮಕ್ಕಳಾದಾರೆಂನಾಗೆಂಬೊ ವಾರ್ತಿ ಕೇಳಿ ದಶರಥಾನೂ
ಉಕ್ಕಿ ಸೂಸುವಾನಂದಾಬ್ಧಿಯಲ್ಲಿ ಮುಣಗೀದಾ
ಹೆಕ್ಕಳೀಸಿತಿನಕುಲದಾ ಹೆಚ್ಚಿನೇಳಿಗಿ ಯಂನುತ್ತಾ
ಲಕ್ಕುಮಿ ನಲ್ಲಾನ ಲೀಲೆ ನೋಡಿ ಹಿಗ್ಗುತಾ ೧

ಹತ್ತ್ಯಾರಾಡೂ ದಿವಸಾ ವಾಗಾಲಿತ್ತ ನಾಮಕರಣಾಪ್ರವರ
ಅತ್ಯುತ್ಸವಾದಿಂದ ನಾಲ್ವರಿಗೆ ಮಾಡಿದಾ
ತೆತ್ತೀಸೀದಾ ರತ್ನಾಮಯ ತೊಟ್ಟೀಲೊಳಿಟ್ಟುಚ್ಯೂತಾಗ
ಸತ್ಯಾದಿ ಶ್ರೀರಾಮನೆಂದೂ ಸಖಿಯಾರೆಲ್ಲಾರೂ ೨

ಸರಸಾದಿಂದ ಭರತ ಲಕ್ಷಣ ಶತೃಹನನೆಂದು
ಕರಿದರಾಗ ಬಾಗಿ ತೂಗಿ ಜೋ ಜೋ ಎಂನುತಾ
ಧರಣೀಯಾ ಭಾರಾವಾನಿಳುಹಿ ದುಷ್ಟರ ಸಂಹ್ವರಿಸೆಂದು
ಹರಸಿದಾರೂ ಗುರವಸಿಷ್ಠಮುನಿ ಮ್ಯೊಳಿಗಳೂ ೩

## ೪೮೯

### ದ್ವಿಪದಿ

ಬೆಳಗುತಿಹ ಕಂಗಳಿನ ಭಿದುರಾಭ ದಶನಾಳಿ
ಬಣ್ದಟಿಯ ಬಾಯಿದೆರೆಯ ಯಳನಗಿಯ ಜೊಲ್ಲು ಜೊಂ
ನೊಡಲಮುಖ ಕಂಠದಲಿ ಜೋಲ್ದೊಲಿವ ಹಾರಗಳು
ಝಳಪ ರತ್ನದ ಕಾಂತಿ ಸಾಲ್ದಳದು ಮಧ್ಯದಲಿ
ಶೋಭಿಸುವ ಕಿರಿಗೆಜ್ಜಿ ಆರಡಿಯ ಸವಗುರಳಿ
ನಂಗವಟ್ಟದಿ ಚೆಲುವ ನೀರಜಾಂಬಕ ನಿಖಿಳ
ಜನಮನವ ಮೋಹಿಸುತ ಬಾಲ ಶಶಿ ಅಂದದಲಿ
ಶ್ರೀಲೋಲ ಬೆಳವುತಿರೆ ಕೇಳು ಮಹಾದುತ್ಸವದಿ
ಉಪನಯನ ಕ್ರಮವಾಯಿತೂ ೧

ಯೇನೊ ಈತನ ಮಾಯಕೆಣೆಗಾಣೆನಾನಿಂನೂ
ನ್ಯೂನವಿಲ್ಲದೆ ಕೋಟೆ ಬ್ರಹ್ಮಾಂಡಗಳನಂತ
ತಂನ ಒಡಲೊಳಗಿರಿಸಿ ಯೋಗನಿದ್ರಿಯು ಮಾಳ್ಪ
ಘಂನಮಹಾ ಮಹಿಮನೀ ಸಂಣದೊಟ್ಟಿಲೊಳೆಂತೊ,
ಮಲಗಿದನೂ ಸೋಜಿಗವೋ ನಿಗಮಾಳಿಗಳ ನುತಿಗೆ
ನಿಲುಕನಿವನೆಂದೆಂದೂ ಮೃಗಲೋಚನಿಯರೊಲಿದೂ
ಜೋಗುಳವ ಪಾಡಿದರ ಶೃತಿಗೊಟ್ಟು ಕೇಳಿದನು

ಯೋಗಿಜನರಿವನ ಕಾಣುವ ಕಾರ್ಯಗೋಸುಗದಿ
ರಾಗದಿಂದೊದರಿದರೆ ಕೇಳನಿವನೆಂದೆಂದು
ರಾಜೀವನೇತ್ರಿಯರು ಕೈಸೊಂನೆಗಳನೋಡಿ
ಯೇಳುವನು ಕುಳ್ಳಿರುವನೊ ೨

ನಿತ್ಯ ತೃಪ್ತನಿರುತ ಹಸಿವಿ ತ್ರಿಷಿವಿಗಳಿಲ್ಲಾ
ದುತ್ತುಮೋತ್ತುಮ ತಾನು ಹಸಿದನೆಂಬುವ ಪರಿಯು
ಅಳುತ ಮೊಲೆಹಾಲಿಂಗೆ ಬಾಯಿದೆರವನೇನೆಂಬೆ
ಇಳಿವ ಭಾರವ ಪೊತ್ತು ಫಣಿರಾಜ ವಿಹಗೇಂದ್ರ
ಅಳವಳಿಸರ್‍ಯೆ ಇವನ ಹೊತ್ತು ತಿರುಗುವುದಕ್ಕೆ
ನೀಲಾಳಕಿಯರಿಂನು ನಿರುತ ಕೊಂಕುಳಲಿಟ್ಟು
ಬಾಲನಿವನೆಂದರಿದು ಯತ್ತಿತಿರುಗಿದರೆಂತೊ
ತೊದಲು ನುಡಿಗಳ ನುಡಿಸಿ ದಟ್ಟಡಿಯನಿಡಸುತಿಹರೂ ೩

ಯಂತ್ರಮಯ ಜಾಲವನು ಯಲ್ಲ ವಿಶ್ವದೊಳೊಡ್ಡಿ
ತಂತ್ರದಲಿ ತಳಕಿಕ್ಕಿ ನಟಿಸುವ ಸುನಾಟಕನು
ಕೂಸಾಗಿ ಕುಡುವಿಲ್ಲನಯ್ಯ ಬಹು ಪರಿಯಿಂದ
ಭೇಷಜವು ಮಾಳ್ಪುದಕ ಶೃತಿತಲೆಯ ಕಂಡುಬಲು
ನಗುವುದಕ ಸಂದೇಹವೇನುಂಟು ಕೇಳಿರ್‍ಯೆ
ಹುಸಿಯ ಪರಿಹಾಸವಿದು ಜ್ಞಾನಿಗಳಿಗೀಮಾತು
ಮೆಚ್ಚಾಗದೆಂದೆಂದು ಮಾಯಾ ಪ್ರಪಂಚರಿಗೆ
ನಿಶ್ಚೈಸಿ ತೋರುವದು ಯನುತ ಮುನಿಪೇಳುತಿರೆ
ಕುಶಲವನು ಕೇಳ್ದರಾಗ ೪

## ೪೯೦

ಮುನಿವರಾನಿಂನ ಮುಖಾಂಬುಜಾದಿಂದೆನ
ಇನಿತಿ ಪೇಳಿದಿ ಬಲು ಹರುಷವಾಗಿ
ತನುವಿಲಿ ಪುಳಕಾದಿ ಗುಡಿಗಟ್ಟಿದವು ಮುಂನ
ಘನಘನವಯ್ಯಾ ನಿಂನಂಘ್ರಿಗೆ ಬಾಗುವೇ ೧

ಆದಿಪುರುಷನು ತನದ್ವರ ಕ್ರಮದಿಂದ
ಮೇದಿನಿ ಗಂಣಾನಾ ವಂಶದಲಿ
ಸಾದರದಲಿ ಜನಿಸಿನೆಂಬುದು ಬಲು
ಚೋದ್ಯವಾಗಿದೊ ಮನ್ಮನಕ ವಾಲ್ಮೀಕಿಯು ೨

ಕರವ ಮುಗಿದು ನಿಂನನು ಬೇಡಿಕೊಂಬುವೆ
ಅರುಹುವದೈಯ ಯನಗಿದರೊಳೊಂದೂ
ವರಿಯಲಿಲ್ಲೆನಗೆಂಬುವದಕಾಗಿ ಪುನರಪಿ
ಬೆರಗಿಲಿ ಕೇಳೀದೆ ಪರಮ ಪಾವನನೇ ೩

## ೪೯೧

### ದ್ವಿಪದಿ

ಐಸ್ಯೆತಮೋಧನನೆ ಅನುಮಾನವಂದಿಹದು
ಶ್ರೀಶ ಸರ್ವೇಶ ಶ್ರೀರಾಮನೆಂಬುದ ಪೇಳ್ದಿ
ಕ್ಲೇಶಮಯವಾಗಿರುವ ಗರ್ಭವಾಸದೊಳಿದ್ದು
ವಾಸರಂಗಳ ಕಳೆದು ಬ್ಯಾಸರದ ಭವಕ್ಯಾಕೊ
ಭಕುತ ವತ್ಸಲ ಬಂದ ಆಶೆ ಯಾತರೊಳುಂಟು
ಹೇಳೆಂದು ಕೇಳುತಿರೆ ವಾಸೂಕೀ ಶಯನವಿ
ಷ್ಟಂಭಕನು ಈ ಧಾತ್ರಿ ಭಾರವಿಳಸುವುದಕ್ಕೆ
ಬಂದ ಕಾರಣವೆಲ್ಲಾ ಮುನಿವರನು ವಿಸ್ತರಿಸಿದಾ ೧

ಜಗದುದರ ತಾನೆನಿಸಿ ಜಡಜೀವರೊಳು ನಿಂದು
ಬಗಿಬಗಿಯ ನಾಮದಲಿ ಕರಸಿಕೊಳ್ಳುವನಾಗಿ
ಭರತಕುಲ ಸಂಪಂನ ಮಗವು ತಾನೆನಿಶಿವರ
ಮಮತಿಗೀಡಾಗುವನು ಪೊಗಳಲೆಂನಳವಲ್ಲಾ
ಫಣಿರಾಜಗಸದಳವು ಸ್ವಗತ ಭೇದ ವಿರಹಿತ
ಸಚರಾಚರವ್ಯಾಪ್ತ ಖಗರಾಜ ಗಮನವರ
ಕಡಲಣುಗಿಯಾಣ್ಮನನು ನಿಗಮಗಳು ಬಂಣಿಸಲು

ನಿಲುಕವೀತನ ಗುಣವು ಸುಗುಣ ಸಾಕಾರದಲಿ
ಸುಳಿದನಲ್ಲದೆ ಬ್ಯಾರೆ ಜನನವೆಲ್ಲಿಹುದೊ ೨

ಕೇಳಿರೈ ಮಕ್ಕಳಿರ‍್ಯಾ ಕಾರಣವು ನಿಮಗ್ಹೇಳ್ವ
ಶ್ರೀ ಲತಾಂಗಿಯ ರಮಣನೋಲಗಕ ಸನಕಾದಿ
ಮುನಿವರರು ಒಂದುದಿನ ಮ್ಯಾಳೈಸಿ ಬರಲವರ
ಬಾಗಿಲಲಿ ತಡೆದರಾಕಾಲದಲಿ ಬಲಭರಿತ
ಜಯುವಿಜಯರೆಂಬುವರು ತಾಳುವದೆ ಈ ತಾಪ
ತಾಮಸೋತ್ತುಮರಿಂಗೆ ಮೇಲು ಮುಖ ಭಂಗದಲಿ
ಮತ್ತವರ ಲೆಕ್ಕಿಸದೆ ಕಾಲೋಚಿತವನರಿದು
ಕೊಟ್ಟವರೀರ್ವರಿಗೆ ಶಾಪವನು ಕೇಳೋ ಮುಳಿದೂ ೩

## ೪೯೨

ಸನಕಾದಿಗಳು ವೈಕುಂಠದಲ್ಲಿ ಜಯ
ವಿಜಯರಿಗೆ ಶಾಪವಂನು ಕೊಟ್ಟ ಬಗ್ಗೆ

ಬಿಡದ ಕಾರಣವೇನೊ ಯಮಗ ಶಾಪ
ಕೊಡುವೆವೀಗಲೆ ಕೇಳೊ ನಿಮಗ
ನುಡಿದ ನುಡಿ ಪುಸಿಯಾಗದಿದು ನಿಜವು ಮುಂನದರ
ಕಡಿ ಮೊದಲು ನಿಮಗೊರಿವೆವ್ರೊ

ಅಸುರ ವಂಶದಲಿ ಸಂಭವಿಸೀ ಅಖಿಳ
ವಸುಮತೀಶರ ನೀವು ಜೈಸಿ
ಯಸಿವಿರಗ್ಗಳಿಯರೆಂದೆನಿಸೀ ಮುಂದೆ
ಬಿಸಜನಾಭನೆಳ್ವೈರ ಬಳಸಿ
ವಸುಮತೀಶರ ಕರುಣ ಪಾತ್ರರಾಗುವಿರೆಂದು
ವುಸುರಿದರು ಮುನಿಗಳಾಗ ಬ್ಯಾಗ ೧

ಯೋಗಿಗಳು ಬಂದ ಬಗಿ ಅರಿದು ಸ್ವಾಮಿ
ಯೋಗನಿದ್ರಿಯಲಿಂದಲೆದ್ದು

ಈಗ ಬರವಾಯಿತೆ ನೀವೆಂದೂ ಕೇಳಿ
ಸಾಗರಾತ್ಮಜ ಅಣ್ಣನಂದೂ
ರಾಗದಲಿ ವಂದಿಸುತ ಅವರ ಬೀಳ್ಕೊಟ್ಟು ತಾ
ನಾಗ ಜಯ ವಿಜಯರಾ ನೋಡಿ ೨

ಕರದು ನಿಜಕಿಂಕರ ಖೇಡಾ ಬಿಡಿಸಿ
ಹರಿ ಅವರಿಗೀಪರಿಯಲೆಂದಾ
ಪರಮ ಹಂಸರ ಕೋಪದಿಂದಾ ನಿಮಗ
ಬರುವ ಬವಣಿಯು ನೀಗದೆಂದಾ
ಎರಡ್ಯೆದು ಬಸುರಿನಲಿ ಪ್ರಿಯರಾಗಿ ಬರುವಿರೊ
ದುರಳ ಹಗೆತನವಿಡಿಯ ಮೂರು ಜನುಮಗಳೂ ೩

ಇದರೊಳಗೆ ಬೇಕಾದುದೊಂದು ಆರಿಸಿ
ಮುದದಿಂದ ಪೇಳಿ ನೀವೆಂದೂ
ಸದಮಲಾತ್ಮನು ಕೇಳಲಂದೂ ಮನದಿ
ಬೆದರಿ ಕರಗಳ ಮುಗಿದು ನಿಂದೂ
ಮದವೇರಿ ಕೊಬ್ಬಿನಿಂದಲಿ ತಡದೆವೆಲೆ ದೇವ
ಇದಕ ಗತಿಯೇನೊ ಮುಂದೆ ತಂದೆ ೪

ತನುವಹಿಸಿ ಭೂಮಿಯಲಿ ಬಂದು ದನುಜ
ಕನಕಲೋಚನನು ತಾನೆಂದು
ಘನವಾದ ಧಾರುಣಿಯ ಕದ್ದು ಪೋಗಿ
ವನಧಿಯಲಿ ಮುಳುಗಿದ್ದನೆಂದೂ
ಚಿನುಮಯಾತ್ಮನು ಶೂಕರನ ರೂಪವನೆ ತಾಳಿ
ಹನನ ಮಾಡಿದನವನನೂ ಬಿಡದೆ ೬

ನರಹರಿಯ ಕಯ್ಯಲವನನು ಜಾನೊಬ್ಬಾ
ಪುರುಟ ಕಶ್ಯಪನು ತಾನಳಿದಾ
ಸುರನಿಕರಕಾಗಲಾನಂದಾ ಪರಮ
ಪುರುಷನೀಗಿಸಿದ ಭವನೊಂದಾ
ಎರಡೆಯ ಬಸುರಿನಲಿ ಬಂದ ಬಗೆಯನು ನಿಮಗೆ

ವಿರಚಿಸುವೆ ಕುಶನೆ ಕೇಳೋ ಬಾಳ
ವಾಲ್ಮೀಕರು ರಾವಣ ಕುಂಭಕರ್ಣರ
ಜನನವಂನು ಹೇಳುವ ಬಗೆ ೭

## ೪೯೩

### ದ್ವಿಪದಿ

ಒಂದು ಜನುಮವ ಕಳೆದು ಮ
ತ್ತೊಂದು ಜನುಮದಲಿ ಬಂದ ಬಗೆಯನು
ಪೇಳ್ವೆ ಭಾವಜ್ಞರಿದು ಕೇಳಿ
ಅಂದು ಪದುಮಾಸನನ ಮನದಿಂದ ಜನಿಸಿದನು
ನಂದನನು ತಾನೆನಿಸಿ ಮೆರುವನಾ ಪೌಲಸ್ಥಿ
ಮುಂದ ಕೇಳ್ಯೆ ತರುಣ ತನ್ಮುನಿಯ ಜಠರದಲಿ
ಬಂದಿಹನು ತಾನಾಗ ಪರಮ ತೇಜೋಮಯನು
ಮಿಶ್ರವಸು ಮುನಿಯಾ ೧

ಇವನ ಕಲವಧುವಿನಲಿ ವೈಶ್ರವಣನೆಂಬುವನು
ಜನಿಸಿ ಬಂದನು ಬಳಿಕ ಕವಲಿಲ್ಲದರ್ಚಿಸಿದ
ಕಮಲಾಸನನ ಬ್ಯಾಗ ವನಜಸಂಭವ ಮೆಚ್ಚಿ
ನವನಿಧಿಗೆ ನೀನೊಡಿಯನಾಗಿ ಪುಷ್ಪಕವೆಂಬಾ
ಜಯ ವಿಮಾನವನೇರಿ ಚರಿಸೆನುತ ಕೊಡಲಾಗ
ತಿರಿಗಿ ತಂದಿಯ ಬಳಿಗೆ ಧನಪತಿಯು ತಾ ಬಂದು
ತವಕದಲಿ ಕೇಳಿದನು ಸ್ಥಾನವಿರುವುದಕೆನಗದಾವದೆಂದೂ ೨

ಶರಧಿ ಮಧ್ಯದೊಳೊಂದು ಸುವರ್ಣಮಯವಾದ
ವರ ಗೋಪುರಗಳಿಂದ ವರುಣನಿಗೆ ವಪ್ಪಾದ ಲಂಕಿಯನು
ರಚಿಸಿದರು ಮಾಲಿಯು ಸುಮಾಲಿಯರು ಇರಲಿತ್ತ
ಹಿರಿಯೊಡನೆ ವೈರವನು ಬಳಿಸಿ ಬಿಟ್ಟೋಡಿ ಪಾತಾಳದಲಿ
ತಾವಿರುವರಾನಗರಕಧಿಕಾರಿ ನೀನಾಗಿ ಸ್ಥಿರದಿಂದಲಿರು ಎನುತ

ವಿಶ್ರವಸು ಮುನಿವರನು ಕರುಣದಲಿ ಕಳುಹಿರಲು
ಯಕ್ಷಪತಿ ರಾಕ್ಷಸರ ಪಟ್ಟಣದೊಳಿರುತಿದ್ದನೂ ೩

ಬಳಿಕ ತಂಮಯ ಪುರವು ಶೇರಿತು ಕುಬೇರನಿಗೆ
ಯೆಂಬ ವಾರ್ತಿಯು ಕೇಳಿ ಮುಳಿದು ಮತ್ಸರದಿಂದ
ಮಾಲಿ ತಂನಾತ್ಮಜಯಳೆಂಬ ಕೈಕಸಿಯಂನು
ವಿಶ್ರವಸು ಮುನಿವರಗ ಮದುವೆ ಮಾಡಿದ ಬಳಿಕ
ಅವಳ ಬಸುರಿಲಿ ಬಂದ ಖಳಕುಲ ಸಿರೋಮಣಿಯು
ದಶಕಂಠನೆಂಬುವನು ಮಾಲ್ಕತ್ತ ಪುಟ್ಟಿದನು
ಕಂಭಕರ್ಣನೆಂದೆನಿಸಿ ಇಳಿನೆಗ್ಗಿತಿವರೀರ್ವ
ರುದಯಕಾಲದಲಾಗ ಜಯವಿಜಯರೆಂಬಿವರೋ ೪

ಇಂತಿರುವ ಸಮಯದಲಿ ಕೆಲವು ದಿವಸದ ಮ್ಯಾಗೆ
ಸಂತತಿಯನುದ್ಧರಿಸಿ ಸಕಲ ಸಜ್ಜನರೊಳಗ
ಪಂಥದಲಿ ಪರಮ ವೈಷ್ಣವನಾಗಿ ಮೆರೆಯುತ್ತ
ಕಂತುಪಿತ ಶ್ರೀಹರಿಯ ಡಿಂಗರಿಗ ತಾನೆನಿಸಿ
ಜನಸಿದ ವಿಭೀಷಣನು ಜ್ಞಾಣರೊಳಗಗ್ಗಳನು
ಅಂತಿಯಲಿ ಕೈಕಸಿಗೆ ಆದಳ್ಳೆ ಶೂರ್ಪಣಖಿ
ಎಂಬೋರ್ವ ಮಗಳಿವಳಿಗೇ ೫

ಇತ್ತ ಕೇಳಿರೋ ಮುಂದ ಇರುತಿರುತಲೊಂದು ದಿನ
ಹತ್ತು ಮುಖ ತಾನಾಗ ಹಲವು ಬಗೆಯಲಿ ಮುಂನಾ
ಸತ್ತೆ ಲೋಕೇಶ್ವರನ ಸಾಹಸದಿ ತಪಗೈದು
ಮತ್ತವನ ಮೆಚ್ಚಿಸುತ ಮಾಯಾವಿ ಬೇಡಿದನು
ಯತ್ತಲಾನಿಕೆ ಯನಗ ಸುರ ದನುಜ ಭುಜಗರಲಿ
ಮೃತ್ಯುವಿನ ಭಯವಂಮೆ ಮೊಳೆದೋರದಂದಲಿ
ಚಿತ್ತೈಸಿ ವರವೀಯಬೇಕೆನುತ ಬೇಡುತಿರೆ
ಚಿತ್ತಜನ ಅಂಣನಿನಗೊರವಿತ್ತೆ ಪೋಗೆಂದನೂ ೬

ಮದವೇರಿ ಮಬ್ಬಿನಲಿ ರಯದಿ ರಕ್ಕಸರಾಯ
ವದಗಿ ಲಂಕೆಗೆ ಬಂದು ವೈಶ್ರವಣನ್ನೊರವಡಿಸಿ

ಎದುರಿಲ್ಲವೆನಗೆಂದು ಆಳುತಿಹನರಸಾಗಿ
ಬೆದರಿ ನರವಾಹನನು ನಂದಿಕೇಶನ ಬಳಿಯ
ಪುರವ ನಿರ್ಮಿಸಿಕೊಂಡನಳಕಾ ನಗರವೆಂದು
ಮುದದಿಂದ ತಂನ ಕಿಂನರಗಣರು ಸಹವಾಗಿ
ಅದರೊಳಂತರಿಸದಲೆ ಚದುರ ಕೇಳಿರುತಿದ್ದನೂ ೭

ದಶಸಿರನು ತಾನಿತ್ತವಂದಾನು ವಂದುದಿನ
ಅಸಮ ಮೃಗಗಳ ಬ್ಯಾಟ ಆಡಲೋಸುಗ ತಂನ
ಪಸರಿಸಿದ ಬಲದೊಡನೆ ಪೀವರಾರಣ್ಯದಲಿ
ಶಶಿ ಹರಿಣಿಗಳನೆಲ್ಲಾ ಹಸನಾಗಿ ಹುಡುಕುತ್ತ
ಚರಿಸುತಿಹ ಸಮಯದಲಿ ಕಿಶಗಂಣರರಿಯಾದ
ಮಯನೆಂಬ ದಾನವನು ದಶಕಂಠನಿಗೆ ತಂನ
ಮಗಳು ಮಂಡೋದರಿಯ ಮದುವೆಯನು
ಮಾಡಿ ಕೊಡಲೂ ೮

ಸತಿಯಳನು ಕೈಪಿಡಿದು ಸಾಗಿ ಲಂಕಿಗೆ ಬಂದು
ಅತಿಹಿತದಿ ವಜ್ರಜ್ಯಾಲಿಯು ಕುಂಭಕರ್ಣನಿಗೆ
ಮತ್ತಾ ವಿಭೀಷಣಗ ಸತಿಯಾಗಿ ಮೆರೆದಳೈ
ಸರಮೆ ಎಂಬುವಳಾಗ ಜತಿಯಾಗಿ ಮೂವ್ವರಿಗೆ
ಮದುವೆಯಾದುದು ವ್ಯಾಲೆ
ಪ್ರಹಸ್ತ ಮಾರೀಚ ಮಂತ್ರಿಗಳನೊಡಗೂಡಿ
ಸಂಭ್ರಮದೊಳಿರುತಿರಲ್ಕೆ ೯

ಘನಗರ್ವದಿಂದಾಗ ಗುಡಿಗೋಪುರವ ಕೆಡಿಸಿ
ಮುನಿಜನಂಗಳನೆಲ್ಲಾ ಘಾಸಿಗೊಳಿಸುತ್ತಿರಲೂ
ವನದೊಳಡಗಿದವಾಗ ಯಜ್ಞ ಯಾಗದ ಕ್ರಮವು
ಧನವನೀ ವಾರ್ತಿಯನು ಕೇಳಿ ಕಳುಹಿದ ತಂನ
ಅನುಜನಿವನೆಂದರಿದು ಆಗ ರಾವಣನೆಡಿಗೆ
ಆರ್ಯ ವಂಶದಿ ಜನಿಸಿ ಅನುಚಿತದ ಕಾರ್ಯಗಳ
ನಾಲೋಚಿಸಲಿ ಬ್ಯಾಡವೆಂದು ದೂತನ ಕಳುಹಲೂ ೧೦

ದಾನವೇಶ್ವರನಾಗ ದೂತ ಬಂದುದು ನೋಡಿ
ಕೇಣದಲಿ ನುಡಿದನ್ಯೆ ತಾನೆನಗ ಭಾಗಾದಿ ಆಗಿದ್ದುದಲ್ಲ
ಮೇಣ್ ಜ್ಞಾನ ಬೋಧನೆ ಪೇಳ್ವನಿವನ ನೋಡುವೆನೆಂದು
ಧಾಳಿಯಿಟ್ಟನು ಬಂದು ಧನದನಳಕಾವತಿಗೆ
ಆನಲಾರದೆ ಸೋಲಲಾತನ ವಿಮಾನವನು
ತಾನೊಯ್ವ ಸಮಯದಲಿ ಮುಂದೆ ಸಾಗದಲಿರಲು
ಯೇನೋ ಇದು ಕೈಲಾಸ ಗಿರಿಯಲ್ಲಿ ಮಾಯವಿದೆ
ಯನುತಾಗ ಪರ್ವತವ ಖಳಕಿತ್ತನುವಾದನೂ ೧೧

## ೪೯೪

ದಶಕಂಠ ತಾನಾಗ ದಿಂಡಿಯತನದಿ
ಪಶುಪತೀ ಗಿರಿಯ ಕಿತ್ತುವೆನೆಂದು ಮನದೀ

ಕಡು ಧೈರ್ಯವನು ತಾಳಿ ಖತಿಯಾ ಮಬ್ಬಿನಲಿ
ಜಡನೇಳಿಸಿದ ತಂನ ವಡಲಾ ಸಾಹಸದೀ
ಮೃಡನರೀದೊತ್ತಾಲೂ ಪಾದಾದುಂಗುಟದಿ
ಬುಡದಿ ಭುಜ ಸಿಕ್ಕು ಖಳನಡುಗಿ ಚೀರೂತಲಿ ೧

ದೃಢದಿಂದ ಭಯಗೊಂಡು ಧರಿಯೋಳೊರಗುತಲಿ
ಅಡಿಗಡಿಗೆ ಬೆದರೀದ ನಲವರೀತಿಯಲೀ
ಬಿಡಿಸಿದಾ ಬಂದಾಗ ಜಡಜಾ ಸಂಭವನೂ .
ಪಡದಾ ಮೊಂಮಗನೆಂದು ಪರಿಭಾವಿಸುತಲಿ ೨

ಯದಿಯಾರಿದನುಜೇಂದ್ರ ಯೇಣ್ಮಯ್ಯನಾಗ
ಮುದದಿಂದ ಭಜಿಸೀದಾ ಮದನಾರಿಯ ಬ್ಯಾಗ
ವದಗೀತಾ ಉಮೆಗೂಡಿ ವಹಿಲಾದಿ ಬಂದೂ
ಸದಯಾಜಯ ಖಡ್ಗವಾನಿತ್ತಾನವಗೊಂದೂ ೩

ಹರನೋರಾಬಲುವಿಂದ ಸರಿಯಿಲ್ಲಾವೆನಿಸಿ
ಸುರರಾ ಪುರದಿಂದಾ ಗೂಳೆಯವಂನೂ ತೆಗಸೀ

ಪುರವಣೀಸುತ ಭೂಪರ ಮುಖದೀ
ಬೆರಳಿಡಿಸಿ ಬರುವಾ ದಾರಿಯೊಳೊರ್ವ ನಾರೀಯಳಾ ಕಂಡೂ ೪

ಲಲನೇ ನೀನ್ಯಾರೆಂದೂ ಕೇಳಿ ಚಿತ್ತದಲಿ
ನಳಿನಾ ಬಾಣನ ಬಾಧಿ ಬಲುಮೆಯಾಗುತಲಿ
ವಲಿಮೀಯೊಳೊಡಗೂಡಾಬಹುದೆಂದಾರವಳೂ
ಶುಲಭಾಳೂ ನಾನಲ್ಲೋ ಶುಚಿವೇದಾವತಿಯೂ ೫

ಖಳನೇ ನೀ ಲೋಕಾಕ ಕಂಠಕನೆಂದೂ
ಕೊಲುವ ರಣದೊಳು ರಾಮಾ ನಿಂನಾನವಳೆಂದೂ
ಚೆಲುವೇ ಚಟುಲದಿ ಪೇಳಿ ಅನಳಾನೊಲು ಪೊಗಲು
ನಲುವಿಂದಾ ರಾವಣಾ ಲಂಕೀಗೈತಂದಾ ೬

ಇವನಾ ಬಾಧೆಯು ತಾಳದೆ ಸುರಮುನಿಗಳಳು
ಭುವನಾಜಾಸನನಲ್ಲಿಗೆ ಬಂದೂ ಬ್ಯಾಗದಲಿ
ಹವಣಾವಿದಕೇನೆಂದು ಹಂಸವಹನಗಾ
ತವಕಾದಿ ತಂಮಯ ತಾಪಾನ್ಹೇಳಿದರೂ ೭

## ೪೯೫

## ದ್ವಿಪದಿ

ಸರಸಿಜೋದ್ಭವನೊಡನೆ ಸುರಮುನಿಗಳೊಂದಾಗಿ
ಹರುಷದಲಿ ಹೊರಟರ್‍ಯೆ ಹರಿಯ ಕಾಂಬುವ ಭರದಿ
ಹಂಬಲಿಸುತೈತರಲು ಹಸನಾದ ಪಾಲ್ಗಡಲು
ಮುಂಬಂದು ತೋರುವದು ಮೂರುಗುಣವಿಲ್ಲದವ
ಅರಮನಿ ಅದೇನೆಂಬೆ ಅಬ್ಬರದಿ ಥೆರೆಯೆದ್ದು
ಆಗಸಕ ಧಾಳಿಯನು ವಬ್ಬುಳಿಯೊಳಿಡುವಂತೆ
ಸಿಡಿಲಂದವನು ಪೊಂದಿ ಭೂಡಿ ಭೀಕರದಿಂದ
ಭೊರ್ಗರಿವ ಸಾಗರವ ಕಂಡು ಕರಗಳ ಮುಗಿದರೂ ೧

ಹೇಳಲಾರವು ಶ್ರುತಿಯು ಮಾನವರಿಗಳ ವಡವೆ
ವ್ಯಾಲನಂಗದೊಳೊಂದಿ ವರಗಿದಾತನ ಮುನಿಯು
ಚಾರುತರದಿಂದಹುದೂ ಹದಿನಾಲ್ಕು ಲಕ್ಷವನು
ಮೀರಿ ವಂದ್ಯೋಜನದ ಸಾವಿರದ ರಾವಲ್ಲಿ
ಯೆಸೆವುದೀವರಿಯಿಂದ ಯೋಗಿಗಳ ಕಣ್ಗಳಿಗೆ
ಬಿಸರುಹಾಸನನಮರ ಪ್ರಸರ ಋಷಿಗಣ ಸಹಿತ
ಪರಾಶುಹೋಯೆಂದು ಪೊಗಳುತಲಿ ನಿಂದಿರ್ದರು
ಬಿಡದೆ ನಾರಾಯಣನ ಬಳಿಯಲ್ಲಿ ೨

ತೋರುತಿಹದೀ ಮೂರ್ತಿ ತೋಯಮಯ ಪ್ರಳಯದಲಿ
ಜಾರಿ ಹೋಗುವರೆಲ್ಲ ಕಮಲಭವ ಭವ ಮುಖರೂ
ವಟದೆಲಿಯ ಮ್ಯಾಲೊರಗಿ ತಂನ ಎಡ ಪಾದದಂನ
ಗುಟವ ಬಾಯೊಳು ಪಿಡಿದು ಮುದ್ದಾಗಿ ಮಲಗಿರುವ
ಇವನ ಮನದೂಹಿಯಲಿ ಸ್ರಿಷ್ಟಿಸ್ಥಿತಿಲಯ ಕ್ರಮವು
ಯೆವೆಯಿಕ್ಕು ಅನಿತರೋಳ್ ಕಂಡು ಬಯಲಾಗುವವು
ಮ್ಯಾರೆಗಾಣುವರಾರೊ ಮಹಾಮಹಿಮನಿಂಗಿತವ
ಸಾರಶೃತಿ ಆರ್ಭಟದಿ ದ್ರುಹಿಣ ಮೊದಲಾದವರು
ಪೊಗಳಿದರು ಜಯ ಜಯ ನಿನಾದದಿಂದ ೩

## ೪೯೬

ದೇವಾ ದೇವರ ದೇವಾ ಕಾವಾನಯ್ಯನ ಜಯತು
ಕೋವಿದ ಪ್ರಿಯ್ಯ ಕಮಲಾಕ್ಷನೆ ಜಯತು
ಶ್ರೀವಾರಾ ಭಜಕಾರಾ ಭಯ ಹರಾವರ ಜಯತು
ಯಾವಜ್ಜೀವರ ಚೇತನ ರಕ್ಷಕನೆ ಜಯತು ೧

ಯಾವಜ್ಜೀವರ ಜಯರಿಪು ಸಂಕುಲ ಕಾಲಾ
ಜಯ ಜಯ ಸದ್ಗುಣಜಾಲಾ ಜಯತೂ ವನಮಾಲಾ
ಜಯ ಶಂಡಾ ಶರಕಿರಣ ಜಯಭೂದುರ್ಗಾ ರಮಣಾ
ಜಯ ಜಯ ಜಗ ನಿರ್ಮಾಣಾ ಮೂಲಾ ಕಾರಣನೆ ೨

ನೊಂದೇವೈ ಸುರಕುಲದಾ ಬಂದೀಕಾರನ ಕೈಯ್ಯಾ
ತಂದೇ ನೀನೆಮಗಲ್ಲವೆ ನಿಗಮೋಕ್ತದಿಂದ
ಬಂದಾ ನೋವನು ಬಿಡಿಸಿ ದಯದಿಂದೆಮ್ಮನು ಕಾಯ್ವಾ
ರಿಂದೀಗಾರನು ಕಾಣೆವೆಂದೂ ಘೋಳಿಡಲೂ ೩

ಸಾರುವರಾನುಡಿಗೇಳಿ ಸರಸಾದೋಳೆಚ್ಚತ್ತು
ನಾರಾಯಣನಾಗ ವಿಹಗೇಂದ್ರಂನಾ ಕರಿದೂ
ಯಾರಾವಾರನು ಬ್ಯಾಗ ತಾರೆಂದೂ ಪೇಳಾಲೂ
ಹಾರಿ ಹೋಗೆವರಂನೂ ತಂದೂ ನಿಲ್ಲಿಸಿದಾ ೪

ಆಪದ್ಬಾಂಧವನಖಿಳಾ ವಿಶ್ವಂನಾಟಕನೆಂದು
ವ್ಯಾಪೀಗೀಪರಿಕೃತಿಯೂ ಬಂಣಿಸುವಾವೆನುತಾ
ಈ ಪರಿಯಲಿ ಸಕಲಾ ಜನರಾ ಸಂತಾಪವನೂ
ಆ ಪದ್ಮಾಸನ ಪಿತನ ಮುಂದೇ ಪೇಳಿದನೂ ೫

## ೪೯೭

### ಸೀಸಪದ್ಯ

ಯದ್ದು ಪೇಳಿದ ಕಮಲ ಗದ್ದುಗಿಯ ಪರಮೇಷ್ಠಿ
ಅದ್ದಿತ್ಯೆ ಸುರವೃಂದ ಅಳಲಾಬ್ಧಿಯಲಿ ದೈತ್ಯ
ಮರ್ದನನೆ ಚಿತ್ತೈಸೊ ಮಹವಾದಿ ಕಾರಣನೆ
ಲೆದ್ದಿ ತಂಮಯ ದೆಶೆಯು ದಶವದನನಿಂದಾದ
ಉದ್ದುರುಟು ತನಕಿನ್ನು ಉಳವಿಲ್ಲವೆಲೆ ಜಿಯ್ಯಾ
ಉದ್ಧರಿಸಬೇಕೆಂನು ಉರಗ ಪರಿಯಂಕಾ ೧

ಮರವಿರಲಿ ನಾನಂದು ಮನಬಂದ ಪರಿ ಅವಗ
ವರವು ಕೊಟ್ಟೆನು ಬಳಿಕ ಪರಿಣಮಿದುವುದು ಜಗಕ
ಪರಮ ಉಬ್ಬುಸವಾಗಿ ಉರವಣಿಗೆ ಬ್ಯಾಸತ್ತ
ರುಸರಲೇನದು ನಿನಗ ದುರುಳ ಜೀವಿಗಳಲ್ಲಿ
ದುರ್ಮಾರ್ಗವೇ ಸರಿಯು ಇರದೆಂದು ಸನ್ಮಾರ್ಗ
ವೆಂದಿಗಾದರು ಸರಿಯು ಪರಿಹರಿಸಬೇಕಿದನು ತಾತ ವಿಖ್ಯಾತಾ ೨

ಬರಿಯಬಲ್ಲೆನೊ ನಾನೂ ಫಣಿಯ ಬರಹವನೊಂಮೆ
ತಿರಿಗೊಂದು ಬರಿಯುವುದು ಅಳುಕಿಸುವದೆನಗಿಲ್ಲೊ
ಅರಿದಾವುದೈ ನಿನಗ ಅಖಿಳ ಲೋಕವು ನೋಡಾ
ಮರುಟ ಕಶ್ಯಪನ ಫಾಲಾಕ್ಷರವನೊರೆಸಿದಿಯೊ
ನೆರೆವಿಧಿಗೆ ವಿಧಿ ನೀನೂ ಸುರನಿಚಯ ದಶಮುಖನ
ಶೆರಿಯೊಳಗೆ ಶೇವಿಯನು ಮಾಡುವದು ನಾ ಪೇಳ್ವೆನೊ ೩

ಸಿರಿಅರಸ ಚಿತ್ತೈಸೂ ಶ್ರೀಕಂಠತಾ ಗೊರವ
ಹರಸುವನು ಪ್ರತಿದಿನದಿ ಶಚಿಯಾಣ್ಮ ಶೇವಕನೂ
ಸಮೀರಣನು ಬಾಣಸಿಗ ಮರಳಿ ಮಾತೇನಿಂನು
ಯಮನು ತಾ ಕಿಂಕರನೂ ವರುಣಾದಿಗಳು ಭವಣಿ

ಹೇಳಲಪವಾಸವದು ಗುರುವು ಜೋಯಿಸನಾಗಿ
ತುಂಬುರನು ರಂಜಿಸುವ ವೀಣೆಕಾರನೊ ತಾನೂ
ಸಂಗೀತ ಕೃತಿಗೈವ ಧುರ ವಸಂತನು ಮೆರೆವ
ಕಾಮನಾಗಿಹನೂ ೪

ಧರೆಗಂಣಾ ರಜನೇಶರಿವರೆ ದೀವಟಿಗರೈ
ಬರಿದೆ ಗಳಹುವದೇನೊ ನಾ ವುಪಾಧ್ಯನುಯನಲು
ಸರಸಿಜಾಸನ ನಾಡ್ವ ಸಂಗತಿಯು ತಾ ಕೇಳಿ
ಪರಮಾತ್ಮ ಗಹಗೈಸಿ ನಕ್ಕು ಮಾತಾಡಿದನು
ಸುರದನುಜ ಭುಜಗರಲಿ ಮರಣಭಯವೆಂದೆಂದು
ನಿನಗಾಗದೆಂಬಂತೆ ನಿನಗಾಗದೆಂಬಂತೆ ವರವು ಸಾಧಿಸಿತವಗ
ನಿಂನ ಮುಖದಿಂದಿನಿತು ನೀನರಿಯಲಿಲ್ಲವಾಗಿ ೫

ಅದರಿಂದ ನೊಂದಿರೈ ಹಿಂದಾಗಿ ನೀವಿಂದನು
ಹೆದರಬ್ಯಾಡಿರಿ ಮುಂದೆ ಮುದದಿ ಧರಿಯಲಿ ನಾನು
ವದಗಿ ನರ ರೂಪಿನಲಿ ಸದೆಬಡಿವೆ ಖಳಕುಲವಾ
ಸತ್ಯವಿದು ಸಟಿಯಲ್ಲ ಹದನವಿದು ಕ್ಷೋಣಿಯಲಿ
ಚದುರರೆಲ್ಲರು ನೀವು ಯನೊಡನೆ ವುದಿಸಿರೈ ಪೋಗೆಂದೆನೂ ೬

## ೪೯೮

ಕೌಂಸಲೆ ಗರ್ಭದಲೆ ಅವತರಿಸಿದ ಶ್ರೀಹರಿಯು
ಹಂಸಗ ಮುಖರನುಜನೀಶೆಂದಾ ಕೋಲು

ಸರಸಿಜ ಸಂಭವನೂ ವರಜಾಂಬುವಂತಾನಾದಾ
ಸುರಪತಿ ಸರಸದಿ ವಾಲಿಯನಿಸಿದನೂ ಕೋಲು
ತರುಣಿಯ ಸುಗ್ರೀವಾನೆಂಬುವಾನಾಮವನೇ ಧರಿಸಿ
ಸುರವರ ಜೀವನೆ ಹನುಮನೆನಿಸಿದನೂ ಕೋಲು ೧

ಧರಣಿಯಲಿ ಶಂಕರನೂ ವೃಷಭಾಕರನಳನಾಗಿ
ಮರುತ ಸಖನು ನೀಲಾಖ್ಯೆಯ ರೂಪದಿ ಕೋಲು
ಸುರಯಮಳರು ತಾವೂ ಮೈಧದ್ವಿವಿಧರಾಡರಾಗ
ಪರಮ ಪ್ರೇತಪತಿಗವಯನಾದನ್ಯೆ ಕೋ ೨

ಶರಭ ಪಂಚ ಪ್ಲವಗಾ ರೂಪಿಂದುದಿಸಿದರ್‍ಯೆ ಮ್ಯಾಲೆ
ವರಧನ್ವಂತ್ರಿಯ ಸುಶೇಣನಾದನೂ ಕೋಲು
ಪರಿಪರಿಯಲಿ ಮಿಕ್ಕಾಲಮರರು ಜಲಧಿ ಮಧ್ಯದ್ವೀಪಾ
ಧರೆ ಮಧ್ಯದಲಿ ಕುಜಾಳಿಗಳಾದರೂ ಕೋ ೩

ಮಾಯ ಮಂದರಿಯಾಗಿ ದಶರಥನಾಲಯವನೇ ಶೇರಿ
ರಾಯ ಲಕ್ಷ್ಮಣನು ಫಣಿಪತಿಯಾದನೂ ಕೋಲು
ಕಾಯಜನ್ಹೆತ್ತಾಯಿ ಜನಕನ ಮಗಳು ಜಾನಕಿ ಯನಿಸಿ
ಮಾಯದಿ ಭೂಮಿಯ ಮಧ್ಯದಿ ಬಂದಳೂ ಕೋಲು ೪

ವಸುಧಿಯ ಭಾರವನೂ ತಾ ನಿಳುಹುವದುಸಕಾಗಿ
ಬಿಸಿಜನಾಭ ಶ್ರೀ ರಾಮನಾಮದಲಿ ಕೋ
ವಶದದುಸಿದನೆಂಬಾ ಮಿಥ್ಯ ಪ್ರಪಂಚದ ಲೀಲಿಯಲ್ಲಿ
ಅಸಮನಾದಿ ಮಧ್ಯಂತ ವಿದೂರನೂ ಕೋಲುಸ ೫

## ೪೯೯

### ದ್ವಿಪದಿ

ಕಮಲನಾಭನು ತಾನು ಕಮಲಾಪ್ತನನ್ವಯದಿ
ಕಮನೀಯ ಕರವಾದ ನರರೂಪಿನಿಂದುದಿಸಿ
ಕಮಲೇಶ ಪರಿಪರಿಯ ನೇಮದಪ್ಪದೆ ಬಾಲ
ಲೀಲೆಗಳ ಮಾಡುತಿರೆ ಗಮಕದಲಿ ಗಜತುರಗ
ದೇರಾಟದಲಿ ನಿಪುಣರಾದರ್ರೈ ಮತ್ತಿವರು
ಹದಿನಾಲ್ಕು ವರುಷಕ್ಕೆ ಅಮಿತವಿಕ್ರಮ ವೇದ
ಶಾಸ್ತ್ರಕೋವಿದರಾಗಿ ಅಮರ ನರ ನಾಗರಲಿ
ಸರಿಯಿಲ್ಲವೆಂದೆನಿಸಿ ಕ್ರಮದಿಂದ ರಂಜಿಸುತ
ರಾಮಲಕ್ಷ್ಮಣರಿರುವ ಸಮಯದಲಿ ಒಂದುದಿನ
ಸಾಕೇತಪುರ ಧೊರಿಯ ಮಂದಿರಕ ಕೌಂದಿಕನು
ಬಂದನತಿ ಹರುಷದಿಂದ ೧

## ೫೦೦

ಬಂದಾನಾಗ ಕೌಸಿಕ ಬಲು ನೊಂದು ಬ್ಯಾಗ
ಬಂದ ಕೌಸಿಕನಾಗ ನೋಡಿರಿ
ಇಂದಿರಾವಲ್ಲಭನ ಯೋದ್ಧದಿ ಛಂದದಿಂದಾ
ದಶರಥನವರ ಮಂದಿರದಿ ಜನಸದ್ದು ಕೇಳಿ ೧

ಬಿಟ್ಟಾ ಜಡಿಯು ಭಾರದಿರಲು ಧಿಟ್ಟ ಮುನಿಯೂ
ಕಟ್ಟಿ ಕೆಡಹುವ ಶಾಪದಲಿ ಬಲು
ನಿಟ್ಟಿಸುವ ಜನರಿಂಗೆ ಭೀಕರ
ಪುಟ್ಟಿಸುವನೆಂಬುದನು ಸಾರುತ
ನೆಟ್ಟನಾ ಭೂಪತಿಯ ಬಳಿಗೆ ೨

ಕರದೊಳಾಂತಾ ಕಮಂಡುಲಾವೆರಸಿದಂಥಾ
ಪರಮ ತಾಪಸನಂನು ಕಾಣುತ

ಸರಸದಲಿ ಸತ್ಕರನೆ ನೃಪವರ
ಹರಿಯ ಪೀಠವನಿತ್ತು ಮಂನಿ ಶಿ
ಹರಿಯ ಕಾಣುವ ನೆವನಕಾಗಿ ೩

ಧರಣಿಪನು ಮುನಿಸಾರ್ವಭೌಮನು ಸಭಾಸ್ಥಳಕ
ಬರವ ಕಾಣುತಲಾಗ ಧಿಂಮನೇ ವಿಷ್ಠರವನಿಳಿದಿ
ದಿರ್ಬಂದು ಬಲು ವಿನಯದಲಿ ಕೈಮುಗಿದು
ನಿಲಯ ಕೈತಂದರ್ಘ್ಯಪಾದ್ಯದ ವಿಧಾನದಲಿ
ಋಷಿವರನನುಪಚರಿಸಿ ಬಿಜಗೈದ ಹದನವನು
ಬಿತ್ತರಿಸಬೇಕೆಂದು ಅರಸಾಗ ಬೆಸಗೊಳಲು
ಮುನಿಯು ಪೇಳಿದನಂತ ಮನದ ಆಲೋಚನಿಯನೂ ೪

## ೫೦೧

ಬಂದೆವಯ್ಯಾ ನಿಂನ ಬಳಿಗೆ ಬಾಹಳ ಪರಿಯಲಿ
ನೊಂದು ಮನದ ದಂದುಗವನು ಪೇಳ್ವ ನೆವದಲೀ ೧

ಜನಪ ಧರ್ಮ ಸಕಲ ನೇಮ ಸಾರ ಸಂಗ್ರಹವಾ
ಮನುಪುರೂರು ಕಾರ್ತವೀರ್ಯ ಹರಿಶ್ಚಂದ್ರರಾ ೨

ನೆನಪು ಬಿಡಿಸಿದಖಿಳ ರಾಜವಂಶ ಮಸ್ತಕಾ
ಮಣಿಯ ಧರ್ಮ ಖಣಿಯ ಸಾಧು ಜನರ ಪೋಷಕಾ ೩

ಅರಸ ಕೇಳು ಧರ್ಮ ನಾಲ್ಕು ಚರಣದಿಂದಲಿ
ಇರಲು ಧರಣಿ ಸುರರ ಹವ್ಯಕವ್ಯ ಸ್ಥಿತಿಯಲಿ ೪

ಈಸು ದಿನಗಳಿಂದಲೆಮ್ಮ ಅಗ್ನಿ ಹೋತ್ರವು
ಮೀಸಲಳಿಯದಾಗಿ ನಿರುತ ಸಾಗಿ ಬಂದವೂ ೫

ಈಗ ನಾಶವಾಗಲಿದಕುಪಾಗಾಣದೆ
ಯೋಗಿ ಜನರ ನಿಲುವುಗೆಡಿಸಿ ತಾಗಿ ನಿಲ್ಲದೆ ೬

ಸಾಗಿಬಂದ ಬಗಿಯು ಕೇಳೊ ಸಕಲ ಗುಣಮನಾ
ಯಾಗ ರಕ್ಷಿಸುವದಕೀಯೋ ರಾಮಚಂದ್ರನಾ ೭

ಇದರೊಳಣಿಕೆ ಬ್ಯಾಡವೆಂದು ವಿಗಡ ಮುನಿವರಾ
ಮುದದಿ ಪೇಳಲಾಗ ಮುಂನ ಕೇಳಿ ಭೂವರಾ ೮

ಮನದಿನೊಂದು ಉಡುಗಿತಾಗ ನೆನದ ಸ್ವೈರಣಿ
ಮುನಿಗೆ ನುಡಿದ ಮ್ಲಾನ ಮೊಗದಿ ಮನುಕುಲಾಗ್ರಣೀ ೯

## ೫೦೨

ಬೇಡಿಕೊಂಬುವೆನಯ್ಯಾ ನೀ ದಯ ಮಾಡೋ
ನೋಡಿದರ ತನುವೀಡಾಡಿಸಬ್ಯಾಡೋ ೦

ಕೋಮಲಾ ತನುವಿನ ಶೈಶವರಿವರೊ
ನೈಮಿತದೈಸರವತ್ತು ಉಂಣುವರೊ ೧

ಲಲಿತ ಪೂವಿನ ಶರನಿಮಣರೋ ಮುಂನಾ
ಸಲಹುವರಿಂನೆಂತೊಯೇ ಮುನಿಯ ನಿಂನೆ ಜನಾ ೨

ತಿಳಿದು ನೋಡಯ್ಯಾ ಕೌಸಿಕ ವರ ಮನದಿ
ವುಳಿಯಬಲ್ಲಾರೆ ರಕ್ಕಸ ಕೊಳಗುಳದಿ ೩

ಸೂಸಿದ ನಗೆ ಬಲು ಸೋಜಿಗವೆನಗ
ಮೋಸದಾ ನುಡಿಯಲ್ಲೊ ಬರುವೆ ನಾನೀಗ ೪

ಕರುಣಾವೆಳ್ಳನಿತಿಲ್ಲಾ ಕಲ್ಲೆದಿ ಕಾಣೊ
ಚರಣಕ್ಕೆರಗುವೆ ಶ್ರೀ ರಾಮನ ಮಾಣೊ ೫

# ೫೦೩

## ಸೀಸಪದ್ಯ

ನಗಿಯು ಸೂಸುವುದಕ್ಕೆ ನಾವು ಲೌಕಿಕರಂತೆ
ಹಗರಣಿಗಳೇ ಕೇಳೊ ಹಾಸ್ಯ ಮಾಡುವರಲ್ಲಾ
ಮಗವು ರಾಘವನೆಂದು ಮರುಕದಲಿ ನೀ ನುಡಿವಿ
ನಿಗರವೇ ರಘುನಾಥ ನಾಡಂತೆ ನರನೇನೊ
ಬಗಿಯು ನೀ ತಿಳಿದಿಲ್ಲ ಬಲು ಮರುಳಲಾ ಭೂಪ
ಹಗೆಯತನದಿಂದಂದು ಧುರದೊಳಿಂದ್ರನ ಸದೆದೆ
ಬಗಿಯದೆಲೆ ಶಂಬರನ ಬವರವನು ಗೆಲಿದೆಂಬ
ಬಿಗುಹುವಿನ ನುಡಿಸಲ್ಲಾ ಮಾರೀಚ ಮುಖ್ಯ
ರಾರೆಂದರಿಯ ಕೇಳೊ ನೀನೂ ೧

ಕಳುಹುವಡೆ ನೃಪಕೇಳು ರಾಮನನು ಕಳಿಸಯ್ಯಾ
ಹಲವು ಮಾತಿದದ್ಯಾಕ ಹೇಳೊಂದು ನೀನೆಮಗ
ಇಳೆಯೊಳಗ ನಂಮ ಜನ ಕಾಯುವರು ಇಂನುಂಟು
ಮರಳಿ ನುಡಿವರ ಸಲ್ಲಾವೆಂದರಿದು ನಾಬಂದೆ
ಅಳಕಲ್ಯಾಕಿದು ನಿನಗ ತೊಗದಿದ್ದರ ತೋಟಿ
ವುಳಿಯುವರಿಂದೆಂಬ ಊಹಿಯನು ನೀನುದಿದಿ
ವುಳಿವುದೀ ನಿಜವಸ್ತು ಜಗಪ್ರಳಯ ದಂತಿಯಲಿ
ಅಳಿದು ಹೋಗುವರೆಲ್ಲಾ ಅರವಿಂದ ಭವಭವರು
ಅರಸ ಕೇಳೀ ರಾಮನಾರೆಂಬುವದರಿಯೊ ನೀನು ೨

ಮರುಳು ನೃಪ ಕೇಳೊ ಮಾಯಾ ನರನು ಕಾಣೊ
ತರುಳನಿವ ನಿನಗಲ್ಲಾ ಸುರರ ದೂರಿನ ನುಡಿಗೆ
ಶುಕ್ತಿ ಮೌಕ್ತಿಕದಂತೆ ತರಣಿ ವಂಶದಿ ಜನಿಸಿ
ತಾನು ಈ ಗಹ್ವರಿಯ ಹೊರಿಯ ನಿಳಹುವದಕಾಗಿ
ಮೈದೋರಿದನು ಮತ್ತೆ ಸರಸಿಜೋದ್ಭವನಾಗಿ
ಲೋಕವನು ಸೃಜಿಸುವನು ಗರುಡವಾಹನನಾಗಿ
ಸಲಹುತಿಪ್ಪನು ಬಿಡದೆ ಉರಿಗಂಣನೆನಿಸಿ ಸಂ

ಹರಿಸುವ ಲೋಕಗಳ ನಿರುತವೀತನ ಭಜಿಸಿ
ಸಿರಿಯರೈಸಿರಿವಾರದಾದ್ದರೆಲೆ ನರನಾಥ
ನೀನಾರೊ ನಿನಗೀತನಾರೊ ೩

ತಂದೆ ನಾನೆಂದೆಂಬ ಹಂಮವನು ನಿನ್ಮನದಿ
ತಂದುಕೊಳದಿರೊ ನಿಂನ ತಂದಿ ಅಪ್ಪನು ಇವನು
ಯಂದೆಂದು ಹುಸಿಯಲ್ಲಾ ಸಂದೇಹವಿರೆ ನಿಂನ
ಗುರು ವಸಿಷ್ಟನ ಕೇಳೊ ಯಂದೆನಲು ಭೂಪತಿಗೆ
ಸಿರಗಳುಬ್ಬದವಾಗ ಅಂದು ಮುನಿಪೋತ್ತುಮಗ
ಮಾರುತ್ತರವುಗೊಡದೆ ನಿಂದ ಭೂಪತಿಯಂನು
ನೋಡಿ ಗುರುವಸಿಷ್ಠಾ ನೀನಂಜಬ್ಯಾಡಿದಕ
ಅರಸ ಕಳುವೆಂದನಾಗ ೪

ಕರಸಿ ಪೇಳಿದ ಮಗನ ಮುನಿಕೃಪೆಯು ನಿನಗಾಯಿತು
ಪರಮ ಹರುಷದಿ ಮುನಿಯ ಅಧ್ವರವ ಕಾಯುದಕ
ತೆರಳಿ ನೀವೆಂದೆಂಬ ವುತ್ತರದಿ ಜಲಧಾರಿ
ಸುರಿದವೈ ಭೂಪತಿಗೆ ಕಂಗಳಿಂದಲಿಬ್ಯಾಗ
ಮರುಗುತಲಿ ತಾನಿದ್ದತುದಿಗೆ ನಮಸ್ಕರಿಸಿ
ಗುರುವಸಿಷ್ಟನ ಭಾಳಾ ಹರಕಿಯನು ಕೈಗೊಂಡು
ಧರಿಸೆ ಚಾಪವ ಕರದಿ ಗಮಿಸಿದನು ಮುನಿಯೊಡನೆ
ಇರದೆ ಬೆಂಬಲವಾಗಿ ಸೌಮಿತ್ರಿ ತೆರಳಿದನೂ
ಕರುಣಿಸಿದನೀರ್ವರಿಗೆ ವಿಶ್ವಮಿತ್ರನು ಬಳಿಕ
ಶಸ್ತ್ರದುಪಸಂಹರಣ ತನು ರಕ್ಷಣೆಯ ಕ್ರಮವನೂ ೫

## ೫೦೪

ಮುಂದೆ ಕೇಳ್ಯೆ ಮುನಿ ಶ್ರೀರಾಮನ್ಯೆ
ತಂದ ಲಕ್ಷ್ಮಣನೊಡನೆ ಘನ ಸಾ
ನಂದದಲಿ ಸರಯುವನು ದಾಟುತ
ಲ್ಲಿಂದ ನಡದರು ಘೋರಾರಣ್ಯಕ ೦

ಬರಲು ಮುಂದೀಪರಿಯು ತೋರ್ಪುದು
ಹರಿ ಕರಡಿ ಖಗ ಮೃಗಗಳಿಂದಲಿ
ವುರತರದ ಭಯವೆಂಬ ಕಾನನ
ವಿರವಿರೀ ಸ್ಥಳವಾರದೆಂನಲೂ
ವರಿವೆ ನಾ ಸುರಪತಿಯು ವೃತ್ರಾ
ಸುರನ ಸೀಳಿದ ಕಲುಷ ಕಂದಿಗೆ
ಸರಸಿಜಾಸನನಾಗ ಬ್ಯಾಗದಿ
ಸುರನದಿಯ ಜಲವೆರಿಯಲಾತಗ ೨

ಧಾರುಣಿಗೆ ತಜ್ಜಲವು ಸುರಿದಾ
ಕಾರಣದಿ ಮಲವನವೆನಿಸಿತಿದು
ಭೂರಿ ಖಳರಿರಲಾಶ್ರವಾಯಿತು
ಧೀರ ಕೇಳ್ಳೈ ನಮಗ ವೈರಾಯಿತೂ ೩

ಈ ವನದೊಳಿರುತಿಹ ಪ್ರತಿಮವೀ
ರಾವತಾರರು ಕಲಿ ಸುಬಾಹುವಿ
ಭಾವರೀಚರ ಮಾರಿಚಾದ್ಯರ
ತಾವು ನೋಡೆಂಬ ಸಮಯದಲೀ ೪

ತಿಳಿದಳಾಕಾಂತಾರ ಮದ್ಧೆ
ಸ್ಥಳದಲಾ ನರಗಂಧ ನಾಸಾ
ವಳಯದಲಿ ನೈಶಾಟ ಕುಲದಾ
ಕೊಳಕ ತಾಟಕಿಯಾಗ ಬ್ಯಾಗದಲಿ ೫

ಸುಳಿವವರು ನರರೆಂನ ಪುಣ್ಯದ
ಫಲವಲಾ ಮಝು ಬಾಪೆನುತ ಮೈ
ವಲವಿನಲಿ ಮನವುಬ್ಬಿ ನಿಂದಳು
ಹಲು ಮೊರೆದು ಹರುಷಾತಿ ಕೇಶದಲೀ ೬

ಯೇಳತಿದ್ದದು ಶಾಕಿನೀ ಜನ
ಜಾಲಪಾಯವ ಧಾರೆನುತಲಿ ಕ
ರಾಳ ಮುಖ ನಡೆತಂದಳದ್ಭುತ

ಹೇಳಲೇನತಿ ರೌದ್ರರೂಪಿನಲಿ
ಮ್ಯಾಲೆಸುಳಿವ ಸುರಾಂಗನಾಜನ ೭

ಜಾಲವಾಚರಿಸಿತ್ತು ನೋಡಲು
ತೋಳ ಫಾಳಿಗೆ ಬಿದ್ದವೈತರು
ಖಳಿಯಾಗಮ ದಗ್ಗದರ್ಭಟಕೇ ೮

ಜವನ ತಾಯಿಯೊ ಮೇಣುಲಯ ಭೈ
ರವನ ತಂಗಿಯೊ ಪ್ರಳಯ ಕಾಲದ
ಸಿವನ ಸಿಖಿಯೊ ನೋಡಲೆ
ತವೆ ಸಹಜ ಮೃತ್ಯುವಿಯೊ ೯

ಇವಳ ಕೆಣಕೀ ಭುವನದಲಿ ಬದು
ಕುವರೆ ಭವ ಬ್ರಹ್ಮಾವರೇಂದ್ರರೂ
ನೆವನವಿದ ನಾವರಿವೆವೈ ತಾ
ಕವಳದಾಸಿಗೆ ಬಂದಳೆದುರಿನಲೀ ೧೦

ನೋಡಿ ತಲೆದೂಗಿದನು ಧನುವಿನ
ಗಾಡಿಯಲಿ ತಾ ನಿಂತು ನಿಟ್ಟಿಸಿ
ಬೇಡಿ ಬಂದಳು ಅಂತಕನ ಪುರ
ಕೋಡಿಸುವೆನಿವಳನುತ ನಗುತಿದ್ದಾ ೧೧

## ೫೦೫

### ದ್ವಿಪದಿ

ನೋಡಿದ್ಯ ಶ್ರೀರಾಮ ಬರುವವಳು ತಾಟಕಿಯು
ಆಡಲೇನಹುದಿಂನು ಕದನಕಾರಂಭವಿದು
ಬಾಣವನು ಹೆದೆಗೊಳಿಸು ರಕ್ಕಸಿಯೊಳಸುವನಾ
ಕೋಣನೇರುವನ ಪಟ್ಟಣಕವಳ ಕಳುವೆನಲು
ನಸುನಗುತ ರಾಘವನು ನುಡಿದ ಮುನಿಪುಂಗವಗ
ಬೆಸಸಬ್ಯಾಡಿರಿ ಇನಿತು ಬ್ಯಾರೆ ನಾರಿಯ ಜೀವ

ನುಗಿಯುವದು ಕ್ಷೇತ್ರಿಯರ ಮತವಲ್ಲಾ ಮತ್ತವಳ
ಅತಿಭಂಗವನು ಬಡಿಸಿ ಕೆಲಕೋಡಿಸುವೆನೆನಲು
ಎಲೆ ಕಕುಸ್ತಜ ಕೇಳೊ ಇವಳೊಂದದಲಿ ಹಿಂದೆ
ಬಲಿಯ ತಂಗಿಯ ದೂರು ಬಹಳವಾಗಿರಲಾಗ
ಅಮರೇಂದ್ರನಂಬೆದನೆ ಅವಳ ಕೊಲಿಗೆಳಸುದಕ
ಕ್ರಮವ ನಿನಗರಪುವೆನು ಧರಿಗೆ ಕಂಠಕರಾದ
ದುಷ್ಟರನು ಸದೆಯುವದು ಕರುಣದಲಿ ಸಜ್ಜನರ
ಪಾಲಿಸುವದೀಪರಿಯು ನೃಪನೀತಿಯು ಬಿಡದೆ
ಅಪಥವೆಲ್ಲೆನಲಾಗ ಅನುವಾದನ್ಯೆ ಅವಳ
ಸಂಹ್ವರಿಸುವದಕಾಗಿ ಸಂದೇಹವನು ನೀಗಿ
ಮುಂದ ಮುನಿವರಗ ಬಾಗಿ ೧

ಮಟ್ಟವಿಸಿ ಬರುವಂಥಾ ರಕ್ಕಸಿಯ ನಡಗಟ್ಟಿ
ಬೆಟ್ಟದಿದಿರಿಲಿ ಸುಳಿವ ಸಿಡಿಲಂದದಲಿ ನಿಲಲು
ನಗುತವರು ಕೌಸಿಕನ ಕೈಚಾಚಿ ಮುಂಬರಿದು
ಲಗುಬಿಗಿಯೊಳೈತರಲು ರಾಮನದು ಕಾಣುತಲೆ
ತೊಳಗು ತೊತ್ತಿನ ಮಗಳ ಮುಟ್ಟದಿರು ಮುನಿವರರ
ನಿಂನ ಗಂಟಲಿಗಿಲ್ಲಿ ಗಾಣವಿದೆ ನೋಡೆನುತ
ಹೊಳವವಿಸಿಖದಲಿವಳ ಕರಗಳನು ಕತ್ತರಿಗೆ
ಸಿಡಿದು ಹಾರಿದವಾಗ ಹಸ್ತದುರುಬಿಗಿ ಬಹಳ
ಬುಡಸಹಿತ ಬಲುಮರಗಳಾಗ ಧರಿಗುರುಳಿದವು
ಹೇಳಲೇನ್ಯೆ ಅವಳ ಮಾಯಾ ವಿಕಾರಗಳ
ಜಾಲವನು ಬಗಿಯುವನೆ ಜಲಜ ಮಿತ್ರಾನ್ವಯನು
ಆವ ಬಿಲ್ಲನ ಜಾಣ ಚಿತ್ರತರ ಪ್ರೌಢಿಯೊ
ದೇವನಲ್ಲಾ ಮ್ಯಾಲೆ ದಾನವಾಂತಕರಣಕ
ಅರಿದಾವುದೀತನಿಗೆ ಯೆಂದೆನುತಾಲಂಬರದಿ
ಅಮರತಲೆ ಬಂಣಿಸಲು ಧರಿಗುರುಳಿಸಿದನಾಗ
ತಾಟಕಿಯ ತಲೆ ಬಳಿಕ ಹೊಡೆದಮರರ ಭೇರಿ
ಹೂವುಗಳ ಸುರಿಸಿದರು ವಿಡದೆ ಸುರ ನಾರಿಯರು

ರಘುಕುಲನ ಮಸ್ತಕದಿ ಚೆಲುವ ದೇವರ ದೇವ
ನಾಗ ಮುನಿ ಅಪ್ಪಿದನು ಸಕಲ ಋಷಿಗಳು ಬಹಳ
ಸಂತೋಷವನು ತಾಳ್ದರೂ ೨

## ೫೦೬

ಅವನಿಜಾ ತನುಭವರೆ ಕೇಳಿರೋ
ಬವರ ಮುಖದಲಿ ಕಲಿ ಸುಬಾಹುವ
ನಿವನ ಗೆಲುವಿಲಿ ರಾಮನೆಸದಾ
ವಿವರವನು ವಿಸ್ತರಿಪೆ ನಿಮಗಿಂನೂ ೦

ಕಲುಷಮಯ ಕಾನನವ ದಾಟಿದ
ಬಳಿಕ ಘನ ಪಾವನ ತಪೋವನ
ಲಲಿತ ಪುಣ್ಯ ಮಹೀಜ ಮಂಜುಳ
ಕುಲದಲೊಪ್ಪಿದುದೊಂದುವನವಾಗ ೧

ಶ್ರುತಿಗಳುಚ್ಚಾರಣೆಯು ಸಂತತ
ವಿತತ ಶಾಸ್ತ್ರಕಲಾಪ ಕೇಳಿಯ
ನುತ ತಮೋನಿಷ್ಠಾನ ಶೋಭಾ
ಸ್ವತವನವ ಕಂಡಾಗ ರಾಘವನೂ ೨

ಕೇಳಿದನು ರಘುವಂಶ ಲಕ್ಷ್ಮೀ
ಲೋಲನೀವನ ವಾರವೆನುತವಿ
ಶಾಲಮತಿ ಕೌಸಿಕನ ಕೇಳಲು
ಹೇಳಿದನು ತಾವಾಗ ವಿವರವನೂ ೩

ರಾಮ ಕೇಳ್ ಕಶ್ಯಪಗ ಅದೀತಿ
ಭಾಮಿನಿಗೆ ಜನಿಸಿದನು ಹರಿವರ
ವಮನಾಕೃತಿಯಿಂದ ಬಲಿಮುಖ
ಹೋಮವನು ಕೆಡಿಶಾಗಭೂಮಿಯನೊ ೪

ಇತ್ತನೈ ನಮಗಂದು ಕಶ್ಯಪ
ನುತ್ತುಮೋತ್ತುಮ ತವಗಳೀವನ
ದೊತ್ತಿನಲಿ ಸಾಗಿದವುಯನಲಿದ
ರುತ್ತರದಿ ಮುನಿನಿಕರ ಕರಸಿದನೂ ೫

ಸಾಗಿಸಿದನದ್ವರವ ಕೌಸಿಕ
ನಾಗವಲು ರುತ್ವಿಜರ ವೈಭವ
ಗಾಗರಿಕಿಯನು ಬಿಟ್ಟು ನಡೆಸಿದ
ಬ್ಯಾಗ ಮುನಿವರನೂ ೬

ನಡವುತಿದ್ದದ್ದು ಹೋಮವೀವರಿ
ಬಿಡದೆ ಸುರ ಸಂದೋಹ ಕೂಡಲು
ಅಡಬಳಾ ಹರಿಗಳಾಗಸದ
ಲಡಿಗಡಿಗೆ ಚೀರುತಲೀ ೭

## ೫೦೭

### ಸೀಸಪದ್ಯ

ಕಡುರಭಸದಲಿ ಕೂಗಿ ದಿತಿಜಬಲವಾಗಸದಿ
ಸಿಡಿದು ಹವಿಗಳನುಂಬ ಅಮರ ನಿಕುರುಂಬವನು
ಹೆಡಕನೂರಿಸಿ ಬಾಚಿ ಬಾಯ ತುತ್ತುಗಳಂನು
ಕೆಡವಿ ತಿಂನುತಲಿರಲು ಕೆಲಸ ಸಾರುತಲಾಗ
ಕಡುನೊಂದು ಬಾಯಾರಿ ಆಹುತಿಯನುಗಳಿದರು
ಆದಿತ್ಯರಾಗ ಬ್ಯಾಗ ೧

ಶಿಶುಗಳೆಂತೊ ಇವರೂ ಮಾಯದ್ದಸುಳರು ಕಾಣೊ
ನಿಸಿತ ಮಾರ್ಗಣನುಗಿದು ಬಿಟ್ಟರೈ ಆಗಸಕ
ಬಸಿದು ಬೀಳುತಲಿಹವು ಬಾಣಕ ಕಬಂಧಗಳು
ಪಸರಿಸುತ ಹೆಣಮಯವು ಆಯಿತಿಳಿವಳಿಯದಲೆ
ವಿಷಮ ವೀರರುದಾರೊ ಮರುಭಾಷು ಭಾಪೆನುತ
ಬಸವಳಿದು ಬೆಂಡಾಗಿ ಮಾರೀಚಬೆರಗಾದನೂ ೨

ಮಿಗೆಮೀರಿ ಖಂಡೆಯವ ಜಡಿಯುತ್ತ ರಾಘವನ
ಸಂಮುಖದೊಳಿದಿರಾದನಾಗಲು ಸುಬಾಹುವನು
ಸುಗುಣ ಕೇಳ್ ಶ್ರೀರಾಮ ಭುಗಿಲು ಭುಗಿಲೆಂದು
ಭೋರ್ಗರಿವ ಬಾಣದರಿ ಅಗಲಿಸಲ್ಕೆಪವಸಿರ
ಕೊಂಡಂತಾಗಸಕ ದಿಂಡೆಗೆಡದುದು ನೆಲಕೆ
ಹೇಳಲೇನದ್ಭುತವನೂ ౩

ದೂರದಲಿ ಮಾರೀಚನಿದಕಂಡು ಭಯಗೊಂಡು
ಸೂರಿಗಳ ವೇಷದಲಿ ಶ್ರೀರಾಮನೆದುರಿನಲಿ
ಬೀರಿದನು ಬಲು ತಂನ ಮಾಯಾ ವಿನಯಾಗಳನು
ಭೂರಮಣಸೂನು ರಕ್ಷಿಪದೆನುತ ಬರಲವನ
ಹಾರುವರ ಕುರುವಿಡಿದ ದುರುಳನಿವನೆಂದರಿದು
ಮಾರುತನ ಸಖ ಶರಧಿ ವೂದಿದವು ತೆಂಕಣದ
ಕಡಲಿಗಾ ಖಳನ ಬ್ಯಾಗ ೪

ತವಕದಲಿ ರಕ್ಕಸರ ತಲೆಗಳನು ಚೆಂಡಾಡಿ
ಜವನಪುರಕಟ್ಟಿಸಿದ ಜಾಣರಿದು ಕೇಳಿರೈ
ತವಸಿಕುಲ ತಿಲಕನಧ್ವರವು ಸಾಗಿತು ಮುಂದೆ
ಅವಭೃತದ ಮಾಹದುತ್ಸವಾದಿತ್ತೈ ಕೌಸಿಕಗ
ಅವನಿಯೊಳಿದು ಪೊಸತಲಾ ಸಕಲ ಸುರನಿಕರ
ಸೂಸಿದರು ಪೂಮಳಿಯನೂ ೫

## ೫೦೮

ದಶರಥ ನಂದನರೂ ಕೌಸಿಕ ಮುನಿ
ಆಶ್ರಮದೊಳಗಿರಲೂ
ಅಸಮಾಸ್ತ್ರದಲಿ ಬಲುನಿಪುಣರೆಂದೆನಿಸಿದ
ಬಿಸಗದಿರನ ವಂಶಾದ್ವಸುಳರಿಗಾಗ ೧

ಮುನಿಮುಖವ ರಕ್ಷಿಸಿ ಮಲತ
ದುಷ್ಟ ದುಜರೆಲ್ಲರ ಸೀಕ್ಷಿಸಿ

ಧನುವಿನಾ ಜಾಣ್ಮೆಯನರಿದು ಕೌಸಿಕನಿಂದ
ಅನುಪಮ ಜಯಸಿರಿಯೊಲಸಿದ ರಾಮ ೨

ಸಂಗರಾಧೀನರಾಗಿ ಸಕಲಗುಣ
ದಿಂಗಿತ ಸಾರರಾಗಿ
ತುಂಗವಿಕ್ರಮರೊಂದು ತಿಂಗಳಲ್ಲಿದ್ದಾರೂ
ಮಂಗಳಾತ್ಮರಾದಾ ಮಾಯದಾ ನರರೂ ೩

## ೫೦೯

### ದ್ವಿಪದಿ

ಇಂತು ಮೋಕ್ಷೋತ್ತುಮನ ಆಶ್ರಮದೊಳಿರುತಿರುವ
ನಂತರದೊಳತಿವರಗ ನಿರ್ದಾಯದಲಿ ಜನಕ ಜಾನಕಿಯ ಪರಿಣಯವ
ಮಾಡಲುದ್ಯೋಗಿಸುತ ವಾಲಿಯನು ಬರದಾಗ ವಿಶ್ವಮಿತ್ರನ ಬಳಿಗೆ
ವಹಿಲದಲಿ ಕಳುಹಿಸಲು ಮನದೊಳಗ ತಿಳಿದನೈ ನರಚರಿತ್ರದ
ರಾಮಚಂದ್ರ ಭೂಜಾತಿಯಳ ಕರವ ಪಿಡಿಯುವ ಕಾರ್ಯವಿದು
ಸಹಜವೆಂದೆನುತ ಪಯಣಕುದ್ಯೋಗಿಸಿದನಾಗ ಬಲುಪ್ರೇಮದಲಿ
ನಯದಿ ಶುಭ ತಾರಿಯೊಳ್ ಪ್ರಭುವರಗಳೊಡಗೂಡಿ
ಹೊರಹೊರಟು ಆಶ್ರಮವ
ಬಿಟ್ಟು ಮುಂಬರಲಾಗ ಹರಿಶರಭ ಶಾರ್ದೂಲ
ಕರಿ ಹರಿಣಿಗಳ ಬಿನದ

## ೫೧೦

ಮೆರೆವ ಕಾನನವಿರಲು ನಿರುಮವದ ಶೋಣ ಭದ್ರಿಯಳಂನು
ಕಂಡಾಗೆ ಕೌಸಿಕಿಯ ಕೇಳ್ದರಾಮಾ ೧

ಈ ವಿಮಲ ನದಿಯಾವ ರಾಜನನ್ವಯವೆನಲು
ಭಾವನಮಗೀತನೆಲೆ ನದಿಯಾಗಿ ನದವಾದ ಕೇಳೂ ರಾಘವನೆನುತ

ತಾಪಸೋತ್ತುಮ ನುಡಿಯೆ ಭಾಳ ಸಂಭ್ರಮದಿಂದ
ನಾವಿಯಿಂದುತ್ತರಿಗೆ
ಕಾನನವ ಕಳೆದು ಬರೆ ಮುಂದೆ ಬಹು
ಚೆನಾಂಗಿ ಮಾನವರ ಪಾಪವನು
ಮುಕ್ಕಿ ಮುರಿಯುವೆನೆಂಬ ಮನದ ಬಲು
ಬಿಂಕದಲಿ ಮೂದಲಿಪಳೆಂಬಂತೆ
ಘನಘೋಷದಿಂದಸೆವ ಪೂರಿತದ ಸಲಿಲಮಯ
ಪಳಿಗನದ ಪ್ರವಾಹಿನಿಯ
ಸತತ ಸುರ ಸಂಪಸ್ತುತಿಯ ದುರಿತಹರ
ಶೋಭಿತಿಯ ಹರಿಪಾದದಿಂದೊಗೆದ
ಪರಿಮಳಾಲಂಕೃತಿಯ ಹರಿಣಾಂಕಧರವರನ
ಜಟಪಟಲ ಸಂಘಟಿಯ
ಭುವನೈಕ ಪಾವನಿಯ ಅಜನ ಕರವಾಸಿನಿಯ
ಕಂಡನೈ ರಾಮಜಾನ್ಹವಿಯಾ ೨

ಎಲೆ ಮುನೀಶ್ವರ ಸಕಲ ನದಿಗಳೊಳಗಗ್ಗಳದಿ ಚಲುವಾದುದೆಂಬಂತೆ
ಚಿತ್ತದಲಿ ತೋರುತಿದೆ ವಿಲಸದಭಿರಂಜಕದ ಜನನಸ್ಥಳ ವಾವುದೈ
ತಿಳುಹವಬೇಕೆನಲಾಗ ರಘುವರನೆ ಕೇಳ್
ಮೊದಲು ಸಗರರಾಜನ ಸಿರಿಗೆ
ಸುರಪತಿಯು ಶೇರದಲೆ ಕ್ರತುವಿನ ತುರಂಗವನು
ಕದ್ದೊದು ಕಪಿಲಮುನಿ
ಜಲೆಗೆ ಪಾತಾಳದಲಿ ಇರಿಸಿದನು ಬಳಿಕಾಗ
ದಗದಗಿಸುತರುವತ್ತು ಸಾವಿರಬ್ದವು ಬಿಡದೆ
ತೆಗಿಯಲೋಸುಗ ತಪವುಗೈದು ಕಮಲಾಸನಗ
ಮಿಗೆ ಭಗೀರಥನಿಳುಹಿ
ತಂದನೈ ಭೂತಳಕ ಜಗದೇಕನಾಥನಂಗುಟದಿಂದ ಬಂದಿಹಳು
ಜಗಕೆ ಮಾತೆಯು ಕಾಣೊ ಹರಿಹರವಿರಿಂಚಾದಿಗಳನುಳದಿಯ್ಯೋಮನದಿ
ಮಹಿಮಿಗವಧಿಯು ಕಾಣೆ ಸೋಮಧರನೇ ಬಲ್ಲನಲ್ಲರಲೆ ಬ್ಯಾರಿಲ್ಲ
ನೆನೆದ ಮಾತ್ರದಿ ಸಕಲ ಫಲವಹುದು ಯನು ತೊರದು

ಮನುಕುಲಾಗ್ರಣಿಗೂಡಿ ಬರುತಿರಲು ಮುಂದಕ್ಕ
ಅಂಬುಜದಲೊಡಗೂಡದಿದ್ದ
ಸರಸಿಗಳಂತೆ ತುಂಬಿಕೊಂಡಿದ್ದು ಇನನಾಡದಂಬರದಂತೆ
ಕಂಡರೀತೆರದ ಆಶ್ರಮನೊಂದನೂ ೩

ಇದು ಪೂರ್ವದಲಿ ಕೇಳೋ ಗೌತಮನ ಸದನವ್ವೆ
ಮುದದಿ ಮುನಿ ಸತಿಯಳಿಗೆ ಮನವಿಕ್ಕಿ ಸುರನಾಥ
ಮದನ ಶರಕೊಳಗಾಗಿ ಮತ್ತವಳ ಭೋಗದಲಿ
ಸಿಲುಕಿ ಮಿಡುಕಿದನಾಗ ಶಾಪದಿಂದೊಡಗೂಡಿ
ಬಲುಮೆಯಲಿ ಪರವಧುವನಳುಪಿ ದೆಡದವರಾರೊ
ಅರಸ ಕೇಳೀಚೆಯಲಿ ಅಂಗಭಂಗದೊಳಿಂದ್ರ ಪುರಕೈದಿದನು ಬಳಿಕ
ಇತ್ತಗೌತುಮನು ತಂನ ಸತಿಯೆನಿಪ ಅಹಲ್ಯಳಿಗೆ
ಸಮರಾತ್ರಿಯಲಿ ಪರರ ಸ್ಥಿತಿಯು ನೀನರಿಯದಲೆ
ನೆರದ ಕಾರಣದಿಂದ ಉರುತರದ ಸಿಲಿಯಾಗಿ
ಬೀಳೆನಲು ಬಿದ್ದಿಹಳು ಸರಸಿಜಾಂಬಕನಿದರ
ಸಂಗತಿಯ ನೋಡೆನುತ ಸಾರೆಯಕ ಬರಬರಲು
ರಾಮಾಂಘ್ರಿ ರಜವಾಗ ಆವರಿಸಿದಾಲಕ್ಷಣ ತೋರಿದಳು
ಮುನಿಂನಾಕ್ರತಿಯಂತೆ ಸಿಲಿಯೊಳುದ್ಭವಿಸಿದಂತೆ ೪

## ೫೧೧

ಭಾವೆ ಕೊಂಡಾಡೀದಳೂ ಭಕುತ ವತ್ಸಲನಾ
ಕಾವನಯ್ಯನೆ ಕರುಣಾವಲೋಕನದಿಂದ
ಪಾವನ ಮಾಡೀದ ದೇವನೆ ಶರಣೆಂದೂ ಪ

ನಿಗಮಗಳನು ತಂದು ನೀರಜ ಭವಗಿತ್ತಾ
ಅಗಣಿತಾ ಮಹಿಮಾ ಮಂದರಗಿರಿಧರನೇ
ಸುಗುಣ ಶೂಕರ ನಿಂನಾ ಬಗಿಯ ಬಲ್ಲವರಾರೊ
ಮೃಗನರನಾದಾ ಶ್ರೀರಾಮಾ ನಮೋಯಂದೂ ೧

ನರಲೀಲಾ ಚರಿತ ವಿಚಿತ್ರ ವಿಷ್ಣು ನಮೋ
ದುರಿತ ಭವಾರಿ ಖಳಾರಿ ನಮೋ
ಕ್ಷರರಹಿತ ಕ್ಷಯ ಹರವಿರಿಂಚರ ಗೇಯಾ
ಧರಣೀಯಾನಳದ ಭಾರ್ಗವನೇ ನಮೋ ೨

ಗತಿಯಿಲ್ಲಾದರಿಗೆ ಸದ್ಗತಿಯೂ ನೀನೆಂದೆಂಬಾ
ಕೃತಿಸಿದ್ಧಾವಾಯಿತಿಂದಿಗೆ ಜಗನ್ಮಯನೇ
ಕ್ಷಿತಿಯೊಳಗಪಕೀರ್ತಿಗಳು ಕೀದಳೆಂದೆಂನಾ
ಹಿತದಿಂದುದ್ಧರಿಸಿದದ್ಭುತ ಮಹಾತ್ಮನೆಯಂದೂ ೩

## ೫೧೨

### ಸೀಸಪದ್ಯ

ಇಂದಿರೇಶನ ಬಳಿಗೆ ಬಂದಾಗ ಗೌತಮನು
ಸಂದ ಸಂಮ್ಯಜ್ಞಾನದಿಂದಾಗಿ ಸ್ತುತಿಸುತಿರೆ
ವಂದುಗೊಡಿಸಿದರ್ಕೈ ಸತಿಪತಿಗಳೀರ್ವರನೂ
ಛಂದದಿಂದವರಂನು ಮಂದಿರದಿ ನಿಲಿಸುತ್ತ
ಮುಂದ ಪಯಣವಗೊಟ್ಟು ಮಿಥಳಿಯನು ಹೊಕ್ಕರೈ
ಅತಿಶಯದೊಳೊಲವಿನಿಂದಾ ೧

ಮುನಿಯ ಬರವನು ಕೇಳಿ ಮುಗಿದು ಕರಗಳನಾಗ
ಜನಕ ಭೂಪತಿ ಬಹಳ ಉತ್ಸವದೊಳೊಡಗೊಂಡು
ಬರುವ ಸಮಯದಿ ಕತಾನಂದನರುಹಿದನಾಗ
ವರ ವಸಿಷ್ಠನ ವಾದಕನುವಾದ ಸಂಗತಿಗೆ
ಪರಮ ಕೌಸಿಕ ಮುನಿಯು ಅಭ್ರದಲಿ ಸುರಪುರವ
ಬ್ಯಾರೊಂದು ತಾ ರಚಿಸಿ ತ್ರಿಶಂಕು ರಾಯನನಿಟ್ಟ
ಕಥಿಯ ಪೇಳಲು ಮುಂದೆ ಮುನಿಗೆ ಬೀಡಿಕೆಯಾಯಿತೂ ೨

ಧರಣಿಪತಿ ದೀಕ್ಷಿತನು ತಾನಾಗಿ ಸತ್ವರದಿ
ವರಮಖವನಾಚರಿಸಿ ವದಗಿದ್ದ ಮುನಿಜನಕೆ

ಪರಿಪರಿಯ ವಸ್ತುಗಳನಿತ್ತು ಮಂನಿಸಿ ಬಳಿಕ
ಧರಣಿಜಾತಿಯ ವುಚಿತ ವೈಭವ ಸ್ವಯಂವರಕ
ಕರಸಿದನು ವಾಲಿಯಲಿ ಸರ್ವ ಸದ್ಭಾಗ್ಯಧೇಯರನೂ ೩

## ೫೧೩

ನೆರೆದು ಬಂದರು ಸಾಗಿ ವೈದೇಹಿ ನಗರಕ
ಧೊರೆಧೊರೆಗಳೊಗ್ಗಾಗಿ ಜನಜನಿತವಾಗಿ
ಥರಥರದಿ ರಥನೇರಿ ತಂಮಯ ಉರುತರದ
ಪಾಠಕರ ಗಡಣದಿ ಮೆರೆವುತ್ತೈತರಲಾಗ
ಪುರಜನ ಬೆರಗವಡದುಬ್ಬೇರಿನೋಳ್ಪುದು ೧

ಅಂಗಮರು ಕಾಂಭೋಜಾ ಬರ್ಬರದ ಸಿಂಧು
ಕಳಿಂಗ ಕರುಷದ ರಾಜಾ ಖರ್ಪರಸು ತೇಜಾ
ತುಂಗವಿಕ್ರಮನಾವರಾಳನು ವಂಗ ಕೈಕೆಯ ಗೌಳ ಗುಜ್ಜರ
ಸಿಂಗಳ ದ್ರಾವಿಡದಾ ಮುಖ್ಯ ಧರಂಗನಾ ವಲ್ಲಭರು ಜೋಡಿಸಿ ೨

ಜೀನ ಬೋಟಕುರಂಗಾ ನೇಪಾಳ ಚೋಳಾ
ಮಾನ ಮಾಳವನಂಗಾ ಯೇನು ಹೇಳಲಿ
ಪುರದ ಬಾಹ್ಯದೊಳಾ ನರೇಶ್ವರರಿಳಿದ ಠಾವು
ನಿದಾನಿಸಲು ಸಾಗರವ ಸುತ್ತಿರುವಾ ನಗದ ಪರಿಯಂತೆ ಕಾಣಲು ೩

## ೫೧೪

### ಸೀಸಪದ್ಯ

ಭೂವರರು ವಿಪ್ರರಿಗೆ ಭವನಗಳ ನಿರ್ಧೈಸಿ
ದೇವಿಯ ಸ್ವಯಂವರದ ಭದ್ರಮಣಿ ಮಂಟಪವು
ತಾವಾಗ ರಚಿಸಿದರು ಐಗಾವದಳತಿಯಲಿ
ತೀವಿದ್ದ ದರ್ಪಣದ ವಿಲಸಿತಾಲಂಕೃತದ

ವ್ಯಾವರಿಸಿದುಪ್ಪರಿಗೆ ರವಿಶಶಿಯ ವೀಥಿಗಳು
ಶ್ವೇತಛತ್ರಗಳಂದು ಇಕ್ಕೆಲದೊಳೆಸವುತಿರೆ
ತೋರಣವು ಕಟ್ಟಿ ಬಲು ವಾರಣವು ಶೃಂಗರಿಸುತಾ ೧

ಸಾರಿಸಿದ ಕಸ್ತುರಿಯ ಸರಸ ಪರಿಮಳ ಗಂಧ
ಸಾರ ಚಳಿಗಳ ಕೊಟ್ಟು ತೋರುತಿಹ ಕಾಂಚನದ
ಭಿತ್ತಿಗಳ ಮುತ್ತುಗಳ ಚಾರುತರಲೋವಿಗಳ
ಚೌಮೂಲಿ ಅಗಲಾಗಿ ಮೀರಿ ಮಘಮಘಿಸುತ್ತ
ಮಲಯಜದ ಸೊಗಸಿಂದ ಜಲಯಂತ್ರ ಶೋಭಿಸಲು
ಜಾಣರಾದರಸರೊಳ್ ಜನಕ ಸಾರಿಸಿದ ಡಂಗುರವಾ ೨

ಈಶನೆನಗಿತ್ತಿರುವ ಧನುವನೆತ್ತಿದ ಬಳಿಕ
ಸೀತಿಯನು ಕೈವಿಡಿವೆವೆಂಬ ಸಾಹಸಿಗಳಾರ್
ಈ ಸಮಯಕೊದಗಿ ಬರಲೆಂದು ಸಾರುತಿರೆ
ಕೌಂಸಲೆಯ ಪ್ರಿಯ ಬಾಲ ಕೌಸಿಕನ ಕೇಳಿದನು
ಈ ಸುಧನುವಿಲ್ಲಿರುವ ಕಾರಣವಿದೇನೆನುತ
ಕೇಳುತಿರಲ್ಪೇಳಿದನು ಹರಿಹರರ ಕಾಳಗದ
ಸಂಗತಿಯನಾಗ ಮುನಿಯೂ ೩

ಹಿರಿಕಿರಿಯರಂಬುವರು ನಿಂಮೊಳಗ ದಾರೆಮಗ
ಸತ್ವದಿಂದೊದಿಗೀಗ ತೋರಬೇಕೆನುತಮರ
ವರಭಟರು ಕೇಳುತಿರೆ ಅಚ್ದೊಂದು ಸಾವಿರದ
ಪರಿಯಂತ ಹೋರಿದರು ತೀರಿ ಸಾಹಸವಾಗ
ಪರಮ ನಾರಾಯಣನು ಅಡಗಿದನು ಹರನಿತ್ತ
ಗೀರ್ವಾಣ ಸಂತತಿಯ ಸಂಶಯವ ಕಳೆದರಾ ಬಳಿಕ
ವೈಷ್ಣವ ಚಾಪಕೃತಯುಗದ ಅಂತಿಯಲಿ
ಪರಶುರಾಮಗ ಸಂದು ಜಮದಗ್ನಿ ಭೃಗವಿಡಿದು
ಬಂದುದೀ ಜನಕಂಗೆ ರಾಮ ನೀ ನೋಡೆಂದನೂ ೪

## ೫೧೫

ಜನಕ ಮಜ್ಜನಗೈದೂ ತಂನ ಮನದಿ ಹರುಷವ ತಳೆದು
ಅನುಜವೀರ ಕುಶಧ್ವಜ ಸಹಿತ ಘನ ಸುಮಂತ್ರಿಗಳನು ಕರೆಸಿ
ಕಮಲ ಮುಖಿಯರಾಗ ಕರಕಮಲದಲಿ ಬ್ಯಾಗ
ವಿಮಲ ಕಳಸಗಳನು ಪಿಡಿದು ರಮಿತ ಸ್ವರಗಳನೆತ್ತಿ ಪಾಡುತ ೧

ಮೊಳಗುತಿರಲು ಭೇರಿ ಬಿಡದುಲಿವುತಿರಲು ಕಾಳಿ
ಸರಸ ಸ್ವಯಂವರದ ಮಂಟಪ ಅರಸು ಬಂದು ಹೊಕ್ಕನಾಗ ೨

ಧೊರೆಗಳೆಲ್ಲರ ಕರಸಿ ವರಹರಿಯ ವಿಷ್ಟರದಿರಿಸಿ
ಸಿರವಬಾಗಿ ಭದ್ರಪೀಠದಿ ಕರವ ಮುಗಿದು ಕುಳಿತನಾಗ ೩

ಇಂದುಧರನ ಚಾಪಾವನು ಬಂದು ಪೂಜಿಸಿ ಭೂಪಾ
ಮುಂದೆ ಕೋಣ ಕುರಿಗಳಂನು ಛಂದದಿಂದ ಬಲಿಗಳೊಗಿದು ೪

ಉರಗ ಮುಡಿಗಿಯಂದು ಬಲುಧರಣಿಪರಿಗೆ ಕಂಡೂ
ಬೆರಗುಬಡಿಯಲುಗ್ರಧನುವ ತರಿಸಿ ಸಭೆಯೊಳಿರಿಸಿದಾಗ ೫

## ೫೧೬

### ದ್ವಿಪದಿ

### ಸೀತಾದೇವಿ ಶೃಂಗಾರವಾದದ್ದು

ವಿಥಿಳೇಶ್ವರನು ತಂನಾ ತಂಮನಾಗಲು ಕರದು
ಅತುಲ ಕನ್ಯಾ ರತುನವನು ಸಭೆಗೆ ತಾರೆಂದು
ಅಂಣನಾಜ್ಞೆಯ ಕೊಡಲು ಅತಿ ಹರುಷವನೆ ತಾಳಿ
ಭುವನ ಪೂಜತಿಯಂನು ಲೋಕೈಕ ಮಾತಿಯನು
ಕವಲಿಲ್ಲದರ್ಚಿಸುತ ಮನದೊಳಗ ತಾನಂದ
ವನಜನಾಭನ ಹೊರ್ತು ರಮಣರೀಕಿಗೆ ದಾರೊ
ಉಳಿದ ಪೃಥ್ವೀಶ್ವರರು ಸರಿಯೇನೋ ಶಿವಶಿವಾ

ಕಮಲಭವನಿಂನಾರ ವರಿಸಬೇಕೆನುತಿವಳ
ಫಣಿಯಲ್ಲಿ ಬರದಿಹನೊ ಯನುತ ಸಖಿಯರ ಕರದು
ಸಿಂಗರಿಸಿರೆಂದಾಗ ನೇಮಿಸಿದ ಬಳಿಕಿತ್ತಲೂ ೧

ಸರಸಿಜಾಕ್ಷಿಯರೊಲಿದು ಹೊಂಬಣ್ಣದ್ವಸಿ ಮಣಿಯ
ತರಿಸಿ ಧರಣಿಜೆಯಂನು ತವಕದಲಿ ಕುಳ್ಳಿರಿಸಿ
ಸರಸ ಪರಿಮಳ ಗಂಧ ಬೆರಸಿದ್ದ ತೈಲವನು
ಕರದಿ ಚಕ್ಷಕವ ಪಿಡಿದು ಕಬರಿಯನು ಸಡಲಿಸುತ
ಅರವಿಂದ ಶರನಯ್ಯನರಸಿ ನೀನಾಗೆಂದು
ಹರಸುತ್ತಲಾಗೂಡಿ ಹರದಿಯರು ಪೂರೈಸಿ
ಹರಳು ಕೆತ್ತಿಸಿದ್ದಿಡಿಕಿ ಹಣಿಗೆಯಿಂದಲಿ ಹಿಕ್ಕಿ
ಸರಿಯಾಗಿ ಚಳ್ಳುಗುರಿನಿಂದ ನ್ಯಾವರಿಸುತ್ತ
ಪರಮ ವಯ್ಯಾರದಲಿ ಮಜ್ಜನದ ಮನಿಗೈಯು
ತರುಣಿಯರು ಕಳಶಗಳನೆತ್ತಿ ನೀರೆರೆದು
ಮ್ಯಾಲೊರಸಿ ಸರ್ವಾಂಗವನು ಜರದ ಪೀತಾಂಬರವು
ಜಾಣೆಯರು ತಂದುಡಿಸಿ ಸುಳಿಮೊಗ್ಗಿ ಕುಪ್ಪಸವ
ಸೊಗಸನಿಂದಲಿ ತೊಡಿಸಿ ಕರದು ತಂದರು
ಬ್ಯಾಗ ಮಾತೃ ಮಂದಿರಕೆ ೨

ಕುರುಳುಗೂದಲುಗಳಿಗೆ ಕೊಟ್ಟು ಧೂಪದ ಹೊಗಿಯ
ಸರಬೈತಲಿ ತೆಗೆದು ಇರಿಸಿ ರಾಗುಟಿ ಚೌರಿ
ಹೆರಳು ಭಂಗಾರವನು ಸರಸಿಟ್ಟು ಗೊಂಡಯವ
ಸರಗೊಳಿಸಿ ಜಡಿಗಟ್ಟಿ ರಂನಗಂನಡಿ ತರಿಸಿ
ರಾಜವದುನಿಯ ಮುದ್ದು ಮುಖದ ಮುಂದಿಡೆ ನೋಡಿ
ರಂನೆ ಕುಲ ಸೀಮಂತ ಮಣಿಯಾದ ಸೀತೆ
ತಂನ್ಮನಕ ಬಂದ್ವಸ್ತಗಳ ತರಸಿಟ್ಟು ವಿವರವನು
ವಿರಚಿಸುವೆ ನಾನಿಂನು ಮೆರವ ಮೌಕ್ತಿದ ಸರ
ಚಂದ್ರಸರ ಪುತ್ಥಳಿಯು ನೆಲ್ಲಿಯೇರಾವಳಿಯ
ಕಠಾಣಿಸದ ಪದಕ ರಂನದಡ್ಡಿಕಿ ಮುತ್ತು
ರಾಜಿಸುತ ಕೊರಳಿಂಗೆ ಸರಿಯಾದ ಚಿಂತಾಕ

ಸರಿಗಿಯನು ತಾನಿಡಲು ತಾರಕಿಯ ಪ್ರಭೆಯಂತೆ
ಥರಕೊಂದು ಪರಿಯಾಗಿ ಹೊಳವಂಥ ಹಾರಗಳ
ಜಾನಕಿಯ ಕೊರಳಿಗ್ಹಾಕೀ 	೩

ವರಕರ್ನ ಭೂಷಣವು ಒಪ್ಪಾಗಿ ತೋರುವವು
ಸರಿಯಾದ ಚಳತುಂಬು ಗಿಳಿಹಚ್ಚಿದ್ವಾಲಿಗಳು
ಮ್ಯಾಲೆ ದ್ರಾಕ್ಷಾಲತಿಯು ಮಿರುಗುತಿಹ ಬಾವುಲಿಯು
ಮೀಟಿ ತೋರುತಲಿರಲು ಅರಳು ಸಂಪಿಗಿ ಮೊಗ್ಗಿ
ನನಿಯಂತೆ ಶೋಭಿಸುವ ನಾಶಿಕದ ನಯವಾದ
ಶ್ರೇಷ್ಠ ಮೂಗುತಿನಿಟ್ಟು ಸೀರಕ್ಷದ ಮಾಲಿಯಂತೊಲಿವ
ಬಾಹುದ್ವಯಕ ವಂಕಿ ನಾಗರಮುರಗಿ ಚಂದ್ರ ಬಾಜುವ ಬಂದು
ಕಂಕಣವು ಕರದೋರ್‍ಯಾ ಹರಡಿ ಹಸ್ತದ ಕಡಗ
ಬೆರಳಿಲುಂಗುರವಿಟ್ಟು ಹರಿಮಧ್ಯ ಕಿಂಪಾಗಿ
ಹರಿಮುಖದ ವಡ್ಯಾಣ ಹರಿಣಾಕ್ಷಿಯರಿಡಲು
ಕಾಲ್ದೊಡರು ಕಡಗ ಬಲು ಪೈಜಣ ಝಣಕೃತದಿ
ಕಾಲುಂಗ್ರ ಕಿರಿ ಪಿಲ್ಯಾ ಮೀನು ಲುಲ್ಲುಗಳಂನು
ಸಾಲ್ದಳೆದು ಪಾದದಲಿ ಸರಿಸಿಟ್ಟು ಸೊಬಗಿನಲಿ
ಫಣಿಗೆ ಕುಂಕುಮ ಬೆಳಿಟ್ಟರೂ 	೪

ಚಲುವ ಪಾದಕ ತಳಿರು ಮುಳಿದು ನೆಲಕುರುಳುವದು
ಲಲನೆಯರ ನಡಿಗಂಚೆ ನಾಚಿ ನಭಕ್ಹಾರಿದುದು
ನಿಳಿದಾದ ತೊಡಿಗಳಿಗೆ ಬಾಳಿ ಮುಖ ಬಾಗಿಸಿತು
ಮೊಲಿಯ ಬಂಧುರಕ ಮದಕರಿ ಮತಿ ಕಳದಿಹುದು
ಶಳೆ ನಡುವ ಕಂಡು ಹರಿ ಹಡದಳಿದು ಪೋಗುವದು
ಚಲಿಸುತಿಹ ಭುಜಗಳಿಗೆ ಫಣಿನುಂಗಿತಾತ್ಮಜರ
ತೊಳಪ ಕಂಗಳಿಗೆ ಕಂನ್ಯೈದಿಲೆಯು ಕಪ್ಪಾಯ್ತು
ಥಳಥಳಿಪ ಅಧರಕ್ಕ ಪವಳ ಮಣಿಕಲ್ಲಾಗಿ
ಪೊಳೆವ ದಶನಕ ಕುಂದ ಕೂಡ್ಮಲವು ಬಾಡುತಿರೆ
ಝಳಝಳಿಪ ಮುಖಕಿಂದು ಕಳೆಗುಂದಿ ಕಡೆಯಲ್ಲಿ
ಸಲೆ ಅಂಗರುಚಿಗೆ ಸುವರ್ನ ಹೊಕ್ಕಿತು ಮಂಣ್ಣಿಯಾ 	೫

ಶಾರದಿಯು ಶಚಿದೇವಿ ಗೌರಿ ಭಾರತಿ ರತಿಯು
ಧಾರುಣಿಯ ಮಗಳಂನು ವಾಲೈಸುವರು ಬಿಡದೆ
ವಾರಿಜಾಸನ ವಜ್ರ ಏನೆಂದು ಮೈತ್ರಿಗುಣ
ಮಾನಿಯಳಿಗಾತಿಯ ಮಾನಿನಿಯರಿತ್ತುತಲಿ
ಮಾದಳಿರ ಪಳಿವ ಚಂದ್ರುಟಿಯಲ್ಲಿ ತಾಂಬೋಲ
ರಸಮೊತ್ತಿ ತೋರ್ವಂತೆ ನಸುನಗಿಯ ಸೂಸುತಿರೆ
ಹಸನಾದ ಜಂಬೀರ ಫಲವ ನುಡಿದುಂಬುತಲಿ
ಭೇರಿಗಳ ರಭಸದೋಳ್ ಭದ್ರಗಜವಡರಿಸುತ
ಸಾರೆಯದಿ ಪಿಡಿದ ಹೇಮದ ಹೂಜಿ ಪಂನೀರು
ವಾರಿಜಾಕ್ಷಿಯರೊಲಿದು ಯಡವಲದಿ ಚಾಮರವ
ಚಲಿಸುತ್ತ ನಡದಿಹರು ಚಂಚಲಾಕ್ಷಿಯರೆಲ್ಲ
ಸರಸಾದ ಕರ್ಪೂರದ ಅಡಿಕೆ ತಂಬೂಲವನು
ಹಡವದೊಳಗಿರಿಸಿ ಪಿಡಿದಿರುವರ್ಕೈ ಕೆಲರಾಗ
ದೂರದಲಿ ದಂಡಗಳ ಪಿಡಿದು ಹೊಗಳುವರಿಂತು
ಧೀರೆ ಗಂಭೀರೆ ನಿಮಿರಾಜ ವಂಶೋದ್ಧಾರೆ
ಭೂರಮಣ ಜನಕನರಮನಿಯ ಜಯಸಿರಿಯೆನುತ
ಹೋಯಂದು ಹೊಗಳುತರಿ ವಗ್ಗಾಗಿ ನಡೆತಂದರೂ ೬

ಪಾಟಿಸುವ ಜನಗಳಿಗೆ ಹಲವು ಬಗೆ ಚೇಷ್ಟಿಯನು
ನೀಟಾಗಿ ಮಾಡುತ್ತ ಬರುವ ಬಾಲಿಯಿರೆಂತೊ
ನೋಟದಲಿ ಮದನಾಸ್ತ್ರ ವಿಟರ ಹೃದಯಕ ಪೂರಾ
ನಾಟಿಸದೆ ಬಿಡರಯ್ಯಾ ಬೂಟಕದ ಬರೆನುಡಿಯ
ಬ್ಯಾಟದಲಿ ಹುಬ್ಬುಗಳ ಮೀಟಿ ತೋರುತ ಬರಲು
ಮದನ ಶಬರನ ಬ್ಯಾಟೆಕಾರರಿವರೆಂಬಂತೆ
ಥಾಟಾಗಿ ಬರುತಿದ್ದರಾಗಳಾಗಸದಲ್ಲಿ
ಕೋಟಿ ಮೂರೆಂಬುಸುರನಾಥನಜನೆಲ್ಲಾರೂ
ಜಯಜಯವು ತಾವೆನಲು ಆವಿಯಿಂದಿಳಿಸಿ
ಜಟ್ಟುಕಾನುಜನು ಕೈಗೊಟ್ಟು ಸಾನುರಾಗದಿ ತಂದ
ಜಾನಕಿಯ ನೃಪನ ಸಭೆಗೇ ೭

## ೫೧೭

ಬಂದಳಾಗ ಛಂದದಿಂದಲಿ ವೈದೇಹಿ ಸಭೆಗೆ
ಬಂದಳಾಗ ಛಂದದಿಂದ ಮುಂದಮುನಿಯ ವೃಂದದಲ್ಲಿ
ಇಂದಿರೇಶನಿರುವನೆಂಬಾನಂದವನು ಮನದಿ ತಾಳಿ
ಸರಸಿಜಾರಿ ಸಂನಿಭಾನನೆ ಸೈಕತ ನಿತಂಬೆ
ಸರೀದ್ವರನ ತನಯೆ ತಾನೆನೆ ಉರಜ
ಭಾರಕಾಗಿ ಬಳುಕಿ ಹರದಿಯೋರ್ವಳಂನು ಕರಿದು
ಕರದಿ ಕರವಗೊಡುತ ಸ್ಮರನ ಕರಿಯ ಸೊಲಿಪ ಮಂದಗಮನಿ ೧

ಕಜ್ಜಲಾಕ್ಷಿ ಕಮಲ ಸಂಭವಿ ಕಲಕೀರವಾಣಿ
ಗುಜ್ಜಿವೇಷ ಭೂಷೆ ಭಾರ್ಗವಿ ನಿರ್ಜರಾದಿ ಸಕಲಲೋಕ
ಶೃಜ್ಜಿಸುವನ ಮಾತೆ ಖ್ಯಾತೆ ಸಜ್ಜೆಯಾಗಿ
ಗೆಜ್ಜಿರವದಿ ಹೆಜ್ಜಿಯ ಮೇಲ್ ಹೆಜ್ಜಿನಿಡುತ ೨

ಮಂಗಳಾಂಗಿ ಮಹತ್ಸುಂದರಿ ಸದ್ಗುಣ ಗಭೀರಿ
ಭೃಂಗಕುಂತಳೆ ಬಿಂಬಾಧರೀ
ಅಂಗನಿಯರೊಳತಿ ರಹಶ್ಯದಿ ಶ್ರಿಂಗರಾಗಿ ಸೊಬಗಿನಿಂದ
ತುಂಗವೀರ ನೃಪರ ಮುಖವ ಭಂಗಿಸುವುದಕಾಗಿ ಬ್ಯಾಗ ೩

## ೫೧೮

### ವಚನಾ

ಜನಕರಾಜನು ತಂನ ತನೆಯಳನು ಕರದು ನಿನ್ಮನಕ
ಬರುವುವರಾರು ನೋಡೆನುತ ನೃಪವರರ
ಮುನಿಗಳನೆಲ್ಲಾ ವಿವರಿಸುತ ಪೇಳಿದಾಗ ೧

ದೇವಿ ನೀ ನೋಡಂಮ್ಮಾ ಇದ್ದ ಭೂವರರೊಳು
ಜೀವದೊಡಿಯಾರ್‍ಯಾರೆಂಬುವದೂ ತೋರೆ ನಮಗದೂ

ಕಮಲಸಂಭವನವ ಕಂದುಗೊರಳವನಿವ
ಅಮರಾವತೀಯನಾಳುವಾನವನೆ ಮಘವಾ
ಯಮವರುಣ ಧನ ಪರಾಕ್ರಮದಿ ನಾ ತೋರುವೆ
ಕಮಲಾವಾಸಿನಿ ನೀ ನೋಡೆ ಮುದ್ದು ಮಾತಾಡೆ ೧

ಕುರು ನೇಪಾಳ ಮಾಳವನಂಗವಂಗ ಕಾಳಿಂಗಾ
ಹರಿವರುಷಾ ಕಿಂಪುರುಷಾದಾ ಭರತ ವರುಷದಾ
ಪರಮವೀರ ಕಾಸ್ಮೀರ ದ್ರಾವಿಡಾವೀ ಕಾಂಭೋಜಾ
ಧೊರೆಗಳೆಂಬುವಾರೆ ಇವರು ಮಗಳೆ ನೀ ಪೇಳೂ ೨

ಮೆರೆವನತ್ರಿ ಕಸ್ಯಪಾ ಕಣ್ವಾ ಗೌತುಮಾನೆಂಬಾ
ಹರಿತಾ ಮಾರ್ಕಂಡೇಯನೂ ವಿಶ್ವಮಿತ್ರನೂ
ಪರಮ ಚವನ ಗಾಲವಾ ಕಂಕ ಜಯಮಿನಿ ಇವಾ
ರಿರವಿಕೆಯನು ತೋರಿದೇ ಸಾರಿ ಹೇಳಿದೆ ೩

## ೫೧೯

ಅಪ್ಪಾ ಕೇಳೋ ಎಂನಾ ಮಾತಾ ಆಲಿಸಿದುಂಟಾದಾರಿಂನೂ
ವಪ್ಪುವಾರ್‍ಯಾರೆಂಬುವಾದು ಹೇಳುವೆ ನಿನಗೆ ೦

ಕಮಲಾಸನಾ ತನಯಾನಲ್ಲೆ ಕಮಲಾಂಕಾಧರನೂ ಮೊಂಮಾಗಾ
ಅಮರಾರೊಡಿಯಾ ಮರಿಮಗನೂ ಅರುಹುವೆನಿಂನೂ
ಯಮ ವರುಣಾದಿ ಧನಪಾರಿವರೂ ಸರಿಯಲ್ಲಾವೆಂಬೋದೆ ಸಿದ್ಧಾ
ಕ್ರಮದಪ್ಪುವಾ ನುಡಿಗಳಾಡಾಬ್ಯಾಡಾವೆಂದಾಳೂ

ಹರಿವರೂಷಾ ಕಿಂ ಪುರುಷಾ ಕುರು ವರೂಷಾ ನೇಪಾಳಾದಾ
ಅರಸಾರಾ ಶ್ರೇಣಿಗಳೆಲ್ಲಾ ವಿರಚೀಸಿದೆಲ್ಲಾ
ಅರಕೀಯೂ ನಿನಗಿದ್ದಾರೇನೂ ಮರವಿಯಿಂದಾಡುವದೆ ಸಹಜಾ
ನರರಲ್ಲಾವೇನಂದಾಳಾಗ ಅರಸಂಚಾಗಮನೇ ೨

ಮುನಿಮುಖ್ಯರಾ ಮುಂದೋರಿದಿ ಜನಮೆಚ್ಚಾರಾದರೆ ಕೇಳೊ
ಜನಜನೀತಾವಾಗಿ ಜಾಣಾ ನೃಪರಾ ಮಧ್ಯದೀ
ವನಜಾಸಂಭಾವಾದ್ಯರಂನೂ ಯಣಿಕಿ ಗಯ್ಯಾದಿದ್ದಾಸಹರನ
ಧನುವಾನೆತ್ತಿ ತೋರಿದಾತಾನೆಂನಾ ಗಂಡಾನೂ ೩

## ೫೨೦

### ದ್ವಿಪದಿ

ಮಗಳ ಮಾತನು ಕೇಳಿ ಮನದೊಳಗ ತಾ ಹಿಗ್ಗಿ
ನಗುತ ಮಾತಾಡಿದನು ಸುಗುಣೆ ನೋಡೆಮಂಯ್ಯಾ
ಶಶಿಧರನ ಚಾಪವನು ಶಕ್ತಿಯಿಂದಲಿ ತುಡುಕಿ
ವಸುಧೀಶದೊಳಗಾರು ನೆರವೇರಿಸಿದರಿಂಗೆ ಸುರಕುಜದ
ಕುಸುಮಮಾಲಿಯು ಕೊರಳಿಗ್ಹಾಕೆನುತ ಕರೆದು ಕೊಟ್ಟನು
ಅನುಜಾತ್ಮ ಜಯರೆಂಬಾ ಊರ್ಮಿಳಿಯು ಶ್ರುತಿಕೀರ್ತಿ
ಈರ್ವರನು ತಂದಿರಿಸಿದಾಗ ನೃಪವರ್ಗದಲಿ ಗಳದ ಕಪ್ಪಿನ ದೇವ
ಕೊಟ್ಟ ಧನುವಿನ ಬಳಿಗೆ ಹೊಳವ ಕುಂಡಲದ
ಕೋಟೀರ ಘನ ಬೆಳಕಿನಲಿ ಬಹುಭೂಪರ್ದ್ದೆಕ್ಕಳಿಸಿ
ಬಾಹು ಪ್ರತಾಪದಲಿ ಹೋರುತಿರಲವರೆಣಕಿ ಕೈಗೂಡಲಿಲ್ಲವಾಗಿ ೧

ನೆಲದಣುಗಿಯಳ ಬಯಸಿ ಬಂದ ರಾಯರ
ಕರಿಯಹೋದವರಿಗಂದರೀ ಪರಿಯಲ್ಲಿ ಕೇಳಿರೈ
ಕೆಲವರಿಗೆ ತಲಿಶೂಲಿ ಹಲವರಿಗೆ ಮಲಬದ್ಧ
ಛಳಿಜ್ವರವು ಕೆಲವರಿಗೆ ನಾಲ್ಕು ದಿವಸದ ಕ್ರಮವು
ನಮಗೆಂದರ್ರೈ ಕೆಲರು ಹೇಳಲೇನ್ನೈ ಧನಿವಿನ್ದೆಸರುಗೊಂಡರೆ ಸಾಕು
ಸಾರಣಿಯು ತಮಗಿಕ್ಕಿ ಮಿಡಕುವರು ಕೆಲಕೆಲರೂ
ಕೊಲುಬ್ಯಾಡಿರೆಂಮನೆಂಬುವರಲ್ಲಿ ಕಾಲ್ಗೆರಗಿ
ಹರಿವಾತ ವುರಿವಾತ ನರವಾತವೀಗೆಂದು
ಹೆಸರು ತೆಗಿಯದಿರೆಂದು ಬಸವಳಿದು ಬಂಣಗುಂದಿ ೨

ಬಂದರಾಯರು ಬಾಹಳ ಭಂಗಪಟ್ಟರು ಕೇಳಿ
ಅಂದಛಂದವು ನೀಗಿ ಅತಿಹಾಸ್ಯಕೀಡಾಗಿ ಕೋಕಿನದ ನೇತ್ರಿಯರು
ಅರೆನಗಿಯು ಬಿರಿ ನಗಿಯೊಳಿರುವ ಸಮಯದೊಳಾಗ
ಕಡುರವದಿ ಕೂಗುತಲಿ ಖಂಡೆಯವ ಜಡಿಯುತಲಿ
ಕುಡಿವರಿದ ದಾಡಿಯಲಿ ಕುಣಿವ ಮೀಸಿಗಳಿಂದ
ಮಾಣಿಕದ ಬಲುಮಕುಟ ತೆಲಿಯ ಹೊದರುಗಳಿಂದ
ಬಿಗಿಬಿಗಿದ ಕಿಗ್ಗಟ್ಟು ಶೋಣಿತಾಂಬರನುಟ್ಟು
ಜಾಣ ರಕ್ಕಸರಾಯನೆನಿಸುತಿಹ ದಶವದನ
ಧನುವಿನೆಡೆಗೈತಂದನಾಗಲೆ ವಿಮಾನದಿಂದಾ ೩

## ೫೨೧

ಹೆಂಣೀನಾ ಪಡಿಯಂಬಾ ಫಣಿಯ ಬರಹ ಬ್ರಹ್ಮಾ
ನಿಂನ್ಯಾಕ ಬರದಿಹನೊ ಮುಂನೇನು ಗತಿ ಇದಕಿಂನು ಮುಂಗಾಣೆನೊ
ಘನಸ್ವಯಂವರಾವ್ಯಾತ ಖಂಮಿದೆನಯ್ಯೊ

ತೆಳಿರಡೀಗಿಳಿ ನುಡೀ ನಳಿನ ಲೋಚನಿಯಳಾ
ಸಲಹಿಕೊಂಡೆನೊ ಸರ್ವಾಳೆಂತೆಂನಾದೇ
ಕಲಹಂಸಗಮನೆ ಕಾಮನ ಮುದ್ದು ಗಿಳಿಯಾದಾ
ಬಲು ಪುಣ್ಯಾವಂತೀಗೀ ಖಳ ಸರಿಯೇನಯ್ಯೊ ೧

ಸುಗುಣ ಸಂಪನೀಯಳಾದೆಂನಾ ಮಗಳಿಗೆ
ನಿಗಮಗರ್ಭನನೇ ಮಾವೆಂತಿಹದೊ
ಮುಗುಳಂಬಾನಯ್ಯಾನ ರಾಣಿಯಾಗುವಳೆಂದು
ನಗಿ ನುಡಿಮಾಡಿದಾ ನಾರದಾನೇನಯ್ಯೊ ೨

ಅನಲನೇತ್ರನ ಧನುವನು ಪಣಕಿಟ್ಟು ನೀ
ಜನನಾಥಾರನು ಬರಿಶೆನಗೆಂದಾನೂ
ಕೊನಿಗೆಂನಾ ಕೋರಿಕೆ ಕೈಗೂಡದಾಯಿತು
ದನುಜಾರಾಯಗ ಸೀತಿ ಗುರಿಯಾದಾಳಯ್ಯಯ್ಯೋ ೩

## ೫೨೨

ಜನುಕ ಭೂಪತಿ ತಂನಾ ಮನದಿ ಚಿಂತಿಯೂ ತಾಳಿ
ಅನುಜ ಮಂತ್ರಿಗಳ ಕರಿಸೀ ನುಡಿದ ಯೋಚಿಸಿ

ಖಳನಿವಾನು ಪೂರ್ವದೋಳ್ ಬಲದಿ ರಜತಾದ್ರಿಯಾ
ತಳವ ಬಿಡಿಸಿದನೆಂಬುವದೂ ಜಗವೇ ಬಲ್ಲಾದೂ
ಇಳಿದೇರಾನಾ ಧನುವಾನೂ ಇಕ್ಕಡೀಯಾ ಮಾಡುವಾ
ಬಲವಂತಾನೆಂದೂ ಬಾಡೀದಾ ಮಗಳಾ ನೋಡಿದಾ ೧

ಮರುಳುತಾನಾದಿಂದಾರಸುಗಳ ನೆರಸೀದೇನಯ್ಯಾ
ತೆರೆನಾಪಿದಕೇನೂ ಮಾಡಾಲಿ ಯಾರಿಗ್ವೇಳಲಿ
ಸರಸಿಜಾಂಬಕೀಯತ್ತ ದುರುಳ ಜೀವನವೆತ್ತ
ಸರುಧೇನು ಗಜಕ ಸರಿಯೂ ಮಾಡೀದಿ ಶಿವಾ ೨

ಮಲ್ಲಿಗೀಯ ಹೂವಾನೂ ಬಲ್ಲರಾದಾ ಜಾಣರೂ
ಕಲ್ಲಿನೋಳಿಟ್ಟೊ ತೀಡುವರೆ ಕೆಡಿಸಿಬಿಡುವರ
ಭಲ್ಲೆಭಲ್ಲೆರೆ ವಿಧಿ ಭಾಪು ನಿಂನಗಿಂತಲೂ
ಬಲ್ಲಿದಾವಾರಾ ಕಾಣೆಂದು ಭ್ರಾಂತಿಯೊಳಗಾದಾ ೩

## ೫೨೩

### ಸೀಸಪದ್ಯ

ನೃಪರ ಹಾಶ್ಯವ ಮಾಡ್ವ ನಾರಿಯರ ನಗಿ ಅಡಿಗಿ
ಅಪರಿಮಿತ ಭೂಮಿಪರ ಮಾನಕ್ಕ ಹಾನಿಯನೇ
ವಿಪುಳ ಬಲಯುತನಾಗಿದ ದಶವದನ ಧನುವಿಂಗೆ
ಬಂದು ಕೈಯಿಕ್ಕುತಿರೆ ಗುಪಿತ ನಿಧಿಯನು ಕಾಯ್ದುಕೊಂಡಿದ್ದ
ಉರಗವನು ತುಡುಕುವಂದದಿ ತೋರಿತಾಗವನ ಮನಸಿಂಗೆ
ಜಪಿಸುತಿದ್ದನು ತಂನ ಮನದೊಳಗೆ ಜೀವ ಮಂತ್ರಾ ೧

ತೋರಿ ಬಲು ಸಾಹಸವ ತವಕದಲಿ ತಂನ ಭುಜ
ನೇರದಲಿ ನಿಲ್ಲಿಸಲು ನಿಬ್ಬರವು ತನಗಾಗಿ ಹರಣ
ಹಾರುತಲಿ ಕಳವಳಿಸಿದನದೇನೆಂಬೆ
ಮೀರಿ ಅಲುಗಿದವಾಗ ಕೈಕಾಲುಗಳು ಬಿಡದೆ
ವಾಮದೇವನ ಧನುವು ಯೇರುಕಿವಿಗವೆ ಮಾತ್ರಾ
ಉಳಿದುದಾ ಕೂಟಕ್ಕೆ ಶೇರದೆಂಬುವ ಕಾರ್ಯ
ಖಂಬಲಸಿ ಕೆಡುವಂತೆ ಬಿಲ್ಲು ಮ್ಯಾಲೊರಗಿ ಭೂಮಿಗೆ ಬಿದ್ದನೂ ೨

## ೫೨೪

ಯೇನು ಹೇಳಲವನ ಭವಣಿಯೂ ಯರವಾಯಿತವಗ
ದಾನವೇಂದ್ರ ಧರಿಯೊಳೋರಗಲೂ
ಮಾನಹೀನನಾದೆನೆಂಬುದೇನು ಮನದಿ ತೋರದಂದು
ಹೀನಸ್ವರದಿ ಹತ್ತು ಮುಖದಿ ಕೋದಿ ವರನು
ಕರಿವುತ್ತಿದ್ದನೇನಯ ಹೇಳಲಿ

ಮಂದಹಾಸದಿಂದ ಸಕಲರೂ ಮುಸಕಿಟ್ಟು ನಗುತ
ಛಂದದಿಂದ ಚರ್ಚೆಯಾಡ್ವರೂ
ಮಂದಮತಿಗೆ ಗರುಡಿಯಾದ ಮತ್ತರಾವಣೇಶರಂಗ
ಬಂದು ಕೋದಂಡವೆಂಬ ಬಾಲೆ ಮಾಲೆಹಾಕಿಬಿಟ್ಟಳೇನೂ ೧

ದೆಸೆಗೆಡಿಸಿದವಾಗ ಮಕುಟವು ಯದಿಯಲ್ಲಿ ಹಾರ
ಪ್ರಸರವೆಲ್ಲ ಹರಿದುಹೋದವೋ
ರಸದ ಲಂಪಟಕ್ಕ ನರಿಯೂ ಇಕ್ಷುದಂಡ ಖಂಡಿಸಲ್ಕೆ
ರಸನ ಸಿಲುಕಿ ಮಿಡುಕುವಂತೆ ರಕ್ಕಸೇಂದ್ರ ಮರುಗುತಿದ್ದನೇನು ೨

ಬಸವಳದೀದೂರು ಧೀರವದನದೀ ಬಸಿಯುವದು ಕಂಡೂ
ಮಸಗಿ ದನುಜರೆಲ್ಲ ತೀವ್ರದಿ
ಘಸಣಿಗೊಳಿಸುತಿದ್ದ ಧನುವ ಕೊಸರಿ ಕಡಿಗೆ ತೆಗೆದು ಬ್ಯಾಗ
ದಶಮುಖನಿಗೆ ಆಲವಟ್ಟವಾಗ ಬೀಸುತಿದ್ದರಯ್ಯಾ ೩

## ೫೨೫

ಇದು ಯೇನು ಸೋಜಿಗವು ಇವಗಪೂರ್ವದೊಳಂದು
ಪದುಮಭವ ಭವರೊಲಿದು ಕೊಟ್ಟವರ ಬಲುಮಿಯಲಿ
ಉಳಿದನಲ್ಲದೆ ಬ್ಯಾರೆ ಬಿಲ್ಲುಬಿದ್ದವನಸುವು ಉಳಿದುದೇನಾಶ್ಚರ್ಯ
ವೆಂದು ಮಾತಾಡುತಿರೆ ಇತ್ತ ರಾವಣ ತಂನ ಮನದಿ ಚಿಂತಿಯ ತಾಳಿ
ಚೇತರಿಸಿಕೊಂಡೆದ್ದು ಕುಳಿತು ಮಾತಾಡಿದನು ಮತ್ತ ಸೀತಿಯನಾನು
ಕಳವಿನಲಿ ಕೊಂಡೊಯ್ವೆನೆನುತ ಲಜ್ಜಿಯಲಿಂದ
ಲಗುಬಿಗಿಯೊಳನುವಾಗಿ
ತೆರಳಿದನು ತಂನ ಪಟ್ಟಣವೆಂಬ ಲಂಕಿಗಾಗ ೧

ಘನತರ ಪರಾಕ್ರಮದ ರಾಯರೆಲ್ಲರು ಬ್ಯಾಗ
ಜನಕಜಯ ಹಂಬಲವ ಬಿಟ್ಟು ಮಾತಾಡಿದರೂ
ಬಲಿಯನೊಡ್ಡಿದನಿವನೂ ಬೇಕೆಂದು ನಮಗೀಕಿ
ವಲಿಯ ಗುಡದಂದದಲಿ ಸಾಕೀತನೊಳು ಬರಿದೆ
ಮಾತಾಡಲೇನಹುದು ನೀತಿಯಿಂದಲಿ ನಮ್ಮ
ಪುರಕ ತೆರಳುವನೆಂದು ಮಾತಾಡುವದು ಕೇಳಿ
ಮನವ ಯೋಚನೆಯಿಂದ ಜನಕ ಸೀತಿಯ
ಸರ್ವಜನಕ ತೋರಿಸು ಮನದಿ ಬಂದವರಿಂಗೆ
ಮಾಲಿ ಹಾಕಲಿ ಯೆನುತ ಅನುಜನಿಗೆ ಪೇಳುತಿರು
ವನಿತರೊಳ್ ಕೌಸಿಕನು ಶ್ರೀರಾಮಗಂದನಾಗ ೨

## ೫೨೬

ಯಾಕ ಕುಳಿತಿದಿ ನೀ ಯೇಳೋ ಏ ರಾಮ ನೀ
ಯಾಕ ಕುಳಿತಿದಿ ಯೇಳೂ ಯೇನು ಯೋಚನಿ ಪೇಳೋ
ಲೋಕನಾಯಕ ಕ್ರಪಾಳೂ ಯೇ ರಾಮ ನೀ

ಜನಕನಲ್ಲಿಗೆ ನೀ ಬಂದಾ ಸುದ್ದಿಯೂ
ನಿಂನಾ ಜನಕ ದಶರಥಗಿಲ್ಲೆಂಬಾ

ಅನುಮಾನವೆಂಬುದು ಮನಸಿನೊಳಾಗಿರುವದೇ
ವನಜನಾಭನೆ ನೀ ಪೇಳೊ ಯೇ ರಾಘವಾ ೧

ತಂದಿ ವಚನಾದಿ ನೀ ಯಂನಾ ಮಖವ
ರಕ್ಷಿಸಾ ಬಂದೂ ತಾಟಕಿಯೇಳಂನಾ
ಛಂದದಿಂದವಳನೂ ಕೊಂದುಹಾಕಿದಾ ಕರ
ನೊಂದುಕೊಂಡಿಹವು ಯೇನೂ ಯೇ ರಾಘವಾ ೨

ಧೀರಾ ಗಂಭೀರ ಉದಾರಾ ಸರ್ವಾರಾಧಾರಾ
ಕ್ಷೀರಸಾಗರಾ ಮಂದೀರಾ
ಆರು ಅರಿಯದಂತೆ ಅಮೃತವೃಂದದೊಳಿರೆ
ಸಾರುತಾಲಿಹವ್ರೋ ಶೃತಿಯೂ ನಿಂನ ಕೀರ್ತಿಯೂ ೩

## ೫೨೭

ದಿನಕರಕೋಟಿ ಲಾವಂಣ್ಯಾ ಜಗದೇಕ ಶರಂಣ್ಯಾ
ವನಜಾರಿಧರನ ಧನುವನೆತ್ತಿ ಬ್ಯಾಗದಿ
ಜನಕ ನಂದಿನಿಯ ಕೈಪಿಡಿಯೊ ನೀರಾಮಾ

ಮನುಜಾಕಾರ ಸುಲೀಲಾ ಸಂತತ ವನಮಾಲಾ
ಮನುಕುಲಾಗ್ರಣಿ ಮಹೀಪಾಲನ ಸೀಲಾ
ಚಿನುಮಯಾತ್ಮನೆ ಕೌಂಸಲ್ಯಾ ಬಾಲಾ ೧

ರಾಜರ ಭೂಜ ಕುಠಾರಾ ರಾಜಿತ ಮಣಿಹಾರಾ
ರಾಜೀವಾಂಬಕ ರಘುವಂಶ ವುದ್ಧಾರಾ
ನೈಜ ಮನೋಜನ ಪಡೆದ ಗಂಭೀರಾ ೨

ಹರನ ವುಪಾಸನ ಮೂರ್ತಿ ಸರ್ವರ ಚಕ್ರವರ್ತಿ
ಕರುಣದಿ ಮುನಿಸತಿಯಳನೆ ಉದ್ಧರಿಸಿ
ಪರಮ ಪಾವನನೇ ನೀ ಪಡದ್ಯೋ ಸತ್ಕೀರ್ತಿ ೩

## ೫೨೮

### ಸೀಸಪದ್ಯ

ಭಾಳನೇತ್ರನ ಧನುವ ಬ್ಯಾಗದಲಿ ಹೆದೆಗೊಳಿಸಿ
ಸೀಲ ಮತಿಯುತಳಾದ ಸೀತಿಯನು ಕೈವಿಡಿದು
ಸಕಲಜನಮನಕಿಂನು ಹರುಷವನು ಬಡಿಶೆನುವ
ಮುನಿಯ ವಚನವುಕೇಳಿ ಮೇಲುಮನದುಬ್ಬಿನಲಿ
ನಿಂದಲು ಸರಾಗದಲಿ ಬಾಲನಿವನಲ್ಲ ಸಿರಿಲೋಲನಿದು
ಬೆರಗೇನು ಶೇಲಾಗಿ ಲೋಕದಲಿ ತೋರುತಿಹ
ವಿಧಿ ಪಡದ ತಂದಿಯೊ ಇವನು
ಸಾಲವೆಂಮಯ ಮತಿಯು ಪಡಿಗಟ್ಟುವದಕಿಂನು
ವೇದಗಳು ಕಡೆಗಾಣದಾದವದನ್ಹೇಳ್ವವೆ ೧

ಚರಣನಖ ರುಚಿನೋಡೆ ಚಲುವ ತಳಿರಿಡಿದಿಹವು
ಸರಸಗುಣ ಸಂಪಂನ ಸರ್ವಾಂತರಾತ್ಮಕನು
ಪರಮ ತೇಜೋಮಯದಿ ನೃಪಸಭಾ ಮಧ್ಯದಲಿ
ಸುರಕದಂಬಕ ಸುಧಾ ಸೂತಿಧರನೆಂಬಂತೆ
ನೆರೆದ ಜನರೆಲ್ಲರ್ಗೆ ರಾಜನಂದನಂತೆ
ಅರಸರೆಲ್ಲರಿಗೀತನಧಿಕಾರಿಯಾದಂತೆ ತರುಣಿಯರ
ಕಣ್ಣಳಿಗೆ ಪೂಗಣೆಯನೆಂಬಂತೆ ಕಾಣಿಸಿದನೀಪರಿಯಲೀ ೨

ಜಾತಸಖಿ ನಿವಹದಲಿ ಜನಜನಿತವಾದುದ್ಯೆ
ಈತನಿರವುಳ್ಳವನು ಅವನಿಜೆಗೆ ವರನೆನುತ
ಮನದಿ ನಿಶ್ಚೈಸಿದರು ಮಾನಿನಿಯರೆಲ್ಲಾರೂ
ಖ್ಯಾತ ಶಿವ ಚಾಪವನು ಯತ್ತಲೇನಿವನೋಮೆ
ಯತ್ತದಿದ್ದರು ಸರಿಯು ಮತ್ತ ಪ್ರೀತಿಯ ವಚನ
ವೊಳಗಿರುವ ಸಮಯದಲಿ ರಾಘವನ ಕಂಡಳ್ಯೆ
ರಾಜಸಭೆಯೊಳು ಸೀತೆ ಸ್ವಾತಿಯ ಘನೋದಕದ
ಶುಕ್ತಿ ಬಾಯಿದೆರದಂತೆ ಜಾತಫಲ ಪಕ್ವವಿರೆ

ಕೀರಮನವಿಟ್ಟಂತೆ ಆತುರದಿ ಕಡುಬಡವ
ನತಿಧನವ ಕಂಡಂತೆ ಚಾತಕವು ಚಂದ್ರಿಕಿಯ
ಕಂಡು ನೆಲಿದೊಲಿವಂತೆ ಸೀತೆ ಶ್ರೀ ರಾಮಚಂದ್ರನು
ತಂನ ಕಣ್ಗೊನೆಗಳಿಂದಾಗ ನೋಡಿ ಹರುಷಿತಳಾದಳೂ ೩

ಬಂದು ಬಲು ಬ್ಯಾಗದಲಿ ಧನುವ ಪಿಡಿದನು ಕರದಿ
ಮುಂದಿರುವ ಜನರಿಗಿದು ಕಂಡು ಕಾಣದೊಯನಲು
ಕಂದ ಕರಿಕರದಿಂದ ಇಕ್ಷುದಂಡವ ಮುರಿದ
ಅಂದವಾಯಿತು ಆಗ ನಿರಿನಿಳಿಲು ನಿಟಿಲೆಂದು
ನೊಂದ ಭಾರಣಿಯಿಂದಲಿರಲು ಕರ್ನಾಂತರಕ
ಕಳದೆಳದು ಇಕ್ಕಡಿಯ ಗೈದ ಕ್ಷಣ ಮಾತ್ರದಲಿ
ಹೊಂದಿ ಹೊಂದುಳಿಯಿಂದ ಸುರಕುಸುಮ ಮಂದರದ
ಮಾಲಿಯನು ರಾಘವನ ಕೊರಳಿಗ್ಹಾಕುತ ಸೀತ
ಕಾಂತನಂಘ್ರಿಗೆ ಬಾಗಿ ಸಂದಿಸಿದ ನಸುಲಜ್ಜೆ
ಸೊಬಗಿನಲಿ ನಿಂತಳಾಗ ೪

ಹರುಷವಾಯ ಕಡಲಂದು ಜನಕನಿಗೆ ಸಹಿ ತಾಗಿ
ಸುರರಲರು ಸೂಸಿದರ ಇಕ್ಕೆಲದೊಳಾ ನಕವು
ಭರದಿ ಮೊಳಗುವ ಧ್ವನಿಗೆ ದಶದಿಕ್ಕು ಮುಸುಗುತಿರೆ
ಪರಮ ವೈಭವದಿಂದ ದಂಡಿಗೆಯಲಿರಿಸುತಲಿ
ಕರೆದೌದರೈ ಬ್ಯಾಗ ರಾಜಮಂದಿರಕಾಗಿ
ಹರದರಾಕ್ಷಣದೊಳಗ ನೆರದ ಪೃಥ್ವೀಶ್ವರರು
ಸರಸಿಜೋದ್ಭವ ಭವರು ವೋಗುತಿರೆ ಬಳಿಕಲ್ಲಿ
ಯರಡೈದು ರಥನೃಪನ ನಂದನರು ಇವರೆಂದು -
ಪರಮ ಮುನಿ ಕ್ಯೊಸಿಕನು ಜನಕನಿಗೆ ಪೇಳುತಲಿ
ಸರಿದ ತಂನಾಶ್ರಮಕ ಇತ್ತ ಜನಕನು ತಂನ
ಮಗಳ ಮದುವೆಯ ಮಹೋತ್ಸವಕಾಗಿ ನೆನೆದನೈ
ಬಿಯ್ಯಾಗರ ಬರವಾ ೫

## ೫೨೯

ಮದುವೆಯ ವೈಭವ ಮತ್ತ ಬಂಣಿಸುವೆನು
ಮುದದಿ ಕೋವಿದರು ಕೇಳುವದಿದನೂ
ವದಗಿಸಿ ಪತ್ರಿಕೆಗಳನು ರಚಿಸಿ
ಚದುರಾನೆನಿಸಿ ಮಂತ್ರಿಯ ಕರಸಿ ೦

ಬರಸೀದ ಬಳಿಕ ವಾಲಿಯನು ಸುಧಾಮನ
ವರಶತ ನಂದನರನುಸರಿಸಿ
ಕರಿತುರಗ ಕಾಲಾಳುಗಳನು ಕೊಟ್ಟು
ಯರಡ್ಯೆದುರಥನ ಪುರಕ ಕಳುಹಿದಾ ೧

ಹರಿದು ಬಂದಾಕ್ಷಣ ಹರಿದಶ್ವಕುಲನೃಪ
ನರಮುನಿ ಪೆರ್ಬಾಗಿಲಲಿ ನಿಲ್ಲಲೂ
ಕರದಂಡ ಧೃತರಿವರಾಗ ಮನದ ಸ್ಥಿತಿ
ವರದಾರಿ ವಳ ಪೊಕ್ಕು ವಹಿಲದಿಂದ ೨

ಧರಣೀಪ ದಶರಥನೋಲಗ ಸಮಯವ
ನರಿದು ಬಂದನು ಸೂಧಾಮನಾಗ
ಕರದೊಳಾಗಿರಿಸಿದ ಬಿಂನವತ್ತಳತೀಯ
ಸರಸಾದಿ ಕೊಟ್ಟ ಶತಾನಂದಾ ನೊ ೩

ಅರಸಾನಾ ಬಳಿಕ ಜನಕ ಮಂತ್ರೀಶ್ವರನು
ಓರಿದು ಮಂನಿಸಿ ಪ್ರೀತಿಯ ವಚನದಿಂದಾ
ವರಸಿಂಹಾಸನದ ಸರಿಸರ ಕುಳ್ಳಿರಿಸಿತಾ
ಕರದವರನು ಕೇಳಿದ ಮಹೀಪಾಲಾ ೪

ಕುಶಲಾವೆ ಜನಕನು ಕುಶಿಪತಾಕನು ಮತ್ತೆ
ಕುಸುಮತೀಶನ ಬಂಧೂ ಜನರೆನಲೂ
ಕುಶಲವರ್ಗಗಳು ಜೀಯ ಕೂರ್ಮಿಯ ವಿವಾಹದ
ವಸಗಿಯ ವಾಲಿ ವಾಚಿಸು ಯಂದರಾಗ ೫

## ೫೩೦

### ದ್ವಿಪದಿ

ವಿಸ್ತರಿಸಿ ಕೇಳಿರ್‍ಯೆ ಬರದಿದ್ದ ಬರಹವನು
ಸ್ವಸ್ತಿ ಶ್ರೀಮದ್ರಾಜ ರಾಜಮಸ್ತರ ರನ್ನ
ವಿಸ್ತಾರ ಗುಣಪೂರ್ಣ ವ್ರಜನ ವರ್ಜಿತ ಸಕಲ
ಭೂಭೂಜಾತನ ಪಾಲ ಪಂಕೇಜ ಸತತ ಸ
ತ್ಯಾವಿರಗ ಭಸ್ತಿಕುಲ ಜಾತ ಪ್ರಖ್ಯಾತ
ಸಂಕೇತ ಪುರನಾಥ ವಿನ್ಯಸ್ತ ವೈಭವಗ
ಜನಕ ಭೂಪತಿ ಬಿನ್ನ ಇಂತಿದರ ಮೇಲ್‌ಗಾರ್ಯ
ದನುವ ಚಿತ್ತೈಸಖಿಳ ರಾಯರ ವಿಡಾಯದಲಿ

## ೫೩೧

ನಿಂತು ನಿಲಗೆಡಿಸಿಹರ ಚಾಪವನು ಗೆಲಿದೊಲಿಸಿದ್ಯೆ
ರಾಮ ಜಾನಕಿಯವಗು ಮಿಗೆ ಮಹೋತ್ಸವಕ
ವದಗಿ ಬರುವದು ಬಂಧೂಜನ ಸಹಿತ ಬ್ಯಾಗದಲಿ
ಹದನವೀ ಪರಿಯಲಿರುತಿದ್ದುದಾ ಲಿಖಿತದೀ ೧

ಇನಕುಲಾಗ್ರಣಿ ಕೇಳಿ ಏನಿದೆತ್ತಣ ಸುದ್ದಿ
ಅನುಪಮ ತೇಜೋಧನನ ಮಖದ ರಕ್ಷಣೆಗಾಗಿ
ಮತ್ಸೂನುಗಳು ಪೋದರಿದನರಿದು ಬೆರಗಾದೆ
ವತ್ಸರಿಗೆ ಪರಿಣಯದ ವಾರ್ತೆ ಬಂದುದು ಒಳಿತು
ಯಂತಿದರ ಮೂಲ ಕಾರಣವೇನು ಪೇಳೆನಲು
ಗೈತುಮನ ನಂದನನು ಬೆಸಸಿದನು ತಾನಾಗ
ಮಖದ ಪಾಲಸಿ ಮ್ಯಾಲೆ ಹಸನಾದ ಮಾನಿನಿಯ
ಶಾಪದ ವಿಮೊಚನಿಯ ಇಂದುಧರ ಚಾಪವನು
ಇಕ್ಕಡಿಯ ಗೈದಿಳಾನಂದಿನಿಯ ಕರಗ್ರಹಣ

ಕಥನದುದ್ಯೋಗವನು ಚಿತ್ತೈಸಿ ಬೀಡಿಕಿಯ
ಮನಿಗವರ ಬೀಳ್ಕೊಟ್ಟು ಇತ್ತ ಪರುಠವಿಸಿದನು ಪಯಣಕಾಗ ೨

## ೫೩೨

ಅರಸು ದಶರಥಾ ತಂನ ಅಖಿಳ ವೈಭವಾದಿಂದ
ಹೊರಟ ಪರಿಯೂ ಹೇಳೂವೆ ಹರುಷದೋರುವೆ

ಪುರವ ಶೃಂಗರೀಶೆಂದೂ ಪದುಳದಿಂದಾ ನುಡಿಯಲೂ
ಪರಮ ಕೌಸಲಾ ಸುಮಂತಾ ಘಂನಧೀಮಂತಾ
ಧರಣಿಪಾನಾ ನೇಮದಂತಿರಿಸಿ ಝುಗಿಪರತ್ನಾ
ಭರಣವಸನಾ ಸುಗಂಧ ತೆಗಸಿ ತ್ವರದಿಂದಾ ೧

ಅಗಣಿತಾದ ಪೆಟ್ಟಿಗೆ ತೀವಿ ಕಿಕ್ಕಿರೀ ಸಾಲೂ
ಬಿಗಿಸಿ ಭಂಡೀಗಳನೆಲ್ಲಾ ನೋಡಲಳವಲ್ಲಾ
ಬಗಿಬಗಿಯ ಕೊಟ್ಟಗಿ ಸಾಲೂ ಸಂದಣೀಸಾಲೂ
ನಗರಾವಾ ಬಿಟ್ಟೂ ಸಾಗಿಸಿ ಭಾರಾ ಹೊರಿಸಿ ೨

ಕರಿತುರಗಶಂದನಾ ಕವಿದು ಹಂಜರೀ ಸಾಲೂ
ಅರಸೀಯ್ಯರೀಗ ಅಂದಣವೂ ಬಂದವು

ಸರಸಿಜಾಕ್ಷಿಯರೇರಿ ಸಕಲ ಸೌರಣಿಯಿಂದ
ಮೆರವುತ್ತೈದೀದಾರು ನೋಡಿ ಮುದದಿಂದ ಕೂಡಿ ೩

ವರಜಯಂತನೆಂಬನಾಪಟ್ಟಣಾದ ರಕ್ಷಿಗೆ
ಇರಸಿ ಮನುಕುಲಾಗ್ರಣಿಯಾ ಸೊಗುಣಾ ಮಣಿಯೂ
ಭರದಿ ಭದ್ರಗಜನಾ ಬಂದಡರಿ ಭೂಪತೀ
ಬೆಂಗಾವಲಾದರೂ ಭಟರೂ ಭೂರಿ ಧೀರರೂ ೪

ಭೇರಿ ತಂಮಟ ಢಕ್ಕಾ ಪಟಹ ನಿಸ್ಸಾಳಾವೂ
ಭೋರೆಂಬೋ ಕಾಳಿಗಳ ಸೂಳೈಸಲೂ

ನೀರಜಾಕ್ಷಿಯರ್ಥರಿವಾಣದಾರತೀಯಲಿ
ಪೂರಿತಾ ಸ್ವರಗಳಿಂದಾ ಪಾಡಿಬಲು ಛಂದಾ ೫

ಸಾರುವಾರಾಗಢಣದಿ ಸಂಗೀತಾದ ನೃತ್ಯದಿ
ವಾರಾಂಗನೀಯ ವಲಿದೂ ವಧೂ ಜನಾರೈದೂ
ತೇರೂ ತೇಜಿ ವಾರಣಾ ಹಾರುತ ಪದ ಜನಾ
ಮೀರಿ ನಿಬ್ಬಣಾವೆತ್ತಾಲೂ ದಿಕ್ಕು ಮುಸುಕಲು ೬

ಗುರುವಸಿಷ್ಠ ಸುಮಂತಾ ಭರತ ಮುಖ್ಯರಗೂಡಿ
ಪರ ಜನಾ ಪೌರ ಜನಾದು ಭಾರಾದಿಂದಾ
ತರಣಿಕುಲದ ಸಂಪಂನಾ ತವಕಾದಿಂದಯೋಧ್ಯಾವಾ
ಸರಸಾದಿ ಬಿಟ್ಟೂ ಬಂದಾನೂ ಪಯಣವಾದಾನೊ ೭

## ೫೩೩

### ದ್ವಿಪದಿ

ಚಾತುರಂಗದ ಚಟುಲ ತರದ ಪದಗತಿಗಾಗ
ಧಾತ್ರಿ ನುಗ್ಗುವ ಪರಿಯು ಧುಂಮಿಕ್ಕಿ ಬರುತಿರುವ
ಸರಸ ವೈಭವವೆಂತೊ ಮಾರಂನ ಕೊಳುಗುಳವೊ
ಧುರವಸಂತನ ಬರವೊ ಹೇಳಲಸದಳವಾಗಿ
ದಿವಸ ಹದಿನೈದಕ್ಕ ಪಯಣ ಮೇಲ್ ಪಯಣದಲಿ
ಸಾರಿದರು ಇವರಾಗ ಜನಕಭೂಪನ ಪುರವ
ಬಳಿಕಾ ವಿದೇಹಜನು ಬಲು ಮಂಗಳೋತ್ಸವದಿ
ಕಳಸ ಕಂನಡಿಯಿಂದ ಕಲಕೀರ ವಾಣಿಯರು
ಸ್ವರವೆತ್ತಿ ಪಾಡುತ್ತ ನೃತ್ಯನಭಿನವದಿಂದ
ಬಿರುದಿನ ಗಢಾವಣಿಯ ಬಿಂಕವನು ಬೀರುತಲಿ
ಬೋರಿಡುವ ಚಿಣಿಕಾಳಿ ಹೆಗ್ಗಾಳಿಗಳು ಸಹಿತ
ಹಾರಿ ತೋರುವ ಬಾಣ ಭೇರಿ ದುಂದುಭಿ ರವದೊಳೂ ೧

ಝುಗಝುಗಿಪ ಬೊಂಬಾಳ ಕೈದಿವೀಗಿಯ ಬೆಳಗು
ಅಗಣಿತದಿ ಝಳುಪಿಸಲು ಇರುಳು ಈ ಪರಿಯಿಂದ
ಇದಿರುಗೊಂಡ್ಯೊದರ್‍ಯೆ ಇನಕುಲದ ದಶರಥನ
ಮುದದಿ ಮಹಿಷಿಯರಿಂಗೆ ಜಂನಿವಾಸವು ಸದನ
ಅರಸಿಯರ ಆಗಾರ ಅತಿ ನೂತನವು ಮಾಡಿ
ಪರಿಚಾರರಿಕ್ಕೆಲದಿ ಯಡೆಯಾಡುತಿರೆ ಬಿಡದೆ
ವರಸುಧಾಮನು ತಂನ ಸಹಭವನನೊಡಗೊಂಡೂ
ಮಿಥಳಭೂಪತಿ ಬಂದಮಿ ಹಿರಜಾನ್ವಯದಲಿ
ಅತಿಹಿತದಲಿದರೆದ್ದು ಅವನಿಪತಿ ತರ್ಕೈಸಿ
ಘರಿ ಆಸನೋರ್ಧದಲಿ ಕುಳ್ಳಿರಿಸಲಾ ನೃಪತಿ
ಕರವ ಮುಗಿದಿಂತೆಂದನೂ ೨

ಇಂದು ಮೊದಲಾಗೆಮಗ ಬಿಯ್ಯಾಗರು ನೀವಾಗೆ
ಹೊಂದಿದತಿ ಭಾಗ್ಯವನು ಕಂಡದ್ದು ನೋಡಲ್ಕೆ
ಪೂರ್ವ ಪುಣ್ಯದ ಫಲವು ಹುಶಿಯಲ್ಲವೆನುತಾಗ
ಸಾರ್ವಭೌಮಗ ನುಡಿದು ಗುರುವಸಿಷ್ಠನಿಗೆರಗಿ
ಜನಕನಿರೆ ಬಳಿಕಾಗ ಮನುಕುಲೋತ್ತಮ
ನುಡಿದನಾಗ ವೈದೇಹಿ ಜಗ ರಾಜಋಷಿ
ಯೆಂಬುವರೊಳುತ್ತುಮನು ನೀನಯ್ಯ
ರಾಜರೊಳಗಗ್ಗಳನೂ ಯನುತ ಕೊಂಡಾಡುತಿರೆ
ಅನಿತರೋಳ್ ವಸಿಷ್ಠಾ ಜನಕನನ್ವಯಕೇಳಿ
ಗ್ಯೊತುಮಾತ್ಮಜ ಪೇಳ್ದ ನಿಮಿಕುಲದ ರಾಜೆಳ್ಗೆ
ಪಾರಂಪರಿಯು ಬಿಡದೆ ಸಚ್ಚರಿತ ಧಾರ್ಮಿಕದ
ಮೂಲವನು ವಂದುಳಿಸದೆ ೩

ಮರಳಿ ಕೇಳಿದನಾಗ ಮತ್ತಾ ಶತಾನಂದ
ಅರುಹಬೇಕೆನಗಿಂನು ತಪನ ಕುಲರೇಳಿಗೆಯನೆಂದು
ವಸಿಷ್ಠರನು ಬೆಸಗೊಳಲ್ಕವನೊರದ
ದ್ರುಹಿಣನಿಗೆ ಕಶ್ಯಪನು ಕಶ್ಯಪಗ ಕಮಲಸಖ
ಕಮಲಸಖಗಾಗ ಮನುವು ಮನುವಿಗಾದನು ಕುಕ್ಷಿ

ಕುಕ್ಷಿಗಾವಿಕ್ಷ್ವಾಂಕು ವಿಕ್ಷ್ವಾಂಕುನಿಗೆ ದಿಲಿಪ
ದಿಲಿಪಂಗೆ ರಘುರಾಜ ರಘುವಿಗಾ ಮಾಂಧಾತ
ಮಾಂಧಾತನಿಗೆ ಸಗರ ಸಗರಗ ಭಗೀರಥನು
ಭಗೀರಥಗ ಅಜರಾಜ ಅಜಗೀತ ದಶರಥನು
ದಶರಥನಿಗಾತ್ಮಜರು ನಾಲುವರು ಕೇಳಯ್ಯಾ
ಹಿರಿಯ ಮಗ ಶ್ರೀ ರಾಮ ತರುವಾಯ ಭರತನೈ
ಲಕ್ಷ್ಮಣನು ಶತ್ರುಘ್ನಾರವಳಿಗಳು ನೋಡೆಂದನೂ ೪

## ೫೩೪

ಜನಕಾ ಭೂಪತೀ ಕೇಳೋ ಯನ ಮನದಾ ಯೋಚನಿ ಪೇಳೂ

ರಾಜಾ ಮೌಳಿಯೊ ನೀನು ನಿಯತಾ ಧರ್ಮದಿ ಬಾಹಳಾ
ತೇಜಾ ಉಳ್ಳವನೆಂದು ಧರದೀ ಬಂಣಿಸುತಿಪರೊ ೧

ಕೊಡುಕೊಳ್ಳುವದಕಿಬ್ಬಾರೊಳು ಸಂದೇಹವೇ ಬ್ಯಾಡಾ
ನಡೆನೂಡಿಯೊಳಗೂಭಯಾ ನಡತೀ ಸಂಮತವಯ್ಯಾ ೨

ಇಂನೊಂದಾರಲಿ ಯನಗ ಇರವುವದೋ ಸಂದೇಹ್ಯಾ
ಮುಂನದರ ಸಂಶಯವಾ ಬಿಡಿಸಯ್ಯಾ ಮಹಾರಾಯಾ ೩

ಸಲಹಿಕೊಂಡನು ಜನಕಾ ನೆಲದೀ ಬಂದಳು ಸೀತೆ
ಕುಲಜಾಲಳಲ್ಲೆಂಬುವದೂ ಹಲವಾರಾಡುವರಿದನೂ ೪

ಅದುಯಂನಾ ಚಿತ್ತದಲಿ ಉಲಕೀ ಉಂಮಳಿಸುವದೂ
ಹದನಾವೇನಿರುತಿಹದು ಚದುರ ಪೇಳಿದು ಬಿಡದೂ ೫

ಮುನಿಪಾ ಕೇಳ್ಳೈ ಮೊದಲೂ ರಾಜಾಸೂಯವ ಮಾಡ್ದಾ
ಘನವಾದಾ ಮಖಭೂಮಿ ಶೋಧಿಸುತಿರಲಲ್ಲೆ ೬

ನೇಗಿಲಿಯಾ ಮೊನೆ ಸಿಲುಕಿ ಮನರೋಹಾಕರವಿರಲೂ
ಆಗಾ ಹೇಮದ ಕಮಲಾಕರ್ನಿಕಿಯಾ ಮಧ್ಯದಲಿ ೭

ಕೋಮಾಲೆ ಇರೆ ಕಂಡೂ ಮನದಿ ನಾನಂಜುತಲಿ
ಈ ಮಹಾತ್ಮದ ಸ್ಥಳವು ಸಾಕೆಂಬೊವಷ್ಟದಲಿ ೮

ದೇವಾ ಮುನಿಯು ಬಂದೂ ದಯದೀ ಧೈರ್ಯವಗೊಳಿಸಿ
ಆವಾ ಭೀತಿಯು ನಿನಗೆ ಬ್ಯಾಡೆನುತಾ ತಾ ನುಡಿದೂ ೯

ಲೋಕಾಮಾತೆಯು ಈಕಿ ಭೂಕಾಂತಾ ಕೇಳೆನುತ
ಏಕಾ ಚಿತ್ತದಿ ಬಿಡದೆ ಜೋಕೆ ಮಾಡೆನಗೆಂದೂ ೧೦

ಸೀತೆ ಎಂಬುವ ನಾಮಾಕರಣಾವಾತನೆ ಮಾಡಿ
ಪ್ರೀತೀಯ ವಚನದಲಿ ಮುಂದೆ ಈ ಪರಿ ನುಡಿದಾ ೧೧

ಮನುಜಾಕಾರವ ಧರಿಸಿ ಇನಕುಲೋದ್ಭವನೆನಿಸಿ
ಜನಿಸಿರುವಾ ಜಗದೀಶನೀಕೆ ಕೈಪಿಡಿಯುವಳೊ ೧೨

ಹರನಾ ಧನೂವನೊಡ್ಡಿ ಧರಣೀಶಾರನು ಬರಿಸೊ
ಮುರದೂ ತೋರುವರಾರೊ ಅವನೇ ವಿಷ್ಣುಯೆಂದಾ ೧೩

ತೆರನಾವೀಪರಿ ಇಹದೊ ವಿಥ್ಯಾವೆಳ್ಳಿನಿತಿಲ್ಲಾ
ಕುರುಣಿಶೆಂದೆನುತಾಗ ಸುರಮುನಿಯಾ ಸ್ಮರಿಸಿದನೂ ೧೪

ತುರಗೀ ತೂಳುವ ಶುಭ್ರಾ ಕಾಂತೀಯಾ ಸಿರಿಸಿನಲಿ
ಪರಮಾ ಪಾವನನೆಸದಾ ವರಕರದಾ ವೀಣೆಯಲೀ ೧೫

## ೫೩೫

### ಸೀಸಪದ್ಯ

ನಾರದ ಮುನೇಶ್ವರನ ಬರವ ಕಾಣುತಲಾಗ
ಧಾರುಣಿಪ ದಶರಥನು ಜನಕನೀರ್ವರುಗೂಡಿ
ಚಾರುತರ ಮಕುಟವನು ಚಾಚಿ ಪದಕೆರಗುತಿರೆ
ಸಾರ ಕರುಣದಲವರ ಹರಸಿ ವಿವಿಧಾರ್ಚನಿಯ
ಪೂರಣವು ಕೈಗೊಂಡು ಮನದಣಿಯ ಕೊಂಡಾಡಿ
ಧೀರದ್ವಯ ವಂಶಗಳು ಪೂತವೈ ಮೆಚ್ಚಿದೆವು
ನೀರಜಾಂಬಕಿ ಸೀತೆ ಮತ್ತೆ ರಾಘವರಿವರು

ನಾರಾಯಣನು ಲಕುಮಿ ಅವತರಣವೆಂದರುಹಿ
ತೋರಿ ಹರುಷವ ನೃಪರ ಇತ್ತಂಡ ಕೈಗೊಳಿಸಿ
ಮರಳಿ ಮತ್ತಾಕೆನುತ ಮನದಿಂದೊಡಂಬಡಿಸಿ
ಸಾರಿದನು ತಾನಾಗ ನೀರಜಾಸನನ ಪುರಕ ೧

ಅಮರಮುನಿ ನುಡಿಗೇಳಿ ಮದುವೆ ಪರುಠವಿಸಿದರು
ಗಮಕದಲಿ ರಘುವರಗ ದೇವಿ ಸೀತಿಯಳಂನು
ರಮಣನಾದನು ಬಳಿಕ ಊರ್ಮಿಳಿಗೆ ಲಕ್ಷ್ಮಣನು
ರಮಣೀಯ್ಯರಾಗಿರ್ದ ಭರತ ಶತ್ರುಘ್ನರ್ಗೆ
ಜನಕಾನುಜನಂದನನೆಹುರೆಂಬ ಶೃತಿಕೀರ್ತಿ ಶುಭಗಾರ್ತೆ
ರಮಣಿಯರು ತಾವೆನುತ ಕ್ರಮದಿ ನಿಶ್ಚೈಸಿದರು
ಗುರುವರನ ನೇಮದಲಿ ಅಮಿತವಾದ್ಯದಿ ಜಜಕ
ತಿರಿಗಿ ತಂನರಮನಿಗೆ ಗಮಿಸಿ ಉದ್ಯೋಗಿಸಿದ
ನಾಗನಂದೀಮುಖದ ಕಮನೀಯ ಸಂಭ್ರಮದಿ
ಮಣಿಮಯದ ವಿವಹಮನಿ ಮುತ್ತಿನ ಸುಹಾಸುವಿಕೆ
ನೂತನದ ವಿಸ್ತರದಿ ಸುಮನ ಪೂಜಿತ
ಕನಕದ್ವೈರಾಣಿ ತಂದಿತ್ತರೂ ೨

ತಪನೀಯ ಪಾತ್ರಿಗಳು ಚಂದನ ಸುಗಂಧಗಳು
ಸುಫಲ ಕುಸುಮಾಕ್ಷತಿಯು ಗೊರೋಚನದ
ಲಾಜವುಪಮ ರಹಿತಾಗಿದ್ದ ಭಾಸಂಗ ದೂರ್ವದಧಿ
ದುಕುಲ ಮಣಿ ಭೂಷಣವು ಅಪರಮಿತವಾಗಿಹವು
ಈ ಭವನ ವಳಯದಲಿ ಕೃಪಣ ವತ್ಸಲನ
ಪರಿಣಯವು ನಾನೇನೆಂಬೆ ವಿಮಲದಲಿ ಗೂಡಿರುವ
ಜನದ ವಿಸ್ತರ ಪೇಳ್ವ ವಿಪ್ರರರು ಕಲಾವಿದರು
ಸರಸಕವಿ ವಾಜ್ಞಿತರು ಸುಪ್ರತರ ಮಂತ್ರಜ್ಞರೆನಿಪ
ರಾಚಾರಿಯರು ಕ್ಲಿಪ್ತವಿಲ್ಲದ ಮುಖ್ಯ ಬಹುವಿಪಶ್ಚಿತ
ಜನರು ಬಂದು ನೆರದರು ಬ್ಯಾಗ ಮಂಟಪ ಮಧ್ಯದಲಿ
ದಶಧಾನ್ಯ ಭಕ್ಷದಿಂದೆಸೆದುದಾ ಭವನ ಮುಂದೆ ೩

ಸರಸ ತಾಳದ ಗತಿಯ ಮುರಜ ಭೇದನದದಿಂದ
ಕರವೆತ್ತಿ ಅಭಿನೈಸಿ ತೋರುತಿಹ ನರ್ತನದ
ವಾರಾಂಗನಿಯರಿರಲು ವೀಣೆಯನು ಮೀಟುತ್ತ
ಸ್ವರವೆತ್ತಿ ಪಾಡುತಿಹ ಗಾಯಕರ ಜನಜಾಲ
ತರುಣಿಯರ ಶುಭಗೀತ ಧರಣಿ ಅಮರರ ಸೂಕ್ತ
ಮಂತ್ರ ಸಾಂವತ್ಸರಿಕರಾಯತದ ರವವೆಸಿಯೆ
ಶ್ರೀರಾಮ ಲಕ್ಷ್ಮಣನು ಭರತ ಶತ್ರುಘ್ನರಾ
ಇಭದ ಮಸ್ತಕದಲ್ಲಿ ಶೋಭಿಸುತ ಬಂದಿಳಿದರಾಗ
ಬಲು ಸೊಗಸಿನಲ್ಲೀ ೪

ಏನೆಂಬೆ ಮಿಥುಳಿಪನ ಅತಿನೂತನದ ಭಾಗ್ಯ
ಕಾನಿಂನು ಯೆಣೆಗಾಣೇ ಜಗದಂತರಾತ್ಮಕನ
ಪದಪದ್ಮ ಯುಗಳವನು ಆನುಪೂರ್ವಕವಾಗಿ
ಅಭಿಷೇಚನವಗೈದು ಅಮಲ ತೀರ್ಥವು ಸಿರದಿ
ತಾನಾಂತ ತ್ರೈಜಗದಿ ಬಲು ಕೃತಾರ್ಥನು ಜನಕ
ಸಾನುರಾಗದಿ ಬಳಿಕ ಮಧುಪರ್ಕವನು ಮಾಡಿ
ಜ್ಞಾನಾತ್ಮನಿಗೆ ಬಿಡದೆ ಗುಡವು ಜೀರಿಗೆ ಸುತ್ತಿ
ಕ್ಷೋಣಿ ನಿರ್ಜರರೊದಗಿ ಮದುಮಕ್ಕಳನು ಬ್ಯಾಗ
ನಿಲಿಸಿ ಮೆಟ್ಟಕ್ಕಿಯಲಿ ಜಾಣಜೋಯಿಸ ಘಳಿಗಿ
ಬಟ್ಟಲದ ಮುಂದಿರಲು ಮಾಣದಲೆ ಅಂತರದ
ಪಟವಿಡಿದು ಉಭಯ ಗೋತ್ರೋಚ್ಚಾರಣೆಗಳಿಂದ
ನಾಮವೆತ್ತಿದರೂ ೫

## ೫೩೬

### ಶ್ಲೋಕ

ಅಜ ರಾಜೇಂದ್ರನಾತನೆ ಪ್ರಪೌತ್ರಾ
ನಿಜವೈ ದಶರಥನೆಂಬನೆ ಪೌತ್ರಾ
ಭಜಕಾ ವತ್ಸಲ ಮಖದಿ ಬಂದ ಪುತ್ರಾ
ತ್ರಿಜಗದ್ವಂದ್ಯನು ರಾಮ ನಾಮನೆ ವರಾ

## ೫೩೭

### ಶ್ಲೋಕ

ವಿದೇಹ ಭೂಪಾಲನ ಪ್ರಪೌತ್ರೀ
ಸದಾ ಸದ್ಗುಣನು ಜನಕನ ಪೌತ್ರೀ
ಸುಧಾಕರನ್ಯಾರಿ ಆಲಯಳ ಪುತ್ರೀ
ವಧೂಯನಿಸಿಹಳು ಸೀತೆ ಸುಚರಿತ್ರೀ

ಸಾವಧಾನವೆಮಂನೀ ಸಕಲ ಜನಂಗಳೂ ಸಾವಧಾನಾ
ದೇವ ನಾರಾಯಣಾ ಸಿರಿದೇವಿ ವಿವಹವೂ ಸಾವಧಾನಾ

ಭಾವ ಶುದ್ಧರಿಗೀದೂ ಬಹು ಪುಣ್ಯಾ ಕಥಿಯಿಯ್ಯಾ
ಸಾವಧಾನಾ ಕೇವಲಾ ವರಲೋಕಾ ಸಾಧನ ಕಾಣಿರೊ ೧

ಧರಣೀಯ ಭಾರಾವ ಪರಿಹರಿಸುವದಕ್ಕೆ ಸಾವಧಾನಾ
ವುರಗಾನಾ ಪರಿಯಂಕಾ ಉದಧಿ ಮಂದಿರ ಬಿಟ್ಟು ಸಾವಧಾನಾ ೨

ನರ ನಾಟಕದ ಕುರುವಿಡಿದನ್ನೌಶಧಿ ಸಾವಧಾನಾ
ವರಮಖದಲಿ ಜನಿಸಿದ ಸಂಧ್ಯಾವತಿಯೊಳೂ ಸಾವಧಾನಾ ೩

ಇಂದಿರೆ ತಾನೇವೆ ವೈದರ್ಭಭೂಪನೂ ಸಾವಧಾನಾ
ಅಂದದಿಯ ಜನಕ ಭೂಶುದ್ಧಿಗೈಯಲೂ ಸಾವಧಾನಾ ೪

ನೇಗೂಲಿ ತುದಿಗೊಂದಿ ನಯದ ಕಮಲದಲ್ಲಿ ಸಾವಧಾನಾ
ಸಾಗರಾದಣುಗೀಯೂ ಸೀತಾಭಿದಾನದಿ ಸಾವಧಾನಾ ೫

ಕಾಣೀಸೀ ಕಾಲಾ ವಾನೀಕ್ಷಿಸುತಿರಲಾಗಿಸಾವಧಾವ
ಜಾಣೌರಾದರ ಸಾರಾ ಜಂಗುಳಿಯಲಿ ನಿಂದೂ ಸಾವಧಾನಾ ೬

ಹರನ ಧನುವನೆತ್ತಿ ಮುರಿದಾನೆಂಬದರಿಂದ ಸಾವಧಾನಾ
ಸುರ ಕುಜದಲರ ಮಾಲಿಯು ರಾಮಚಂದ್ರಗ ಸಾವಧಾನಾ ೭

ಕೊರಳಿಗ್ಹಾಕಿದಳಂದು ಕೊನಬುಗಾರಿಕಿಯಿಂದ ಸಾವಧಾನಾ
ಸರಸಾದಿಂದ ನೆಲವ ಸಾಕ್ಷಿಲಿ ಕೈವಿಡಿದ ಸಾವಧಾನಾ ೮

ವೂರ್ಮಿಳೆಯೆಂಬಳಾ ಲಕ್ಷ್ಮಣನಿಗೆ ಕೊಟ್ಟಾ ಸಾವಧಾನಾ
ಕೂರ್ಮೆ ಇಂದನುಜಾನಂದಿನಿಯರೀರ್ವರಿಗಿತ್ತು ಸಾವಧಾನಾ ೯

ಧಾರಿಯನೆರದ ಜನಕ ಧಂನ್ಯಾ ಧಂನ್ಯನೂ ಸಾವಧಾನಾ
ಭೂರಿ ಸುಮ್ಮಾನದಿ ಜಯ ಜಯ ಎಂನಿರೊ ಸಾವಧಾನಾ ೧೦

ಸದಮಲಾತ್ಮನ ಸಚ್ಚರಿತ ಸಂಕೀರ್ತನಿ ಸಾವಧಾನಾ
ಇದನು ಕೇಳಿದ ಮಾತ್ರಾ ಇರದೋಡುವದು ಪಾಪಾ
ಸಾವಧಾನಾ ೧೧

## ೫೩೮

ಮಂಗಳಾತ್ಮಕ ಮಹೀಮಗಳ ಮದುವಿಯ ಸಕಲ
ಶೃಂಗಾರವೀವರಿಯು ಶೋಭಿಸಿದ ಬಳಿಕಾಗ
ಸುಳಿದರಾ ದಂಪತಿಗಳುರುತರದ ಮಂಜುಳದ
ವಿಲಸಿತದ ಮಣಿವೇದಿಕಿಗೆ ಹೋಮದ ನೆಲನನು
ಬಲಕ್ಹಾಕಿ ಬಂದೆಡಕ ಕುಳ್ಳಿರ್ದರ್‍ಯೆ ಬಿಡದೆ
ಅವರವರ ಪತ್ನಿಯರು ಲಲಿತೋಕ್ತಲಾಜೆಯನು
ವಿಧದಿಂದ ಮಾಡುತಲಿ ಬಿಯ್ಯಾಗರವರ್ಗವನು
ಬಿಜಗೈಸಿ ಮಂದಿರದಿ ಬಾಹಳ ಸಂಭ್ರಮದೊಳಾಗ ೧

ರಂಗು ರಾಜಿತ ರಚಿತ ರಮಣೀಯಕರವಾದ
ರಂಗವಾಲಿಯನಿಕ್ಕಿ ರತ್ನಮಯ ಮಣಿಗಳನು
ರಮ್ಯದಲಿ ಸಾಲ್ಗೊಳಿಸಿ ರಸಭರಿತ ಪಾಕವನು
ರಯದಿಂದ ರಾಜೇಂದ್ರ ಹಸನಾಗಿ ಮಾಡಿಸಿದನು
ರಹಶ್ಯದಿ ಪೇಳ್ವ ಭಕ್ಷ ಟೀ ಸೂರಿಗೆಯು
ಗುಳ್ಳುರಿಗೆ ಮಂಡಿಗೆಯು ಸೂಕ್ಷ್ಮತರವಾಗಿದ್ದ
ಶೇವಿಗೆಯು ಪೇಣಿ ಬಲುಗವಲಿ ಬಟ್ಟವಿ ಪರಡಿ
ಶುಭಕರದ ಪಾಯಿಸವು ನವ ಸುಕೇಸರಿ ಯುಂನಾ
ಶುಭ್ರಾಂನಾ ಚಿತ್ರಾಂನಾ ಮತ್ತಾಗದ ದ್ಯನ್ನವೂ ೨

ಸಾರು ಸಂಭಾರಗಳು ಸಮನಾಗಿ ಮಾಡುತಲಿ
ಪರಿಪರಿಯ ಶಾಖಗಳು ಪ್ರತ್ಯೇಕದಲ್ಲಿಸಿ
ಕರದಿರುವರಾಂಬೋಡಿ ಮೆಣಸು ಜೀರಗಿ ಸಹಿತ
ಹಪ್ಪಳಿಸು ಸಂಡಿಗೆಯು ಅಲ್ಲ ನೆಲ್ಲಿಯು
ನಿಂಬಿರಸದ ಕೊಸಂಮರಿಯು ಸಲ್ಲರಿತ ಮಧು ಕ್ಷೀರಾ
ಘೃತ ದಧಿಯು ಮೊದಲಾಗಿ ಯಲ್ಲವನು ಪರುಠವಿಸಿ
ಜೋತಿಗಳ ತಂದಿರಿಸಿ ನಿಲ್ಲದೆಲೆ ದಶರಥನ
ಪರಿವಾರ ವೈಭವದಿ ಕರಸುತಲಿ ವೈದೇಹ
ಭೂವರನು ನೆಲೆಗೊಳಿಸಿ ಭೂಜಾತಿ ಶ್ರೀರಾಮ
ರೀರ್ವರನು ಕುಳ್ಳಿರಿಸಿ ಅನುಜರೆಲ್ಲರಗೂಡ
ಸಾಗಿರುವ ಸಮಯದಲಿ ಉಭಯ ಪಾರೀಶ್ವದೊಳ
ಗಾದುದಾ ಹಾಸ್ಯ ರಚನೇ ೩

## ೫೩೯

### ಜನಕರಾಯನ ಕಡಿ ಅಂನುವದು

ಊಟಕ ಬಂದರು ನೋಡಿರಿ ಬೀಗಾರೂ ಇವರೆಲ್ಲಾರೂ
ಊಟಕ ಬಂದರು ನೋಡಿರಿ ಬೀಗರು
ಉಚಿತ ಪದಾರ್ಥದ ಸ್ವಾದವು ತಿಳಿಯದೆ
ಲಾಟಿಸಿ ರಭಸದಿ ಸವರುವ ರೀತಿಗೆ
ನೋಟಕ ಜನ ಬಲು ನಗುವುವರೂ ೦

ಅರಸಿನ ರಾಣಿಯರೆನಿಸುವರೂ
ಕರದಂಡೊಲಿಯುತ ಬೇಡುವರೂ
ತರುವರ ಕೈಯಿಂದಿಕ್ಕಿದು ಸಾಲದೆ
ಬೆರಸುವರೊಬ್ಬರದೊಬ್ಬರದೂ ೧

ಸಾಕೆಂಬುವರಿವರೊಳು ಕಾಣೆ
ಬೇಕೆಂಬುವ ಬಾಯೋಚ್ಚರಣೆ

ಮೂಕರ ತೆರದಲಿ ಮ್ಯಾಲಕ ನೋಡದೆ
ನೂಕುವರತಿ ನೂತನರಿವರೂ ೨

ಸುಗುಣಿಯರೆಲ್ಲರು ಮಾತಾಡಿ
ಸಿಗದೆಂಬುವ ಪರಿಯಲಿ ಮಾಡಿ
ಲಗುಬಿಗಿ ಲಜ್ಜೆಯು ಯಳ್ಳಿನಿತಿಲ್ಲದಿ
ಬಗಿಯಲುಂಬುವ ಬಳಕುವರೂ ೩

ಮಾಡಿದ ಸುಕೃತಕ ಜೋಡಿಲ್ಲಾ
ನೋಡಿದರಿಂಥವರೆಲ್ಲಿಲ್ಲಾ
ಹಾಡಿದರಪಹಾಶ್ಯಗಳೆಲ್ಲಾ
ಮಾಡವೆ ಇವು ಬಾಯಿಗಳಲ್ಲಾ ೪

ವಣಬಡಿವಾರರ ಮಿತಿಯಿಲ್ಲಾ
ಕೆಣಕಿದರಿವರೊಳಗ್ಗುರುಳಿಲ್ಲಾ
ಜನಮನಕಂಜುವರಿವರಲ್ಲಾ
ಜನಕಜಾಮಾತನ ಬಳಗೆಲ್ಲಾ ೫

## ೫೪೦

### ದಶರಥರಾಯನ ಕಡಿ ಅವರು ಅಂನುವದು

ಊಟಕ ಬಂದವರಲ್ಲಾ ಬೀಗಾರೂ ನಾವೆಲ್ಲಾರೂ
ಊಟಕ ಬಂದವರಲ್ಲಾ ಬೀಗರೂ
ಹಾಟಕ ಗರ್ಭನಪಿತ ನರನೆನಿಸುವ ನರ
ನಾಟಕ ರಾಮನ ಮದುವಿಯ ಸಂಭ್ರಮ
ನೋಟಕ ಬಂದವರಲ್ಲೆ ಹೊರ್ತು

ಸುರಲೋಕದ ಸರಿ ಸುಖಿಸುವರು
ಪರಮುಟ್ಟಿಕ ಕರಟವು ತರಲೂ
ಸರಿಯೆಂಬರೆ ಜನಗಳಹುವದ್ಯಾತಕ
ಕೊರತೆಯು ನಿಮಗಿರೆ ಕಳಿಸುವೆವೂ ೧

ಧರಣಿಜ ಬ್ಯಾಟ ಕಳೆಯದೆಂದೂ
ಅರಿದರಿದೀ ರಾಘವನೊಲಿದೂ
ಕರಸಿದ ನೆವನಕ ಕಲೆತೆವು ನೀವೀ
ಬರಿಮಾತಿನ ಬೂಟಕರಹುದಹುದು ೨

ಒಂದಾದರು ಆದರವಿಲ್ಲಾ
ಯೆಂದೆಂದಿಗು ಬಲ್ಲವರಲ್ಲಾ
ಮುಂದಿನ ಸದನದ ಗುರುತವುಗಾಣಿರಿ
ಯೆಂದರೆ ಅಭಿಮಾನವೆ ಇಲ್ಲಾ ೩

ಉಬ್ಬಿಲಿ ಪ್ರಸ್ತಗಳನು ಮಾಡಿ
ಹಬ್ಬದ ಹರುಷದಿ ಓಡ್ಯಾಡಿ
ಒಬ್ಬರು ಕಂಡರ ಒಬ್ಬರು ಕಾಣರು
ಅಬ್ಬರವನು ಬಲುಜನ ನೋಡಿ ೪

ಯಲ್ಲರಿಗುತ್ತುಮರೆನಿಸುವರು
ಬೆಲ್ಲದಂತೆ ಬೇಕಾದವರೂ
ಸುಳ್ಳಾಡದ ಬಹು ಸಗಣಿಯರೂ
ಒಲ್ಲಿದ ರಾಮನ ಬಾಂಧವರೂ ೫

## ೫೪೧

### ದ್ವಿಪದಿ

ಈ ಪರಿಯ ಹಾಶ್ಯಗಳ ಮಾಡುತ್ತಲವರವರು
ಶ್ರೀಪತಿಯ ಭೂಮವನು ಪೂರೈಸಿ ಬಳಿಕಾಗ
ಜನಕರಾಯನು ಇತ್ತ ಭೂಸುರರ ಯಾಚಕರ
ಅರಸಾದ ದಶರಥನ ಯೇನೊಂದು ಪರಿವಾರವನು
ಸಹಿತ ತಾ ಬಿಡದೆ ದಣಿಸಿದನು ಭೋಜನದಿ
ಇನಕುಲೋತ್ತಮಗಂದಿನಿರುಳು ಇಭಗಮನಿಯರು

ಜನಕರಾಯನ ಮಗಳ ಕರದು ಊಟಣಿಯಂನು
ಮಾಡೆನುತಲಾವಾಗ ರತ್ನಮಯ ಪೀಠಕ್ಕ ರಾಘವನ ಕರದರಾಗ

ಥಳಥಳಿಸುವ ರತ್ನಾ ಮಕುಟಾ ಮಸ್ತಕದಿ
ಹೊಳುವ ಕೀರ್ತಿಗಳೊಪ್ಪುವ ಮೇಲ್ ಭುಜದೀ
ವಲಿವ ಮೌಕ್ತಿಕ ಹಾರಾ ಪದಕಗಳುರದೀ
ಖಳರ ಮರ್ದಿಸಿದಂಥಾ ಚಲುವ ಶ್ರೀರಾಮನ
ಕೆಲದಿಯರ್ರಸೀಗೆ ಕರದಾರೂ ೧

ಅಗರು ಕಸ್ತುರಿ ಗಂಧಾ ಜವ್ವಾದಿಗಳು
ಮಘಮಘಿಸುವ ಮಲ್ಲಿಗಿ ಹಾರಗಳೂ
ಝಗಝಗಿಸುವ ಜೋತಿಗಳ ಸಾಲುಗಳೂ
ಸುಗುಣಿಯರ್ರಸಿಗೆ ಕರದಾರೂ ೨

ದಶರಥನಂದನ ದೀನ ಮಂದಾರಾ
ಶಶಿಮುಖಿ ಅಹಲ್ಯಾ ಶಾಪವುದ್ಧಾರ
ಅಸುರ ತಾಟಕಿ ಖರ ಮುಖರ ಸಂಹಾರಾ
ಬಿಸಜ ಲೋಚನನೀ ಹಸಿಗೇಳೆನುತಲಿ
ಕುಸುಮ ಗಂಧಿಯರೂ ಕರಾದಾರೂ ೩

## ೫೪೨

### ಮಂಗಳಾರತಿ ಪದಾ

ಶೋಭನವೆಂನಿರೊ ಶ್ರೀಲಕ್ಷ್ಮೀವರಗ
ಶೋಭನವೆಂನಿ ಸುಪರ್ನ ವಾಹನಗ
ಶೋಭಾನವೆಂನಿ ಸರೋಜ ನಯನಗ
ಶೋಭಾನ ವೆಂನಿ ಕಾವೇರಿ ಶ್ರೀರಂಗಗ
ಶೋಭಾನವೆಂನಿ ಜನರೆಲ್ಲಾ

ಅನಿಮಿಷ ನೇತ್ರಗ ಅದ್ರಿ ಪೊತ್ತವಗ
ಕನಕಲೋಚನನ ಕಂಠವನಿಳಿಸಿದಗ

ಕನಲಿ ಕಂಭದಿ ಕಡು ರಯದಿ ಬಂದವಗ
ಮುನಿವರ ಕಶ್ಯಪ ತನಯನೆನಿಸಿದಗ
ವನಿತೆರಾರತಿಯೂ ಬೆಳಗೀರೇ ೧

ಕರದಿ ಕೊಡಲಿಯ ಪಿಡಿದಾ ಕ್ಷೇತ್ರಯಾಂತಕಗ
ಭರದಿ ದಶಶಿರನ ಶಿರವ ಕಡಿದವಗ
ದುರುಳ ಕಂಸನ ದೆಸೆಗೆಡಿಸಿ ಬಿಟ್ಟವಗ
ಹರನ ಕರದಿ ಮುಪ್ಪುರವ ಸುಡಿಸಿದಗ
ಹರದೇರಾರತಿ ಬೆಳಾಗಿರೇ ೨

ಚಾರುಹಯವನೇರಿ ಚರಿಸುತಿಪ್ಪಾವ
ನಿರೊಳಗಾಡುವ ನಿಪುಣ ಕಮಠಗ
ಕೊರಿಮಸದು ಬೇರಾನಗಳಿ ತಿಂಬವಗ
ಕ್ರೂರ ಖಳನ ಕರಳ್ಹಾರ ಮಾಡಿದಗ
ನೀರೇರಾರತಿ ಬೆಳಗೀರೆ ೩

ಸುರನದಿಯನು ತಂದಾ ಸು ತ್ರಿವಿಕ್ರಮಗ
ಶರಧಿ ಶರಧಿಯನು ಸರಸಿ ಬಿಟ್ಟವಗ
ಶರಣು ಬಂದವಗ ಶಾಶ್ವಿತನ ಮಾಡಿದಗ
ಗರಿಯೆತ್ತಿ ಗೋಕುಲಪೂರದ ಸಮರ್ಥಗ
ಹರದೇರಾರತಿಯಾ ಬೆಳಾಗಿರೆ ೪

ಹರಿಣಾಕ್ಷಿಯರ ವ್ರತಾಪರುಣ ಮಾಡಿದಗ
ಕರದಿ ಸುರಗೀಯಾ ಪಿಡಿದ ಶರಣ ವತ್ಸಲಗ
ವುರದಿ ಕೌಂಸ್ತುಭ ಮಣಿಹಾರ ಶೋಭಿತಗ
ಧರಣಿಯೊಳ್ಳೆಹೊಳಿ ವರದ ವೆಂಕಟಗ
ಹರದೇರಾರತಿಯಾ ಬೆಳಗಿರೆ ೫

## ೫೪೩

### ದ್ವಿಪದಿ

ಸರಸ ಪರಿಮಳ ಗಂಧ ಅಗರು ಚಂದನ ಕುಸುಮ
ಸರಗಳನು ತಂದಿಟ್ಟು ಕ್ಕೊಸಲೆ ಸುಮಿತ್ರಿಯರು
ಕೈಕೆ ಮೊದಲಾಗಿರುವ ಕಂಜಾಕ್ಷಿಯರು ಬ್ಯಾಗ
ಶೀತಿಯನು ಕರದೊಮ್ಮೆ ಪತಿ ಹೆಸರು ಹೇಳೆನಲು
ಅತಿ ನೂತನದಿ ಪೇಳ್ದಳೂ

### ಶ್ಲೋಕ

ನೀರಾಜಾಂಬಕ ನೀರ ಮ್ಯಾಲೆ ಜಗವಾ ನಿರ್ಣೈಸಿ ಕೊನೆಗಳಿವುತಾ
ನೀರಾಜಾಸನ ಮುಖ್ಯರೋರ್ವರಿರದೆ ರಾಜಿಸುತ ತಾವೊಬ್ಬನೇ
ನೀರೇಜಾಪ್ತನ ಕರಗಳಂತೆ ಪೊಳಿವಾ ನೀರಾಜೆ ತೇಜೋ ಹರಾ
ನೀರೇರೆಲ್ಲರು ಕೇಳಿರವ್ವಗಳಿರಾ ಈ ರಾಮನೆಂಬಾತನೇ ೧

### ಶ್ಲೋಕ

ಶ್ರೀಧರ ಜಾತಿಯ ನಾತಗಾತ ಸಖನೇ ಶ್ರೀಧರನ ರೂಪಾಹ್ವಯಾ
ಶ್ರೀಧರದಿ ಮನಿಯಾತಗಾಗಿ ಸಖಿಯ ಶ್ರೀಧರ ಜನಾಭಂ ಸದಾ
ಶ್ರೀಧರ ಬಾಣನ ಪಡೆದನೀತ ಜಗದೀ ಶ್ರೀಧರಾಂಬಕನೆನಿಸುತಾ
ಶ್ರೀಧರನೆಂಬುವರೆಲ್ಲರೀತಗೆತಿರೆ ಈ ರಾಮನೆಂಬಾತನೇ ೨

### ಶ್ಲೋಕ

ವರಮಂದಿರನಿವವ ನವಕೋಟಿ ತೇಜಯುತನೆ
ವನ ನೇತ್ರವನೊಡಿಯನೆ ವನೆದೋಳ್ ಪೊಗಳುವ
ರೀತನೆಲ್ಲ ಜನರೂ ವನಮಾಲಿಯಂದೆನುತಾ
ವನವಾಹನ ತಾನಾಗಿ ಮುಂದಿನ್ಯುಗದಿ ವನವೆಲ್ಲ
ಸದೆ ಬಡಿಯುವಾ ವನುತೇರೆಲ್ಲರು ಕೇಳಿರವ್ವಗಳಿರಾ
ಈ ರಾಮನೆಂಬಾತನೇ ೩

## ಶ್ಲೋಕ

ಗೆಳತೇರೆಲ್ಲರು ಕೂಡಿ ತಂಮ ಮನದೀ
ಸಲೆ ಹರುಷವನು ತಾಳುತಾ ವಲಿವಾ
ಬಾಹುದ್ವಯಕ ಗಂಧ ಫಣಿಗೆ ನಲುವಿಂದ
ಕುಂಕುಮವನೂ ಜಲಜಾನೇತ್ರಿಯರೆಲ್ಲರಾಗಳೊದಗಿ
ಜಾಣ್ಮೆಯಿಂದ್ಹಚ್ಚೆನಲೂ ಚೆಲುವೆ ರಾಘವನೆದುರಿನಲ್ಲಿ
ನಿಂದೂ ಬಲು ನಾಚುತಿಂತೆಂದಳೂ ೪

## ೫೪೪

ಜಯ ಜಯ ರಾಘವ ರಾಮಾ ಜಯಂಜಯ ರಾಜ ಲಲಾಮಾ
ಜಯಂಜಯ ಪೂರಣ ಕಾಮಾ ಜಯ ರಣ ನಿಸ್ಸೀಮಾ

ದಶರಥ ರಾಜನ ತನಯಾ ದಶಶಿರದರ್ಪ ಹ್ರಣೀಯಾ
ದಶದಿಶದೀಪ್ತ ಸುಕಾಯ ಶಶಿಧರ ಪ್ರೀಯ್ಯಾ ೧

ಸುರಪನಗೋಸುಗ ಮುನಿಯೂ ತರುಣಿಗೆ ಶಾಪವ ಕೊಡಲೂ
ಕರುಣದಿ ನೋಡಿದ ಮುಖತಾ ಅರಿಶಿಣ ಹಚ್ಚುವೆ ನಾನೂ ೨

ರಾಜರ ಭಂಗಿಸಿ ಭರದೀ ರಾಜಾಶೇಖರ ಧನುವಾ
ನೈಜದೊಳೆತ್ತಿದ ಕೈತಾರಾಜಿತ ಗಂಧವ ಹಚ್ಚುವೆನೂ ೩

ಸರಸೀಜಾಯತ ನೇತ್ರಾ ಪರಮ ಸುಮಂಗಳ ಗಾತ್ರಾ
ವರಗ್ರೀವವು ತಾ ಪರಿಮಳ ಹಾರವ ಹಾಕುವೆ ನಾನೂ ೪

ಫಣಿಗೆ ಕುಂಕುಮವಿಟ್ಟು ಮಣಿದು ಕಾಂತಗ ನಮಿಸಿ
ಫಣಿವೇಣಿಯ ಯಡವಂಗದಲನುನಯದಿಂದಲಿ ಸಾರಿ ೫

ದಿನಕರ ವಂಶೋದ್ಭವಗ ವನುತಿಯರೆಲ್ಲರು ಕೂಡಿ
ವನರುಹಲೋಚನಿ ಗೂಟಣಿ ಕ್ರಮವನು ಮಾಡೆನಲಾಗ ೬

# ೫೪೫

## ಶ್ಲೋಕ

ರಾಮಚಂದ್ರನು ತಂನ ಹೆಂಡತಿ ಹೆಸರು ಹೇಳಿದ್ದು

ಕುಮುದೋದ್ಭವ ಮನೆ ಕುಮದ ಮಧ್ಯಳನಿಪಾ
ಕುಮುದಾಕ್ಷಿ ಕುಮುದಾದ್ವಯ ಕುಮುದಾನನೆ ಮೇಣ್
ಕುಮುದವಾಣಿ ಕುಶಲೆ ಕುಮುದಾರಿ ಕಾಂತ್ಯೋತ್ತಮೆ
ಕುಮುದಂ ಸೋಲಿಪ ಗಮನೆ ಕುಂದರದನೆ ಕುಮುದತ್ಸಮಾ
ಸ್ವರಯುತೇ ಕುಮುದಂತಾಯುತ ಮಸ್ತಕದ್ವಯ
ಕುಚಕುಲ ಬಾಲೆವರ ಜಾನಕೆ ೧

## ಶ್ಲೋಕ

ಕಮಲದಿ ಜನಿಸಿದ ಕಮಲಕುಂತಳಯುತೇ
ಕಮನೀಯ ಕರಸುಂದರೇ ಕಮಲ ಸುನೇತ್ರೆ
ಕಮಲ ಲಾಂಛನ ಮುಖೆ ವಿಮಲಾಂಗಿ ವಿಜಯ ಪ್ರದೆ
ಕಮಳಂ ಪೋಲುವ ಜಘನೆ ಕಮಲ ಗಮನೇ
ಕಮಲತ್ಸಮಾಥೃತಿ ಮತೇ ಕಮಲಂ ಬಂಣಿಪುದೀಕಿಯಂನು ಬಿಡದೆ
ನೆಲ ಜಾತಿವರ ಜಾನಕೆ ೨

## ಶ್ಲೋಕ

ಕರಿ ಕಂನ್ಯೆದಲೆ ಕರಿಲ ಪೋಲ್ವಗಮನೇ
ಕರಿಪಾಣಿ ಹರಿವಾಣಿಯೆ ಕರಿಯಂ ಪೊತ್ತು
ಸುಕೀರ್ತಿಯಿಂದ ಮರವಾ ಕರಿಕುಂಥಳೆ ಕೋಮಲೇ
ಕರಿಯಂತೊಪ್ಪುವ ಚಾರು ಧೀರೆ ಚತುರೆ
ಕರಿಚಿನ್ನ ಕುಚದಂತರೇ ಕರಿಯಂತಿರ್ಪ ಕಪೋಲೆ
ಬಾಲೆ ಸೀಲೆ ಕರಿವೇಣಿ ವೈದೇಹಿಯೆ ೩

## ೫೪೬

ಚಾಪಲ ನೇತ್ರ ವಿಸ್ಫುರಣೆ ನೂಪುರ ಮಂಡಿತೆ ಚರಣೆ
ದೀಪ್ತ ಸುರತ್ನಾಭರಣೆ ಶ್ರೀಫಲ ಕುಚಯುಗ್ಮೆ

ವ್ಯೋಮಾಕೇಶನ ಧನುವಾ ಜಾಮದಿ ನಾ ಖಂಡ್ರಿಸಲೂ
ಪ್ರೇಮದಿ ನೋಡಿದ ಮುಖತಾ ನೇಮದಿ ಕುಂಕುಮ ಹಚ್ಚುವೆನೂ ೧

ಸುರಕುಸುಮಾ ಮಾಲಿಯನೂ ಸರಸಾದಿಂದಲಿ ಪಿಡಿದೂ
ಹರುಷದಲ್ಹಾಕಿದ ಹರದಿಯ ಕರತಾ ಗಂಧವ ಹಚ್ಚುನೂ ೨

ಕುಡುತೇಗಂಗಳಿಗಿನಿತೂ ಕಡು ಚಲ್ವಾ ಪಾಣಿಯಲಿ
ಮುಡಿಗೀ ಪೂವನು ಮುಡಿಸುತ ಬೆಡಗಿಲಿ ಮಂಡಿಸಿದಾಗ ೩

## ೫೪೭

ಧರಿಗೆ ಕಂಟಕರಾದ ದನುಜಾರಟ್ಟುಳಿಗಾಗಿ
ಸುರರೆಲ್ಲ ಪೋಗಿ ಮೊರೆಯೀಡೆ ಶೂ
ಹರಿಗೆ ಮೊರೆಯಿಡಲಾಗ ಕರದಾಭಯವ ಕೊಟ್ಟೊ
ಕರುಣಾಸಾಗರನೂ ಕಳುಹೀದಾ ಶೂ ೧

ಇಂದಿರೆಯರಸಾನೂ ಇನಕುಲದಾ ದಶರಥನಾ
ಮಂದಿರಾದಲ್ಲಿ ತಾ ಜನಿಸಿ ಶೂ
ಮಂದಿರದಿ ತಾ ಜನಿಸಿ ಮೋದ ಲೀಲೆಗಳಂನು
ಛಂದ ಛಂದದಿ ಮಾಡುತಾ ಶೂ ೨

ಇರಲೂ ಕೌಸಿಕ ಬಂದೂ ಇತ್ತ ರಾಮನ ಬೇಡಿ
ಕರದೊಯ್ದಯಜನಾ ಪಾಲನಿಗೆ ಶೂ
ಕರದೊಯ್ಯಲಾ ವನದೀ ದುರುಳಾ ತಾಟಕಿ ಬರಲೂ
ತ್ವರದೀ ಸಂಹರಿಸಿ ಮಖಾ ಕಾಯ್ದು ಶೂ ೩

ಮುಂದ ಮಿಥುಳಿಯಲಿಂದ ಮುನಿ ವಿಶ್ವಾಮಿತ್ರನಿಗೆ
ಬಂದಾವ್ಯೆ ವಾಲಿ ಬರದಾಗ

ಬಂದಾವ್ಯೆ ಬರದಾಗ ಭಾವೆ ಸೀತಿಯ ವಿವಹಾ
ವೆಂದೆಂಬಾ ವಾರ್ತೀ ಸ್ವಯಂವರಾ ಶೂ ೪

ತಿಳಿದೂ ಮುನಿವರನಾಗ ತೀವ್ರದಲಿ ತಾನಡದಾ
ನಳಿನಾಲೋಚನನೂ ಸೌಮಿತ್ರೀ ಶೂ
ನಳಿನಾಲೋಚನನೂ ಸೌಮಿತ್ರಿಯ್ಯಾರೊಡಗೂಡಿ
ಕಳದೂ ಜಾನ್ಹವಿಯಾ ಜಗಾವರಿಯಾ ಶೂ ೫

ಸಿಲಿಯಾದಾ ಅಹಿಲ್ಯಾನಾ ಶ್ರೀಶೀಘ್ರಾದಿಂದುದ್ಧರಿಸಿ
ಬಳಿಕಾ ಸಾರಿದರೂ ವಿದೇಹೆ ಜನಾ ಶೂ
ಬಳಿಕಾ ವಿದೇಹ ಜನಾ ಪುರವಾ ಪೊಕ್ಕರ ಮುನಿಗೆ
ನೆಲಜಾತಿ ಪಿತನು ಮಂನಿಸಿದಾ ೬

ರಾಜಾ ರಾಜರ ಬರಸಿ ರಾಜಾ ಮೌಳಿಯ ಧನುವಾ
ರಾಜೀವಾ ನೃಪರಾ ಸಭಿಯೊಳಗ ಶೂ
ರಾಜೀವಾ ಸಭೆಯೊಳಗ ರಾಯಾ ಜನಕನು ತರಲೂ
ಸೋಜೀಗವಾಗೇ ಜನರೀಗೆ ಶೂ ೭

ನೀರಾಜಾಂಬಕನಾಗ ನೀಲಕಂಠನ ಧನುವಾ
ಸೇರಿಸಿ ಹೆದಿಯಾ ಕ್ಷಣಾದೊಳೂ ಶೂ
ಯೇರೀಸೀದಾಕ್ಷದೀ ಇಕ್ಕಡಿಯ ಗಯ್ಯುತಾ
ಧಾರುಣಿ ಮಗಳಾ ಸೋಲಿಸಿದಾ ಶೂ ೮

ಸೀತೆ ಸಂತೋಷದಲಿ ಶ್ರೀಧರನಾ ಕೊರಳಿಂಗೆ
ತಾಜಾ ಸುರಕುಸುಮ ಮಾಲೀಯಾ ಶೂ
ತಾಜಾ ಕುಸುಮದ ಮಾಲಿ ಜಾಣೆ ಹಾಕಲು ನೃಪರಾ
ವ್ರಾತಾವೋ ನಾಚೀ ಪೋಗಲು ಶೂ ೯

ರಂನೆ ಕುಲ ಸಂಪಂನೆ ರಾಜಾ ವದನೀಯಳೂ ಪ್ರ
ಪಂನಾ ವತ್ಸಲನಾ ಪದಕೆರಗೀ ಶೂ
ಸಂನೂತಿಸಿದರಾಗ ಸಕಲಾ ಸಜ್ಜನರೆಂಲಾ
ಅಂನ್ಯೊನ್ಯಳಭಾವದೊಡಾಗೂಡಿ ಶೂ ೧೦

ಪರಮೇಷ್ಠಿ ಶಾರದಿಯೂ ವುರಗಾ ಭೂಷಣ ಗೌರಿ
ಸುರಪತಿ ಶಚಿಯೂ ಮುಖರೆಲ್ಲಾ ಶೂ
ಪರಮಾ ಋಷಿಗಣ ಸಹಿತಾ ಸೀತಾರಾಮರಿಗಾಗ
ಪರಿಣಯವಾಗಿ ಜಯಾವೆನಲೂ ೧೧

## ೫೪೮

ಬೆಳಗೀರಾರತಿಯಾ ಭಾವಕಿಯರು ಗುಣಯುತಿಯರೂ
ಕಲಹಂಸಗಾಮಿಯರೂ

ಹರಿವಾಣಾದಲಿ ಹರಿದ್ರವನಿಟ್ಟೂ ಹರದಿಯರಷ್ಟೂ
ವರ ಕುಂಕುಮ ಬೊಟ್ಟು ಧರಣಿಜ ರಾಮರ ಫಣೆಗಿಟ್ಟೂ
ಹರುಷವುಬಟ್ಟೂ ಮಮತಿಯ ಪೇಳಾಲೆಷ್ಟೂ
ಸರಸೀಜಾಕ್ಷಿಯರೆಲ್ಲ ಬೆಳಗೂತಾ ಸಡಗರಯುತಾ
ಸ್ವರವೆತ್ತಿ ಪಾಡುತ್ತಾ ಸರಸಾದಿ ಶ್ಯಾಸಿಯದಳೆಯುತಾ
ಕೊಂಡಾಡುತಾ ಕೊನೆ ಸೊಬಗು ಬೀರುತಾ ೧

ವಿಶ್ವಪೂರಣ ವಿಮಲಾಂಗಗ ಗುಣ ಸಾಂದ್ರಗ
ವಿಪಚ್ಛಿತ ಜನ ಸುಖಗ ವಿಶ್ವಾಸಾದಲಿ ವಿಧುಮುಖಿಯರು
ವಿಲಸಿತಿಯರು ವೀಡಾಯದೊಳಿರಲೂ
ವಿಶ್ವರೂಪಗ ಜೋತಿಗಳ್ಗಚ್ಚಿ ಕಾಂತಿಯ ಪೆಚ್ಚಿ
ಮನವಚನದಿ ನೆಚ್ಚಿ ವಿಶ್ವಶ್ರಜ್ಜನ ಪಡದಾತನ ಇಭಗಮನಿಯರಾಗ೨

ಚಿನುಮಯನಂದ ಚೀರಾಂಬರಾ ಧೃತ ಕೇಯೂರಾ
ರತ್ನಭೂಷಣ ರುಚಿರಾ ಜನಕಜಾರಮಣ ಜಾನ್ಹವಿತಾತಾ
ಜಗದ್ವಿಖ್ಯಾತಾ ಸದ್ಗುಣ ಗುಣಭರಿತಾ ದಿನಕರಕೋಟಿ ಸಮಪ್ರಭಾ
ಸಂತತ ಶುಭಾವರ ವಾರಿಜನಾಭಾ ಸನುಜಾದಲ್ಲಣ
ದೀನವತ್ಸಲಾ ಸದ್ಗುಣಸೀಲಾನೆಂದು ಸುದತಿಯರೆಂಲಾ ३

## ೫೪೯

### ದ್ವಿಪದಿ

ಈ ಪರಿಯ ವೈಭವದೊಳವರ ವಿವಹವು ಸಾಗಿ
ಭೂಪ ಜನಕನು ಮತ್ತ ಭೂಸುರರ ನಿಚಯಕ್ಕ
ಬೇಡಿದನು ತಾನಿತ್ತು ಬಾಹಳ ದಾನದಿ ದಣಿಸಿ
ನೋಡಬಂದೆಲ್ಲರ್ಗೆ ನ್ಯೂನತಿಯಗಾಣಿಸದೆ
ಸಾಕೇತಪುರ ಧೊರಿಗೆ ನಿಮಿಕುಲ ಸುತೇಜನಿಗೆ
ಶಂಕೆಯಿಲ್ಲದೆ ಅವರ ಪರಿವಾರ ಜನಕಾಗ
ಆದವೈ ಉಡುಗುರಿಯು ವಬ್ಬರೊಬರ ಬಿಡದೆ
ಪರಮ ಸಂಭ್ರಮದಿಂದ ವಾಸರ ಚತುಷ್ಟಯದಿ
ಇರುಳು ದಂಪತಿಗಳುರೆ ಮೆರವಣಿಗಿ ನೇಮದಲಿ
ಮರೆದರೈ ಭದ್ರಮದ ಸಿಂದುರದ ಕಂದರದೊಳೂ ೧

ಮರುದಿವಸದ ವಭ್ರತದ ವಿಸ್ತರಣವೆಸದಿಹುದು
ಪರಿಮಳದ ಪಂನೀರೂ ಕರ್ಮರಸು ಕಸ್ತುರಿಯು
ವರಕುಂಕುಮಾನ್ವಿತದಿ ಕೊಪ್ಪರಿಗಿ ಸಾಲುಗಳು
ಥರಥರದಿ ಶೋಭಿಸಲು ನೆರದರೈ ಕಂಚುಕದ
ಬಲು ವಿದಾಯದಿ ನೃಪರು ಮೊನೆಯ ಮುಂಜೆರಗುಗಳ
ಪಟದ ಚಲ್ಲಣದವರು ವನುತಿಯರು ವಾರಿಯನು
ಅನುಪಮದಿ ಬಳಸಿದರು ಪರಿಯ ನಾನೇನೆಂಬೆ
ಮನಸಿಜನ ಕದನದಲಿ ಮುಂದುವರಿದಾಡುತಿಹ
ಮಾಸಾಳರಿವರಹುದು ಸಟಿಯಿಲ್ಲವೆಂಬಂತೆ
ಶೋಭಿಸಿದರೇನ್ಹೇಳ್ವೆನೂ ೨

ಹೇಮಜೀಕೊಳವಿಗಳ ಕೊಂಡು ಕುಂಕುಮವಾರಿ
ಕಾಮಿನಿಯರಿಕ್ಕೆಲದಿ ನೃಪವಧೂನಿಕುರುಂಬ
ಸಂಕೇತದೊಡಗೂಡಿ ಅರಸು ಮಕ್ಕಳು ಸಹಿತ
ಸುರರ ತರುಣಿಯರಂತೆ ಸರಿದು ಹೊಯಿದಾಡಿದರು
ಸೌರಂಭದಲ್ಲಿ ಬಿಡದೆ ಇಳಿಗೆ ಹೆಪ್ಪಿಟ್ಟಂತೆ

ಅಭ್ರ ಸಾರಣಿಯಂತೆ ಗಂಧವಾಹನನಿರುವ
ನಿಜಭೂವಿಯೆಂಬಂತೆ ಸುರಭಿ ಸೀತಾಂಶದಲಿ
ಇನಗ ಮುಸುಕಲು ಬಿಡದೆ ವುರಿಕಿರಣಗಳು ನೊಂದಿ
ಹಿಮಕಿರಣನಿವನಾದನೆಂಬಂತೆ ಜಲಕೇಳಿ ರಾಜಿಸಿತ್ತೀಪರಿಯಲಿ ೩

ಆದವೈ ಆ ಮ್ಯಾಲೆ ಮಾಮನಿಯ ಪ್ರಸ್ತಬಲು
ಮೇದಿನೀಪತಿ ಜನಕರಾಯಂಗ ರವಿಕುಲದ
ರಾಜತೇಜನು ಮಾಡ್ದ ರಚನೆಗಳ ವಿಭವದಲಿ
ಆದರಿಸಿದನು ಇತ್ತ ಜನಕ ತಂನಳಿಯರಿಗೆ
ಕೈದು ರತ್ನಾಭರಣ ಕಾಂತಾನು ಮೇದಿನಿಯನಿತ್ತ
ಬಳವಳಿಯಾಗಿ ಸಕಲ ಸನ್ಮಾನವನು ಕೈಗೊಂಡ
ಬಳಿಕಾಗ ಸಾಕೇತ ಪುರದರಸು ಸಾವಧಾನದಿ ಕುಳ್ಳಿರೇ ೪

## ೫೫೦

ವಪ್ಪಿಸಿಕೊಟ್ಟನೊ ಮಗಳಾ ಚಲ್ವಾ
  ಸುಪ್ಪಾಣಿ ಮುತ್ತು ಸೀತಿಯಳಾ
ಕಪ್ಪುಕಂಠನ ವೈರಿಭಾಗ್ಯದಾಸಿರಿಯಂನೂ
  ವಪ್ಪಾಗಿ ಸಲಹಿಕೊಳ್ಳೊ ಸುಳ್ಳಲ್ಲೋ ೦

ಹಲವು ಜನ್ಮದ ಫಲವದಗೀ ಯಂನಾ ಕುಲವಾನುದ್ಧರಿಸುದಕಾಗಿ
ನೆಲದಿ ಬಂದಳು ನಿಜವಾಗಿ ಸರ್ವಾ ಕಳೆಯುಳ್ಳಾ ಕನಕನಿಭಾಂಗಿ
ಬಲು ಮುದ್ದು ಗೈದೊಂದು ಘಳಿಗಿ ಬಿಟ್ಟಗಲಾದೆ
ಸಲಹೀದಾ ಗುಣಮಣೀಯಾ ಸಂಫೂನಿಯಾ ೧

ಉಡುರಾಜ ಮುಖಿಯ ತಂನಾ ವಡನಾಡ್ವಗೆಳತೇರ ಕಂಡು
ಕಡುಸೊಬಗಿಲೆ ಕೂಡಿಕೊಂಡೂ ಕಂದಾ ಬಿಡದಾಡುವಳೊ
  ಕರಕೊಂಡೂ
ಅಡಿಗೊಂದು ಬೇಡಿಕಾಡುವ ಕಮಲಾಕ್ಷಿಯ
ಪೊಡವೀಶ ಪೊರಿಯೊ ಬ್ಯಾಗ ಯಂದೆಂದಿಗೆ

ಸುತರಿಲ್ಲಾವೆಂಬುವಾ ಶೋಕಾ ಮಹಿಸುತೆಯಿಂದ
ಮರದೆ ಭೂಕಾಂತಾ ಶೃತಿಯುತೆ ಸುಚರಿತ್ರೆ ನಿರುತಾ ಪತಿವ್ರತೆ
ಪರಿಶೋಭಿತೆ ಯನುತಾ ಅತಿಮೋಹ ಬಿಡದೆ
ನಗುತ್ತ ಕೌಂಸಲ್ಯಾಗ ನುತಿಸಿ ಕೈಗಿತ್ತನಯ್ಯಾ ಜಾನಕಿಯಾ ೩

## ೫೫೧

### ದ್ವಿಪದಿ

ಮಕ್ಕಳನು ವಪ್ಪಿಸಿದ ಮನುಕುಲಾಧೀಶ್ವರಗ
ಅಕ್ಕರವು ಬಿಡದಾಗ ಇಳಿವ ಕಂಬನಿಯಿಂದ
ಗಳದ ಬಿಕ್ಕುಗಳಿಂದ ಕಾಕುಸ್ಥನಾನ್ವಯನ
ಬೀಳ್ಕೊಟ್ಟು ಬಳಿಕಾಗ ಪುರವ ಹೊರಹೊಂಟನೈ
ತರಣಿಕುಲ ಭೂವರನು ಅರಸಿಯರು ನಂದನರೂ
ತಂನ ಸೊಸಿಯರು ಸಹಿತ ಗುರುಮಂತ್ರಿ ಜನರಖಿಳ
ರೊಗ್ಗಿನಿಂದಲಿಗೂಡಿ ಪರಮ ಹರುಷದಿ ಬ್ಯಾಗ
ನಿಮಿಕುಲಾಧೀಶ್ವರನು ಕಳವುತಲಿ ತಾ ಬಂದ
ನಾಲ್ಕು ಪಯಣದವರಿಗೆ ದಳವ ಭಾರಣಿಯಿಂದ
ಬರುವ ಪರಿಯನು ನೋಡಿ ಸುರನರಭುಜಂಗಮರು
ಬೆರಗಾದರೇನೆಂಬೆ ಅನಿತರೊಳಗೈತಂದ ಕ್ಷತ್ರಿಯ
ಕುಲಾಂತಕನೂ ಘನತರದ ಕೊಡಲಿಯನು ಕರದೊಳಗೆ
ತಾ ಪಿಡಿದು ಬರಲವನ ಸಂಮುಖದಿ ರಘುರಾಮನಿಂದು
ನುಡಿದಾ ೧

## ೫೫೨

### ರಾಮ ಪರಶುರಾಮರ ವಿವಾದಾ

ಮಾತು ಮಂನಿಸೊ ಭೃಗುನಂದನಾ
ರಘುನಾಥನೆಂಬುದನರಿಯನೆ ಮುಂನಾ ೧

ಪಂಥವ್ಯಾತಕೆ ಕ್ಷತ್ರಿಯರೊಳೂ
ಅವರಂತಕನೆನಿಸುವನಿಳಿಯೋಳೂ ೨

ಭ್ರಮಿಸಲ್ಲಾವೀಗಿನರಸರೊಳೂ ಅತಿಕ್ರಮಿಸರೆಂದಿಗೂ
ಯಂನಿದಿರೋಳೂ ೩

ಹಿಂದಿನ ಹಮ್ಮು ನಿಮಗ ಸಲ್ಲಾ ಬರಲಿಂದಿಗೆ
ಬಿಡೆ ಮನಸಿನ ಛಲ್ಲಾ ೪

ಅಲುಪರಲ್ಲಾವ್ರೊ ಈಗಿನರಸಾರೂ ವಂದು
ಹುಲುಸಮ ಮಾಡುವೆ ನೀದೊರೂ ೫

ಧೃತಿ ಸ್ಮೃತಿ ಮತಿಯುತರಿವರಲ್ಲಾ ಯಂನಾ
ಖತಿಗೆ ಗೆಲ್ಲುವರೆಂಬುದು ಸಲ್ಲಾ ೬

ಬಿಲ್ಲಿನ ಜಾಣ್ಮೆಬ್ರಾಹ್ಮರದಲ್ಲಾ
ಬಲುಬಲ್ಲಾವನಾದಾರೇನರಿದಲ್ಲಾ ೭

ಜಪತಪ ನೇಮಾದ್ಯೆವದ ಪೂಜೆ ಸತ್ಯಾ ವಿಪುಲ
ಸತ್ಕರ್ಮಂಗಳಿಹುದು ಸಹಜ ೮

ಗಣಿತ ಶಾಸ್ತ್ರದಿ ಶಣಿಸುವದುಕ್ತಾ ಮಹದ್ರಣ
ದುತ್ಸೊಗತೆವಿರಲದು ನೀತಾ ೯

ಸಾಕಿಂನೂ ಸಾಗಿ ಮಾರ್ಗವು ಬಿಟ್ಟೊ
ಜಗದೇಕವೀರನೆ ಬಲು ದಯವಿಟ್ಟೊ ೧೦

ಕೇಳಿ ಛಡಾಯಿಸಿತ್ಯೆ ಕ್ರೋಧಾ ಇದನ್ಹೇಳಿದೆ
ಉಭಯ ವಚನವಾದಾ ೧೧

## ೫೫೩

### ದ್ವಿಪದಿ

ಆಲಿಗಳು ಕೆಂಪಡರಿ ವುದರಿದವು ಕೆಂಗಿಡಿಯು
ಪೇಳಲೆನದನಿಂನೂ ಕುಣಿದವೈ ಕುಡಿಮೀಸಿ
ಕಲ್ಪಾಂತರದಿ ತೆಗದ ಹರನ ಕಂಣುರಿಯಂತೆ
ತೋರುವಂದದಲಾಯಿತಾಗ ಭೃಗುಸುತ ಮುಳಿದು
ಅರಿಯಬಹುದಿಂನೆನುತ ಕೊಡಲಿಯನು
ಜಡಿದನ್ನೈ ಪರಶುರಾಮಾ ೧

ಹಾಯಿತುರಿಯಿದಿರೆದ್ದು ಕೊಡಲಿ ಬಾಯಿ ಧಾರಿಯಲಿ
ಸಿಖಿಮುಖದಲುತ್ಪಾತ ವಾಗುತಿರಲದಕಂಡು
ಭೊಯೆಂದು ಅಖಿಳಜನ ವಾಯುವರುಣ ಕುಬೇರ
ವಜ್ರಾಯುಧರ ಬಾಹಾಳ ಹಾಯೆಂದು ಹಂಮೈಸಿ
ಅಳವಳಿದು ನುಡಿದರೈ ರಾಮನಯ್ಯೋ ಹಸುಳೆ
ಭಾರ್ಗವನು ತಾನೆತ್ತ ನೇಮದಲಿ ಭೂಮೀಶ
ವಂಶವನು ಸವರಿದನೂ ಭೀಮಭುಜ ವಿಕ್ರಮಗ
ರಾಮ ಶಿಲುಕಿದನಯ್ಯೋ ಮಾಯಮೋಹದೊಳೊಂದಿ
ಮಾಣದರೆ ಹತ್ತುರಥ ಬಾಯಿಬಿಡುತ್ತಿದ್ದನಾಗ ೨

ಕಂಡನಯ್ಯನ ಮನದ ಧೈರ್ಯಗುಂದಿದ ಬಗಿಯ
ಅಂಡುಲಿವುದಿದಕ್ಯಾಕ ಅಖಿಳ ಜನರಿದು ನೋಡಾ
ನಿಮಿಷದಲಿ ನಿಜವಾಗಿ ತೋರಿಸುವೆನೆಂದೆನುತ
ಭೃಗುಸುತನು ಕೊಡಲಿಯನು ಹೊಡಿಯುತಿರಲಾಯುಧವು
ಯಸದುದ್ಯೆ ವ್ಯೋಮದಲಿ ರಾಮಚಂದ್ರನ ದಿವ್ಯ
ತೋಮರಾಗ್ರದಲಾಗ ಪಶುಪತಿಯು ಹಸವಾಹನ
ಮುಖ್ಯ ಸುರರು ಮಾನಸದೊಳಗ ಅರಿದರೈ
ಅಸುರ ಹರನವರೌರವಿಂದು ಪಲ್ಲಟಿಸಿತೆಂದೂ
ಘನತರದ ಕ್ರೋಧಾಗ್ನಿ ಸಂಜನಿನಿ ಭಾರ್ಗವನು ೩

ಅನುಪಮದ ವುಗ್ರ ವೈಷ್ಣವ ಧನುವನ್ನೆ
ದೆಗೊಳಿಸೆ ಅರಸರಳವಳಿ ವನಜ ಸಂಭೂತಾಂಡ
ಬಿರಿಯಲೆಡಬಲಕಾಗ ಬಲುದನಿಯ ದೋರಿಸುತ
ಕೋಲ್ದೆಗೆದು ಕೈಯಿಕ್ಕಿ ದಿವ್ಯಮಾಹ ಮಂತ್ರದಲಿ
ಕಾಲ್ದಿಗಿಸಲನಿತರೋಳ್ ಮನದೊಳಗೆ ನಸುನಗುತ
ಕಶೆನೆ ಕೇಳ್ ನಿಂಮಯ್ಯಾ ರಥದಿಂದ ತಾನಿಳಿದು
ವಸುಮತೀಶರ ವೈರಿಗಿದಿಗಾಗಿ ನಡೆತಂದು
ಮಧುರ ವಚನದಿ ನುಡಿದನೂ ೪

ನೀವು ವಿಪ್ರರು ಮ್ಯಾಲೆ ಭೂಸುರರ ಹಿಂಸವದು
ಯಾವಾಗಲೂ ಯಮಗ ದೋಷ್ಯವಲ್ಲವೆ ಕೇಳಿ
ತಾವು ವಂದ್ಯರು ಮುಂನ ಜ್ಞಾಪ್ತಿ ಸೂಪ್ತಕರಯ್ಯೋ
ಆವ ಜಂಜಡವ್ಯಾಕ ಬ್ಯಾಡಬಡಿ ಸಾಕಿಂನು
ಬಿಜಯಗೈಯ್ಯುವದೆಂದು ಬಹು ರಹಶ್ಯದೊಳು ಪೇಳೆ
ಪರಶುರಾಮನು ನುಡಿದ ಮೇದಿನಿಯ ಮ್ಯಾಲಿಂನು
ಜನಪಾರಾಳಿದಿಲ್ಲ ಗೋಮಿನಿಯ ಗಂಡನಿವ
ಘನ ಗೌರದಲಿ ಜನಿಸಿ ಬಂದನೆಂಬುದು ತೋರಿ
ವುಬ್ಬಿ ನುಡಿದನು ಪರಶುಧರನು ತಾನಾಗ ೫

## ೫೫೪

ತೀರಿತೆಂಮವತಾರಾ ವ್ಯಾಪ್ತೀ
ಈ ರಾಮನ ನರನಾಟಕ ದೀಪ್ತೀ ೦

ಕರುಣಸಾಗರನಿವನೆಂದು ಮುಂದೆ
ಧರಣಿಯ ಭಾರವನಿಳುಹಬೇಕೆಂದು
ತರಣಿ ವಂಶದಲಿ ತಾಬಂದೂ ದುಷ್ಟ
ದುರುಳಾರಾ ಸದೆಯುವಾನಿದು ಸತ್ಯಾವೆಂದೂ ೧

ಮಯಾವು ತೋರಿದಾರಾಗ ಸರ್ವ
ರಾಯಾರೂ ಬೆರಗಾಗಲಪ್ಪಿ ತಾ ಬ್ಯಾಗ

ದಾಯಾದಾದಿ ಧನುವಿತ್ತಾನವಗ ಮುನಿ
ರಾಯನು ತೆರಳಿದಾನತ್ತಲಾಶ್ರಮಕ ೨

ದಶರಥಾ ಹರುಷವು ತಾಳಿ ಬಲು
ಕುಶಲ ಜನಕನೀ ವಾರ್ತೆಯು ಕೇಳಿ
ವೆಸನಾವು ಕಳಿದು ಸುರಾಳಿ ಅಸಮಾ ಸಂ
ತೋಷಾದಿ ಸರ್ವಾರೂ ಬಾಳೀ ೩

## ೫೫೫

### ದ್ವಿಪದಿ

ಲವನೆ ಕೇಳೈಬಳಿಕ ರಾಘವನ ಬಳಿಗಾಗ
ತವಕದಲಿ ತಾ ಬಂದ ತ್ರಿದಶಾಧಿ ಪತಿ ಬ್ಯಾಗ
ದೇವಮುನಿ ತಾನೊದಗಿ ದಿವರಾಜ ವಂಶನಿಗೆ
ಈ ಸುವೈಷ್ಣವ ಚಾಪ ಈವುದೆನೆ ರಾಘವನು
ಮನದೊಳಗ ತಾ ತಿಳಿದು ಮುಂದೆ ಕಾರಣವುಂಟು
ಮುಖ್ಯವೆಂಬುದ ನೋಡಿ ಸಂಕ್ರಂದನಗ ಕೊಡಲು
ಸಂಭ್ರಮದೊಳಾ ಧನುವ ಇಡಿಸಿದನು ಮನಿಯೊಳಗೆ
ದಶವದನನೊಧಿಗೆ ಬೇಕೆಂದೆನುತಲಾವಾಗ
ಸಕಲ ಜನರಾಗ ಸಂತೋಷವನು ತಾಳ್ದರು ೧

ಬಂದನೈ ದಶರಥನು ಬಹು ಜನಂಗಳಗೂಡಿ
ಛಂದದಲಿ ಚಾಮರವ ಬೀಸುವರ ಪಾಠಕರ
ಸಂದಣಿಯ ಸೌರಂಭ ಸರಿಯಾಗಿ ತೋರುತಿರೆ
ಹೊಂದಳಿಗಿಲಾರತಿಯು ಕಳಸ ಕಂನಡಿವಿಡಿಯ
ಮಕರ ತೋರಣ ಪ್ರಕರ ಮಂಗಳ ಸುವಾದ್ಯದೊಳು
ನಾರಿಯರ ಗಾನದಲಿ ನಂದನರನೊಡಗೂಡಿ
ಅಂದಣದೊಳರಸಿಯರು ತಂನ ಸೊಸಿಯರು ಸಹಿತ

ಸಾಕೇತಪುರವರದ ಧೊರೆಯಾದ ದಶರಥನು
ಮಂದಿರವ ಹೊಕ್ಕನ್ಯೆ ಮನುಕುಲದ ರಾಜ ತೇಜಾ ೨

## ೫೫೬

ರಾಮಾ ದಶರಥರಾಮಾ ರಾಜೀವ ನೇತ್ರಾ
ರಾಮಾ ರಘುಕುಲ ಸೋಮ ರಕ್ಷಿಸನುವರತಾ

ಶಾಮಾವರ್ಣನೆ ರಾಮಾ ಕೋಮಾಲಾಂಗನೆ ರಾಮಾ
ಕಾಮೀತಪ್ರದ ರಾಮಾ ಕಮಲೋದರ ರಾಮಾ
ವ್ಯೋಮಾಕೇಶನ ಪ್ರಾಣಾ ಪದಕಾದ ರಾಮಾ
ವ್ಯೋಮಾ ಗಂಗಿಯ ಪೆತ್ತ ಜಯ ರಾಮಾ ರಾಮಾ ೧

ಜನಕಾನಳಿಯನೆ ರಾಮಾ ಜಾನಕೀಪತಿ ರಾಮಾ
ಮನುಕುಲಾಗ್ರಣಿ ರಾಮಾ ಜನನಾರಹಿತಾ ರಾಮಾ
ಮಝುಭೂಪಾ ರಾಮಾ ಜನನೀ ಜಾನಕ ರಾಮಾ
ಜಗದೋದ್ಧಾರಕ ರಾಮಾ ಜನನಾ ರಹಿತಾರಾಮಾ
ಜಲಶಾಯಿ ರಾಮಾ ೨

ಕರುಣಾಸಾಗರ ರಾಮಾ ಕರಿವಾರಾಧನೆ ರಾಮಾ
ಭರತಾನಗ್ರಜ ರಾಮಾ ಭವಹರ ರಾಮಾ
ಧರಿಯೊಳೂ ಪಂಚಾತೊರೆಪುರದಾ ವೆಂಕಟ ರಾಮಾ
ನಿರುತಾ ನಿಂನಯ ಧ್ಯಾನವಿರಿಸ್ಯೆ ಶ್ರೀರಾಮಾ ೩

## ೫೫೭

ಜಯಮಂಗಳಂ ನಿತ್ಯ ಶುಭಮಂಗಳಂ
ಮಂಗಳಂ ಮಹಾಮಹಿಮ ಶ್ರೀ ರಾಮಗ

ಮುನಿಯ ಮಖವನು ಕಾಯ್ದುವನದಿ ತಾಟಕಿಯೊರಿಸಿ
ವನುತಿಯಳನುದ್ಧರಿಸಿ ವಹಿಲದಿಂದ

ಅನುಪಮದ ಜಾನ್ಹವಿಯ ಕಳದು ಕೌಸಿಕನೊಡನೆ
ಜನಕನಲ್ಲಿಗೆ ಸಾರ್ದ ಜಾಣರಘುರಾಮಾ ೧

ಧರಣಿಜೆ ಸ್ವಯಂವರಕ ಧರಣಿಪಾಲಕರೆಲ್ಲಾ
ಥರಥರದಿ ಬಂದೊದಗಲಾ ಸಮಯದಿ
ದುರುಳ ದಶಕಂದರನ ಗವನಪಹರಿಸುತಲಿ
ಹರನ ಧನುವನ ಮುರಿದ ಹರಿಕುಲೋದ್ಭವನೇ ೨

ವೀತಿಹೋತ್ರನ ಮಖದಿ ಸೀತಿಯನು ಕೈವಿಡಿದೂ
ಖ್ಯಾತ ಭಾರ್ಗವವ ಸಂಶಯವ ಕಳಿದೂ
ಪ್ರೀತಿಯಲಿ ಸತಿಗೂಡಿ ಪುರಕ್ಕೈದ ಪಂಚತೊರೆ
ನಾಥ ಸರ್ವೇಶ ಶ್ರೀ ವೆಂಕಟೇಶಾ ೩

## ೫೫೮

### ಫಲಶ್ರುತಿ ಭಾಮಿನೀ ಷಟ್ಪದೀ

ಈ ಕಥೆಯ ಶ್ರವಣದಲಿ ಮನುಜರ
ನೇಕಜನ್ಮಾಂತರದಿ ಮಾಡಿದ
ಕಾಕು ಕರ್ಮಗಳಳಿದು ಕಡಿಯಲಿ ಕಾಲನಾಳುಗಳಾ
ಮೂಕಿಸಲು ಸಂದೇಹವೇನಿರೋ
ಶ್ರೀಕಳತ್ರ ಸದಾನುರಾಗದಿ
ದೋಕನಂದದಿ ತಂನ ವಡಲೊಳಗಿಟ್ಟು ಸಲಹುವನೊ ೧

ದೇವಗಂಗಿಯ ಮಿಂದ ಫಲಭೂ
ದೇವಗಣಗಳಿಗೊಂದು ಸಾವಿರ
ಗೋವುಗಳ ತಾನಿತ್ತ ಫಲವಿದು ಗೋಧನದ ಕಥನಾ
ಆವಬಗಿಯಿಂದಾದರಿದು ಸ
ದ್ಭಾವ ಭಕುತಿಯೊಳೊಲಿದು ಕೇಳ್ವರಾ
ಜೀವಜಾಂಬಕನೊಲಿದು ಕೊಡುವನಾ ಸಕಲ ಸಂಪದವಾ ೨

ಸಕಲ ಶಾಸ್ತ್ರದ ಸಂಜನತಕಿದು
ಪ್ರಕಟಿತರ ವರ ಗರ್ಭವ್ಯೆ
ಅಕಳಂಕ ಸೀತಾಪತಿಯ ಸಿರಿನಾಮಾ
ಭಕುತಿ ಪೂರ್ವಕವಾಗಿ ಬಿಡಿದಲೆ
ಅಕುಟಿಲರು ತಾವಾಗಿ ಶೃತಿಗೂಡೆ
ಮುಕುತಿಯಾಗುವದಕ್ಕೆ ಮತ್ತಾ ಕೃತಿಗಳೇ ಸಾಕ್ಷಿ ೩

ಮಾರಪಿತ ವೆಂಕಟನು ಸಿರಿ ಸಲೆ
ವಾರಿಜೋದ್ಭವ ವಾಯು ಶಾರದೆ
ಭಾರತಾ ದೇವಿಯರು ಫಣಿರಾಜಾ
ಧೀರ ಖಗಪತಿ ಮೂರು ಗಂಣನ
ಭೋರಿ ಗಿರಿಗಾರಾತಿ ಸತ್ಕವಿ
ವೀರರಂಘ್ರಿಗಳನು ಸಂತತ ಭಜಿಸುವರ ದಯದೀ ೪

ಧರಿಯೊಳಗ ಸುಕ್ಷೇತ್ರವೆನಿಸುವ
ಪರಮ ಪಾವನ ಪಂಚತೊರೆ ವರ
ಪುರದೊಳಗ ತಾನಿಪ್ಪ ಭಾರದ್ವಾಜ ಗೋತ್ರದಲೀ
ಮೆರವುತಿಹನಾ ರಾಘವೇಂದ್ರನ
ತರುಳರೆನಿಸುವ ಭೀಮರೆಂಬನು
ವಿರಚಿಸಿದನಿದು ಕೊಣಗಯ್ಯದೆ ಕೇಳಿ ಕೋವಿದರೂ ೫

ಇತಿ ಶ್ರೀಮದ್ರಾಮಾಯಣ ವಾಲ್ಮೀಕಿ ಕೃತ
ಬಾಲಕಾಂಡ ಸೀತಾ ಸ್ವಯಂವರ
ಸಮಾಪ್ತ

## ೫೫೯

### ಅಖಿಳಾಂಡಕೋಟಿ ಬ್ರಹ್ಮಾಂಡನಾಯಕ

ಓಂ ನಮೋ ನಾರಾಯಣ ಓಂ ನಮೋ ಶ್ರೀರಮಣ
ಓಂ ನಮೋ ಹರಿಬಾದರಾಯಣ ಓಂ ನಮೋ ಅನಂತಗುಣ

ಓಂ ನಮೋ ರೂಪ ಘನ ಓಂ ನಮೋ ನಾಮಕ್ತಿಯ
ಸಂಪೂರ್ಣ ಪ

ಅಖಿಳಾಂಡಕೋಟಿ ಬ್ರಹ್ಮಾಂಡ ನಾಯಕ ಲಕ್ಷ್ಮೀನಾರಾಯಣ
ವಿಖಿನ ಸ್ತೋತ್ರಂಸ ವಿಶ್ವಾತ್ಮ ಪರಮಾತ್ಮ ಆದಿನಾರಾಯಣ ೧

ಅಗಣಿತ ಸುಗುಣಧಾಮ ನಿಗಮಗೋಚರ ಮಹಿಮನಾರಾಯಣ
ನಗಮಧರ ಮಹಾಕೂರ್ಮ ಜಗದ ಸಂಜೀವನ ನಾರಾಯಣ ೨

ಅಘದೂರ ಭಕ್ತಜನರಘ ನಿ....... ಅನಘ ನಾರಾಯಣ
ಅಘಮರ್ಷಣಸ್ತುತ ಅಘಟನಾಘಟನ ಶಕ್ತ ನಾರಾಯಣ ೩

ಅಂಗದೊಂದು ನರಕಸ್ತರನುದ್ಧರಿಸುತ ನಾ
ಮಂಗಲ ಸ್ವರೂಪ ಸರ್ವಾಂಗ ಮಹಿಮನು ನೀ ಬಲ್ಲೆ ನಾ ೪

ಅಂಗುಟವು ಸೋಂಕಿ ಶಿಲೆ ಮಂಗಲ ಸ್ತ್ರೀರೂಪಾಯ್ತು
ಅಂಗುಟದಿ ಜನ್ಯ ಸುರಗಂಗಾ ಜಗದಘಹಾರಿ ೫

ಅಚ್ಯುತದರಿಗೆ ಅಜ್ಞಜ್ಞಾನವಿತ್ತು ನಾ
ಪ್ರೋಚ್ಚ ಮೋಕ್ಷಕೆ ಭಕುತಿ ನಿಚ್ಚಣಿ ಏರಿಸುವೆ ನಾ ೬

ಅಚ್ಯುತಾನಂತ ಗೋವಿಂದ ಕೃಷ್ಣ ಮುಕುಂದ ನಾ
ಸಚ್ಚಿದಾನಂದಾತ್ಮ ನಿತ್ಯೋತ್ಸವ ಪ್ರಿಯ ನಾ ೭

ಅಜನಾಮಕನೆ ಅಯೋನೀಜ ನಾಭಿಪದ್ಮಂ ನಾ
ಅಜಿನ ಸೃಜಿಸಿದೆ ಜಗದಿಮಜಭಾಪದ್ಭುತ ಮಹಿಮನಾ ೮

ಅಜಮಿಳ ಅಹಲ್ಯ ಭೃಗು ವಾಲ್ಮೀಕರೋದ್ಧಾರಿ ನಾ
ಗಜರಾಜಧ್ರುವ ಪ್ರಹ್ಲಾದಂಬರೀಷರ ಪೊರೆದೆ ನಾ ೯

ಅಕ್ರೂರ ಸಾತ್ಯಕಿ ವಿದುರ ಉದ್ಧವ ಪ್ರಿಯ ನಾ
ಶಕ್ರಸುತ ಸುಗ್ರೀವ ವಿಭೀಷಣ ಸುಧಾಮ ಸಖ ನಾ ೧೦

ಅಣುಮಹತ್ಪರಿಪೂರ್ಣ ಅಣುಮಹದ್ವಿಲಕ್ಷಣ ನಾ
ಅಣುವಿಗತಿ ಅಣುಘನತೆ ಘನತಮ ಸುಂದರ ನಿತ್ಯನಾ ೧೧

ಅಣುಜೀವಿ ಘನಭೂತ ಚಲನಗೈಸುವ ಶಕ್ತನಾ
ತೃಣವು ಅಲ್ಲಾಡುದು ನಿನ್ನ ಚಲನಿಲ್ಲದೆ ನಾ ೧೨

ಆದಿಭೂತ ಅಧ್ಯಾತ್ಮ ಆಧಿದೈವಗತಹರಿ ನಾ
ಆಧಿಕಕಧಿಕಾದ್ಭುತ ಅದೃಷ್ಟ ಅಧೋಕ್ಷಜನೆ ನಾ ೧೩

ಅನಿಮಿತ್ತ ಉಪಕಾರಿ ನಿನಗೇನಿತ್ತು ಮೆಚ್ಚಿಸಲಿ ನಾ
ಅನಪೇಕ್ಷಾನಶನ ಆನಂದ ಮಯ ಜ್ಞಾನಪೂರ್ಣ ನಾ ೧೪

ಅನಿರುದ್ಧ ಪಂಚಕ ಚಿಂತಿಪ ಸದಾ ಭಕ್ತರಿಗೆ ನಾ
ತನು ಮೈಲಿಗಿಲ್ಲ ನಿತ್ಯ ಮನಶುದ್ಧಿ ತನುಭೃತರು ನಾ ೧೫

ಅಮಿತ ವಿಕ್ರಮ ವಿಷ್ಣು ಅಮರಗಣ ಸಾರ್ವಭೌಮನಾ
ರಮಣಿ ಅಂಬ್ರಿಣಿ ಸ್ತವನ ಕೇಳಿ ಜಗಸೃಷ್ಟಿಸುವೆ ೧೬

ಅರಸು ಮೆಚ್ಚಲ ದಾಸಿ ಪರಶು ಮುಟ್ಟಲು ಲೋಹ ನಾ
ಮೆರೆದಂತೆ ಮಾನ್ಯರಾಗುವರು ನಿನ್ನೊಲಿಸಿಹರು ನಾ ೧೭

ಆತ್ಮಾಂತರಾತ್ಮ ವಿಶ್ವಾತ್ಮ ವಿದ್ಯಾನಾತ್ಮ ನಾ
ಸ್ವಾತ್ಮ ಪರಮಾತ್ಮ ಕಾಲಾತ್ಮ ಪುರುಷೋತ್ತಮನೆ ನಾ ೧೮

ಆನತೇಷ್ಟಪ್ರದ ಅನಿಮಿಷರ ಮನದೈವ ನಾ
ಅನಾದ್ಯನಂತ ಅಪ್ರಮೇಯ ಅನುಪಮ ಚರಿತ ನಾ ೧೯

ಆನಂದಮಯಕಾಯ ಆನಂದತೀರ್ಥಧೇಯ ನಾ
ಆನಂದಕಂದ ನಿತ್ಯಾನಂದ ಮುಕುಂದ ನಾರಾಯಣ ನಾ ೨೦

ಆಪತ್ತು ಬರಲೇನು ಆಪತ್ ಬಂಧು ನೀನಿರಲು ನಾ
ಅಪರೋಕ್ಷಿಗೆ ಸದಾಸಮೀಪವರ್ತ್ಯೆನಾಗಿರುವ ನಾ ೨೧

ಆಪನ್ ರಕ್ಷಕ ಅಪ್ರಾಕೃತ ಸ್ವರೂಪ ನಾ
ಶ್ರೀಪತಿಯ ದಾಸರಿಗೆ ತಾಪತ್ರಯ ಕೃಪಾಪಾಯ ನಾ ೨೨

ಆವಕುಲಗೋತ್ರ ವರ್ಣಾಶ್ರಮವನು ನೋಡದೆ ನಾ
ಭಾವಶುದ್ಧಿಯ ಭಕ್ತಿ ನಿಷ್ಠಾವಂತಂಗೆ ಒಲಿಯುವೆ ನಾ ೨೩

ಇಭವನದ ಬಿಂಬ ಸ್ತ್ರೀ ಪುರುಷರು ಭಯ ಸ್ವರೂಪ ನಾ
ತ್ರಿಭುವನದ ಜೀವರಿಗೆ ಶುಭ ಪ್ರೇರಣೆಯ ಮಾಡ್ವ ನಾ ೨೪

ಈಶ ನೀನೆ ಜಗಕೆ ಏಸೇಸು ಕಾಲಕೂ ನಾ
ದಾಸರೆಲ್ಲರು ನಿನಗೆ ಸಾಸಿರ ಕಲ್ಪಕೂ ನಾ ೨೫

ಉಗ್ರ ಸೇನನ ಸಭೆಯಲಿ ಭಟ್ಟಂಗಿ ಹೊಗಳಿದೆ ನಾ
ಅಗ್ರಪೂಜೆಯಗೊಂಡೆ ರಾಜಸೂಯಯಾಗದಲಿ ನಾ ೨೬

ಉತ್ಪತ್ತಿರಹಿತ ಜಗದುತ್ಪತ್ತಿ ಕರ್ತನೆ ನಾ
ತತ್ಪಾದಾ ಶ್ರೀ ಭಕ್ತರೋತ್ಪತ್ತಿ ನಾಶಕನೇ ನಾ ೨೭

ಊಹೆಗೂ ನಿಲುಕದ ಉತ್ತಮೋತ್ತಮ ಮಹಿಮ ನಾ
ಹಾಹಾ ಹೂಹೂ ಗಂಧರ್ವ ಶಾಪವಿಮೋಚನೆ ನಾ ೨೮

ಏಕಾದಶೇಂದ್ರಿಯ ಏಕ ಕ್ರಿಯೆಗಳನು ನಾ
ಸಾಕುಯದೆ ಶುಭದಿ ಸ್ವೀಕರಿಸುದ್ಧರಿಸುವೆ ನಾ ೨೯

ಏಕಮಾದ್ವಿತೀಯ ಏಕಾಂತಿಗಳ ಪ್ರಿಯ ನಾ
ಏಕೈಕ ಸುಶರಣ್ಯ ಲೋಕೇಶ ನರೇಣ್ಯ ನಾ ೩೦

ಏಕಾಂತ ಭಕ್ತರಿಗನೇಕತ್ರ ವಿಶ್ವರೂಪ ನಾ
ನೀಕರುಣದಿ ತೋರಿ ಬೇಕಾದ ಗತಿವೀವೆ ನಾ ೩೧

ಏಕೋತ್ತರ ಪಂಚಾಶದ್ವರ್ಣ ಸ್ವರ ನಾಮಕನೆ ನಾ
ಲೌಕಿಕಾದಿಕ ಸರ್ವ ಶಬ್ದಾರ್ಥ ವಾಚಕನೆ ನಾರಾಯಣ ೩೨

ಒಪ್ಪಿಡಿವಲಿಗೆ ವೈಕುಂಠ ಪದವಿತ್ತೆನಾ
ತಪ್ಪು ವಹಿಸುವರಲ್ಲಿ ನಿನಗೆ ಸಮ ಕರುಣೆಯಿಲ್ಲ ನಾ ೩೩

ಒಂದು ವದನೊಂದು ಜಿಹ್ವೆಯ ಮಂದಮತಿ ನಾ
ಎಂದು ವರ್ಣಿಪೆ ನಿನ್ನಾಂತ ಗುಣರೂಪ ನಾ ೩೪

ಓದನೋದಕ ವಿಶ್ವರೂಪಕ್ಕೊದಗಿಪ ಅಹರ ನಾ
ಆದಿನಾದಿ ಕರ್ತೃಗಾಧ ಬ್ರಹ್ಮಾಂಡ ಭರ್ತ ನಾ ೩೫

ಓಂಕಾರ ಪ್ರತಿಪಾದ್ಯ ಶಂಖ ಚಕ್ರಾಂಕಿತ ಶ್ರೀ ನಾ
ಪಂಕಜಾಸನ ಗರುಡ ಶಂಖರಾಹಿ ಸುರದೇವ ೩೬

ಅಂಶಾವತಾರ ಆವೇಶ ಅಂತರ್ಯಾಮಿ ನಾ
ಅಂಶ ಅಧಿಷ್ಟಾನ ವಿಭೂತಿ ಸನ್ನಿಧಾನ ರೂಪ ನಾ ೩೭

ಕನಸು ಮನ ಕರ್ಮ ಕೃಷ್ಣಾರ್ಪಣನೆ ಕೈಗೊಂಬೆ ನಾ
ಅನಘವೆಂದವರಘವ ಅನುದಿನದಿ ಅಪಹರಿಪೆ ನಾ ೩೮

ಕಮಬಂಧಕ ಕರ್ಮಾಕರ್ಮ ನಿಯಾಮಕನೆ ನಾ
ಕರ್ಮಮೋಚಕ ಕರ್ಮಫಲದ ಮಹಾಕರ್ಮಗತ ನಾ ೩೯

ಕರ್ಮಸ್ವರೂಪ ಕರ್ಮಸಾಕ್ಷಿ ಸ್ವರಕರ್ಮಕೃತನಾ
ಕರ್ಮಜಿತ ನಿಷ್ಕರ್ಮ ಕರ್ಮನಿಗ್ರಹ ಕರ್ಮಿ ನಾ ೪೦

ಕವಳಗಳನುಣುತ ಸಮರ್ಪಿಸಲು ಸ್ವೀಕರಿಪೆ ನಾ
ಅವಸರಕೆ ಬಂದೊದಗಿ ನಾಮಾಮೃತವನುಣಿಪೆ ನಾ ೪೧

ಕಾಲನಾಮಕ ಕಾಲಪ್ರೇರಕ ಕಾಲಾತೀತ ನಾ
ಕಾಲಾಂತರ್ಗತ ಮಹಾಕಾಲಸ್ವರೂಪ ಹರಿ ನಾ ೪೨

ಕಾಲಮಾನಿಸುರರ ಕಾಲನಿಯಾಮಕನೇ
ಕಾಲನೇಮಿ ಕೌಂಸ ಕಲಿಧಂಸ ಕಾಲಕಲ್ಕಿ ನಾ ೪೩

ಕೃಪಣರೋತ್ಸಲ ಕೃತೀಶ ಕೃಪಾಪೂರ್ಣ ಕರಿಗೊಲಿದೆ ನಾ
ಕೃಪಾಗೈದು ಭಕ್ತರಿಗೆ ಅಪರೋಕ್ಷ ಪಾಲಿಸುವೆ ನಾ ೪೪

ಕೊಟ್ಟದನು ಕೈಗೊಂಬೆ ಬಿಟ್ಟವರ ಬಂಧಿಸುವೆ ನಾ
ಕೊಟ್ಟದನೇ ಕೊಟ್ಟರೂ ಸಂತುಷ್ಟನಾಗುವೆ ಪೂರ್ಣ ನಾ ೪೫

ಕ್ಲೇಶಾನಂದಗಳೆಲ್ಲ ಶ್ರೀಶ ನಿನ್ನಾಧೀನ ನಾ
ಶ್ವಾಸೋಚ್ಛಾಸಕ್ಕೂ ಜಗಕೆ ಲೇಶ ಶಕ್ತಿಯು ಇಲ್ಲ ನಾ ೪೬

ಕ್ರಿಮಿಯಿಂದ ರಾಜ್ಯವಾಳಿಸಿದ ಮಹಾನ್ಮಹಿಮ ನಾ
ಕ್ರಿಮಿಯಾದಿ ಬ್ರಹ್ಮಾಂತ ಅಮಿತ ಜೀವರ ಬಿಂಬ ನಾ ೪೭

ಗರ್ಗಾರ್ಪಿತ ಸುನಾಮ ಮಾರ್ಗದ್ವೈತರೋದ್ಧಾರಿ ನಾ
ಸ್ವರ್ಗಾಪರ್ಗ ಸಮಗ್ರ ವ್ಯಾಪ್ತ ಸುಪಾದ ನಾ ೪೮

ಗಂಧವಿತ್ತಳ ಕಾಯ ಕುಂದು ತಿದ್ದಿಸಿವಲಿದು ನಾ
ಸುಂದರಿಯ ಮಾಡಿ ಕಂದರ್ಪ ಸುಖ ಸಲಿಸಿದೆ ೪೯

ಗಾಯತ್ರಿ ಪ್ರತಿಪಾದ್ಯ ಗಾಯತ್ರಿ ಸ್ವರೂಪ ನಾ
ಗಾಯತ್ರಿ ಗಮ್ಯ ಮಹಾಗಾಯತ್ರಿ ಮಂತ್ರಗಮ್ಯ ನಾ ೫೦

ಜಗಜನಕ ಜನನಿ ಜಗನ್ನಾಥ ಜಗತ್ರಾಣ ಪ್ರಭು ನಾ
ಜಗದಂತರ್ಯಾಮಿ ಜಗಚಕ್ಷು ಜಗಚ್ಛಾಲಕನೆ ನಾ ೫೧

ಜಗಕಾದಿ ಪುರುಷ ಸರ್ವಜಗಕೆ ಅತಿಬಿನ್ನನೇ ನಾ
ಜಗದ ಮಾನವರಂತೆ ನಟಿಸಿ ಜಗ ಮೋಹಿಸುವೆ ನಾ ೫೨

ಜಡಜ ಭವ ಪಿತ ನಾಮ ನುಡಿಯುವರು ಸದಾ ಮುಡಿಯು ನಾ
ಜಡ ಭೂತ ಜಲಮಿಂದು ಮಡಿಯೆಂಬುದು ಅತಿ ಮೌಢ್ಯ ನಾ ೫೩

ಜನನ ಮರಣವಿದೂರ ಜನಿಸುವಿ ಜನರೊಳಿದ್ದು ನಾ
ಮನವಚನಗಳು ನಿನ್ನ ಗುಣದ ಕೊನೆಗಾಣವು ನಾ ೫೪

ಜಲತೃಣಗೊವಗೊಂಡ ಗೋಸಲೆ ಸುಧಾಗರೆವಂತೆ ನಾ
ಅಲ್ಪಭಕ್ತರಿಗೂ ಅತಿ ಸುಲಭದಿ ಮೋಕ್ಷವನೀವೆ ನಾ ೫೫

ಜೀವ ನಿಯಾವಕನೆ ಜೀವಾಂತರ್ಗತ ಬಿಂಬ ನಾ
ಜೀವಾದಾರಕ ಜೀವನದ ಜೀವ ಸಂಜೀವ ನಾ ೫೬

ಜೀವನಲ್ಲದ ಜೀವರೂಪಿ ಜೀವರ ಗತಿದ ನಾ
ಜೀವಗಣಾರಾಧ್ಯ ರಾಜೀವಭವ ಜೀವಪಿತ ನಾ ೫೭

ಜೀವೇಚ್ಛೆ ಫಲಿಸಲಿಕೆ ಈಶೇಚ್ಛೆ ಕಾರಣವು ನಾ
ಜೀವೇಶರೇಚ್ಛೆ ಸಹಕರಿಸಲು ಸಾಧನ ಸಿದ್ಧಿ ನಾ ೫೮

ಡೊಂಕು ತಿದ್ದಿದೋಲ್ ಎನ್ನ ಮಂಕುಮನ ತಿದ್ದಯ್ಯ ನಾ
ಶಂಕಾರಹಿತ ವಿಜ್ಞಾನ ಭಕುತಿ ಭಾಗ್ಯಗಳಿಯೋ ನಾ ೫೯

ತತುವೇಶರಿಗೆ ತಿಳಿಯದತುಲ ಮಹಮಹಿಮನೆ ನಾ
ಸ್ತುತಿಸಬಲ್ಲೆನೆ ನಿನ್ನ ಮತಿನಿಲುಕದ ಮಹನೆ ನಾ ೬೦

ದನುಜರು ಮುನಿದು ನಿನ್ನ ಕೆಣಕಿ ಮಾಡುವದೇನು ನಾ
ವನಿಕೆಗಳು ಧಾನ್ಯ ಹಣಿವಂದದಲಿ ಥಳಿಸುವೆಯೊ ನಾ ೬೧

ಧನಕಾಯ್ವ ಫಣಿಯಂತೆ ಪನಿಮಿತುಪಕಾರಿ ಹರಿ ನಾ
ಪ್ರಣತರನು ದಿ ನಯನ ನಿಮಿಷದೋಲ್ ರಕ್ಷಿಸುವೆ ನಾ ೬೨

ದೃಢಧ್ಯಾನ ಮನಕಿತ್ತು ಬಿಡದೆ ನಾಮವ ನುಡಿಸು ನಾ
ಕೆಡರ ಸಂಗವ ಬಿಡಿಸಿ ಕಿಡಿಗೇಡಿ ಭವಕೆಡಿಸು ನಾ ೬೩

ಧರ್ಮ ಸಂರಕ್ಷ ಯಮಧರ್ಮ ಶಾಸಕ ಧರ್ಮಿ ನಾ
ಧರ್ಮ ಸೂಕ್ಷ್ಮಜ್ಞ ಮಹಧರ್ಮ ಶಿಕ್ಷಕ ಗುರುವೆ ನಾ ೬೪

ಧರ್ಮ ಸ್ವರೂಪ ಸದ್ಧರ್ಮ ಸಂಸ್ಥಾಪಕನೆ ನಾ
ಧರ್ಮವಿಧಧರ್ಮನಿಧೆ ಧರ್ಮವಿವರ್ಧನ ಪ್ರಭುವೆ ನಾ ೬೫

ಧರ್ಮ ಸಾಕ್ಷಿಗಲೋಕ ಧರ್ಮಗ್ಲಾನಿ ವಿನಾಶ ನಾ
ಧರ್ಮರಾಜ ಸುಪುತ್ರ ಧರ್ಮ ಸಂಗ್ರಹ ಕ್ಷೇತ್ರ ನಾ ೬೬

ನಾನು ಅಜ್ಞಾತನು ನೀನು ವಿಜ್ಞಾನ ಪೂರ್ಣ ನಾ
ನಾನಿನ್ನ ಮರೆತರೂ ನೀಯೆನ್ನ ಮರೆಯದಿರು ನಾ ೬೭

ನಿನಗಿತ್ತು ಭುಂಜಿಪರು ನಿತ್ಯೋಪವಾಸಿಗಳು ನಾ
ನಿನಗರ್ಪಿಸದ ಭೋಜ್ಯವಸ್ತು ಸೂಕರವಿಷ್ಟ ನಾ ೬೮

ನಿನ್ನ ಧ್ಯಾನಾಸಕ್ತ ಮನುಜನು ಸದಾ ಮಡಿಯುನಾ
ನಿನ್ನ ಸ್ಮರಿಸಿದ ಅಧಮ ಮಿಂದರೂ ಮೈಲಿಗೆಯಾ ೬೯

ನಿನ್ನ ನೆನೆವೇ ಸ್ವರ್ಗ ನಿನ್ನ ಮರವೆ ನರಕ ನಾ
ನಿನ್ನ ಕಥಾ ಮುಕ್ತಿ ಪಥ ನಿನ್ನ ಪೂಜಾಸಾಯುಜ್ಯ ನಾ ೭೦

ನಿನ್ನ ಧ್ಯಾನಾಸನ್ನಿಧಿ ಅಸಂಪ್ರದ್ನಾತ್ಸಮಾಧಿ ನಾ
ಪಾಡುತ ಬಾಷ್ಪ ಸುರಿಸುವದೆ ವಿರಿಜಾಸ್ನಾನ ೭೧

ನಿನ್ನ ಸ್ಮರಣೆ ಬ್ರಹ್ಮೋಹಭಾವನಾ ದೋಷಾ ನಾ
ಘನ್ನ ತಮಸಿದ ಸಿದ್ಧಿ ಸಾಧನಗಳಿವು ಸತ್ಯ ನಾ ೭೨

ನಿನ್ನ ಸ್ಮರಿಸದ ವಿಪ್ರಜನುಮ ಸುತರಾಂ ಬೇಡ ನಾ
ನಿನ್ನ ನೆನವಿನ ಶೂದ್ರಜನುಮವೇ ಸೌಭಾಗ್ಯ ೭೩

ನಿನ್ ಪೊಂದಿದ ದಾಸ ದಾಸರ್ಥಸುಗೂಸೆಂದು ನಾ
ಮನ್ನಿಸೆನ್ನನು ತಂದೆ ಘನ್ನ ಕರುಣಾರ್ಣವನೆ ೭೪

ನಿನ್ನಂತ ಧಾತೃವು ತ್ರಿಜಗದೊಳಾರಿಲ್ಲ ನಾ
ಎನ್ನಂದ ಪಾಪಿಷ್ಠ ಭುವನದೊಳು ಪುಟ್ಟಿಲ್ಲ ನಾ ೭೫

ನಿನ್ನ ಧ್ಯಾನವನಿತ್ತು ಎನ್ನ ಧನ್ಯನ ಮಾಡು ನಾ
ನಿನ್ನವನಾನಾದುದಕೆ ಅನ್ಯರಿಗಾಲ್ಪರಿಸದಿರು ನಾ ೭೬

ನಿನ್ನವರ ಸಂಗ ನಿನ್ನ ದಾಸ್ಯವ ನೀಡು ನಾ
ನಿನ್ನ ಅಂಕಿತವಿರಿಸು ನಿನ್ನ ಕ್ಷೇತ್ರಕೆ ನಡೆಸು ನಾ ೭೮

ನಿನ್ನ ನಾಮವ ನುಡಿಸು ನಿನ್ನ ದಾಸ್ಯದಿ ದುಡಿಸು ನಾ
ನಿನ್ನ ಹಂಬಲ ಹಿಡಿಸು ನಿನ್ನ ಕವಚವ ತೊಡಿಸು ನಾ ೭೯

ನಿನ್ನ ಎಂಜಲ ಉಣಿಸು ನಿನ್ನ ಪಾದಜಲ ಕುಡಿಸು ನಾ
ಕ್ಷಕ್ಷ ನೀ ಕೊಡದೆ ಜಗದಿ ಕೊಡುವನ್ಯದಾತನು ಇಲ್ಲ ನಾ ೮೦

ನೀ ಕೊಟ್ಟರುಂಟು ಕೊಡದಿರೆ ಬ್ರಹ್ಮಾದ್ಯರು ಬರಸು ನಾ
ನೀಚೋದ್ಧಾರಕ ದುಷ್ಟ ಪ್ರಾಚೀನ ಸಹಿಸಯ್ಯ ನಾ ೮೧

ವಾಚಾಮಗೋಚರ ಸದಾಚಾರದಿರಿಸೆನ್ನ ನಾ
ನುಡಿನುಡಿಗೆ ತವನಾಮ ನುಡಿಯುವರು ನರರಲ್ಲ ನಾ ೮೨

ಅಡಿಗಡಿಗೆ ತವಮಹಿಮೆ ಪಾಡಿ ಪೊಗಳ್ವರು ಸುರರು ನಾ ೮೩

ನಿನ್ನೊಳಗೆ ನಿನ್ನ ದಯ ತಾಯಿ ಮೋಹದಂತೆ ಘನ ನಾ ೮೪

ಪತಿತ ಪಾವನರಾಮ ಪ್ರತಿಮ ಸದ್ಗುಣಧಾಮ ನಾ
ಪಿತಾಮಹನ ಪತಯ್ಯ ತ್ರಿಪಥ ಕಾಮಿನಿಗೇಯ ೮೫

ಪರೀಕ್ಷಿತ ಪ್ರಿಯ ವ್ರತ ಗುರು ಸಾಂದೀಪದಾತ ನಾ
ಹರಿದಾಸ ಹರಿಶ್ಚಂದ್ರ ಬಾಣಭಕ್ತರ ಪೊರೆದೆ ನಾ ೮೬

ಪರತತ್ವ ಪ್ರಭು ಪರಾತ್ಪರ ಗುರುವೆ ತ್ರಿಜಗಕೆ ನಾ
ಪುರುಷನೂ ಮೋಹಿಸುವ ಪರಮಸುಂದರ ರೂಪ ನಾ ೮೭

ಪರಮ ಪಾವನ ತರ ಸುಚರಿತ ಮಂಗಲ ಮೂರ್ತಿ ನಾ
ಪರಿನಾಮ ಧರಿಸಿದ ದೋಷ ಧರೆಯೊಳಿಲ್ಲ ನಾ ೮೮

ಸೃಷ್ಟಿಸಿದವರ ಸೇವಾಸ್ಯತ ಭಕ್ತನಿಗೊಲಿದೆ ನಾ
ಇಟ್ಟಿಗೆಯ ಮೇಲ್ನಿಂದು ಸೃಷ್ಟಿಸುರರುದ್ಧರಿಪೆ ನಾ ೮೯

ಪರುಷ ರೂಪತ್ರಯ ಪುರಾತನ ಪುರುಷ ವರಾ ನಾ
ಪರಮ ಪುರುಷಾರ್ಥಪ್ರದ ಪರಮಾತ್ಮ ಪರದೈವ ನಾ ೯೦

ಪುರುಷ ಸೂಕ್ತ ಸುಮೇಯ ಪುರುಷ ಸ್ತ್ರೀರೂಪ ದ್ವಯ ನಾ
ಪುರುಷೋತ್ತಮನೆ ಕ್ಷರಾಕ್ಷರ ಪುರುಷ ಪೂಜ್ಯಪದ ನಾ ೯೧

ಬಡತನವು ಬರಲೇನು ಬಡವರಾಶ್ರಯ ನೀನು ನಾ
ಬಡಬ್ರಾಹ್ಮಣನಿಗೆ ಮುಕ್ತಿ ಸಡಗರದ ಸುಖವಿತ್ತೆ ೯೨

ಭಕ್ತರಿಗತಿ ಸಮೀಪಾಭಕ್ತರಿಗೆ ಬಹುದೂರ ನಾ
ವ್ಯಕ್ತಿ ಹೇಗಿರಲೇನು ಭಕ್ತಿಯನು ನೋಡ್ವಲಿವೆ ನಾ ೯೩

ಬಲಿರುಕ್ಮಾಂಗದ ಪುಂಡಲೀಕ ಮುಚುಕುಂದ ವರದ ನಾ
ನಳ ನಹುಷ ನೃಗ ನಕ್ರ ನಳಕೂಬರರ ಕಾಯ್ದೆ ನಾ ೯೪

ಬೆಟ್ಟ ಬೆರಳಲಿ ಧರಿಸಿ ಜಿಷ್ಣುವಿನ ಮದವಳದೆ ನಾ
ಸಿಟ್ಟ ಒರಳಿಗೆ ನಿನ್ನ ಕಟ್ಟಿ ಹೊಡೆದಳ ಪೊರೆದೆನಾ ೯೫

ಬೆಟ್ಟ ಬೆನ್ನಲಿ ಹೊರೆಸಿದಮರರಿಗೆ ಸುಧೆಯಿತ್ತೆ ನಾ
ಕಟ್ಟೆಗೆ ತರಿಸಿದ ಗುರುಸತಿಗೆ ಸುತನಿತ್ತೆ ನಾ ೯೬

ಬಿಂಬ ಪ್ರತಿಬಿಂಬರೊಳು ಬಿಂಬ ಮೂಲನು ನೀನು ನಾ
ಬಿಂಬ ನೀ ಜಗಕೆ ಪ್ರತಿಬಿಂಬ ನಿನಗೆ ಜಗತ್ತು ನಾ ೯೭

ಒರ್ಮಿಪೀತ ಭಕ್ತರ ದುಷ್ಕರ್ಮತ್ರಯಗಳ ದಹಿಪೆ ನಾ
ನಿರ್ಮಲ ಸುಜೀವರ ಶ್ರೀ ಹೃದಯದಲ್ಲಿ ನೆಲಸಿರುವೆ ನಾ ೯೮

ಬೈದ ಚೈದ್ಯನ ಬಾಣ ಹೊಡೆದ ವ್ಯಾಧನ ಕ್ಷಮಿಸಿ ನಾ
ಮೈದುನನ ಬಂಡಿ ಬೋವಾದೆ ನಿರಭಿಮಾನಿ ನಾ ೯೯

ಭವಬಂಧ ಮೋಚಕ ಭವಾಂಬುಧಿಗೆ ಅಂಬಿಗನೆ ನಾ
ಭವಬದ್ಧ ಅಜಭವ ಸುಜೀವ ಗಣರೋದ್ಧಾರಿ ನಾ ೧೦೦

ಭವಕೆನ್ನ ಭರಿಸದಿರು ಜವನರಿಗೀಯದಿರು ನಾ
ಭುವನಪಶುವೆನಿಸದಿರು ಅವನಿಗ್ಹೊರೆ ಮಾಡದಿರು ನಾ ೧೦೧

ಮನಸುಕೃತ ಮಹಾಭೋಜ್ಯ ನೆನೆಸಿದೊಡೆ ಕೈಕೊಳ್ಳುವೆ ನಾ
ಕನಸು ಮನಸಿಲಿ ಪೊಳೆದು ಅನುಪಮಾಲ್ಹಾದ ವೀವೆ ನಾ ೧೦೨

ಮಂತ್ರಸ್ವಾಮಿಯೆ ಮಹಾಮಂತ್ರ ಪ್ರತಿಪಾದ್ಯನೆ ನಾ
ಮಂತ್ರಮಯ ಗಾಯತ್ರಿ ಮಂತ್ರಸ್ವರೂಪನೆ ನಾ
ಮಂತ್ರಬೀಜನು ನೀನೆ ಮಂತ್ರದ್ಯೃತ ಮಂತ್ರಜೀತ ನಾ ೧೦೩

ಮುಟ್ಟಿದರೆ ಮೈಲಿಗೆಯು ಮುಟ್ಟದಿರೆ ಮಡಿಯುಳಿಕೆ ನಾ
ಸೃಷ್ಟೀಶ ಹರಿ ವ್ಯಾಪ್ತಿ ನಿಷ್ಠಜನದ ಮಡಿಯು ನಾ ೧೦೪

ರಾಮ ಮಂತ್ರವ ಜಪಿಸಿ ಕಾಮಹರ ಬದುಕಿದನು ನಾ
ನಾಮ ನರಕಸ್ಥರಿಗೆ ಸ್ವರ್ಗದಲಿ ಸುಖಿಸಿತು ನಾ ೧೦೫

ರಸಗಳೆಲ್ಲವೂ ಸುಮಂಗಳು ರಸಾಗ್ರವು ನಿನಗೆ ನಾ
ರಸಸೂಕ್ಷ್ಮರೂಪ ಅಪ್ರಾಕೃತ ರಸವಗ್ರಹಿಪೆ ನಾ ೧೦೬

ವೈಷಮ್ಯ ನೈರ್ಘೃಣ್ಯ ದೋಷಲೇಶ ವಿಹೀನ ನಾ
ಉಪಾಸನಾದಂತೆ ಅಭಿಲಾಷಿತಾರ್ಥನೀವೆ ನಾ ೧೦೭

ವಿಷದ ಮೊಲೆ ಹಾಲುಂಡೆ ವಿಷದ ಮಡು ಧುಮಕಿದೆ ನಾ
ವಿಷಶಯ್ಯನಾಗಿ ವಿಷಕಂಠನ ಸೇವೆಯಗೊಳುವೆ ನಾ ೧೦೮

ವಿಷತಿಕ್ಕಿನಿನದಾಸ ವಿಶ್ವವನು ಉಳಿಸಿದೆನು ನಾ
ವಿಷಬಿಂದು ನುಂಗಿ ತತ್‌ದಾಸ ಮೃತ್ಯುಜಯಿಸಿದೆನು ನಾ ೧೦೯

ಶಂಕರನ ಸಂಕಟವ ತರಿದೆ ದೈತ್ಯನ ಸಹಿಸಿದೆ ನಾ
ಮಂಕಾಗಿ ಮೋಹಿಸಲು ಕಿಂಕರನ ಉದ್ಧರಿಸಿದೆ ನಾ ೧೧೦

ಶರಣಾಗತ ಕಲ್ಪತರು ಕಾಮಧೇನುವು ನಾ
ಸುರಗುರುಗಳು ಸಾರಿ ಸರ್ವಜಗಕೆ ಹೇಳಿಹರು ನಾ ೧೧೧

ಶ್ರೀಪತಿಯೇ ನಿನ್ನಂಥ ಪಾಪದಹಿತರ ಕಾಣೆ ನಾ
ಗೋಪಿಯರ ಕೂಡಿ ಪತಿವ್ರತಾ ಧರ್ಮವ ಬೋಧಿಸಿದೆ ನಾ ೧೧೨

ಸತ್ಯಸಂಕಲ್ಪ ಸ್ಥಿರಚಿತ್ತ ಸತ್ತೋತ್ತಮನ ನಾ
ಭೃತ್ಯರ ಅಪಮೃತ್ಯು ಹರ ನಿತ್ಯ ಮುಕ್ತರ ಸಖ ನಾ ೧೧೩

ಸರ್ವಕರ್ಮಸ್ವತಂತ್ರ ಕೃತಕರ್ತಾ
ಸರ್ವಕರ್ಮಗಳ ಗತ ಸರ್ವಕರ್ಮಾಲಿಪ್ತ ನಾ ೧೧೪

ಸರ್ವಕ್ರಿಯಾ ಫಲ ಭೋಕ್ತ ಸರ್ವ ಭೋ ಚೈತ್ರ ನಾ
ಸರ್ವಕ್ರಿಯೇ ಪ್ರೇರಕ ಸರ್ವ ಕರ್ಮೋದ್ಬೋದಕ ನಾ ೧೧೫

ಸೃಷ್ಟಿ ಸ್ಥಿತಿ ಪ್ರಳಯಾದಿ ಅಷ್ಟ ಮಹಾಕ್ರಿಯಾಕರ್ತ ನಾ
ಜೇಷ್ಠ ಸುರರಿಗೂ ನೀನು ಶ್ರೇಷ್ಠ ದೇವನಾಗಿರುವೆ ನಾ ೧೧೬

ಸ್ವೇಚ್ಛಾಸ್ವತಂತ್ರ ಮಧ್ವಾದ್ಯನಂತ ಅವತಾರಿ ನಾ
ನೆಚ್ಚಿದ್ದ ಸದ್ಭಕ್ತರಿಗೆ ಮೆಚ್ಚಿ ಮೋಕ್ಷಮನೀವೆ ನಾ ೧೧೭

ಸರ್ವಭಾಗ್ಯವು ನೀವೆ ಸರ್ವಸಂಪತ್ತು ನೀನೆ ನಾ
ಸರ್ವ ಬಳಗವು ಬಂಧು ಪಿತೃ ಮಾತೃಗತಿ ನೀನೆ ನಾ ೧೧೮

ಸಹಸ್ರವದನ ದ್ವಿಸಹಸ್ರ ಜಿಹ್ವೆಯ ಶೇಷ ನಾ
ಸಹಸ ಮಾಡಿಯೂ ಸಾಕಲ್ಲೇನ ನಿನ್ನ ವರ್ಣಿಸನು ೧೧೯

ಹಣಿಗೆ ಬಾಣದಿ ಹೊಡೆದ ಪಣದ ಭೀಷ್ಮನ ಪೊರೆದೆ ನಾ
ಮಣಿಸಿ ನಿನ್ನಸ್ತ್ರಕೆ ಭೀಮನ ಪಂಥ ಗೆಲಿಸಿದೆ ನಾ ೧೨೦

ಹರಕೆ ಹಾರ್ವನ ಭಕ್ತಿ ಶಿರಿಗೆ ಮೋಹಿಸಿ ಮನದಿ ನಾ
ತಿರುಪೆ ಆವಲಿಯ ತಿಂದು ಸ್ಥಿರ ಸಾಮ್ರಾಜ್ಯವನಿತ್ತೆ ನಾ ೧೨೧

ಹುಚ್ಚುಧೊರೆ ನಿನ್ನಂಥ ಮೆಚ್ಚಿ ಕೊಡುವರ ಕಾಣೆ ನಾ
ಕಚ್ಚಿ ಬೈದೊದ್ದು ಬಾಣ ಬಿಟ್ಟವರನು ಕಾಯ್ದೆ ನಾ ೧೨೨

ಹಿಂದೆಯುಮ್ ಹಿರಿಯರಾಡಿದ್ದನ್ನೇ ಪಾಡಿದೆನು ನಾ
ಬಂಧುರದಿ ಅವರನುದ್ಧರಿಸಿದೊಲ್ ಉದ್ಧರಿಸೆನ್ನ ನಾ ೧೨೩

ತತುವೇಶರೊಳಗಿದ್ದು ಮತಿ ಪ್ರೇರಿಸಿದಷ್ಟು ನಾ
ನುತಿಸಿದೆನಗೆ ಸದ್ಗತಿಪ್ರದನೆ ಶಿರಿವಿಠಲ ನಾರಾಯಣ ೧೨೪

ಶ್ರೀ ವಾದಿರಾಜಗುರುಗಳಂತರ್ಗತ ಭಾರತೀರಮಣ ಮುಖ್ಯ
ಪ್ರಾಣಾಂತರ್ಗತ ಶ್ರೀ ರುಕ್ಮಿಣೀ ಕೃಷ್ಣಾರ್ಪಣಮಸ್ತು

## ೫೬೦

### ಶ್ರೀ ಪ್ರಹ್ಲಾದನ ಚರಿತ್ರೆ

ವಂದಿಸುವೆ ಸಿರಿ ನಾರಸಿಂಹಗೆ
ಬಂದ ದುರಿತವ ತರಿವ ಶ್ರೀ ಮದಾ

ನಂದ ತೀರ್ಥರಿಗೊಂದಿಸುವೆ ಅನುದಿನವು ಭಕುತಿಯಲಿ
ಕಂದ ಭಕುತ ಪ್ರಹ್ಲಾದ ಚರಿತೆಯ
ಛಂದದಿಂದಲಿ ಪೇಳುವದಕೇ
ಬಂದ ವಿಘ್ನವ ಕಳೆವ ಸಿದ್ಧಿ ವಿನಾಯಕಗೆ ನಮಿಪೆ
ವಾದಿರಾಜರ ಚರಣ ಕಮಲಕೆ ೧

ಆದರದಿ ವಂದಿಸುತ ನಿತ್ಯದಿ
ಬೋಧಿಸಲಿ ಸುಜ್ಞಾನ ಭಕುತಿಯನೆಂದು ಪ್ರಾರ್ಥಿಸುತಾ
ಮೋದತೀರ್ಥರ ಮತವ ಪೊಂದಿದ
ಸಾಧುಸಜ್ಜನ ಭಕುತ ವೃಂದಗಳ್
ಪಾದಗಳಿರಾ ನಮಿಪೆ ಸನ್ಮತಿ ನೀಡಲೆಂತೆಂದು ೨

ಹಿಂದೆ ಸನಕಾದಿಗಳ ಶಾಪವ
ಹೊಂದುತಲೆ ಜಯ ವಿಜಯರೀರ್ವರು
ಬಂದರಾದಿತಿ ಗರ್ಭದಲಿ ಘೋರಸುರರೆಂದೆನಿಸಿ
ಇಂದಿರೇಶನೋಳ್ ದ್ವೇಷ ಭಾವದಿಂದ ವ
ಸುಂಧರೆಯ ಹಿರಣ್ಯಾಕ್ಷ ಬಂಧಿಸೆ
ಕೊಂದನ ಸುರ ವರಾಹ ರೂಪದಿಧರಣಿ ಉದ್ಧರಿಸಿ ೩

ಅನುಜನನು ಕೊಂದಿರುವ ಕಾರಣ
ಕನಕ ಕಶ್ಯಪು ರೋಷ ತಾಳುತ
ಘನ ತಪದಿ ಕಮಲಜನ ಮೆಚ್ಚಿಸಿ ವರಗಳನೆ ಪಡೆದು
ಅನಿಮಿಷರ ಜಯಿಸುತಲೆ ಋಷಿ
ಮುನಿಗಳನು ಪರಿಪರಿಲಿ ಪೀಡಿಸುರೆ
ಧನುಜನುಪಟಳ ತಾಳದಲೆ ಸುರರೆಲ್ಲ ಮೊರೆಯಿಡಲು ೪

ಸಿರಿಯ ರಮಣನು ಕರುಣದಲಿ ತಾ
ಸುರರ ಸಂತೈಸುತಲೆ ಪೇಳಿದಾ
ಹರಿಯ ಭಕುತರ ದ್ವೇಷಿಗಳಿಗಪಜಯವು ಖಂಡಿತವು
ಇರದು ಶ್ರೀಜಯವಿನ್ನು ಅವರವರ ಕು
ವರನನು ಘಾತಿಸುವ ಕಾಲವ
ನಿರೀಕ್ಷಿಸುತ ನೀವ ಮನದಿ ಶಾಂತಿಯ ತಾಳಬೇಕೆಂದಾ ೫

ಸತ್ಯಲೋಕದಿ ಅಜನ ಪೂಜೆಗೆ
ಉತ್ತಮ ಶ್ರೀ ತುಳಸಿ ಪುಷ್ಪವ
ನಿತ್ಯದಲಿ ತರುತಿರುವ ಭೃತ್ಯನು ಶಂಖುಕರ್ಣಾಖ್ಯಾ
ಚಿತ್ತದಲಿ ಶ್ರೀಹರಿಯ ನೆನೆಯುತ
ಹೊತ್ತು ಮೀರಲು ಒಂದುದಿನ ತಾ
ಪೊತ್ತ ಶಾಪವ ಹರಿಯ ಸಂಕಲ್ಪಾನುಸಾರದಲೀ ೬

ಸೃಷ್ಟಿಗೀಶನ ಶಾಪಧರಿಸುತ
ಶ್ರೇಷ್ಠಭಕ್ತನ ಧರೆಗೆ ಇಳಿಯುತ
ದುಷ್ಟ ಅಸುರರ ಕುಲದಿ ಜನಿಸಿದ ಪ್ರಹ್ಲಾದ ನಾಮದಲಿ
ಪುಟ್ಟಬಾಲರ ಕೂಡಿ ಆಡದೆ
ನಿಷ್ಠೆ ಇಂದು ಶ್ರೀಹರಿಯ ಪಾದವ
ಮುಟ್ಟಿ ಭಜಿಸುತಲಿರಲು ಕೇ ಕಾಲಗಳ ಕಳೆಯುತಿರೆ ೭

ಕಂದನಿಗೆ ವಿದ್ಯೆಯನು ಕಲಿಸಲು
ತಂದೆ ಹಿರಣ್ಯಕ ಯೋಚಿಸುತ ತಾ
ನಂದು ಕರೆಸಿದ ತನ್ನ ಕುಲಗುರು ಷಂಡಮರ್ಕರನು
ಛಂದದಿಂ ಎಮಗುಚಿತ ವಿದ್ಯೆಯ
ಕಂದನಿಗೆ ನೀವು ಕಲಿಸಬೇಕೆಂ
ತೆಂದು ನೇಮಿಸಿ ಕಳುಹಿದನು ಗುರುಕುಲಕೆ ಬಾಲಕನ ೮

ಓರಿಗೆ ಬಾಲಕರ ಕೂಡುತ
ಧೀರ ಶ್ರೀ ಪ್ರಹ್ಲಾದ ಕೇಳುತ
ಗುರುವು ಬೋಧಿಸುತಿರುವ ಆ ದುಶ್ಶಾಸ್ತ್ರವಚನಗಳಾ
ಹರಿಯ ನಿಂದಿಪ ಶಾಸ್ತ್ರಗಳು ಇವು
ಶ್ರವಣ ಕುಚಿತಲ್ಲಂದೆನುತ, ಆ
ದರದಿ ಮನದಲಿ ಸ್ಮರಿಸುತಿದ್ದನು ಹರಿಯ ಚರಣಗಳಾ ೯

ಹಿಂದೆ ಮಾತೆಯ ಗರ್ಭದಲಿ ತಾ
ನಿಂದಿರುವ ಸಮಯದಲಿ ನಾರದ
ಬಂದು ಬೋಧಿಸಿದಂಥ ಹರಿಮಹಿಮೆಗಳ ಧ್ಯಾನಿಸುತಾ
ಮಂದರೋದ್ಧರ ಮಾಧವನ ಗುಣ

ವೃಂದಗಳ ಚಿಂತಿಸುತ ಮನದೊಳಾ
ನಂದ ಬಡುತಿರೆ ಕಾಲಕಳೆಯುತಲಿರಲು ಒಂದು ದಿನ ೧೦

ದುಷ್ಟ ಹಿರಣ್ಯಕ ಬಾಲಕನ ಕರೆ, ಎಂ
ದಟ್ಟಲಾ ದೂತರನು ಬೇಗನೇ
ನಿಷ್ಠೆಯಿಂದಲಿ ಕುವರನನು ತಂದೊಪ್ಪಿಸಿದರಸುರನಿಗೇ
ಅಟ್ಟಹಾಸದಿ ನಗುತ ಕಂದಗೆ
ದೆಷ್ಟು ವಿದ್ಯೆಯ ಕಲಿಕೆ ಪೇಳೆನೆ
ದಿಟ್ಟ ನುಡಿದನಾದುಷ್ಟ ಶಾಸ್ತ್ರವ ಕಲಿಯಲಿಲ್ಲೆಂದು ೧೧

ಗುರುವು ಕಲಿಸಿದ ವಿದ್ಯೆ ಕಲಿಯದೆ, ನೀ
ಬೇರೆ ವಿದ್ಯೆ ಅದೇನು ಕಲಿಯೋ
ಭರದಿ ಘರ್ಜಿಸಿ ಪೇಳೆನಲು ಪ್ರಹ್ಲಾದ ತಾ ನುಡಿದಾ
ಹರಿಯು ಸರ್ವೋತ್ತವನು ಅಜಭವ
ಸುರರು ಎಲ್ಲರು ಕಿಂಕರರು ಎನಿ
ಸಿರುವ ಮಹಿಮೆಯ ಪೊಗಳುತಿರುವವು ಆಗಮಗಳೆಲ್ಲ ೧೨

ಹರಿಯು ಪರ ದೇವತೆಯು
ಸರ್ವರ ಸೃಷ್ಟಿಸುತ ಪಾಲಿಸುತ ನಿಹನೀ
ಹರಿಯ ಮಹಿಮೆಯು ಭರಿತವಿರುವದು ಸರ್ವಕಾಲದಲಿ
ಸಿರಿಯು ಆತನ ರಾಣಿ ಎನಿಪಳಾ
ಹರಿಯ ಸಮರಾರಿಲ್ಲವೆಂಬೀ
ಪರವಿದ್ಯೆ ಅರಿತು ನಾ ಹರಿಯ ಭಜಿಸುತ ಧನ್ಯನಾಗಿಹೆನು ೧೩

ಈತ ನಾಡಿದ ನುಡಿಯ ಕೇಳುತ
ತಾತ ಹಿರಣ್ಯಕ ಕೋಪದಿಂದಲಿ
ಏತರೇಪರಿ ಹರಿಯ ಭಜಿಸುವೆ ಸಾಕು ಮಾಡೆಂದಾ
ಘಾತಕನು ಆ ಹರಿಯು ಎಮ್ಮಯ
ಜಾತ ವೈರಿಯು ನಿನ್ನ ಚಿಕ್ಕ
ತಾತನನು ಕೊಂದಿರುವನಾತನ ಗೊಡವೆಬೇಡೆಂದಾ ೧೪

ಆಡದಿರು ಈಪರಿಯ ನುಡಿಯನು
ಮಾಡದಿರು ಹರಿಯಲ್ಲಿ ವೈರವ
ಬೇಡುಭಕುತಿಯ ಹರಿಯ ಚರಣಕೆ ವಂದಿಸುತ ನಿತ್ಯ
ರೂಢಿಗೊಡೆಯನು ನಮ್ಮ ಶ್ರೀಹರಿ
ಬೇಡಿದಿಷ್ಟಾರ್ಥಗಳನೀವನು ಕೊಂ
ಡಾಡುವವರನು ಮರೆಯದಲೆ ತಾ ರಕ್ಷಿಸುವನೆಂದಾ ೧೫

ಹರಿಯ ಮಹಿಮೆಯ ಕೇಳಿದಾಕ್ಷಣ
ದುರುಳ ಹಿರಣ್ಯಕ ರೋಷದಿಂದಲಿ
ಕರೆದು ದೈತ್ಯರಿಗ್ಹೇಳಿದನು ಕಂದನ ಕೊಂದು ಬಿಡಿರೆಂದು
ಭರದಿ ಭೃತ್ಯರು ಕೊಂಡು ಪೋಗುತ
ಪರಿಪರಿಲಿ ಘಾತಿಸುವ ಸುಮಯದಿ
ಹರಿಯು ರಕ್ಷಿಸುತಿದ್ದ ಭಕ್ತನ ಪರಮ ಕರುಣದಲೀ ೧೬

ಏನುಪಾಯವು ಇವನ ಕೊಲ್ಲಲು
ದಾನವರು ತಾವಸಮರ್ಥರೆನಲು
ಖಿನ್ನನಾಗುತ ಮನದಿ ಯೋಚಿಸುತಿರಲು ದೈತ್ಯೇಂದ್ರಾ
ಅನುನಯದಿ ಗುರುಪೇಳಿದಾಕ್ಷಣ
ಮನದ ಚಿಂತೆಯ ಬಿಡು ನೀ ದೊರೆಯೇ
ಇನ್ನು ಚಿಕ್ಕವನೀತನೆಗೆ ಚನ್ನಾಗಿ ಕಲಿಸುವೆವು ೧೭

ಮತ್ತೆ ಗುರುಗಳ ಜೊತೆಗೆ ನಡೆದನು
ಭಕ್ತವರ ಪ್ರಹ್ಲಾದ ಬಾಲ ತನ
ಮಿತ್ರ ಬಾಲಕರೊಡನೆ ಆನಂದದಲಿ ಇರುತಿರಲು
ಚಿತ್ತದಲಿ ಶ್ರೀ ಹರಿಯ ಸ್ಮರಿಸುತ
ಭಕ್ತಿಯಿಂದಲಿ ಭಜಿಸುತಿರಲು
ಇತ್ತ ಗುರು ಆಲಯದ ಹೊರಹೊಂಟರೊಂದು ದಿನ ೧೮

ಗುರುಗಳಿಲ್ಲದ ಸಮಯ ನೋಡುತ
ತರಳರೆಲ್ಲರು ಒಂದುಗೂಡುತ

ಕರೆದರಾ ಪ್ರಹ್ಲಾದನನು ತಮ್ಮೊಡನಾಟವಾಡೆಂದು
ಕರುಣದಲಿ ಪ್ರಹ್ಲಾದ ಪೇಳಿದಾ
ಬರಿದೆ ಸಮಯವ ವ್ಯರ್ಥಗೊಳಿಸದೆ
ಹರಿಯ ಮಹಿಮೆಯ ಪೇಳುವೆನು ನಾ ಕೇಳಿರೀಕ್ಷಣದೀ ೧೯

ಹರಿಯು ಪರದೇವತೆಯು ಎಮಗೆ
ಹರಿಯುಸರ್ವರ ರಕ್ಷನು ತಾ
ಗುರುವು ವರಪಿತ ಮಾತೆಯರಿಗಿಂತಧಿಕನೆನಿಸುವನು
ನಿರುತದಲಿ ಬಕುತಿಯಲಿಭಜಿಸಲು
ಪರಮ ಪುರುಷಾರ್ಥಗಳ ನೀವನು
ಕರುಣ ಸಾಗರನವನ ಮಹಿಮೆಗೆ ಸರಿ ಮಿಗಿಲು ಇಲ್ಲಾ ೨೦

ಇಂಥ ಹರಿಯನು ಭಜಿಸಿರೆನಲು
ಶಾಂತ ಚಿತ್ತದಿ ಪ್ರಹ್ಲಾದನೊಡನೆ
ಕಂತುಪಿತನನು ಬಾಲರೆಲ್ಲರು ಭಕುತಿಯಲಿ ಪಾಡಿ
ಅಂತಃ ಕರಣದಿ ಶುದ್ಧರಾಗಿ ಅ
ನಂತ ನಾಮನ ಭಜಿಸುತಿರು
ವಂಥ ಕಾಲದಿ ಗುರು ಬಂದು ನೋಡಿದ ಭ್ರಾಂತನಾಗುತಲೀ ೨೧

ಏತಕೀಪರಿ ಭಜಿಸುತಿರುವಿರಿ ಶ್ರೀ
ನಾಥನನು ಬಾಲಕರೆ ನಿಲ್ಲಿಸಿ
ಘಾತವಾಯಿತು ಕಾರ್ಯ ಎಮಗಿನ್ನಾವ ಗತಿ ಬಹುದೋ ?
ಈತನಿಗೆ ವಿದ್ಯೆಯನು ಕಲಿಸಲ
ಭೂತನಾಥನಿಗಸದಳವು ಇ
ನ್ನೇತಕೇ ತಡ ಎನುತ ಕಂದನ ಕರೆತಂದರರಮನೆಗೆ ೨೨

ದೊರೆಯ ಕೇಳ್ಯೆ ನಿನ್ನ ಕಂದನ
ಚರಿಯ ನಮ್ಮಯ ಗುರುಕುಲದಲಿಹ
ತರಳರೆಲ್ಲರಿಗ್ಹೋರಿ ಭಜನೆ ಉಪದೇಶ ಗೈದಿರುವಾ
ತರತರದಿ ಪೇಳಿದರು ಆತನಿ

ಗಿರದು ನಿನ್ನಯ ಭಯವು ಎಂ
ದರುಹಿ ನಡೆದರು ಗುರುಗಳಾಗಲೆ ತಮ್ಮ ಆಶ್ರಮಕೆ ೨೩

ನುಡಿಯ ಕೇಳುತ ದೈತ್ಯರೋಷದಿ
ಗಡನೆ ಘರ್ಜಿಸಿ ಬಾಲ ಸೆಳೆಯುತ
ಬಿಡುವೆನಲ್ಲವೊ ನಿನ್ನನೀಕ್ಷಣ ಕೊಂದು ಹಾಕುವೆನು
ಒಡನೆ ತೋರೆಲೊ ನಿನ್ನ ಆ ಹರಿ
ಅಡಗಿರುವ ಸ್ಥಾನವನು ಈಗಲೇ
ಮೊದಲು ಆತನ ಕೊಂದು ಅನುಜಗೆ ತೃಪ್ತಿಪಡಿಸುವೆನು ೨೪

ಘನ್ನ ಹರಿ ಸರ್ವತ್ರ ವ್ಯಾಪ್ತನು
ನಿನ್ನೊಳಗೂ ಎನ್ನೊಳಗೂ ಇರುವನು
ಮುನ್ನ ಆತಗೆ ಸರಿಮಿಗಿಲು ಆರಿಲ್ಲವೆಂದೆನಲೂ
ಇನ್ನು ಏತಕೆ ಭಾರನಾ ಹರಿ
ಎನ್ನುತಲೆ ಕಡು ಕೋಪದಿಂದಲಿ
ಘನ್ನ ಸ್ತಂಭಕೆ ತನ್ನ ಗದೆ ಬೀಸಿದನು ದೈತ್ಯೇಂದ್ರಾ ೨೫

ಗಡನೆ ಬಂದನು ಭಕ್ತವತ್ಸಲ
ಒಡೆದು ಕಂಬವ ನೃಸಿಂಹರೂಪದಿ
ಗುಡುಗುಡುಸಿ ಘರ್ಜಿಸುತ ದೈತ್ಯನ ಪಿಡಿದು ತೆಕ್ಕೆಯಲೀ
ಗಡಗಡಸಿ ನಡುಗುತಿರೆ ಆಧರೆ
ಒಡನೆ ತಾರೆಗಳುದುರಲಾಕ್ಷಣ
ಗಡಬಡಿಸಿ ಓಡಿದರು ದೈತ್ಯರು ತಿರುಗಿ ನೋಡದಲೇ ೨೬

ದುರುಳ ದೈತ್ಯನ ಪಿಡಿದು ನರಹರಿ
ತೆರಳೀ ಹೊಸ್ತಿಲ ಮೇಲೆ ಕುಳಿತು
ಕರಳ ಹಾರವ ತೆಗೆದು ತನ್ನಯ ಕೊರಳಿಗ್ಹಾಕಿದನು
ಸುರರು ಅಂಬರದಲ್ಲಿ ನೆರೆದು
ಸುರಿಸಿ ಪೂಮಳೆ ಹರಿಯ ಸಿರದಲಿ
ಭರದಿ ಜಯ ಜಯವೆಂದು ಮಂಗಳವಾದ್ಯ ಮೊಳಗಿಸುತ ೨೭

ವಂದಿಸುತ ಭಕುತಿಯಲಿ ತಾ
ನಿಂದಿರುವ ಪ್ರಹ್ಲಾದ ಬಾಲನ
ಮುಂದೆ ನೀ ಬಾರೆಂದು ಕರೆಯುತ ಸಿರದಿ ಕರವಿರಿಸೀ
ಕಂದ ಬಹು ನೊಂದಿರುವೆ ನೀ ನಾ
ಇಂದು ಮೆಚ್ಚಿದೆ ನಿನ್ನ ಭಕುತಿಗೆ
ಛಂದದೊರೆಗಳ ಬೇಡು ಬೇಕಾದ್ದೆಂದ ನರಹರಿಯು ೨೮

ಏನು ಬೇಡಲಿ ಶ್ರೀಹರಿಯೇ ನಾ
ನಿನ್ನ ಕರುಣೆಯದೊಂದೆ ಸಾಕನೆ
ಗಿನ್ನು ಬೇಡವು ಮುಂದೆ ಈ ಸಂಸಾರ ಬಂಧನವು
ನಿನ್ನೊಡನೆ ವೈರವನು ಮಾಡಿದ
ಎನ್ನ ತಾತನಪರಾಧ ಮನ್ನಿಸಿ
ಘನ್ನ ಮುಕ್ತಿಯ ಪಾಲಿಸೆಂದು ಸಾಷ್ಟಾಂಗನಮಿಸಿದನು ೨೯

ಇಂಥ ಮಾತಿಗೆ ಮೆಚ್ಚಿ ನುಡಿದನು ಶ್ರೀ
ಕಾಂತ ಭಕ್ತ ಪ್ರಹ್ಲಾದ ಬಾಲಗೆ
ಅತ್ಯಂತ ಪ್ರೀತಿಗೆ ಪಾತ್ರನೆನಿಸಿಹೆ ಎನಗೆ ನೀ ಕೇಳು
ಸಂತ ಜನರೊಳು ನಿನ್ನ ಭಕ್ತರು
ಅಂಥವರೆ ಎನ್ನ ಭಕ್ತರೆಂದು ನಾ
ಪಂಥದಲಿ ಪೇಳುವೆನು ನಾನವರನುದ್ಧರಿಪೆ ೩೦

ಹರಿಯು ಈ ಪರಿ ವರಗಳೀಯುತ
ಹರುಷದಲಿ ರಾಜ್ಯವನು ಆಳೆಂ
ದ್ಧರಸಿ ಸುರುರಿಗೆ ಪಟ್ಟಗಟ್ಟಲು ಆಜ್ಞೆಮಾಡುತಲಿ
ಪರಮ ವೈಭವದಿಂದ ವಿಧಿ ಭವ
ಸುರರು ಎಲ್ಲರೂ ನೆರೆದು ಬಾಲಗೆ
ಹರಸಿ ಸಿಂಹಾಸನದಿ ಕುಳ್ಳಿರಿಸುತಲಿ ಪಾಡಿದರು ೩೧

ಮಂಗಳಂ ಸಿರಿನಾರ ಸಿಂಹಗೆ
ಮಂಗಳಂ ಸುರಸಾರ್ವಭೌಮಗೆ
ಮಂಗಳಂ ದಶರೂಪ ತಾಳಿದ ಅಸುರ ಮರ್ದನಗೆ

ಮಂಗಳಂ ಪ್ರಹ್ಲಾದ ಬಾಲಗೆ
ಮಂಗಳಂ ವ್ಯಾಸತೀರ್ಥಗೆ
ಮಂಗಳಂ ಗುರುಸಾರ್ವಭೌಮರಾಘವೇಂದ್ರರಿಗೆ ೩೨

ಮಂಗಳಂ ಜಯ ಮಂಗಳಂ
ಶುಭ ಮಂಗಳಂ
ಕಂದ ಶ್ರೀ ಪ್ರಹ್ಲಾದ ಚರಿತೆಯ
ಛಂದದಲಿ ಪಾಡಿದರೆ ಶ್ರೀ ಮು
ಕುಂದ ಮೆಚ್ಚುತ ನೀಡುವನು ತಾ ಬೇಡಿದಿಷ್ಟಾರ್ಥ
ನಂದತೀರ್ಥರ ಹೃದಯವಾಸ ಶ್ರೀ
ತಂದೆ ಸಿರಿವಿಠಲನಿಗರ್ಪಿಸ
ಲೆಂದು ಶ್ರೀ ಗುರುರಾಘವೇಂದ್ರರಿಗೊಪ್ಪಿಸುವೆ ನಿಪುಷ್ಪಾ ೩೩

ಶ್ರೀ ಪ್ರಹ್ಲಾದ ಚರಿತ್ರೆ ಸಂಪೂರ್ಣಂ
ಶ್ರೀ ರಾಘವೇಂದ್ರ ಗುರುವಂತರ್ಗತ ಶ್ರೀ ವಾದಿರಾಜ
ಗುರುವಂತರ್ಗತ ಶ್ರೀ ಭಾರತೀಶಾಂತರ್ಗತ
ಶ್ರೀ ಲಕ್ಷ್ಮೀನಾರಸಿಂಹಾತ್ಮಕ ಶ್ರೀ ಕೃಷ್ಣಾರ್ಪಣಮಸ್ತು
ಶ್ರೀಹರಿ....... ಓಂ–ಶ್ರೀ

## ೫೬೧

### ಶ್ರೀ ನಾರಾಯಣ ಪಂಜರವು

ಓಂ ನಮೋ ನಾರಾಯಣ ಓಂ ನಮೋ ಶ್ರೀರಮಣ
ಓಂ ನಮೋ ಹರಿ ಬಾದರಾಯಣ ಓಂ ನಮೋ ಅನಂತಗುಣ
ಓಂ ನಮೋ ರೂಪ ಘನ ಓಂ ನಮೋ ಸಂಪೂರ್ಣ ಪ

ಅಖಿಳಾಂಡ ಕೋಟಿ ಬ್ರಹ್ಮಾಂಡನಾಯಕ ಲಕ್ಷ್ಮೀನಾರಾಯಣ
ವಿಖಿನ ಸೋತ್ರಂಸ ವಿಶ್ವಾತ್ಮ ಪರಮಾತ್ಮ ಆದಿ ನಾರಾಯಣ ೧

ಅಗಣಿತ ಸುಗುಣಧಾಮ ನಿಗಮಗೋಚರ ಮಹಿಮ ನಾರಾಯಣ
ನಗಧರ ಮಹಾಕೂರ್ಮ ಜಗದ ಸಂಜೀವನ ನಾರಾಯಣ ೨

ಅಘದೂರ ಭಕ್ತಜನರಘ ಅಘಮರ್ಷಣಸ್ತುತ ಅಘಟನಾಘಟನ
ಶಕ್ತ ನಾರಾಯಣ ೩

ಅಂಗದೊಂದು ನರಕಸ್ತರನುದ್ಧರಿಸುತ ನಾರಾಯಣ
ಮಂಗಲ ಸ್ವರೂಪ ಸರ್ವಾಂಗ ಮಹಿಮನು ನೀ ಬಲ್ಲೆ ನಾರಾಯಣ
೪

ಅಂಗುಟವು ಸೋಂಕಿ ಶಿಲೆ ಮಂಗಲ ಸ್ತ್ರೀರೂಪಾಯ್ತು ನಾರಾಯಣ
ಅಂಗುಟದಿ ಜನ್ಯ ಸುರ ಗಂಗಾ ಜಗದಘಹಾರಿ ನಾರಾಯಣ ೫

ಅಚ್ಯುತ ಅಜ್ಞಜ್ಞಾನವನಿತ್ತು ನಾರಾಯಣ
ಪ್ರೋಚ್ಛ ಮೋಕ್ಷಕೆ ಭಕುತಿ ನಿಚ್ಚಣಿ ಏರಿಸುವೆ ನಾರಾಯಣ ೬

ಅಚ್ಯುತಾನಂತ ಗೋವಿಂದ ಕೃಷ್ಣ ಮುಕುಂದ ನಾರಾಯಣ
ಸಚ್ಚಿದಾನಂದಾತ್ಮ ನಿತ್ಯೋತ್ಸವ ಪ್ರಿಯ ನಾರಾಯಣ ೭

ಅಜನಾಮಕನೆ ಅಯೋನಿಜ ನಾಭಿಪದ್ಮಂ ನಾರಾಯಣ
ಅಜನ ಸೃಜಿಸಿದೆ ಜಗದಿಮಜಭಾಪದ್ಭುತ ಮಹಿಮ ನಾರಾಯಣ ೮

ಅಜಮಿಳ ಅಹಲ್ಯ ಭೃಗು ವಾಲ್ಮೀಕರೋದ್ಧಾರಿ ನಾರಾಯಣ
ಗಜರಾಜ ಧ್ರುವ ಪ್ರಹ್ಲಾದಂಬರೀಷರ ಪೊರೆದೆ ನಾರಾಯಣ ೯

ಅಕ್ರೂರ ಸಾತ್ಯಕಿ ವಿದುರ ಉದ್ದವ ಪ್ರಿಯ ನಾರಾಯಣ
ಶಕ್ರಸುತ ಸುಗ್ರೀವ ವಿಭೀಷಣ ಸುಧಾಮ ಸಖ ನಾರಾಯಣ ೧೦

ಅಣು ಮಹತ್ತರಿಪೂರ್ಣ ಅಣು ಮಹದ್ವಿಲಕ್ಷಣ ನಾರಾಯಣ
ಅಣುವಿಗತಿ ಅಣು ಘನಕೆ ಘನತಮ ಸುಂದರ
ನಿತ್ಯ ನಾರಾಯಣ ೧೧

ಅಣುಜೀವ ಗಣಭೂತ ಚಲನಗೈಸುವ ಶಕ್ತಿ ನಾರಾಯಣ
ತೃಣವು ಅಲ್ಲಾಹುದು ನಿನ್ನ ಚಲನಿಲ್ಲದೆ ನಾರಾಯಣ ೧೨

ಅದಿಭೂತ ಅಧ್ಯಾತ್ಮ ಅಧಿದೈವಗತ ಹರಿ ನಾರಾಯಣ
ಅಧಿಕಕ್ಕಧಿಕಾದ್ಭುತ ಅದೃಷ್ಟ ಅಧೋಕ್ಷಜನೆ ನಾರಾಯಣ ೧೩

ಅನಿಮಿತ್ತ ಉಪಕಾರಿ ನಿನಗೇನಿತ್ತು ಮೆಚ್ಚಿಸಲಿ ನಾರಾಯಣ
ಅನಪೇಕ್ಷಾನಶನ ಆನಂದಮಯ ಜ್ಞಾನಪೂರ್ಣ ನಾರಾಯಣ ೧೪

ಅನಿರುದ್ಧ ಪಂಚಕ ಚಿಂತಿಪ ಸದಾ ಭಕ್ತರಿಗೆ ನಾರಾಯಣ
ತನು ಮೈಲಿಗಿಲ್ಲ ನಿತ್ಯಮನಶುದ್ಧಿ ತನುಭೃತರು ನಾರಾಯಣ ೧೫

ಅಮಿತ ವಿಕ್ರಮ ವಿಷ್ಣು ಅಮರಗಣ ಸಾರ್ವಭೌಮ ನಾರಾಯಣ
ರಮಣಿ ಅಂಬ್ರಣಿ ಸ್ತವನ ಕೇಳಿ ಜಗ ಸೃಷ್ಟಿಸುವೆ ನಾರಾಯಣ ೧೬

ಅರಸು ಮೆಚ್ಚಲು ದಾಸಿ ಪರಶು ಮುಟ್ಟಲು ಲೋಹ ನಾರಾಯಣ
ಮೆರೆವಂತೆ ಮಾನ್ಯರಾಗುವರು ನಿನ್ನೊಲಿಸಿಹರು ನಾರಾಯಣ ೧೭

ಆತ್ಮಾಂತರಾತ್ಮ ವಿಶ್ವಾತ್ಮ ವಿದ್ಯಾನಾತ್ಮ ನಾರಾಯಣ
ಸ್ವಾತ್ಮ ಪರಮಾತ್ಮ ಕಾಲಾತ್ಮ ಪುರುಷೋತ್ತಮನೆ ನಾರಾಯಣ ೧೮

ಆನತೇಷ್ಟಪ್ರದ ಅನಿಮಿಷರ ಮನದೈವ ನಾರಾಯಣ
ಅನಾದ್ಯನಂತ ಅಪ್ರಮೇಯ ಅನುಪಮ ಚರಿತ ನಾರಾಯಣ ೧೯

ಆನಂದಕಂದ ಮಯಕಾಯ್ ಆನಂದತೀರ್ಥಧೇಯ ನಾರಾಯಣ
ಆನಂದಕಂದ ನಿತ್ಯಾನಂದ ಮುಕುಂದ ನಾರಾಯಣ ೨೦

ಆಪತ್ತು ಬರಲೇನು ಆಪದ್ಬಂಧು ನೀನಿರಲು ನಾರಾಯಣ
ಅಪರೋಕ್ಷಿಗೆ ಸದಾಸಮೀಪ ನಾರಾಯಣ ೨೧

ಆಪತ್‌ರಕ್ಷಕ ಅಪ್ರಾಕೃತ ಸ್ವರೂಪ ನಾರಾಯಣ
ಶ್ರೀಪತಿಯ ದಾಸರಿಗೆ ತಾಪತ್ರಯ ನಾರಾಯಣ ೨೨

ಆವಕುಲ ಗೋತ್ರ ವರ್ಣಾಶ್ರಮವನು ನೋಡದೆ ನಾರಾಯಣ
ಭಾವಶುದ್ಧಿಯ ಭಕ್ತಿ ನಿಷ್ಠಾವಂತಗೆ ಒಲಿಯುವೆ ನಾರಾಯಣ ೨೩

ಇಭವನದ ಬಿಂಬ ಸ್ತ್ರೀ ಪುರುಷರು ಭಯ ಸ್ವರೂಪ ನಾರಾಯಣ
ತ್ರಿಭುವನದ ಜೀವರಿಗೆ ಶುಭ ಪ್ರೇರಣೆಯ ಮಾಡು ನಾರಾಯಣ ೨೪

ಈಶ ನೀನೆ ಜಗಕೆ ಏಸೇಸು ಕಾಲಕೂ ನಾರಾಯಣ
ದಾಸರೆಲ್ಲರು ನಿನಗೆ ಸಾಸಿರ ಕಲ್ಪಕು ನಾರಾಯಣ ೨೫

ಉಗ್ರಸೇನನ ಸಭೆಯಲಿ ಭಟ್ಟಂಗಿ ಹೊಗಳಿದೆ ನಾರಾಯಣ
ಅಗ್ರಪೂಜೆಯಗೊಂಡೆ ರಾಜಸೂಯ ಯಾಗದಲಿ ನಾರಾಯಣ ೨೬

ಉತ್ಪತ್ತಿ ರಹಿತ ಜಗದುತ್ಪತ್ತಿ ಕರ್ತನೆ ನಾರಾಯಣ
ತತ್ಪಾದಾ ಶ್ರೀ ಭಕ್ತರೋತ್ಪತ್ತಿ ನಾಶಕನೆ ನಾರಾಯಣ ೨೭

ಊಹೆಗೂ ನಿಲುಕದ ಉತ್ತಮೋತ್ತಮ ಮಹಿಮ ನಾರಾಯಣ
ಹಾಹಾಹು ಹು ಗಂಧರ್ವ ಶಾಪವಿಮೋಚನೆ ನಾರಾಯಣ ೨೮

ಏಕಾದಶೇಂದ್ರಿಯ ಏಕ ಕ್ರಿಯೆಗಳನು ನಾರಾಯಣ
ಸಾಕುಯಿದೆ ಶುಭದಿ ಸ್ವೀಕರಿಸುದ್ಧರಿಸುವೆ ನಾರಾಯಣ ೨೯

ಏಕಮಾದ್ವಿತೀಯ ಏಕಾಂತಿಗಳ ಪ್ರಿಯ ನಾರಾಯಣ
ಐಕ್ಯೈಕ ಸುಶರಣ್ಯ ಲೋಕೇಶ ನರೇಣ್ಯ ನಾರಾಯಣ ೩೦

ಏಕಾಂತ ಭಕ್ತರಿಗೆನೇಕತ್ರ ವಿಶ್ವರೂಪ ನಾರಾಯಣ
ನೀ ಕರುಣದಿ ತೋರಿ ಬೇಕಾದ ಗತಿವೀವೆ ನಾರಾಯಣ ೩೧

ಏಕೋತ್ತರ ಪಂಚಾಶದ್ವರ್ಣ ಸ್ವರ ನಾಮಕನೆ ನಾರಾಯಣ
ಲೌಕಿಕ್ವಾದಿಕ ಸರ್ವ ಶಬ್ದರ್ಥ ವಾಚಕನೆ ನಾರಾಯಣ ೩೨

ಒಪ್ಪಿಡಿವಲಿಗೆ ವೈಕುಂಠ ಪದವಿತ್ತೆ ನಾರಾಯಣ
ತಪ್ಪು ಸಹಿಸುವರಲ್ಲಿ ನಿನಗೆ ಸಮ ಕರುಣೆಯಿಲ್ಲ ನಾರಾಯಣ ೩೩

ಒಂದು ವದನೊಂದು ಜಿಹ್ವೆಯ ಮಂದಮತಿ ನಾರಾಯಣ
ಎಂದು ವರ್ಣಿಪೆ ನಿನ್ನಾನಂತ ಗುಣರೂಪ ನಾರಾಯಣ ೩೪

ಓದನೋದಕ ವಿಶ್ವರೂಪಕ್ಕೊದಗಿಪ ನಾರಾಯಣ
ಆದಿನಾದಿ ಕರ್ತ್ಯಾಗಾಧ ಬ್ರಹ್ಮಾಂಡ ಭರ್ತ ನಾರಾಯಣ ೩೫

ಓಂಕಾರ ಪ್ರತಿಪಾದ್ಯ ಶಂಖಚಕ್ರಾಂಕಿತ ಶ್ರೀ ನಾರಾಯಣ
ಪಂಕಜಾಸನ ಗರುಡ ಶಂಬರಾಹಿ ಸುರದೇವ ನಾರಾಯಣ ೩೬

ಅಂಶಾವತಾರ ಆವೇಶ ಅಂತರ್ಯಾಮಿ ನಾರಾಯಣ
ಅಂಶ ಅಧಿಷ್ಠಾನ ವಿಭೂತಿ ಸನ್ನಿಧಾನ ರೂಪ ನಾರಾಯಣ ೩೭

ಕನಸು ಮನ ಕರ್ಮ ಕೃಷ್ಣಾರ್ಪಣನೇ ಕೈಗೊಂಬೆ ನಾರಾಯಣ
ಅನಘನೆಂದವರಘವ ಅನುದಿನದಿ ಅಪಹರಿಪೆ ನಾರಾಯಣ ೩೮

ಕರ್ಮಬಂಧಕ ಕರ್ಮಾಕರ್ಮ ನಿಯಾಮಕನೆ ನಾರಾಯಣ
ಕರ್ಮಮೋಚಕ ಕರ್ಮಫಲದ ಮಹಾಕರ್ಮಗತ ನಾರಾಯಣ ೩೯

ಕರ್ಮಸ್ವರೂಪ ಕರ್ಮಸಾಕ್ಷಿ ಸ್ವರಕರ್ಮಕೃತ ನಾರಾಯಣ
ಕರ್ಮಜಿತ ನಿಷ್ಕರ್ಮ ಕರ್ಮನಿಗ್ರಹ ಕರ್ಮಿ ನಾರಾಯಣ ೪೦

ಕವಳಗಳನುಣುತ ಸಮರ್ಪಿಸಲು ಸ್ವೀಕರಿಪೆ ನಾರಾಯಣ
ಅವಸರಕೆ ಬಂದೊದಗಿ ನಾಮಾಮೃತವನುಣಿಪೆ ನಾರಾಯಣ ೪೧

ಕಾಲನಾಮಕ ಕಾಲಪ್ರೇರಕ ಕಾಲಾತೀತ ನಾರಾಯಣ
ಕಾಲಾಂತರ್ಗತ ಮಹಾ ಕಾಲಸ್ವರೂಪ ಹರಿ ನಾರಾಯಣ ೪೨

ಕಾಲಮಾನಿ ಸುರರ ಕಾಲನಿಯಾಮಕನೆ ನಾರಾಯಣ
ಕಾಲನೇಮಿ ಕೌಂಸ ಕಲಿಸಂಧ ಕಾಲ ಕಲ್ಕಿ ನಾರಾಯಣ ೪೩

ಕೃಪಣರೋತ್ಪಲ ಕೃತೀಶ ಕೃಪಾಪೂರ್ಣ ಕರಿಗೊಲಿದೆ ನಾರಾಯಣ
ಕೃಪಾಗೈದು ಭಕ್ತರಿಗೆ ಅಪರೋಕ್ಷ ಪಾಲಿಸುವೆ ನಾರಾಯಣ ೪೪

ಕೊಟ್ಟುದನು ಕೈಗೊಂಬೆ ಬಿಟ್ಟವರ ಬಂಧಿಸುವೆ ನಾರಾಯಣ
ಕೊಟ್ಟದನೆ ಕೊಟ್ಟರೂ ಸಂತುಷ್ಟನಾಗುವೆ ಪೂರ್ಣ ನಾರಾಯಣ ೪೫

ಕ್ಲೇಷಾನಂದಗಳೆಲ್ಲ ಶ್ರೀಶ ನಿನ್ನಾಧೀನ ನಾರಾಯಣ
ಶ್ವಾಸೋಚ್ಛ್ವಾಸಕ್ಕೂ ಜಗಕೆ ಲೇಶ ಶಕ್ತಿಯು ಇಲ್ಲ ನಾರಾಯಣ ೪೬

ಕ್ರಿಮಿಯಿಂದ ರಾಜ್ಯವಾಳಿಸಿದ ಮಹಾನ್ಮಹಿಮ ನಾರಾಯಣ
ಕ್ರಿಮಿಯಾದಿ ಬ್ರಹ್ಮಾಂತ ಅಮಿತ ಜೀವರ ಬಿಂಬ ನಾರಾಯಣ ೪೭

ಗರ್ಗಾರ್ಪಿತ ಸುನಾಮ ಮಾರ್ಗದ್ವೈತರೋದ್ಧಾರಿ ನಾರಾಯಣ
ಸ್ವರ್ಗಾಪವರ್ಗ ಸಮಗ್ರವ್ಯಾಪ್ತ ಸುಪಾದ ನಾರಾಯಣ ೪೮

ಗಂಧವಿತ್ತಳ ಕಾಯ ಕುಂದು ತಿದ್ದಿಸಿ ವಲಿದು ನಾರಾಯಣ
ಸುಂದರಿಯ ಮಾಡಿ ಕಂದರ್ಪ ಸುಖ ಸಲಿಸಿದೆ ನಾರಾಯಣ ೪೯

ಗಾಯತ್ರಿ ಪ್ರತಿಪಾದ್ಯ ಗಾಯತ್ರಿ ಸ್ವರೂಪ ನಾರಾಯಣ
ಗಾಯತ್ರಿಗಮ್ಯ ಮಹಾಗಾಯತ್ರಿ ಮಂತ್ರಗಮ್ಯ ನಾರಾಯಣ ೫೦

ಜಗಜನಕ ಜನನಿ ಜಗನ್ನಾಥ ಜಗತ್ರಾಣ ಪ್ರಭು ನಾರಾಯಣ
ಜಗದಂತರ್ಯಾಮಿ ಜಗಚಕ್ಷು ಜಗಚ್ಪಾಲಕನೆ ನಾರಾಯಣ ೫೧

ಜಗಕಾದಿ ಪುರುಷ ಸರ್ವ ಜಗಕೆ ಅತಿ ಬಿನ್ನನೇ ನಾರಾಯಣ
ಜಗದ ಮಾನವರಂತೆ ನಟಿಸಿ ಜಗ ಮೋಹಿಸುವೆ ನಾರಾಯಣ ೫೨

ಜಡಜ ಭವಪಿತ ನಾಮ ಮುಡಿಯುವರು ಸದಾಮಡಿಯು
ನಾರಾಯಣ
ಜಡ ಭೂತ ಜಲ ಮಿಂದು ಮಡಿಯಂಬುದು ಅತಿ ಮೌಢ್ಯ
ನಾರಾಯಣ ೫೩

ಜನನ ಮರಣ ವಿದೂರ ಜನಿಸುವಿ ಜನರೊಳಿದ್ದು ನಾರಾಯಣ
ಮನವಚನಗಳು ನಿನ್ನ ಗುಣದ ಕೊನೆಗಾಣವು ನಾರಾಯಣ ೫೪

ಜಲ ತೃಣವಗೊಡಗೊಂಡು ಗೋಸಲೆ ಸುಧಾಗರೆವಂತೆ ನಾರಾಯಣ
ಅಲ್ಪ ಭಕ್ತರಿಗೂ ಅತಿ ಸುಲಭದಿ ಮೋಕ್ಷವನೀವೆ ನಾರಾಯಣ ೫೫

ಜೀವ ನಿಯಾಮಕನೆ ಜೀವಾಂತರ್ಗತ ಬಿಂಬ ನಾರಾಯಣ
ಜೀವಾಧಾರಕ ಜೀವನದ ಜೀವ ಸಂಜೀವ ನಾರಾಯಣ ೫೬

ಜೀವನಲ್ಲದ ಜೀವರೂಪಿ ಜೀವರ ಗತಿ ನಾರಾಯಣ
ಜೀವಗಣಾರಾಧ್ಯ ರಾಜೀವ ಭವ ಜೀವಪಿತ ನಾರಾಯಣ ೫೭

ಜೀವೀಚ್ಛೆ ಫಲಿಸಲಿಕೆ ಈಶೇಚ್ಛೆಕಾರಣವು ನಾರಾಯಣ
ಜೀವೇಶರೇಚ್ಛೆ ಸಹಕರಿಸಲು ಸಾಧನ ಸಿದ್ಧಿ ನಾರಾಯಣ ೫೮

ಡೊಂಕು ತಿದ್ದಿದೋಲ್ ಎನ್ನ ಮಂಖುಮನ ತಿದ್ದಯ್ಯಾ ನಾರಾಯಣ
ಶಂಕಾರಹಿತ ವಿಜ್ಞಾನ ಭಕುತಿ ಭಾಗ್ಯಗಳಿಯೋ ನಾರಾಯಣ ೫೯

ತತುರ್ವೇಶರಿಗೆ ತಿಳಿಯದತುಲ ಮಹಮಹಿಮನೆ ನಾರಾಯಣ
ಸ್ತುತಿಸಬಲ್ಲೆನೆ ನಿನ್ನ ಮತಿಗೆ ಸಿಲುಕದ ಮಹನೆ ನಾರಾಯಣ ೬೦

ಧನುಜರು ಮುನಿದು ನಿನ್ನ ಕೆಣಕಿ ಮಾಡುವದೇನು ನಾರಾಯಣ
ವನಿಕೆಗಳು ಧಾನ್ಯ ಹಣಿವಂದದಲಿ ಥಳಿಸುವೆಯೊ ನಾರಾಯಣ ೬೧

ಧನಕಾಯ್ವ ಫಣಿಯಂತೆ ಅನಿಮಿತುಪಕಾರಿ ಹರಿ ನಾರಾಯಣ
ಪ್ರಣತರನು ದಿನ ನಯನ ನಿಮಿಷದೋಲ್ ರಕ್ಷಿಸುವೆ ನಾರಾಯಣ ೬೨

ದೃಢ ಧಾನ್ಯ ಮನಕಿತ್ತು ಬಿಡದೆ ನಾಮವ ನುಡಿಸು ನಾರಾಯಣ
ಕೆಡರ ಸಂಗವ ಬಿಡಿಸಿ ಕಿಡಿಗೇಡಿ ಭವಕೆಡಿಸು ನಾರಾಯಣ ೬೩

ಧರ್ಮ ಸಂರಕ್ಷ ಯಮಧರ್ಮ ಶಾಸಕ ಧರ್ಮಿ ನಾರಾಯಣ
ಧರ್ಮ ಸೂಕ್ಷ್ಮಜ್ಞ ಮಹಧರ್ಮ ಶಿಕ್ಷಕ ಗುರುವೆ ನಾರಾಯಣ ೬೪

ಧರ್ಮ ಸ್ವರೂಪ ಸದ್ಧರ್ಮ ಸಂಸ್ಥಾಪಕನೆ ನಾರಾಯಣ
ಧರ್ಮ ವಿಧಧರ್ಮನಿಧೆ ಧರ್ಮವಿವರ್ಧನ ಪ್ರಭುವೆ
ನಾರಾಯಣ ೬೫

ಧರ್ಮ ಸಾಕ್ಷಿಗಲೋಕ ಧರ್ಮಗ್ಲಾನಿ ವಿನಾಶ ನಾರಾಯಣ
ಧರ್ಮರಾಜ ಸುಪುತ್ರ ಧರ್ಮ ಸಂಗ್ರಹ ಕ್ಷೇತ್ರ ನಾರಾಯಣ ೬೬

ನಾನು ಅಜ್ಞಾತನು ನೀನು ವಿಜ್ಞಾನ ಪೂರ್ಣ ನಾರಾಯಣ
ನಾನಿನ್ನ ಮರೆತರೂ ನೀ ನನ್ನ ಮರೆಯದಿರು ನಾರಾಯಣ ೬೭

ನಿನಗಿತ್ತು ಭುಂಜಿಪರು ನಿತ್ಯೋಪವಾಸಿಗಳು ನಾರಾಯಣ
ನಿನಗರ್ಪಿಸದ ಭೋಜ್ಯವಸ್ತು ಸೂಕರವಿಷ್ಟ ನಾರಾಯಣ ೬೮

ನಿನ್ನ ಧ್ಯಾನಾಸಕ್ತ ಮನುಜನು ಸದಾ ಮಡಿಯು ನಾರಾಯಣ
ನಿನ್ನ ಸ್ಮರಿಸದ ಅಧಮ ಮಿಂದರೂ ಮೈಲಿಗೆಯು ನಾರಾಯಣ ೬೯

ನಿನ್ನ ನೆನವೇ ಸ್ವರ್ಗ ನಿನ್ನ ಮರವೆ ನರಕ ನಾರಾಯಣ
ನಿನ್ನ ಕಥಾಮುಕ್ತಿಪಥ ನಿನ್ನ ಪೂಜಾಸಾಯುಜ್ಯ ನಾರಾಯಣ ೭೦

ನಿನ್ನ ಧ್ಯಾನಸನ್ನಿಧಿ ಅಸಂಪ್ರದ್ನಾತ್ಸಮಾಧಿ ನಾರಾಯಣ
ಪಾಡತ ಬಾಷ್ಪ ಸುರಿಸುವದೆ ವಿರಜಾಸ್ನಾನ ನಾರಾಯಣ ೭೧

ನಿನ್ನ ಸ್ಮರಣೆ ಬ್ರಹ್ಮೋಹ ಭಾವನಾ ದೋಷ ನಾರಾಯಣ
ಘನ್ನ ತಮಸಿನ ಸಿದ್ಧಿ ಸಾಧನಗಳಿವು ಸತ್ಯನಾರಾಯಣ ೭೨

ನಿನ್ನ ಸ್ಮರಿಸದ ವಿಪ್ರಜನಾಮ ಸುತರಾಂ ಬೇಡ ನಾರಾಯಣ
ನಿನ್ನ ನೆನವಿನ ಶೂದ್ರಜನುಮವೇ ಸೌಭಾಗ್ಯ ನಾರಾಯಣ ೭೩

ನಿನ್ನ ಪೊಂದಿದ ದಾಸ ದಾಸರ್ದಸುಗೂಸೆಂದು ನಾರಾಯಣ
ಮನ್ನಿಸೆನ್ನನು ತಂದೆ ಘನ ಕರುಣಾರ್ಣವನೆ ನಾರಾಯಣ ೭೪

ನಿನ್ನಂಥ ಧಾತೃವು ತ್ರಿಜಗದೊಳಾರಿಲ್ಲ ನಾರಾಯಣ
ಎನ್ನಂಥ ಪಾಪಿಷ್ಠ ಭುವನದೊಳು ಪುಟ್ಟಿಲ್ಲ ನಾರಾಯಣ ೭೫

ನಿನ್ನ ಧ್ಯಾನದ ನರಗೆ ಭವವೇನು ನಾರಾಯಣ
ನಿನ್ನ ವಲುಮೆಗೆ ವಾನರನೇನು ನರನೇನು ನಾರಾಯಣ ೭೬

ನಿನ್ನ ಧ್ಯಾನವನಿತ್ತು ಎನ್ನ ಧನ್ಯನ ಮಾಡು ನಾರಾಯಣ
ನಿನ್ನವನಾನಾದುದಕೆ ೭೭

ನಿನ್ನವರ ಸಂಗ ನಿನ್ನ ದಾಸ್ಯವ ನೀಡು ನಾರಾಯಣ ೭೮

ನಿನ್ನ ಅಂಕಿತವಿರಿಸು ನಿನ್ನ ಕ್ಷೇತ್ರಕೆ ನಡೆಸು ನಾರಾಯಣ
ನಿನ್ನ ನಾಮವ ನುಡಿಸು ನಿನ್ನ ದಾಸ್ಯದಿ ದುಡಿಸು ನಾರಾಯಣ ೭೯

ನಿನ್ನ ಹಂಬಲ ಹಿಡಿಸು ನಿನ್ನ ಕವಚವ ತೊಡಿಸು ನಾರಾಯಣ
ನಿನ್ನ ಎಂಜಲ ಉಣಿಸು ನಿನ್ನ ಪಾದಜಲ ಕುಡಿಸು ನಾರಾಯಣ ೮೦

ನೀ ಕೊಡದೆ ಜಗದಿ ಕೊಡುವನ್ಯದಾತನು ಇಲ್ಲ ನಾರಾಯಣ
ನೀ ಕೊಟ್ಟರುಂಟು ಕೊಡದಿರೆ ಬ್ರಹ್ಮಾದ್ಯರು ಬರಡು ನಾರಾಯಣ ೮೧

ನೀಚೋದ್ಧಾರಕ ದುಷ್ಟ ಪ್ರಾಚೀನ ದಹಿಸಯ್ಯ ನಾರಾಯಣ
ವಾಚಾಮಗೋಚರ ಸದಾಚಾರದಿರಿಸೆನ್ನ ನಾರಾಯಣ ೮೨

ನುಡಿನುಡಿಗೆ ತವನಾಮ ನುಡಿಯುವರು ನರರಲ್ಲ ನಾರಾಯಣ
ಅಡಿಗಡಿಗೆ ತವಮಹಿಮೆ ಪಾಡಿ ಪೊಗಳ್ವರು ಸುರರು
ನಾರಾಯಣ ೮೩

ನಿನ್ನೊಳಗೆ ನಿನ್ನ ದಯ ತಾಯಿ ಮೋಹದಂತೆ ಘನ ನಾರಾಯಣ
೮೪

ಪತಿತಪಾವನರಾಮ ಪ್ರತಿಮ ಸದ್ಗುಣಧಾಮ ನಾರಾಯಣ
ಪಿತಾಮಹನ ತ್ರಿಪಥಗಾಮಿನಿ ಗೇಯ ನಾರಾಯಣ ೮೫

ಪರೀಕ್ಷಿತ ಪ್ರಿಯವ್ರತ ಗುರು ಸಾಂದೀಪದಾತ ನಾರಾಯಣ
ಹರಿದಾಸ ಹರಿಶ್ಚಂದ್ರ ಬಾಣ ಭಕ್ತರ ಪೊರೆದೆ ನಾರಾಯಣ ೮೬

ಪರತತ್ವ ಪ್ರಭು ಪರಾತ್ಪರ ಗುರುವೆ ತ್ರಿಭುಜಗೆ ನಾರಾಯಣ
ಪುರುಷನೂ ಮೋಹಿಸುವ ಪರಮ ಸುಂದರ ರೂಪ
ನಾರಾಯಣ ೮೭

ಪರಮ ಪಾವನತರ ಸುಚರಿತ ಮಂಗಲ ಮೂರ್ತಿ ನಾರಾಯಣ
ಪರಿನಾಮ ದಹಿಸಿದ ದೋಷ ಧರೆಯೊಳಿಲ್ಲ ನಾರಾಯಣ ೮೮

ಸೃಷ್ಟಿಸಿದವರ ಭಕ್ತಗೊಲಿದೆ ನಾರಾಯಣ
ಇಟ್ಟಿಗೆಯ ಮೇಲ್ನಿಂದು ಸೃಷ್ಟಿಸುರರುದ್ಧರಿಪೆ ನಾರಾಯಣ ೮೯

ಪುರುಷರೂಪತ್ರಯ ಪುರಾತನ ಪುರುಷವರ ನಾರಾಯಣ
ಪುರಮಪುರುಷಾರ್ಥಪ್ರದ ಪರಮಾತ್ಮ ಪರದೈವ ನಾರಾಯಣ ೯೦

ಪುರುಷಸೂಕ್ತ ಸುಮೇಯ ಪುರುಷ ಸ್ತ್ರೀರೂಪದ್ವಯ ನಾರಾಯಣ
ಪುರುಷೋತ್ತಮನೆ ಕ್ಷರಾಕ್ಷರ ಪುರುಷ ಪೂಜ್ಯಪದ ನಾರಾಯಣ ೯೧

ಬಡತನವು ಬರಲೇನು ಬಡವರಾಶ್ರಯ ನೀನು ನಾರಾಯಣ
ಬಡಬ್ರಾಹ್ಮಣನಿಗೆ ಮುಕ್ತಿ ಸಡಗರದ ಸುಖವಿತ್ತೆ ನಾರಾಯಣ ೯೨

ಭಕ್ತರಿಗತಿ ಸಮೀಪಾಭಕ್ತರಿಗೆ ಬಹುದೂರ ನಾರಾಯಣ
ವ್ಯಕ್ತಿ ಹೇಗಿರಲೇನು ಭಕ್ತಿಯನು ನೋಡ್ವಲಿವೆ ನಾರಾಯಣ ೯೩

ಬಲಿ ರುಕ್ಮಾಂಗದ ಪುಂಡಲೀಕ ಮುಚುಕುಂದ ವರದ ನಾರಾಯಣ
ನಳ ನಹುಷ ನೃಗ ನಕ್ರ ನಳಕೂಬರರ ಕಾಯ್ದೆ ನಾರಾಯಣ ೯೪

ಬೆಟ್ಟ ಬೆರಳಲಿ ಧರಿಸಿ ಜಿಷ್ಣುವಿನ ಮದವಳದೆ ನಾರಾಯಣ
ಸಿಟ್ಟಿತೊರಳಿಗೆ ನಿನ್ನ ಕಟ್ಟಿ ಹೊಡೆದಳ ಪೊರೆದೆ ನಾರಾಯಣ ೯೫

ಬೆಟ್ಟ ಬೆನ್ನಲಿ ಹೊರಸಿದಮರರಿಗೆ ಸುಧೆಯಿತ್ತೆ ನಾರಾಯಣ
ಕಟ್ಟಿಗೆ ತರಿಸಿದ ಗುರುಸತಿಗೆ ಸುತನಿತ್ತೆ ನಾರಾಯಣ ೯೬

ಬಿಂಬ ಪ್ರತಿಬಿಂಬರೊಳು ಬಿಂಬಮೂಲನು ನೀನು ನಾರಾಯಣ
ಬಿಂಬ ನೀ ಜಗಕೆ ಪ್ರತಿಬಿಂಬ ನಿನಗೆ ಜಗತ್ತು ನಾರಾಯಣ ೯೭

ಭಕ್ತರ ದುಷ್ಕರ್ಮತ್ರಯಗಳ ದಹಿಪೆ ನಾರಾಯಣ
ನಿರ್ಮಲ ಸುಜೀವರ ಶ್ರೀ ಹೃದಯದಲ್ಲಿ ನೆಲಸಿರುವೆ
ನಾರಾಯಣ ೯೮

ಬೈದ ಚೈದ್ಯನ ಬಾಣ ಹೊಡೆದ ವ್ಯಾಧನ ಕ್ಷಮಿಸಿ ನಾರಾಯಣ
ಮೈದುನನ ಬಂಡಿಬೋವಾದೆ ನಿರಭಿಮಾನಿ ನಾರಾಯಣ ೯೯

ಭವಬಂಧಮೋಚಕ ಭವಾಂಬುಧಿಗೆ ಅಂಬಿಗನೆ ನಾರಾಯಣ
ಭವಬದ್ಧ ಅಜಭವ ಸುಜೀವ ಗಣರೋದ್ಧಾರಿ ನಾರಾಯಣ ೧೦೦

ಭವಕೆನ್ನ ಬರಿಸದಿರು ಜವನಂಗೀಯದಿರು ನಾರಾಯಣ
ಭುವನಪಶುವೆನಿಸದಿರು ಅವನಿಗ್ಹೊರೆ ಮಾಡದಿರು ನಾರಾಯಣ ೧೦೧

ಮನಸುಕೃತ ಮಹಾಭೋಜ್ಯ ನೆನೆಸಿಕೊಡೆ ಕೈಕೊಳುವೆ ನಾರಾಯಣ
ಕನಸು ಮನಸಿಲಿ ಪೊಳೆದು ಅನುಪಮಾಲ್ಹಾದವೀವೆ
ನಾರಾಯಣ ೧೦೨

ಮಂತ್ರಸ್ವಾಮಿಯೇ ಮಹಾಮಂತ್ರ ಪ್ರತಿಪಾದ್ಯನೆ ನಾರಾಯಣ
ಮಂತ್ರಮಯ ಗಾಯತ್ರಿ ಮಂತ್ರಸ್ವರೂಪನೆ ನಾರಾಯಣ ೧೦೩
ಮಂತ್ರಬೀಜನು ನೀನೆ ಮಂತ್ರದೃತ ಮಂತ್ರಜೀತ ನಾರಾಯಣ ೧೦೪

ಮುಟ್ಟಿದರೆ ಮೈಲಿಗೆಯು ಮುಟ್ಟದಿರೆ ಮಡಿಯುಳಿಕೆ ನಾರಾಯಣ
ಸೃಷ್ಟೀಶ ಹರಿವ್ಯಾಪ್ತಿ ಮಡಿಯು ನಾರಾಯಣ ೧೦೫

ರಾಮಮಂತ್ರವ ಜಪಿಸಿ ಕಾಮಹರ ಬದುಕಿದರು ನಾರಾಯಣ
ನಾಮ ನರಕಸ್ಥರಿಗೆ ಸ್ವರ್ಗದಲಿ ಸುಖಿಸಿತು ನಾರಾಯಣ ೧೦೬

ರಸಗಳೆಲ್ಲವೂ ಸುಮಂಗಲ ರಸಗ್ವವು ನಿನಗೆ ನಾರಾಯಣ
ರಸ ಸೂಕ್ಷ್ಮರೂಪ ಅಪ್ರಾಕೃತ ಸರವ ಗ್ರಹಿಪೆ ನಾರಾಯಣ ೧೦೭

ವೈಷಮ್ಯ ನೈಘೃಣ್ಯ ದೋಷಲೇಶವಿಹೀನ ನಾರಾಯಣ
ಉಪಾಸನಾದಂತೆ ಅಭಿಲಾಕ್ಷಿತಾರ್ಥ ನೀವೆ ನಾರಾಯಣ ೧೦೮

ವಿಷದ ಮೊಲೆ ಹಾಲುಂಡೆ ವಿಷದ ಮಡು ಧುಮುಕಿದೆ ನಾರಾಯಣ
ವಿಷಶಯ್ಯನಾಗಿ ವಿಷಕಂಠನ ಸೇವೆಯಗೊಳುವೆ ನಾರಾಯಣ ೧೦೯

ವಿಷ ವಿಶ್ವವನು ಉಳಿಸಿದೆನು ನಾರಾಯಣ
ವಿಷಬಿಂದು ನುಂಗಿ ತತ್ ದಾಸ ಮೃತ್ಯು ಜಯಿಸಿದನು
ನಾರಾಯಣ ೧೧೦

ಶಂಕರನ ಸಂಕಟವ ತರಿದೆ ದೈತ್ಯನ ದಹಿಸಿದೆ ನಾರಾಯಣ
ಮಂಕಾಗಿ ಮೋಹಿಸಲು ಕಿಂಕರನ ಉದ್ಧರಿಸಿದೆ ನಾರಾಯಣ ೧೧೧

ಶರಣಾಗತ ಕಲ್ಪತರು ಕಾಮಧೇನುವು ನಾರಾಯಣ
ಸುರಗುರುಗಳು ಸಾರಿ ಸರ್ವಜಗಕೆ ಹೇಳಿಹರು ನಾರಾಯಣ ೧೧೨

ಶ್ರೀಪತಿಯೇ ನಿನ್ನಂಥ ಪಾಪ ದಹಿಪರ ಕಾಣೆ ನಾರಾಯಣ
ಗೋಪಿಯರಗೂಡಿ ಪತಿವ್ರತಾ ಧರ್ಮ ಬೋಧಿಸಿದೆ
ನಾರಾಯಣ ೧೧೩

ಸತ್ಯಸಂಕಲ್ಪ ಸ್ಥಿರಚಿತ್ತಸತ್ತ್ವೋತ್ತವನೆ ನಾರಾಯಣ
ಭೃತ್ಯರ ಅಪಮೃತ್ಯು ಹರ ನಿತ್ಯಮುಕ್ತರ ಸಖ ನಾರಾಯಣ ೧೧೪

ಸರ್ವಕರ್ಮ ಸ್ವತಂತ್ರ ಕೃತಕರ್ತಾ ನಾರಾಯಣ
ಸರ್ವಕರ್ಮಗಳ ಗತ ಸರ್ವ ಕರ್ಮಾಲಿಪ್ತ ನಾರಾಯಣ ೧೧೫

ಸರ್ವಕ್ರಿಯಾ ಫಲಭೋಕ್ತ ಸರ್ವ ಭೋ ಜೈತ್ರ ನಾರಾಯಣ
ಸರ್ವಕ್ರಿಯಾ ಪ್ರೇರಕ ಸರ್ವಕರ್ಮೋದ್ಬೋದಕ ನಾರಾಯಣ ೧೧೬

ಸೃಷ್ಟಿ ಸ್ಥಿತಿ ಪ್ರಳಯಾದಿ ಅಷ್ಟಮಹಾ ಕ್ರಿಯಾಕರ್ತ ನಾರಾಯಣ
ಜೇಷ್ಠ ಸುರರಿಗೂ ನೀನು ಶ್ರೇಷ್ಠದೇವನಾಗಿರುವೆ ನಾರಾಯಣ ೧೧೭

ಸ್ವೇಚ್ಛಾ ಸ್ವತಂತ್ರ ಮಧ್ವಾದ್ಯನಂತ ಅವತಾರಿ ನಾರಾಯಣ
ನೆಚ್ಚಿದ ಸದ್ಭಕ್ತರಿಗೆ ಮೆಚ್ಚಿ ಮೋಕ್ಷವ ನೀವೇ ನಾರಾಯಣ ೧೧೮

ಭಾಗ್ಯವು ನೀನೆ ಸರ್ವಸಂಪತ್ತು ನೀನೆ ನಾರಾಯಣ
ಸರ್ವ ಬಳಗವು ಬಂಧು ಪಿತೃ ಮಾತೃಗತಿ ನೀನೆ ನಾರಾಯಣ ೧೧೯

ಸಹಸ್ರವದನ ದ್ವಿಸಹಸ್ರ ಜಿಹ್ವೆಯ ಶೇಷ ನಾರಾಯಣ
ಸಹಸ ಮಾಡಿಯೂ ಸಾಕಲ್ಲೇನ ನಿನ್ನ ವರ್ಣಿಸನು ನಾರಾಯಣ ೧೨೦

ಹಣೆಗೆ ಬಾಣದಿ ಹೊಡೆದ ಪಣದ ಭೀಷ್ಮನ ಪೊರೆದೆ ನಾರಾಯಣ
ಮಣಿಸಿ ನಿನ್ನಸ್ತ್ರಕೆ ಭೀಮನ ಪಂಥ ಗೆಲಿಸಿದೆ ನಾರಾಯಣ ೧೨೧

ಹರಕೆ ಹಾರ್ವನ ಭಕ್ತಿ ಶಿರಿಗೆ ಮೋಹಿಸಿ ಮನದಿ ನಾರಾಯಣ
ತಿರುಪೆ ಅವಲಿಯ ತಂದು ಶ್ರೀ ಸಾಮ್ರಾಜ್ಯವನಿತ್ತೆ ನಾರಾಯಣ ೧೨೨

ಹುಚ್ಚುಧೊರೆ ನಿನ್ನಂಥ ಮೆಚ್ಚಿ ಕೊಡುವರ ಕಾಣೆ ನಾರಾಯಣ
ಕಚ್ಚಿ ಬೈದೊದ್ದು ಬಾಣ ಬಿಟ್ಟವರನು ಕಾಯ್ದೆ ನಾರಾಯಣ ೧೨೩

ಹಿಂದೆಯುಮ್ ಹಿರಿಯರಾಡಿದ್ದನ್ನೇ ಪಾಡಿದೆನು ನಾರಾಯಣ
ಬಂಧುರದಿ ಅವರನುದ್ಧರಿಸಿದೊಲ್ ಉದ್ಧರಿಸಿಸೆನ್ನ ನಾರಾಯಣ ೧೨೪

ತತುವೇಶರೊಳಗಿದ್ದು ಮತಿ ಪ್ರೇರಿಸಿದಷ್ಟು ನಾರಾಯಣ
ನುತಿಸಿದೆನಗೆ ಸದ್ಗತಿಪ್ರದನೆ ಶಿರಿವಿಠಲ ನಾರಾಯಣ ೧೨೫

ಶ್ರೀ ವಾದಿರಾಜಗುರುಗಳಂತರ್ಗತ ಭಾರತೀರಮಣ
ಮುಖ್ಯ ಪ್ರಾಣಾಂತರ್ಗತ
ಶ್ರೀ ರುಕ್ಮಿಣೀ ಕೃಷ್ಣಾರ್ಪಣಮಸ್ತು

# ಅನುಬಂಧ–೧

## ಕೀರ್ತನೆಗಳ ಅಕಾರಾದಿ ಸೂಚಿ

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧. | ಅಂಗಾರವನೆ ನೀಡು ಎನ್ನಂತರಂಗದ ಧೊರೆಯೇ | ೧೯೫,೨೧೮ |
| ೨. | ಅಂಜಬ್ಯಾಡಂಜಬ್ಯಾಡವೋ ಭೂ ನಂದಸೂನು | ೫೧ |
| ೩. | ಅಂಜುವೆನು ನಿನಗಂಜನೆಯ ತನಯ | ೧೨೨ |
| ೪. | ಅಜರಾಜೇಂದ್ರನಾಥನೆ ಪ್ರಪಾತ | ೫೩೬ |
| ೫. | ಅಂತರಂಗದ ರೋಗ ಚಿಂತೆ ಪರಿಹರಿಸಿ | ೨ |
| ೬. | ಅಂಬಾಬಾಯೇ ನಂಬಿದೆ ಬಾ ಜನನೀ | ೧೦೧ |
| ೭. | ಅಕ್ಕ ಕೊಳಲನೂದುವ ಸುಂದರನ್ಯಾರೇ ಅಕ್ಕ | ೫೨ |
| ೭ಅ. | ಅಕ್ಕ ಇವಳು ಸಿಕ್ಕಳ್ಯಾಂಗೆಲೆ | ೪೩೭ |
| ೮. | ಅಕ್ಕನೋಡೇನಾನಾನಿನ್ನದು | ೨೮೧ |
| ೯. | ಅಡಿಗಳ ಭಜಿಸುವ ಮನುಜರ ಬಿಡನೈತನ್ನ | ೨೯೨ |
| ೧೦. | ಅಣಿಯಾರೊ ನಿನಗೆ ಈ ತ್ರಿಭುವನದೊಳಗೆ | ೩೮೮ |
| ೧೧. | ಆನಮಿಸಿಬೇಡುವೆನು ನಿನ್ನ | ೪೩೪ |
| ೧೨. | ಅನ್ನದಾನದ ಸುಖ ನಿನಗಲ್ಲದೆ ಬೇರೆ | ೩ |
| ೧೩. | ಅಪ್ಪಕೇಳೊ ಎನ್ನ ಮಾತು | ೫೧೯ |
| ೧೪. | ಅರಸನಾದ ದಶರಥನು | ೪೮೦ |
| ೧೫. | ಅರಸುದಶರಥಾ ತನ್ನ | ೫೩೨ |
| ೧೬. | ಅವನಿಜಾತನುಭವರೆ ಕೇಳಿರೊ | ೫೦೬ |
| ೧೭. | ಆರುತಿ ಬೆಳಗುವೆನು ಮಾಧವಗಾರುತಿ ಬೆಳಗುವೆನು | ೪೧ |
| ೧೮. | ಆರುತಿ ಮಾಡಿದವೆ ನಾರಿಯಮಣಿಯರು | ೪೨ |
| ೧೯. | ಆರಮ್ಮ ಮುರಲಿಯನೂದುವನು | ೫೩ |
| ೨೦. | ಆರುತಿ ಮಾಡುವೆ ನಾ ಪ್ರಲ್ಹಾದಗೆ | ೧೫೯ |

| ಕ್ರಮ ಸಂಖ್ಯೆ. | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೬೫. | ನೀನೊಲಿದರೇನು ಏನಿಲ್ಲ ಹರಿಯೆ | ೩೫೮ |
| ೨೬೬. | ನೀ ಬಾರದಿರೆ ಬಾರನು ಶ್ರೀ ನರಹರಿ | ೧೨೪ |
| ೨೬೭. | ನೀರಜಾಕ್ಷನ ನಿಖಿಲ ಜಗದೇಕ | ೪೬೪ |
| ೨೬೮. | ನೀರಜಾಕ್ಷನೆ ಚಾರುರೂಪನೆ ಸೇರಿ ಚಿತ್ತದೊಳು | ೧೮ |
| ೨೬೯. | ನೀರೊಳಗೆ ನಿಂತು ನಡುಗಿ | ೧೮೯ |
| ೨೭೦. | ನೃಪರ ಹಾಸ್ಯವ ಮಾಡ್ವನಾರಿಯರ | ೫೨೩ |
| ೨೭೧. | ನೆರೆದು ಬರದರು ಸಾಗಿ ವೈದೇಹಿ | ೫೧೩ |
| ೨೭೨. | ನೇತ್ರಗಳ ಸಾಫಲ್ಯ ಮಾಳ್ಪ ಸುಗಾತ್ರರನು ಕಂಡೆ | ೧೬೨ |
| ೨೭೩. | ನೋಡಬಂದಿಲ್ಲವೊ | ೪೪೧ |
| ೨೭೪. | ನೋಡಬಾರೆ ನೋಡಬಾರೆ | ೪೫೩ |
| ೨೭೫. | ನೋಡು ನೋಡಮ್ಮ ಭಾರತೀದೇವಿ | ೧೩೫ |
| ೨೭೬. | ನೋಡಿರಿವನೊಳದ್ಭುತವಾ | ೧೯ |
| ೨೭೭. | ನೋಡಿದೆನಾ ಗುರುವರನ ಈ | ೩೨೭ |
| ೨೭೮. | ನೋಡಿದ್ಯೆ ಶ್ರೀ ರಾಮ | ೫೦೫ |
| ೨೭೯. | ನೋಡುವೆನು ನೋಡುವೆನು ತೋರಿಸು ನಿಮ್ಮ ನೋಡುವೆ | ೨೧ |
| ೨೮೦. | ನೋಡಬ್ಯಾಡಿರೋ ನೋಡಬ್ಯಾಡಿರೊ | ೪೫೭ |
| ೨೮೧. | ಪರಮ ಪುರುಷನ ಮೊದಲು ನಮಿಸುತ | ೨೨ |
| ೨೮೨. | ಪರಮ ಮಂಗಳಧಾಮಾ ಶ್ರೀರಾಮಾ | ೩೫೬ |
| ೨೮೩. | ಪಾದಂಗಳ ತೋರಿಸೊ ನಾರಾಯಣ | ೩೬೦ |
| ೨೮೪. | ಪಾದ ನಂಬಿದ ಜನಕೆ ಪಾರುಗಾಣಿಪ ಪರಮ ಕರುಣಿ | ೨೯೩ |
| ೨೮೫. | ಪಾರ್ಥನ ಸಾರಥಿಯಾ ನೋಡಿದೆಯಾ | ೩೬೧ |
| ೨೮೬. | ಪಾಲಿಸಬೇಕಯ್ಯ ಪವಮಾನದೂತಾ | ೩೦೬ |
| ೨೮೭. | ಪಾಲಿಸು ಸೌಭಾಗ್ಯದ ಲಕ್ಷ್ಮೀದೇವಿ | ೩೮೩ |
| ೨೮೮. | ಪಾಲಿಸೆನ್ನಾ ಪಾಲಿಸೋ ಎನ್ನಾ | ೨೨೨ |
| ೨೮೯. | ಪಾಲಿಸೆನ್ನಾ ಪಾರ್ವತಿ ರನ್ನಾ | ೨೩೦ |
| ೨೯೦. | ಪಾಲಿಸ್ಯೆಯ್ಯಾ ಇವಳಾ ಶ್ರೀ ಭೂತರಾಜ ಹೃನ್ಮಂದಿರ ನಿಲಯ | ೨೮೩ |
| ೨೯೧. | ಪಾಲಿಸೊ ಪಾರ್ವತಿರಮಣಾ ನಿನ್ನ | ೧೭೦ |

| ಕ್ರಮ ಸಂಖ್ಯೆ. | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೪೩೦. | ಮೋದ ಬೀರುತ ತಾ ಮೋದ ಪುರಕೆ ಬಂದವನ್ಯಾರೆ | ೨೭೫ |
| ೪೩೧. | ಯಜ್ಞಕ್ಕೆ ಮುನಿಗಳು ರಾಜರುಬಂದ ಬಗೆ | ೪೮೪ |
| ೪೩೨. | ಯಜ್ಞ ಕಾಲ ಶೃಂಗಾರ | ೪೮೫ |
| ೪೩೩. | ಯಜ್ಞ ಮುಖದಿಂದ ಬಂದ ಪರಮಾನವನ್ನು | ೪೮೬ |
| ೪೩೪. | ಯಚ್ಚರಿಕೆ ಯಚ್ಚರಿಕೆ ಶ್ರೀ ಸೋದಪುರವಾಸಿ ಗುರುಪಾದ | ೨೮೬ |
| ೪೩೫. | ಯದ್ದು ಪೇಳಿದ ಕಮಲ | ೪೯೭ |
| ೪೩೬. | ಯಾಕ ಕುಳಿತಿದಿ ನೀಯೇಳೊ | ೫೨೬ |
| ೪೩೭. | ಯಾತಕಿಂತ ಮಾತು ನಿಷ್ಠುರ | ೪೫೯ |
| ೪೩೮. | ಯಾತಕ್ಹೋಗುವುದು ಛಲನಾಥನೆ | ೪೪೮ |
| ೪೩೯. | ಯಾದವಾ ಮಾಧವಾ ಕರುಣಿಸು | ೩೬೮ |
| ೪೪೦. | ಯಾರೆ ಹುಡುಗಿ ನೀ ಬಂದವಳಿಲ್ಲಿ | ೧೧೪ |
| ೪೪೧. | ಯಾವಲ್ಲಿ ಅಡಗಿರುವಿ ಕೃಷ್ಣಯ್ಯ ನೀ ಯಾವಲ್ಲಿ ಅಡಗಿರುವಿ | ೩೬೯ |
| ೪೪೨. | ಯಾವ ಹೆಸರಿನಿಂದೆ ಕರೆದರೇನು ಪಾವನಾತ್ಮನೆ | ೩೭೦ |
| ೪೪೩. | ಯೇನು ಹೇಳಲವನ | ೫೨೪ |
| ೪೪೪. | ಯೋಗಿ ಕುಲವರ ಮುಕುಟ ಗುರು ಶ್ರೀ | ೧೭೨ |
| ೪೪೫. | ಯೋಗಿವರ್ಯ ಶಿರಬಾಗಿ ನಮಿಸುವೆನು ಶ್ರೀ ರಾಘವೇಂದ್ರನೆ | ೧೫೫ |
| ೪೪೬. | ರಘುಪತಿಯೆ ನಿನ್ನನ್ನೆ ಪೊಗಳುವ ಪದಗಳನು | ೩೭೧ |
| ೪೪೭. | ರತ್ನವ ದೊರಕಿಸಿರೊ ಬಹಳ ಪ್ರಯತ್ನದಿಂದ ರಕ್ಷಿಸಿರೊ | ೪೧೫ |
| ೪೪೮. | ರಾಘವೇಂದ್ರ ಗುಣಸಾಗರ ನೋಡೆನ್ನ | ೧೫೭ |
| ೪೪೯. | ರಾಘವೇಂದ್ರ ಗುರು ನಮೋ ನಮೋ ಯೋಗಿ ಜನೇಡಿತ | ೧೫೮ |
| ೪೫೦. | ರಾಘವೇಂದ್ರ ತೀರ್ಥಬೋಧಿಸೋ | ೧೭೩ |
| ೪೫೧. | ರಾಘವೇಂದ್ರ ರಾಯರೆಂಬೋ ಮಹಾ ಯೋಗಿವರರ | ೧೫೪ |
| ೪೫೨. | ರಾಮಚಂದ್ರ ನೀ ದಯಮಾಡೊ ಪ್ರೇಮದಿಂದಲಿ ಹರಕೆಯ | ೩೭೨ |
| ೪೫೩. | ರಾಮಚಂದ್ರನು ತನ್ನ ಹೆಂಡತಿ | ೫೪೫ |
| ೪೫೪. | ರಾಮ ಪರಶುರಾಮರ ವಿವಾದ | ೫೫೨ |
| ೪೫೫. | ರಾಮ ದಶರಥರಾಮ | ೫೫೬ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು